

ಧರ್ಮದಿಂದ ಜ್ಞಾನ. ಜ್ಞಾನದಿಂದ ದಯೆ.
ದಯೆಯಿಂದ ವಿನಯ. ವಿನಯದಿಂದ ಯೋಗ್ಯತೆ
ಯೋಗ್ಯತೆಯಿಂದ ಐಶ್ವರ್ಯ. ಐಶ್ವರ್ಯದಿಂದ ಸುಖ : ಜೀವನ.

ಧರ್ಮದ ಪ್ರಕಾಶವೇ —ಮಾನವ ಸಂಸ್ಕೃತಿಯ ಮಹತ್ಸಾಧನೆ
ಶುದ್ಧ ಮತ್ತು ಶ್ರೇಷ್ಠ ವಸ್ತುಗಳಿಗೆ ಯಾವಾಗಲೂ ಅಧಿಕ ಮಾನ

**ಲೋಕಪ್ರಿಯತೆಯೇ ಬೇಡಿಕೆಯ ಮೂಲ.**
**ಮತ್ತು ಮಹೋದ್ಯಮದ ಪ್ರತಿಬಿಂಬ—**
**1906 ರಿಂದಲೂ . . . .**




ದೀಪಾವಳಿಯ ಶುಭದಿನದಂದು ಸರ್ವರಿಗೂ
ಶುಭಾಶಯಗಳನ್ನು ಬಯಸುವ: ಸಂಸ್ಥೆ.

ಮಂಗಳೂರು
## ಪಿ. ವಿ. ಎಸ್. ಬೀಡಿಗಳು . . .
ಪ್ರಗತಿಶೀಲಮಹೋದ್ಯಮದ ಅಪೂರ್ವ ಕಾಣಿಕೆಯಾಗಿವೆ.
ಅಲ್ಲದೆ—ದೇಶದ ಎಲ್ಲೆಯನ್ನು ಮೀರಿ-ವಿದೇಶಗಳಲ್ಲೂ ಪ್ರಖ್ಯಾತಿಗೊಂಡಿವೆ

## P. V. S. Beedies (Private) Limited,
*Regd. Office, Kodiyalbail.* **MANGALORE-3**

*Phone* : **83, 83A.** POST BOX No. **707** *Telegrams:*
*Res.* : **593, 593A.** **"Puthubidis"**

ಅತಿಶೀಘ್ರದಲ್ಲಿಯೇ
ಬರುತ್ತದೆ

ಮುಖ್ಯ ಭೂಮಿಕೆಯಲ್ಲಿ
ರಾಜಾ ಶಂಕರ್
ಬಾಲಕೃಷ್ಣ
ನರಸಿಂಹರಾಜು
B.ರಾಘವೇಂದರ್‌ರಾವ್
B.K.ಈಶ್ವರಪ್ಪ
ಅಶ್ವತ್ಥ್
([illegible])ರಾಮ್‌ಕುಮಾರ್
[illegible]ಉದಯಕುಮಾರ್
ಹರಿಣಿ
ಲಕ್ಷ್ಮೀದೇವಿ
ಹಾಪದ್ಮ
ರಮಾದೇವಿ
ಶಾಂತಮ್ಮ
ಮುಂತಾದವರು

ಎಮರಾಲ್ಡ್ ಪ್ರೊಡಕ್ಷನ್ಸ್ ರವರ

# ಹಳ್ಳಿಯ ಹುಡುಗಿ (ಕನ್ನಡ)

ಸಂಗೀತ:
ವಿಜಯಭಾಸ್ಕರ್
ಹಾಡುಗಳು:
ಕಣಗಲ್ ಪ್ರಭಾಕರಶಾಸ್ತ್ರಿ
ಕು.ರಾ. ಸೀತಾರಾಮಶಾಸ್ತ್ರಿ
ಕರೀಮ್‌ಖಾನ್
ಸಂಭಾಷಣೆ:
ಗೀತಾಪ್ರಿಯ
ಛಾಯಾಗ್ರಹಣ:
ಜಿ.ಚಂದ್ರನ್
ಸ್ಟುಡಿಯೊ
ವಾಹಿನಿ

ಚಿತ್ರಕಥೆ - ನಿರ್ದೇಶನ
G.ಕೃಷ್ಣಮೂರ್ತಿ (B.A.)
ನಿರ್ಮಾಪಕರು
R.ಅಶ್ವತ್ಥ್, D.ನಾರಾಯಣಪ್ಪ

(ಮೈಸೂರು ಹಂಚಿಕೆದಾರರು)
ಶೀಲಾ ಪಿಕ್ಚರ್ ಸರ್ಕ್ಯೂಟ್
ಬೆಂಗಳೂರು-9

ದೀಪಾವಳಿಯು ನಮ್ಮ ಗ್ರಾಹಕರಿಗೆಲ್ಲ ಸುಖ-ಸಂಪತ್ತುಗಳನ್ನೀಯಲೆಂದು ಹಾರೈಸುತ್ತೇವೆ!

# ★ ಪ್ರಕಾಶ್ ಲಾಡ್ಜ ★

**ಬೋರ್ಡಿಂಗ್ ಅಂಡ್ ಲಾಡ್ಜಿಂಗ್**

ಪೂನಾ ಬೆಂಗಳೂರು ರೋಡ್, ದಾವಣಗೆರೆ ಸಿಟಿ

* **ನೂತನವಾಗಿ ಪ್ರಾರಂಭಿಸಲ್ಪಟ್ಟಿರುವ ಈ ನಮ್ಮ ಭವ್ಯ ಭವನದಲ್ಲಿ ಗಾಳಿ ಬೆಳಕುಗಳ ಕೊಠಡಿಗಳು!**
* **ಶುಚಿರುಚಿಯಾದ ಊಟ** *.*. **ತೈಲಾಭ್ಯಂಜನ ಸ್ನಾನ**
* **ಕಾರು ಬಿಡಲು ಅನುಕೂಲ ಸ್ಥಳ.**

ಮುಂತಾದ ಸೌಕರ್ಯಗಳು ನಿಮ್ಮ ಸೇವೆಗೆ ಸಿದ್ಧವಾಗಿರುತ್ತವೆ!

ದಾವಣಗೆರೆ ನಗರಕ್ಕೆ ಬಂದಾಗ ಅವಶ್ಯ ಸಂದರ್ಶಿಸಿರಿ!!

*.*. **ರೇಲ್ವೆ ಸ್ಟೇಶನ್, ಬಸ್‌ಸ್ಟ್ಯಾಂಡ್, ರೆಗ್ಯುಲೇಟೆಡ್ ಮಾರ್ಕೆಟ್ ಸ್ಥಳಗಳಿಗೆ ಸಮೀಪದಲ್ಲಿದೆ!**

---

ನಮ್ಮೆಲ್ಲ ಅಸಂಖ್ಯಾತ ಕರ್ನಾಟಕ ಗ್ರಾಹಕ ವೃಂದಕ್ಕೆ ದೀಪಾವಳಿಯ ಶುಭಾಶಯಗಳು

ಫೋನ್ ನಂ. 25038

# ಶ್ರೀ ಸಿದ್ಧೇಶ್ವರ ಶಿಲ್ಕ್ ಹೌಸ್

**ತಯಾರಕರು, ಹೋಲ್‌ಸೇಲರ್ಸ್ ಮತ್ತು ಎಕ್ಸ್‌ಪೋರ್ಟರ್ಸ್.**

101-102,
( ಫಸ್ಟ್ ಫ್ಲೋರ್ ) ರಾಜಾ ಮಾರ್ಕೆಟ್,
**ಬೆಂಗಳೂರು-೨.**

ನಮ್ಮಲ್ಲಿ—

**ಹ್ಯಾಂಡಲೂಮ್** ಮತ್ತು **ಪಾವರ್‌ಲೂಮ್** ನಲ್ಲಿ ತಯಾರಿಸಿದ ಆರ್ಟ್ ಮತ್ತು ಅಪ್ಪಟ (Pure) ರೇಶ್ಮೆ, **ಶೀರೆಗಳು** ಮತ್ತು **ಬ್ಲೌಜ್‌ಗಳು** ಯಾವಾಗಲೂ ನಿಖರವಾದ ಬೆಲೆಗೆ ಸಿಗುತ್ತವೆ.

---

# ದಿ ವೈಶ್ಯ ಬ್ಯಾಂಕ ಲಿಮಿಟೆಡ್

ಸ್ಥಾಪಿತ: ೧೯೩೦ ( ಶೆಡ್ಯೂಲ್ಡ ಬ್ಯಾಂಕ )

ರಜಿಸ್ಟರ್ಡ ಕಚೇರಿ ಹಾಗೂ ಮುಖ್ಯ ಕಚೇರಿ:

**ವೈಶ್ಯ ಬ್ಯಾಂಕ ಬಿಲ್ಡಿಂಗ. ಅವೆನ್ಯೂ ರೋಡ. ಬೆಂಗಳೂರ-೨**

ಶ್ರೀ ಯಾದಲಂ ಎಸ್. ಗೋಪಾಲಕೃಷ್ಣ ಸೆಟ್ಟಿ,
ಚೇರಮನ್

- **ಸೇಫ್ ಡಿಪಾಜಿಟ್** ಲಾಕರುಗಳು ಬೆಂಗಳೂರು ನಗರದಲ್ಲಿಯ ಮುಖ್ಯ ಕಚೇರಿಯಲ್ಲಿ ವಿವಿಧ ಆಕಾರಗಳಲ್ಲಿ ಯೋಗ್ಯ ಬೆಲೆಗಳಲ್ಲಿ ಲಭ್ಯವಿವೆ.
- ಸೇವಿಂಗ್ಸ ಬ್ಯಾಂಕ ಡಿಪಾಜಿಟಗಳ ಮೇಲೆ ೩½% ಬಡ್ಡಿ ಕೊಡಲಾಗುತ್ತಿದೆ



- ೧ ರಿಂದ ೫ ವರ್ಷಗಳ ಮುದ್ದತೀ ಠೇವುಗಳ ಮೇಲೆ ಪ್ರತಿವರ್ಷಕ್ಕೆ ೪½% ದಿಂದ ೫½% ವರೆಗೆ ಬಡ್ಡಿಯನ್ನು ಕೊಡಲಾಗುತ್ತಿದೆ.
- ೫% ಬಡ್ಡಿಯನ್ನು ಕೊಡುವ ೩ ವರ್ಷಗಳ ಕ್ಯಾಶ ಸರ್ಟಿಫಿಕೇಟುಗಳನ್ನು ಕೊಡಲಾಗುತ್ತಿದೆ.

**ನಮ್ಮ ಯಾವದೇ ಕಚೇರಿಗಳೊಡನೆ ಸಂಪರ್ಕ ಬೆಳಸಿರಿ**

ಜೆ. ಸೂರ್ಯನಾರಾಯಣ ಚೆಟ್ಟಿ
ಜನರಲ್ ಮ್ಯಾನೇಜರ



ಶೈಲಶ್ರೀ ಪ್ರೊಡಕ್ಷನ್ಸ್
ಅರ್ಪಿಸುವ
ಕೃಷ್ಣೋದಯ ಚಿತ್ರಾ
ರವರ
ಸಂಗೀತ, ನೃತ್ಯ ಪ್ರಧಾನ ಸರಳ ಸುಂದರ ಸಾಮಾಜಿಕ
ಕಲಾವತಿ
ಸಂಗೀತ ಜಿ.ಕೆ.ವೆಂಕಟೇಶ್ ಕ್ಯಾಮರಾ ದೊರೈರಾಜ್
ದಿಗ್ದರ್ಶನ
ಟಿ.ವಿ.ಸಿಂಗ್ ಠಾಕೂರ್
ನಿರ್ಮಾಪಕರು
ಬಿ. ದ್ವಾರಕಾನಾಥ್ ಮತ್ತು ಮಿತ್ರರು
ಶೈಲಶ್ರೀ ಯವರ
ಮೂರನೇ ಕಾಣಿಕೆ
ಕನ್ನಡದ ಕಂದ
ಬಡಮಕ್ಕಳ ನಿತ್ಯಜೀವನದ
ಕಠೋರ ಸತ್ಯ ಚಿತ್ರಣ

 ದೀಪಾವಳಿಯ ಶುಭಚಿಂತನೆ 

## ಕೊಲ್ಹಾಪೂರದಲ್ಲಿ ಪ್ರಥಮ
## ಹಿತ್ತಾಳಿ, ತಾಮ್ರ, ಹಾಗೂ ಸ್ಟೀಲಿನ ವಸ್ತುಗಳ ಉತ್ಪಾದಕರು

● ನಂದಾದೀಪ ● ಛಡಿಸಮೆ ● ಬೆಂಗಳೂರು ಸಮೆ
● ಶಹಾಪೂರ ಸಮೆ ● ಏಕಾರತಿ ● ಪಂಚಾರತಿ
● ಆರತಿ ● ಧೂಪಾರತಿ ● ವಾಟೀನಿರಂಜನ
● ನಿರಂಜನ ● ಕಳಸ ನಿರಂಜನ ● ರೇಲ್ವೆ ಬೆಲ್
● ಆನಂದಧೂಪ-ಆರತಿ ● ನಂದೀಘಂಟಿ ● ಪೂಜಾ ಘಂಟಿ ● ಟೆಂಪಲ್ ಬೆಲ್ ● ತೂಗೂ ದೀಪ
● ಚಕ್ಕಲಿ ಪಾತ್ರೆ ● ಶೇವಿಗೆ ಪಾತ್ರೆ ● ಶಿಂಪಿ ಇಸ್ತ್ರಿ
● ಫ್ಯಾಮಿಲಿ ಇಸ್ತ್ರಿ ● ನ್ಯೂಸೂರ ಇಸ್ತ್ರಿ ● ಪರೀಟಇಸ್ತ್ರಿ

ಇತ್ಯಾದಿ ವಸ್ತುಗಳನ್ನು ಅನೇಕ ಬಗೆಯ ಆಕಾರಗಳಲ್ಲಿ ತಯಾರಿಸುತ್ತೇವೆ

ತಯಾರಕರು—

## ಅಜಂಟಾ ಪ್ರೊಡಕ್ಟ್ಸ

೧೦ ಶಿವಾಜಿ ಉದ್ಯಮನಗರ ಕೊಲ್ಹಾಪೂರ






ದೀಪಾವಳಿ ಅಭಿನಂದನೆಗಳು

## ಲಾಂಡ್ರಿ, ಮಶಿನರಿಗಳು




ಆಯಿಲ್ ಮಿಲ್ಲುಗಳು, ಡೇರಿ, ಡಾಯಿಂಗ ಹಾಗೂ ಬ್ಲೀಚಿಂಗ, ಪಾವರ ಲಾಂಡ್ರಿ ಇತ್ಯಾದಿಗಳಿಗೆ ಎಲ್ಲ ಬಗೆಯ ಜಾಯುಲರುಗಳ ಪ್ರಮುಖ ಉತ್ಪಾದಕರು.

## ಗಣೇಶ ಎಂಜಿನಿಯರಿಂಗ ವರ್ಕ್ಸ

ಹರಿಭಟ್ಟರೋಡ, ಸಾಂಗಲಿ

 ದೀಪಾವಳಿ ಶುಭಾಶಯುಗಳು 

ರೈತರಿಗೆ ಹಾಗೂ ಕಾರಖಾನೆಗಳಿಗೆ ಮಹಾರಾಷ್ಟ್ರ ಗುಜರಾತ ಹಾಗೂ ಕರ್ನಾಟಕ ಸರಕಾರಗಳಿಂದ ತಗಾಯಿ ಮೇಲೆ ಮಂಜೂರಾದ

## ವೈಭವ ಎಂಜಿನುಗಳು

ಹಾರಿಝಾಂಟಲ
ಕೋಲ್ಡ ಸ್ಟಾರ್ಟನ
೩-೩½ ಎಚ್. ಪಿ
೮-೯ ಹಾಗೂ
೧೦-೧೧ ಎಚ್. ಪಿ




ತಯಾರಕರು :

## ವೈಭವ ಎಂಜಿನಿಯರಿಂಗ

ಶಿವಾಜಿ ಉದ್ಯಮನಗರ. ಕೊಲ್ಹಾಪೂರ



ದೀಪಾವಳಿಯ ಶುಭಾಶಯಗಳು

**ಹೋಮಿಯೋಪತಿ**

ಅಂಚೆಯ ಮೂಲಕ ಹೋಮಿಯೋಪತಿ ವೈದ್ಯಕೀಯವನ್ನು ಮನೆಯಲ್ಲಿದ್ದುಕೊಂಡೇ ಕಲಿಯಬಹುದು.

ಡಾ. ಎ. ಎಂ. ರತ್ನಂ ಅವರಿಂದ ಕನ್ನಡ ಭಾಷೆಯಲ್ಲಿ ರಚಿಸಲ್ಪಟ್ಟ ಪುಸ್ತಕ

ಹೋಮಿಯೋಪತಿಯ ತಾಯಿ ದ್ರವಗಳ ಮೆಟೀರಿಯ ಮೆಡಿಕ್ ಎಂಬ ಪುಸ್ತಕ ಮಾರಾಟಕ್ಕೆ ಸಿದ್ಧವಾಗಿದೆ.
ಬೆಲೆ: ೩ ರೂ. ಅಂಚೆ ವೆಚ್ಚ ೦. ೭೫ ನ ಪೈ. ವಿ. ಪಿ. ಪಿ. ಇಲ್ಲ.

**ಹೋಮಿಯೋಪತಿ ಕೈಪಿಡಿ**

ತಿಂಗಳಿಗೊಂದು ಪ್ರಕಟನೆಯಂತೆ ಹೊರಬರುವುದು.
ವಾರ್ಷಿಕ ಚಂದಾ ೩ ರೂ. ಮಾತ್ರ
ವಿವರಗಳಿಗಾಗಿ ಇಂದೇ ಬರೆಯಿರಿ.

## ಕರ್ನಾಟಕ ಹೋಮಿಯೋಪತಿಕ್ ಕಾಲೇಜ್

ಶ್ರೀರಾಮಪುರಂ: ಬೆಂಗಳೂರ-೨೧



ನಿಮ್ಮ ಮುದ್ದು ಕಂದನಿಗೆ ನಮ್ಮ ದೀಪಾವಳಿಯ ಉಡುಗೊರೆ

# ಗ್ರೈಪ್ ಸಿರಪ್



ನಿಮ್ಮ ಮುದ್ದು ಕಂದನ ಅಜೀರ್ಣ ಸಂಬಂಧವಾದ ಖಾಯಿಲೆಗಳನ್ನು ತಡೆದು
ಆರೋಗ್ಯ ಕಾಪಾಡುವ ಒಂದು ರುಚಿಕರವಾದ ಸಿರಪ್

ತಯಾರಕರು :

## ದಿ ಮೈಸೂರ ಇಂಡಸ್ಟ್ರಿಯಲ್ ಅಂಡ್ ಟೆಸ್ಟಿಂಗ್ ಲ್ಯಾಬೋರೇಟರಿ ಲಿ.,

ಮಲ್ಲೇಶ್ವರಂ ...... ಬೆಂಗಳೂರು—೩

ವ್ಯಾಪಾರದ ಡಿಪೊ—35/37 ತಂಬೂಚೆಟ್ಟಿ ರಸ್ತೆ, ಮದ್ರಾಸ್—1

71/4 ಆರ್ಕಾಟ್ ಶ್ರೀನಿವಾಸಚಾರ್ ರಸ್ತೆ, ಬೆಂಗಳೂರು

ವ್ಯಾಪಾರದ ಏಜಂಟರು—

**ಕರ್ನಾಟಕ ಅಂಡ್ ಡೆಕ್ಕನ್ ಏಜನ್ಸೀಸ್,**
**ಹುಬ್ಬಳ್ಳಿ**



## ಗ್ರೈಪ್ ಸಿರಪ್

---

## ಇಲೆಕ್ಟ್ರೋನಿಕ್ಸ್ ವಸ್ತುಗಳ ಗೃಹ



ಬೆಂಗಳೂರಲ್ಲಿಯ ಅತ್ಯಾಧುನಿಕ. ಸಲಕರಣೆಗಳಿಂದ ಸುಸಜ್ಜಿತವಾದ ಭಾರತ ಇಲೆಕ್ಟ್ರೋನಿಕ್ಸ ಯಂತ್ರಾಗಾರವು ತನ್ನ ವಿವಿಧ ಹಾಗೂ ವ್ಯಾಪಕ ಉತ್ಪಾದನೆಗಳಿಂದ ಅಭಿವೃದ್ಧಿ ಸೌಕರ್ಯಗಳಿಂದ ಮಾತ್ರ ಇಲೆಕ್ಟ್ರೋನಿಕ್ಸ್ ವಸ್ತುಗಳ ಹೊಸ ಮಾಧ್ಯಮವನ್ನೆ ರೂಪಿಸಿದೆ.

ಸಂರಕ್ಷಣ ಖಾತೆ, ರೇಲ್ವೆಗಳು, ಓವ್ಹರಸೀಜ ಕಮ್ಯುನಿಕೇಶನ್ಸ ಸರ್ವಿಸಿಸ್, ಪೋಲೀಸ ಇಲಾಖೆಗಳು, ಅಖಿಲ ಭಾರತ ಆಕಾಶವಾಣಿ, ಸಾರಿಗೆ ಸಂಸ್ಥೆಗಳು, ಮೀಟಯಾರಾಲಾಜಿಕಲ್ ಇಲಾಖೆ, ರೇಡಿಯೊ ಉತ್ಪಾದಕರು ಹಾಗೂ ಇನ್ನಿತರ ಅನೇಕ ವಿಧ ಡಿಝೈನರರಿಂದ ಮತ್ತು ವೃತ್ತಿವಿಷಯಕ ಬಳಕೆಗಾರರಿಂದ ಉಪಯೋಗಿಸುತ್ತಿದ್ದ ವಿವಿಧ ಇಲೆಕ್ಟ್ರೋನಿಕ್ಸ್ ಸಲಕರಣೆ ಸಾಮಗ್ರಿಗಳನ್ನು ವ್ಯಾಪಕವಾದ ಪ್ರಮಾಣದಲ್ಲಿ ತಯಾರಿಸುತ್ತದೆ ಮತ್ತು ಪೂರೈಸುತ್ತದೆ.



EP-BEL-14-A

ದೀಪಾವಳಿಯ
ಶುಭಾಶಯಗಳು



## ಭಾರತ ಇಲೆಕ್ಟ್ರೋನಿಕ್ಸ್ ಲಿಮಿಟೆಡ್

ಜಾಲಹಳ್ಳಿ, ಬೆಂಗಳೂರು-೧೩

—ರಾಷ್ಟ್ರದೊಂದಿಗೆ ಮುನ್ನಡೆ ಇಡುತ್ತಿದೆ—

ಧ್ಯೇಯ ಧೈರ್ಯಗಳೆಂಬ ದಿವ್ಯದೀಪಾವಳಿ!
ಎಲ್ಲರೆದೆ ಗುಡಿಮನೆಯ ಬೆಳಕಾಗಲಿ!!

ಹಣದ ಋಣ ಋಣಾತ್ಕಾರ! — ನಾಗರೀಕತೆಯ ರುದ್ರಾವತಾರ!!
ಪದವಿ ಪ್ರತಿಷ್ಠೆಗಳ ಪರಿಷ್ಕಾರ! — ಗುಣಶೀಲಗಳ ಪುನರಾವತಾರ!!
ಸಹಜ ಸಂಪ್ರದಾಯ ಸಂಸ್ಕೃತಿಗಳ ಸತ್ಯ ಸಾಕ್ಷಾತ್ಕಾರ!!

ಇದೇ ಪೆಟ್ಟುಗಾರ **ಪಂತುಲು**ರವರ
ದಿಟ್ಟದೆಯ ಒಂಬತ್ತನೇ ಕನ್ನಡ ಚಿತ್ರಾವತಾರ!!

**ಪದ್ಮಿನಿ ಪಿಕ್ಚರ್ಸ್**
ಅರ್ಪಿಸುವ!

# ದುಡ್ಡೇ ದೊಡ್ಡಪ್ಪ

ನಿರ್ಮಾಪಕ - ಮೇಲ್ವಿಚಾರಣೆ
**ಬಿ. ಆರ್. ಪಂತುಲು**

ಹೊಸತಾರಾಗಣದೊಡನೆ, ಪ್ರಧಾನ ಪಾತ್ರಗಳಲ್ಲಿ
ಕನ್ನಡ ಜನಪ್ರಿಯ ಜೋಡಿ
ಬಿ. ಆರ್. ಪಂತುಲು & ಎಂ. ವಿ. ರಾಜಮ್ಮ

ನಿರ್ದೇಶನ...
ಎಸ್. ಆರ್. ಪುಟ್ಟಣ್ಣ

ಸಾಹಿತ್ಯ...
ಕಣಗಾಲ್ ಪ್ರಭಾಕರ ಶಾಸ್ತ್ರಿ

ಸಂಗೀತ...
ಟಿ. ಜಿ. ಲಿಂಗಪ್ಪ

ಈಗ ಭರದಿಂದ ತಯಾರಾಗುತ್ತಿದೆ!

# ಕರ್ಣನ್

ಮಹತ್ತರವಾದ
ಮಹಾಭಾರತದ
ವೀರ ರಸಪ್ರಧಾನಕಥೆ

ಲಕ್ಷಾಂತರ ರೂಪಾಯಿಗಳ
ವೆಚ್ಚದ ಈಸ್ಟ್‌ಮನ್ ಕಲರ್
ತಮಿಳು ಚಿತ್ರ

ನಿರ್ಮಾಪಕ - ನಿರ್ದೇಶಕ.. **ಬಿ. ಆರ್. ಪಂತುಲು**

**VENUS MOVIES**






**ಟೈರು ಸವೆದಿದೆಯೇನು?** **ಚಿಂತಿಸಬೇಡಿ**

ಎಂಬೀಟಿ ಅವರಲ್ಲಿ ಸವೆದ ಟೈರನ್ನು ದುರಸ್ತು—ರಿಟ್ರೆಡ್ ಮಾಡಿಸಿದರೆ ನಿಮಗೆ ಇನ್ನೂ ಸಾವಿರಾರು ಮೈಲಿಗಳ ಓಡಾಟಕ್ಕೆ ಒದಗಲು ಸಮರ್ಥವಾಗಿ ಅದು ರಸ್ತೆಗೆ ಹಿಂತಿರುಗಬಲ್ಲದು.

ಅಮೇರಿಕದ ಸಂಶೋಧನೆ ಯೋಜಿಸಿರುವ ರಿಟ್ರೆಡಿಂಗ್ ವಿಧಾನಗಳಲ್ಲಿ ಅತ್ಯಂತ ಆಧುನಿಕವೂ ದಕ್ಷವೂ ಆದ ಲೋಡಿ ಟಿ.ಎಸ್. 2 ಚೆಂಬ್ರಿಕ್ಸ್ ಯಂತ್ರಸಾಧನವನ್ನೇ ಎಂಬೀಟಿ ಸಂಸ್ಥೆ ಬಳಸುವುದು.

**ಬಾಳಿಕೆಗಾಗಿ ನಿರ್ಮಿತವಾದದ್ದು....ನಿಮ್ಮ ದೀರ್ಘಕಾಲದ ಉಪಯೋಗಕ್ಕೆಂದು ನಿರ್ಮಿತವಾದದ್ದು**

## ಎಂಬೀಟಿ

### ಟೈರ್ ರಿಟ್ರೆಡಿಂಗ್ ಕಂಪೆನಿ

ಅತ್ಯಂತ ವ್ಯಾಪಕ ಸಾಗಾಣಿಕೆಗಾರರಾದ ಎಂ ಬೀ ಟಿಯವರ ಶಾಖಾಸಂಸ್ಥೆ

14, ಎರಡನೆ ರಸ್ತೆ, ಹೊಸ ತರಗುಪೇಟೆ, ಬೆಂಗಳೂರು-2

ಫೋನ್ :

ಫ್ಯಾಕ್ಟರಿ : 74577




ಆಫೀಸು : 71238 & 3911



ನಮ್ಮ ಎಲ್ಲ ಗ್ರಾಹಕರಿಗೆ ದೀಪಾವಳಿಯ ಶುಭಾಶಯಗಳು

## ಕಾಂಕ್ರೀಟ್

## ವಸ್ತುಗಳ ನಿಮ್ಮ ಅವಶ್ಯಕತೆಗಳನ್ನೆಲ್ಲಾ ನಾವು ಪೂರೈಸುತ್ತೇವೆ

- ಬಾವಿಯ ಸುತ್ತ ರಕ್ಷಣೆಗಾಗಿ ಹಾಕುವ ಸುಂದರವಾದ ವೆಲ್‌ರಿಂಗಗಳು.
- ಮನೆಯ ಮುಂದೆ ಶೋಭೆ ಕೊಡುವ ಪರಮ ಪೂಜ್ಯ ಬೃಂದಾವನ.
- ಮನೆಯ ಆವರಣಕ್ಕೆ ಕಂಪೌಂಡ ರೇಲಿಂಗ್ಸ್ ಮತ್ತು ಅಂದ ಕೊಡುವ ಹೂವಿನ ತೊಟ್ಟಿಗಳು,
- ಆರಾಮವಾಗಿ ಕುಳಿತು ಆನಂದದಿಂದ ಕಾಲಕಳೆಯಲು ಅನುಕೂಲವಾಗುವ ಸಿಮೆಂಟ್ ಬೆಂಚುಗಳು
- ನೀರಿನ ಕೊರತೆ ಇರುವ ಈ ಕಾಲದಲ್ಲಿ ನೀರು ತುಂಬಿಡಲು ಅನುಕೂಲವಾಗುವ ವಾಟರ್ ಟಬ್ಸ್.
- ಮತ್ತು, ಮನೆಗೆ ಸ್ವಚ್ಛವಾದ ಗಾಳಿ ಬೀಸಲು ಅನುಕೂಲವಾಗುವ ವೆಂಟಿಲೇಟರ್ಸ್.
- ಮನೆಯಲ್ಲಿ ಹೆಂಗಸರು ಉಪಯೋಗಿಸುವ ತರಹೆವಾರಿ ಒಲೆಗಳು.

ಇದಲ್ಲದೆ

ಕಾಂಕ್ರೀಟ್ ವಸ್ತುಗಳ ಕಂಟ್ರಾಕ್ಟ್ ಮಾಡಲಾಗುತ್ತದೆ

## ಇವೇ ಮೊದಲಾದ ಎಲ್ಲಾ ವಸ್ತುಗಳನ್ನು ನಾವು ತಯಾರಿಸುತ್ತೇವೆ

卐

# ಶ್ರೀ ಲಲಿತ ಸಿಮೆಂಟ್ ಕಾಂಕ್ರೀಟ್ ವರ್ಕ್ಸ್

ಶ್ರೀ ಜಯಚಾಮರಾಜೇಂದ್ರ ರೋಡ್

**ಬೆಂಗಳೂರು-2**

ಪ್ರೊಪ್ರೈಟರ: **P. ರಾಮಯ್ಯ**




ಎವರ್‌ಗ್ರೀನ್ ಪ್ರೊಡಕ್ಷನ್ಸ್‌ರವರ

# ವೀರ ಸಂಕಲ್ಪ

(ಕನ್ನಡ ಬಯಲಿನ ಲಕ್ಷ್ಮಣ ನಾಯಕ) (ಕನ್ನಡ)

ಲೇಖಕ-ನಿರ್ಮಾಪಕ-ನಿರ್ದೇಶಕ... ಹುಣಸೂರು ಕೃಷ್ಣಮೂರ್ತಿ

ಸಂಚಿಕೆದಾರರು...
ಮೈಸೂರು ಕರ್ನಾಟಕ ವಿಜಯಾ ಪಿಕ್ಚರ್ಸ್ ಸರ್ಕ್ಯೂಟ್, ಬೆಂಗಳೂರು
ಮುಂಬಯಿ ಶ್ರೀನಿವಾಸ್ ಪಿಕ್ಚರ್ಸ್, ಗದಗ
ಹೈದರಾಬಾದ್ ಸಲ್ಲಮ್ಮ ಪಿಕ್ಚರ್ಸ್, ಸಿಕಂದರಾಬಾದ್

# ನಿಮ್ಮ ಚರ್ಮದ ರಕ್ಷಣೆಗೆ




ವಿಕೊ ಅರ್ಗಜಾ ಸ್ನಾನಕ್ಕಿಂತ ೧೫ ಮಿನಿಟು ಮೊದಲು ಶರೀರಕ್ಕೆ ಲೇಪಿಸತಕ್ಕ ಚರ್ಮ ಶಕ್ತಿವರ್ಧಕವಾಗಿದೆ. ವಿಕೊ ಅರ್ಗಜಾವನ್ನು ಸ್ವಲ್ಪ ಹಾಲಿನಲ್ಲಿ ಇಲ್ಲವೆ ತೆಂಗಿನ ಹಾಲಿನಲ್ಲಿ ಕೂಡಿಸಿ ಶರೀರದ ಮೇಲೆಲ್ಲಾ ನಿಮ್ಮ ಚರ್ಮದೊಳಗೆ ಸೇರುವಂತೆ ಮಿಶ್ರಣವನ್ನು ತಿಕ್ಕಿರಿ ಆ ಕ್ಷಣ ಸಾಬೂನು ಇಲ್ಲವೆ ಶಿಗೇಕಾಯಿ ಹಚ್ಚಿಕೊಂಡು ಸ್ವಚ್ಛ ಸ್ನಾನ ಮಾಡಿರಿ. ಹೀಗೆ ಮಾಡುವದರಿಂದ ನಿಮ್ಮ ಚರ್ಮವು ಉಲ್ಲಸಿತ ಮತ್ತು ಸುಗಂಧಿತವಾಗುವದು.

ವಿಕೊ ಅರ್ಗಜಾವನ್ನು ನಿಯಮಿತ ಉಪಯೋಗಿಸುವುದರಿಂದ ನಿಮ್ಮ ಮುಖಚರ್ಯೆಯು ಸುಧಾರಿಸುವದು ಮತ್ತು ನಿಮ್ಮ ಚರ್ಮವು ಆರೋಗ್ಯಕರ ಮತ್ತು ಕಾಂತಿಯುಕ್ತವಾಗುವದು.

ವಿಕೊ ಅರ್ಗಜಾ ಕ್ರಿಮಿನಾಶಕವೂ ಆಗಿದ್ದು ಚರ್ಮವ್ಯಾಧಿಗಳಿಂದ ನಿಮ್ಮನ್ನು ರಕ್ಷಿಸುತ್ತದೆ.

**ವಿಕೊ ಅರ್ಗಜಾ** ಆಯುರ್ವೇದಿಕ್ ತಯಾರಿಕೆ

**ವಿಕೊ ಲೆಬೊರೇಟರೀಜ, ಮುಂಬಯಿ-೧೪.**

---

ದೀಪಾವಳಿಯು ನಮ್ಮ ಗ್ರಾಹಕವೃಂದಕ್ಕೆಲ್ಲ ಸುಖಪ್ರದವಾಗಲಿ

---

ದೀಪಾವಳಿಯ ಶುಭಾಶಯಗಳು

# ಧೋಂಗಡಿ ಬ್ರದರ್ಸ

**ಬ್ಯಾಂಗಲ್ಸ & ಜನರಲ್ ಸ್ಟೋರ್ಸ**

**ದಾಜಿಬಾನ ಪೇಟೆ, ಹುಬ್ಬಳ್ಳಿ.**

ಹೊಸ-ಹೊಸ ನಮೂನೆಯ **ಪ್ಲಾಸ್ಟಿಕ್** ಮತ್ತು **ಕಾಜಿನ ಬಳೆಗಳ** ಸಲುವಾಗಿ
ಹಾಗೂ ಎಲ್ಲ ತರದ **ಟಾಯಲೆಟ್ ವ ಸ್ಟೇಶನರಿ**
ಸಾಮಾನುಗಳಿಗಾಗಿ ಸಂದರ್ಶಿಸಿರಿ!!

---

ನಮ್ಮ ಗ್ರಾಹಕರಿಗೂ ಹಾಗೂ ಹಿತಚಿಂತಕರಿಗೂ ದೀಪಾವಳಿಯ

.......**ಶುಭಾಶಯಗಳು!**....

"ಮೆಸರ್ಸ ಆರ್. ಇ.
ಸವಣೂರ
& ಕಂಪನಿ"

**ಹಿರೇಪೇಟೆ,** ● **86 ಮೋತಿನಗರ,**
**ಹುಬ್ಬಳ್ಳಿ.** ● **ಕಲಾಸಿ ಪಾಳ್ಯಂ,**
**ಫೋನ: 896** ● **ಬೆಂಗಳೂರು-2.**

[1] ಆರ್. ಇ. ಸವಣೂರ
[2] ಆಯ್. ಬಿ. ಹರ್ತಿ
[3] ವ್ಹಿ. ಎಸ್. ನಾಗರಾಜ
[4] ಎಲ್. ಇ. ಸವಣೂರ

---

ನಮ್ಮ ಯಾವತ್ತೂ ಗ್ರಾಹಕರಿಗೂ ಹಿತೈಷಿಗಳಿಗೂ ಸುಖಕರ ದೀಪಾವಳಿ ಮತ್ತು ವೈಭವದ ಹೊಸ ವರ್ಷ

ಕೋರುತ್ತೇವೆ!

# ನ್ಯೂ ಕರ್ನಾಟಕ ಟೇಲರ್ಸ

[ಸಾರ್ವಜನಿಕ ಲಾಯಬ್ರರಿ ಬಾಜು]

**ಹುಬ್ಬಳ್ಳಿ**

ಪ್ರೊ.:— ಜಿ. ಎಮ್. ಹರಶೆಟ್ಟಿ.

(ಸೂಟಸ್ಪೆಶಾಲಿಸ್ಟ)

ನಿಮ್ಮ ಸುಂದರ ಉಡುಪು ನಿಮ್ಮ ವ್ಯಕ್ತಿತ್ವವನ್ನು ಹೆಚ್ಚಿಸುತ್ತದೆ...ಅಂಥ ಸುಂದರ ಉಡುಪಿಗಾಗಿ ಇಂದೇ ಸಂದರ್ಶಿಸಿರಿ....!!



*We wish you happy Deepavali*
*and*
*Obliged to be always at your service*

*in meeting your requirements in:*

* Engineering Tools, "Addison S. A. P."
* Printing Machinery & Accessories
* Automobile Bearings, Bushings & Thrust Washers: "Clevite"
* Pistons, Ringsets & Liners: "Bricovmo"

# INDUSTRIAL ACCESSORIES CO.

SAMYUKTA KARNATAK PREMISES

**2, Residency Road** :: :: :: **BANGALORE 25**

*Grams*: **Care: "Loktrust"** *Phone*: **24121-24122**



ನಮ್ಮ ಎಲ್ಲಾ ಹಿತೈಷಿಗಳಿಗೂ ಮತ್ತು ಪೋಷಕರಿಗೂ ದೀಪಾವಳಿ ಶುಭಾಶಯಗಳು



ಕರ್ನಾಟಕದ ಜನಪ್ರಿಯ **ಚಾವಿ** ಗುರುತಿನ ಬೆಂಕಿಕಡ್ಡಿಗಳು

ಇದು ವರೆವಿಗೂ ಪ್ರೋತ್ಸಾಹ ಕೊಟ್ಟವರೆಲ್ಲರು ಇನ್ನು ಮುಂದೆಯೂ ಸಹಾ ಅದೇ ರೀತಿ
ಪ್ರೋತ್ಸಾಹ ಕೊಡಬೇಕಾಗಿ ವಿನಂತಿ

ಟೆಲಿಗ್ರಾಮ್ಸ್ :
'CHAVIMATCH'




ಟೆಲಿಫೋನ್ :
(ಬೆಂಗಳೂರು ಶಾಖೆ)
72712

# ಶ್ರೀನ್‌ಸಿಂಗ್ ಮ್ಯಾಚ್ ಸೇಲ್ಸ್ ಡಿಪೊ

**4–1, 4–2 ಬಾರ್‌ಲೇನ್, ಕಾಟನ್ ಪೇಟೆ ಕ್ರಾಸ್ ಬೆಂಗಳೂರು—2**

ಶಿವಕಾಶಿ ಫೋನ್ ನಂ. 184

— ಮೈಸೂರು ರಾಜ್ಯದಲ್ಲಿ ಎಲ್ಲಾ ಕಡೆಗಳಲ್ಲೂ ದೊರೆಯುತ್ತವೆ —



ಟ್ರಾನ್ಸಿಸ್ಟರ್ T. R. 8 ಹಾಗು A. C. ಮಾರ್ವೆಲ್

ನಿಮ್ಮ ವಾಸ್ತವ್ಯದ ಕೋಣೆಗೆ ಜೀವನಾಡಿ ರೇಡಿಯೋ !

# ಟೆಲಿಕ್ರಾಫ್ಟ್

T.R.-8 Rs. 415
Marvel Rs. 365
(ಸೇಲ್ಸ್‌ಟ್ಯಾಕ್ಸ್ ಪ್ರತ್ಯೇಕ)

ನೂತನ ದೀಪಾವಳಿಯ
ಶುಭಸಂದೇಶದ ಕರೆ



ಅಧಿಕೃತ ಮಾರಾಟಗಾರರು : ಧೋಂಗಡಿ ಬ್ರದರ್ಸ್
ಕೊಪ್ಪೀಕರ ರೋಡ, **ಹುಬ್ಬಳ್ಳಿ**

ವಾಚ್ ಮತ್ತು
ರೇಡಿಯೋ
ವ್ಯಾಪಾರಿಗಳು

# ಪರಿವಿಡಿ



[ ಮುಂದಿನ ಪುಟ ನೋಡಿರಿ ]

# INDEX TO ADVERTISERS



[ P. T. O. ]

# ಕರ್ಮವೀರ

ದೀಪಾವಳಿ ಸಂಚಿಕೆ-೧೯೬೩

ಸಂಪಾದಕರು : ಪ. ರಾ. ಪುರೋಹಿತ


## ನಮ್ಮ ನುಡಿ

'ದೀಪಾವಳಿ' ಹಿಂದುಗಳಿಗೆ ಪರಮ ಪವಿತ್ರವಾದ ಹಬ್ಬ. ಅಜ್ಞಾನಾಂಧಕಾರ-ವನ್ನು ಹೋಗಿಸಿ ಜ್ಞಾನಜ್ಯೋತಿಯನ್ನು ಬೆಳಗಿಸಲು ಪರಮಾತ್ಮನನ್ನು ಪ್ರಾರ್ಥಿಸಲು ಮನೆ ಮಂದಿರಗಳಲ್ಲಿ ದೀಪಗಳನ್ನು ಪ್ರಜ್ವಲಿಸುವ ಹಬ್ಬ, ಸ್ನೇಹಮಯಯವಾದ ಎಣ್ಣೆ ತುಪ್ಪದಿಂದ ಹಣತೆಗಳಲ್ಲಿ ದೀಪವನ್ನು ಬೆಳಗಿಸುವ ಪವಿತ್ರ ಸಪ್ತಾಹ. ಪರಮಾತ್ಮ ಶ್ರೀಕೃಷ್ಣನು ಪ್ರಾಗ್ಜ್ಯೋತಿಷಪುರಕ್ಕೆ ಹೋಗಿ ನರಕಾಸುರ ಮೊದಲಾದ ಬಲಿಷ್ಠ ದೈತ್ಯರನ್ನು ಸಂಹರಿಸಿದ ನರಕಚತುರ್ದಶಿ. ಬಲಿಪ್ರತಿಪದೆ ಹಿಂದುಗಳಿಗೆ ಪರಮಪಾವನವಾದ ದಿನ. ಕೆಲ ಭಾಗದಲ್ಲಿ ಸಂವತ್ಸರ ಪ್ರತಿಪದೆಯೂ ಇದಾಗಿದೆ. . . . . . . . . . . . . . . . . . .

ಇಂಥ ಸಂಭ್ರಮದ ಸಮಯದಲ್ಲಿ ನಾವು ಕಳೆದ ಹದಿನೈದು ವರುಷಗಳಿಂದ ಕರ್ಮವೀರ ದೀಪಾವಳಿ ಸಂಚಿಕೆಯನ್ನು ಹೊರಡಿಸಿ ಜ್ಞಾನಪ್ರಸಾರಕಾರ್ಯವನ್ನು ಮಾಡುತ್ತ ಬಂದಿದ್ದೇವೆ. ವರುಷವರುಷಕ್ಕೂ ಈ ಸಂಚಿಕೆ ಹೆಚ್ಚು ಲೋಕಪ್ರಿಯವಾಗುತ್ತ ನಡೆದಿದ್ದು ಭಿನ್ನ ಭಿನ್ನ ರುಚಿಗಳ ಜನರ ಮನಸ್ಸನ್ನು ತಣಿಸುತಿರುವದು. ಕತೆ, ಕವಿತೆ, ನಾಟ್ಯಛಟ, ಹರಟೆ, ವೈಜ್ಞಾನಿಕ, ಸಾಂಸ್ಕೃತಿಕ, ಸಾಮಾಜಿಕ ಲೇಖನಗಳು ವರ್ಷಭವಿಷ್ಯ ಈ ಸಂಚಿಕೆಯನ್ನಲಂಕರಿಸುವವು. ಸದ್ಯದಲ್ಲಿ ಶಿಕ್ಷಣಮಟ್ಟವು ಇಳಿದಿದೆಂಬ ಕೂಗು ಎಲ್ಲೆಡೆ ಕೇಳಬರುತಿದೆ. ಈ ಬಗೆಗೆ ಮಾನ್ಯ ಶಿಕ್ಷಣತಜ್ಞರ ವಿಚಾರಸಂಕಿರಣವನ್ನು ಪ್ರಸಿದ್ಧಿಸಿದ್ದು ಈ ಸಲದ ಸಂಚಿಕೆಯ ವೈಶಿಷ್ಟ್ಯವಾಗಿದೆ, ಉದಯೋನ್ಮುಖ ನರ್ತಕಿಯರಾದ ಕುಮಾರಿ ಸುಧಾರಾಣಿಯು 'ಮಾತಾಡಬಾರದೇನೋ ಮಾರಮಣನೆ' ಎಂಬ ಜಾವಳಿಗೆ ನೀಡಿದ ಆಕರ್ಷಕ ಅಭಿನಯದ ಚಿತ್ರಗಳನ್ನು ಕೊಟ್ಟದ್ದು ಒಳ್ಳೆ ಬೋಧಪ್ರದವಾದ ವೈಶಿಷ್ಟ್ಯ. ಆಫ್‌ಸೆಟ್ ಮುದ್ರಣದಲ್ಲಿ ಅಂದವಾಗಿ ವಿವಿಧ ವರ್ಣಗಳಲ್ಲಿ ಮುದ್ರಿತವಾದ ಮುಖಪುಟವಿದೆ. . . . . . . . . . . . . .

ಈ ಸಂಚಿಕೆಯನ್ನು ಸರ್ವಾಂಗಸುಂದರ ಮಾಡಲು ನಮ್ಮೊಡನೆ ಸಹಕರಿಸಿದವರಿಗೆಲ್ಲ ಅಭಿವಂದನೆಗಳನ್ನು ಸಲ್ಲಿಸುವೆವು. ಜಾಹೀರಾತು ಕೊಟ್ಟು ಸಹಾಯಸಲ್ಲಿಸಿದವರಿಗೆ ಚಿರಋಣಿಯಾಗಿದ್ದೇವೆ. . .

'ತಮಸೋ ಮಾ ಜ್ಯೋತಿರ್ಗಮಯ'ವೆಂದು ಉಪನಿಷತ್ತಿನಲ್ಲಿ ಪರಮಾತ್ಮನನ್ನು ಪ್ರಾರ್ಥಿಸಿ-ಕೊಂಡಂತೆ ನಮ್ಮ ಅಜ್ಞಾನವನ್ನು ಹೋಗಲಾಡಿಸಿ ಆತ್ಮಜ್ಞಾನದತ್ತ ನಮ್ಮನ್ನು ನಡೆಸು ಎಂದು ಅವನನ್ನು ಪ್ರಾರ್ಥಿಸುವಾ— . . . . . . . . . . .

**— ಸಮಸ್ತ ಸನ್ಮಂಗಳಾನಿ ಭವಂತು —**

ಲೇಖಕರು :
ರಂ. ರಾ. ದಿವಾಕರ
ಹುಬ್ಬಳ್ಳಿ

# ಶಕ್ತಿಶಾಸ್ತ್ರ

ವಿಶ್ವದ ವ್ಯಾಪಾರವೆಲ್ಲ ನಿಯುಮಬದ್ಧವಾಗಿಯೇ ನಡೆಯುುವುದು. ಈ ರೀತಿ ನಿಯುಮಬದ್ಧವಾಗಿ ನಡೆಯಲು ನಿಯಾಮಕಶಕ್ತಿಯೊಂದಿರುವುದು. ಆಧುನಿಕ ಭೌತಶಾಸ್ತ್ರಜ್ಞರು ಒಂದೇ ಒಂದು ಶಕ್ತಿ ಇದ್ದು ಆದು ವಿವಿಧ ವಿಶ್ವರೂಪದಿಂದ ನಟಸುತಿರುವದಾಗಿ ಹೇಳುತಿರುವರು. ವೇದಾಂತಿಗಳು ಈ ಮತವನ್ನು ಒಪ್ಪಿಕೊಂಡಿರುವರು. ಪರಮಾತ್ಮಶಕ್ತಿಯೇ ಎಲ್ಲಕ್ಕೂ ಮೂಲ. ಎಲ್ಲವನ್ನು ಆದು ವ್ಯಾಪಿಸಿರುವದೆನ್ನುವರು. ಮನುಷ್ಯನಲ್ಲಿ ಹಲವಾರುಮಟ್ಟದ ಶಕ್ತಿಗಳು ಕಾಣಿಸಿಕೊಳ್ಳುವುದಕ್ಕೆ ಇದೇ ಕಾರಣ. ಈ ಶಕ್ತಿ ಎಂದರೇನು? ಆತ್ಮಶಕ್ತಿ ಯಾವುದು? ಶಕ್ತಿಶಾಸ್ತ್ರ ಜೀವನದ ಗುಟ್ಟನ್ನು ಹೇಗೆ ತಿಳಿಸುವುದು ಈ ಮೊದಲಾದ ಸಂಗತಿಗಳನ್ನು ಲೇಖಕರಿಲ್ಲಿ ತಿಳಿಯಾದ ಭಾಷೆಯಲ್ಲಿ ನಿರೂಪಿಸಿದ್ದಾರೆ.

---

ನಾನು ಇಲ್ಲಿ ಮನುಷ್ಯನಿಗೆ ಸಂಬಂಧಿಸಿದ ಮಟ್ಟಿಗೆ ಮಾತ್ರ ಶಕ್ತಿಶಾಸ್ತ್ರದ ಕೆಲವು ಅಂಶಗಳನ್ನು ಹೇಳಲು ಹೊರಟಿರುವೆನು. ಶಕ್ತಿಶಾಸ್ತ್ರವೆಂಬುದು ಒಂದು ಅಪಾರವಾದ ಶಾಸ್ತ್ರವೆಂದೇ ಹೇಳಬಹುದು. ವಿಶ್ವವೆಲ್ಲ ಶಕ್ತಿಮಯುವು, ಶಕ್ತಿಯ ಆವಿರ್ಭಾವವು. ಶಕ್ತಿಯ ವಿನಾ ಒಂದು ಕಡ್ಡಿ ಸಹ ಅಲುಗಾಡಲಾರದು. ಅಖಿಲ ಕರ್ಮವೂ ಶಕ್ತಿಯಿಂದಲೇ ನಡೆಯುವದು. ಅಥವಾ ಕರ್ಮಮಾತ್ರವು ಶಕ್ತಿಯ ಬಾಹ್ಯ ಹಾಗು ದೃಶ್ಯ ಮತ್ತು ಗೋಚರ ರೂಪವು; ಶಕ್ತಿಯು ಕರ್ಮದ ಕಾರಣರೂಪವು, ಅದೃಶ್ಯ ರೂಪವು, ಗುಹ್ಯ ಅಂತರ್‌ರೂಪವು. ಶಕ್ತಿಯು ಆವಿರ್ಭವಿಸುವಾಗ ಶಾಸ್ತ್ರಶುದ್ಧ ರೀತಿಯಿಂದ ಅಥವಾ ಶಾಸನಬದ್ಧವಾಗಿಯೇ ಕರ್ಮದ ಮುಖಾಂತರ ಆವಿರ್ಭವಿಸುವದು. ವಿಶ್ವದ ವ್ಯಾಪಾರವೆಲ್ಲ, ನಿಸರ್ಗದ ನಾಟಕವೆಲ್ಲ ನಿಯಮಬದ್ಧವಾಗಿಯೇ ನಡೆಯುವದು.

ವಿಶ್ವಕರ್ಮನು ತನ್ನಿಚ್ಛೆಯಂತೆ ನಡೆಯಲು ಸ್ವತಂತ್ರನಿಲ್ಲ. ಅವನು ಕೂಡ ಶಾಸ್ತ್ರಶಾಸಿತನಾಗಿಯೇ ನಡೆಯಬೇಕು. ಆಧುನಿಕ ಮಹಾವಿಜ್ಞಾನಿ ಆಯಿನ್‌ಸ್ಟಾಯಿನ್ ಅಂದದ್ದು: ದೇವರು ಲೆತ್ತವಾಡಲು ಕುಳಿತಿಲ್ಲ. ಅವನ ರಾಜ್ಯದಲ್ಲಿ 'ಆಕಸ್ಮಿಕ' ಎಂಬುದಕ್ಕೆ ಎಡೆ ಇಲ್ಲ. ಎಲ್ಲವೂ ನಿಯಮನಿಗಡಿತ, ಧರ್ಮಶಾಸಿತ.

'ಸ್ಥೂಲವಾಗಿ ನೋಡಿದರೆ ಮನುಷ್ಯನು ದೇಹ-ಪ್ರಾಣ, ಅಥವಾ ದೇಹ-ಮನಸು, ಅಥವಾ ದೇಹ-ಆತ್ಮ ಇವುಗಳಿಂದ ಕೂಡಿದವನು. ಇವೆರಡರ ಸಂಯೋಗ, ಸಹಯೋಗ, ಸಹಜೀವನ, ಇದು ಮನುಷ್ಯನ ಜೀವನಕ್ಕೆ, ವ್ಯವಹಾರಕ್ಕೆ ಅವಶ್ಯ. ಇವೆರಡೂ ಕೂಡಿದರೆ ಮಾತ್ರ 'ಮನುಷ್ಯ' ಎಂಬ ವಸ್ತು ಸಿದ್ಧವಾಗುವದು. ಇವುಗಳನ್ನು ಪ್ರತ್ಯೇಕಿಸಲು ಹೊರಟರೆ 'ಮನುಷ್ಯ' ಎಂಬ ವಸ್ತು ಇಲ್ಲದಂತಾಗುವದು. ಅವನಲ್ಲಿಯ ಶಕ್ತಿ-ವಿಶೇಷಗಳನ್ನು ಪರೀಕ್ಷಿಸಿ ಅವುಗಳ ಸಾಮಾನ್ಯ ನಿಯಮಗಳ ನಿರ್ದೇಶವನ್ನು ಮಾಡುವುದೇ ಈ ಲೇಖದ ಉದ್ದೇಶ.

## ಆತ್ಮನ ಸಾಮರ್ಥ್ಯ—ಸ್ವರೂಪ

"ಅಣೋರಣೀಯಾನ್ ಮಹತಃ ಮಹೀಯಾನ್, ಆತ್ಮಾ ಅಸ್ಯ ಜಂತೋಃ ನಿಹಿತಃ ಗುಹಾಯಾಮ್" ಎಂದು ಉಪನಿಷತ್ತು ಹೇಳಿದೆ. ಪ್ರತಿಯೊಂದು ಜೀವಂತಪ್ರಾಣಿಯ ಆತ್ಮವು—ಜೀವತ್ವವನ್ನು ಹೊಂದಿದ ಚಿದ್ಘನಶಕ್ತಿಯು, ಆಯಾ ಪ್ರಾಣಿಯ ದೇಹದಲ್ಲಿ ಗೂಢವಾಗಿ ವಾಸಿಸುವದು; ಅತ್ಯಂತ ಅಣು (ಚಿಕ್ಕದು—ಸೂಕ್ಷ್ಮವಾದುದು) ಆಗುವ ಸಾಮರ್ಥ್ಯ ಅದೇ ರೀತಿ ಅತ್ಯಂತ ಮಹಾನ್ (ದೊಡ್ಡದು, ವಿಶಾಲ) ಆಗುವ ಸಾಮರ್ಥ್ಯ ಆಯಾ ಆತ್ಮನಲ್ಲಿರುವದು.

ಪಾತಂಜಲ ಯೋಗಸೂತ್ರಗಳನ್ನು ಮುಂದಿಟ್ಟುಕೊಂಡೇ ನಾವು ಈ ಮೇಲಿನ ಉಪನಿಷದ್ವಾಕ್ಯದ ಅರ್ಥವನ್ನು ಮಾಡುವದು ಸಾಧ್ಯ. ಅನುಭಾವದಿಂದಲೇ ಅದರ ಪ್ರತೀತಿಯು ಶಕ್ಯ.

ಆತ್ಮವು ಒಂದು ಮಹಾಸಾಗರವೆಂದು ಕಲ್ಪಿಸುವ. ತೆರೆತರಂಗಗಳಿಲ್ಲದಾಗ ಅದು ಅತ್ಯಂತ ಪ್ರಶಾಂತವೂ ಗಂಭೀರವೂ ಇರುವದು. ಅದರ ಮೂಲ ಸ್ವರೂಪ ಅದು. ಮನುಷ್ಯನಲ್ಲಿ ನಿಗೂಢವಾಗಿರುವ ಆತ್ಮನ ಸ್ವ-ರೂಪವೂ ಅದೇ ರೀತಿ ಇರುವದು. ತೆರೆಗಳೆದ್ದಾಗ ಮಹಾಸಾಗರವು ತನ್ನ ಸ್ವ-ರೂಪವನ್ನು ಕಳೆದುಕೊಂಡು ತೆರೆತರಂಗಗಳ ರೂಪವನ್ನು ತಾಳುವದು. ಆತ್ಮನಲ್ಲಿ ವಿವಿಧ ಚಿತ್ತವೃತ್ತಿಗಳು—ರಾಗದ್ವೇಷಾದಿಗಳು, ಉಂಟಾದವೆಂದರೆ ಆತ್ಮನು ಸ್ವ-ರೂಪದಲ್ಲಿರುವದು ತಪ್ಪುವದು, ಹಾಗೂ ಅವನು ಆಯಾ ವೃತ್ತಿರೂಪನಾಗುವನು. 'ಸ್ವ-ರೂಪೇ ಅವಸ್ಥಾನಂ,' ಸ್ವ-ರೂಪದಲ್ಲಿರುವಿಕೆಯನ್ನು ಬಿಟ್ಟು, ಆತ್ಮನು ವೃತ್ತಿಸಾರೂಪ್ಯತೆಯನ್ನು (ಅನ್ಯಥಾ ವೃತ್ತಿಸಾರೂಪ್ಯತಾ) ಹೊಂದುವನು.

ಪ್ರತಿ ಮನುಷ್ಯನಲ್ಲಿ ಈ ಆತ್ಮವೇ ಮುಖ್ಯ, ಮೂಲ. ಮನುಷ್ಯನ ಮನುಷ್ಯತ್ವವು ಈ ಆತ್ಮನಿಂದಲೆ. ಮನುಷ್ಯನಲ್ಲಿರುವ ಇತರ ಶಕ್ತಿಗಳ ಕ್ರೋಢೀಕರಣ, ಕೇಂದ್ರೀಕರಣ, ಸಂಬಂಧೀಕರಣ ಇವೆಲ್ಲ ಆತ್ಮನ ಮೂಲಕವೆ. ಮನುಷ್ಯನು 'ನಾನು' ಎಂಬುವದು ಈ ಆತ್ಮನ ಮೂಲಕವೆ. ಆತ್ಮನು ಚಿ-ದ್ರೂಪನು. "ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ" ಎಂದು ಭಗವಂತನು ಭಗವದ್ಗೀತೆಯಲ್ಲಿ ಹೇಳಿರುವದು ಈ ಆತ್ಮನನ್ನು ಕುರಿತೇ ಎಂಬುದನ್ನು ನಾವು ತಿಳಿದುಕೊಳ್ಳಬೇಕು. "ನೈನಂ ಛಿಂದಂತಿ ಶಸ್ತ್ರಾಣಿ" ಇತ್ಯಾದಿ ವರ್ಣನೆಯು ಈ ಆತ್ಮನನ್ನೇ ಅನ್ವಯಿಸುವದು. ಈ ಆತ್ಮನು ಮೇಲೆ ಹೇಳಿದಂತೆ-"ಅಣೋರಣೀಯಾನ್ ಮಹತೋ ಮಹೀಯಾನ್" ಶಕ್ತಿ ಉಳ್ಳವನು. ಆ ಶಕ್ತಿಯನ್ನು ತಿಳಿದುಕೊಂಡು ಅದರ ಅನುಭವ ಪಡೆದುಕೊಳ್ಳುವುದೇ ಆತ್ಮಬೋಧವೆನಿಸುವದು. ಆಗಲೆ ಅಂತರಾತ್ಮ-ವಿಶ್ವಾತ್ಮ ಇವುಗಳ ಅನ್ಯೋನ್ಯ ಸಂಬಂಧದ ಅನುಭವವಾಗಬಲ್ಲದು. ಇರಲಿ.

ಇನ್ನು ಇತರ ಯಾವ ಶಕ್ತಿಗಳು ಈ ದೇಹದಲ್ಲಿ ಕೆಲಸ ಮಾಡುತಿವೆ ಹಾಗು ಶಕ್ತಿಶಾಸ್ತ್ರವು ಎಂಬುದು ಏನು, ಅದು ಅವುಗಳಿಗೆ ಹೇಗೆ ಅನ್ವಯಿಸುವದು ಇದನ್ನು ನೋಡುವ.

## ಒಂದೇ ಒಂದಾದ ಅದೃಶ್ಯ ಶಕ್ತಿ

ಆಧುನಿಕ ಭೌತಶಾಸ್ತ್ರಜ್ಞರು (ಫಿಜಿಸಿಸ್ಟ್ಸ) ವಿಶ್ವದಲ್ಲೆಲ್ಲ ಒಂದೇ ಒಂದು ಶಕ್ತಿ (ಎನರ್ಜಿ) ಇದೆ, ಅದು ಅದೃಶ್ಯವಿದೆ, ಅದೇ ವಿವಿಧ ವಿಶ್ವರೂಪದಿಂದ ನಟಿಸುತಿದೆ ಎಂದು ಪ್ರತಿಪಾದಿಸುತ್ತಿದ್ದಾರೆ. ವೇದಾಂತಿಗಳು ಕೂಡ ಪರಮಾತ್ಮಶಕ್ತಿಯೇ ಎಲ್ಲಕ್ಕೂ ಮೂಲ, ಅದೇ ಎಲ್ಲವನ್ನೂ ವ್ಯಾಪಿಸಿ, ಎಲ್ಲವನ್ನು ನಿಯಮಿಸುವದು ಎಂದು ಹೇಳುವರು. ಶಕ್ತಿಗಳು, ವಸ್ತುಗಳು, ಬೇರೆ ಬೇರೆ ಕಂಡರೂ ಅವುಗಳ ಮೂಲ ನಿಯಾಮಕ ಶಕ್ತಿ ಒಂದೇ ಒಂದು, ಅದೇ ಎಲ್ಲಕ್ಕೂ ಸೂಕ್ಷ್ಮ, ಪ್ರಭಾವಿ, ಅದೃಶ್ಯ, ಅನುಪಮ, ಎಂದು ಪ್ರತಿಪಾದಿಸಲಾಗುತಿದೆ.

ಮನುಷ್ಯನು ಒಂದೇ ವ್ಯಕ್ತಿ ಎಂದು ಕಂಡರೂ ಪ್ರತಿ ಮನುಷ್ಯನಲ್ಲಿ ಒಂದೇ ಆತ್ಮನು ಇದ್ದರೂ ವಿಶ್ಲೇಷಣೆ ಮಾಡಿ ನೋಡಿದರೆ ಅವನಲ್ಲಿ ಹಲವು ಮಟ್ಟಗಳು ಹಾಗೂ ಆಯಾ ಮಟ್ಟದ ಶಕ್ತಿಗಳು ಕಂಡು ಬರುವವು. ಉಪನಿಷತ್ತಿನಲ್ಲಿ ಅವುಗಳಿಗೆ 'ಕೋಶ'ಗಳು ಎಂಬ ಹೆಸರು ಕೊಡಲಾಗಿದೆ. ಅವು ಐದು:

(೧) ಅನ್ನಮಯ ಕೋಶ, ಜಡದೇಹವೆಲ್ಲವೂ ಅನ್ನಮಯ ಕೋಶ ಎಂದು ಹೇಳಬಹುದು. ಅದು ಜಡ ಪದಾರ್ಥಗಳ ಶಕ್ತಿಯಿಂದ ಯುಕ್ತವಾದುದು.

(೨) ಪ್ರಾಣಮಯ ಕೋಶ. ರಕ್ತಾಭಿಸರಣಾದಿ ಶಕ್ತಿಯುಳ್ಳ ಕೋಶವಿದು.

(೩) ಮನೋಮಯ ಕೋಶ. ವಿಚಾರ ಮಾಡುವ ಹಾಗೂ ಭಾವನಾದಿ ಶಕ್ತಿಯುಳ್ಳ ಕೋಶವಿದು.

(೪) ವಿಜ್ಞಾನಮಯಕೋಶ, ಶುದ್ಧಜ್ಞಾನಶಕ್ತಿ-ಇದ್ದ ಕೋಶವಿದು.

(೫) ಆನಂದಮಯ ಕೋಶ, ಇದು ಆತ್ಮಶಕ್ತಿಯುಳ್ಳ ಕೋಶ ಹಾಗೂ ಸರ್ವ ಕೋಶಗಳ ಮತ್ತು ಶಕ್ತಿಗಳ ನಿಯಮನ ಮಾಡುವ ಕೋಶ. ಈ ಕೋಶದಲ್ಲಿಯೆ ಆತ್ಮಶಕ್ತಿಯ ಆವಿರ್ಭಾವವು ಹೆಚ್ಚಾಗಿ ವ್ಯಕ್ತವಾಗುವದು.

ಇವು ಉತ್ತರೋತ್ತರವಾಗಿ ಸೂಕ್ಷ್ಮ ಹಾಗೂ ಪ್ರಭಾವಶಾಲಿ ಕೋಶಗಳಿರುವುದರಿಂದ ತಮ್ಮ ಕೆಳಗಿನ ಕೋಶಗಳನ್ನು ನಿಯಮಿಸಬಲ್ಲ ಹಾಗೂ ಅವುಗಳ ಮೇಲೆ ಪ್ರಭುತ್ವವನ್ನು ನಡೆಯಿಸಬಲ್ಲ ಕೋಶಗಳಿರುವವು.

### ಆತ್ಮನು ಎಲ್ಲಕ್ಕೂ ಶಕ್ತಿಶಾಲಿ

ಈ ಮಾತನ್ನೆ ಹೆಚ್ಚು ಬಿಚ್ಚಿ ಹೇಳುವುದಾದರೆ, ಜಡದೇಹಕ್ಕಿಂತ ಪ್ರಾಣವು ಶಕ್ತಿಶಾಲಿ ದೇಹ-ಪ್ರಾಣಗಳಿಗಿಂತ ಮನಸು ಶಕ್ತಿಶಾಲಿ; ದೇಹ, ಪ್ರಾಣ, ಮನಗಳಿಗಿಂತ ವಿಜ್ಞಾನ "ಶುದ್ಧ ಮನಸು" ಶಕ್ತಿಶಾಲಿ. ಇವೆಲ್ಲವುಗಳಿಗಿಂತ ಆತ್ಮವು ಶಕ್ತಿಶಾಲಿ.

ಮನುಷ್ಯನಿಗೆ ಅನ್ವಯಿಸುವ ಶಕ್ತಿಶಾಸ್ತ್ರವೆಂದರೆ ಇದೇ—ಈ ಐದು ಕೋಶಗಳ ಮಟ್ಟವನ್ನು ಹಾಗೂ ಅವುಗಳಲ್ಲಿ ಅಡಕವಾದ ಶಕ್ತಿಗಳನ್ನು ಅವುಗಳ ಬಲಾಬಲಗಳನ್ನು ಯೋಗ್ಯಾಯೋಗ್ಯತೆಯನ್ನು ತಿಳಿದುಕೊಂಡು ಉಚ್ಚತರವಾದ ಶಕ್ತಿಯಿಂದ ನೀಚತರವಾದ ಶಕ್ತಿಯನ್ನು ನಿಯಮಿಸಿ, ಎಲ್ಲಕ್ಕೂ ಹೆಚ್ಚಿನದಾದ ಆತ್ಮಶಕ್ತಿಯ ಬಲದಿಂದ ಉಳಿದವುಗಳನ್ನು ನಿಯಮಿಸಿ, ಅವುಗಳನ್ನು ಗೆದ್ದು ಆನಂದಮಯ ಕೋಶವನ್ನು ಸಹ "ಉಪಸಂಕ್ರಮಿಸಿ" ಸ್ವರಾಟ್-ಸಮ್ರಾಟ್ ಪದವನ್ನು ಪಡೆಯುವದೇ ಈ ಶಕ್ತಿಶಾಸ್ತ್ರದ ಉದ್ದೇಶ.

ಶಾಸ್ತ್ರ ಇದರ ಅರ್ಥ ಕೇವಲ ಆಯಾಶಾಸನದ ನಿಯಮಗಳನ್ನು ಬುದ್ಧಿಯಿಂದ ಅರಿತುಕೊಳ್ಳುವದಷ್ಟೇ ಅಲ್ಲ; ಆ ನಿಯಮಗಳ ಜ್ಞಾನದ ಮೂಲಕ ಪ್ರಗತಿಪಥದಲ್ಲಿ ಮುಂದೆ ಸಾಗುವ ಕ್ರಿಯೆಯನ್ನು, ಕಲೆಯನ್ನು ಆತ್ಮಸಾತ್ ಮಾಡಿಕೊಳ್ಳುವದು ಸಹ ಶಾಸ್ತ್ರವೇ. ಅರ್ಥಾತ್ ಶಾಸ್ತ್ರವೆಂದರೆ ಜ್ಞಾನ+ಕಲೆ (ಸಾಯನ್ಸ್ ಆ್ಯಂಡ ಆರ್ಟ್), ಪೂರ್ಣಜ್ಞಾನ ಮತ್ತು ಆ ಜ್ಞಾನವನ್ನು ಕ್ರಿಯೆಯಲ್ಲಿ ಸುಂದರವಾಗಿ ಇಳಿಸುವ ಕೌಶಲ.

### ಶಕ್ತಿಶಾಸ್ತ್ರದ ಉಪಯೋಗ

ಮನುಷ್ಯನ ಪ್ರಗತಿಯ ದೃಷ್ಟಿಯಿಂದ, ಅವನ ಉತ್ಕ್ರಾಂತಿಯ (ಎವ್ಲೂಲ್ಯೂಶನ್) ದೃಷ್ಟಿಯಿಂದ ಈ ಶಕ್ತಿಶಾಸ್ತ್ರವನ್ನು ಹೇಗೆ ಉಪಯೋಗಿಸಿಕೊಳ್ಳಬೇಕು ಇದನ್ನು ಸಂಕ್ಷೇಪದಿಂದ ನೋಡಬಹುದು.

ಸಾಧಾರಣವಾಗಿ ಉತ್ಕ್ರಾಂತಿಯ ಇತಿಹಾಸ ನೋಡಿದರೆ, ಮನುಷ್ಯನು ಪಶುಯೋನಿಯಿಂದ ಹೊರಬಿದ್ದು ಮಾನವಯೋನಿಯ ಮೂಲಕ ದೇವಯೋನಿಯತ್ತ ಸಾಗಿರುವನು ಎಂದು ಹೇಳಲು ಅಡ್ಡಿಯಿಲ್ಲ. ಮನುಷ್ಯನ ಜಡದೇಹದ ನೂರಕ್ಕೆ ೯೯ ರಷ್ಟು ಅಂಶವು ಭೌತ-ಹಾಗೂ ರಸಾಯನ ಶಾಸ್ತ್ರಕ್ಕೆ (ಫಿಜಿಕ್ಸ್ ಆಂಡ್ ಕೆಮಿಸ್ಟ್ರಿ) ಆಧೀನವು. ಆದರೆ ಈ ಮನುಷ್ಯದೇಹವನ್ನು ಪ್ರಾಣಶಕ್ತಿಯು (ವ್ಹಾಯಿಟಲ್ ಫೋರ್ಸ್) ಸಂಚಲಿಸುತಿರುವುದರಿಂದ ಅದು ಜಡದೇಹವನ್ನು ಆಳುವದು ಹಾಗೂ ಅದಕ್ಕೆ ಅರ್ಥವನ್ನು ಕೊಡುವದು. ಆದರೆ ಪ್ರಾಣವೆಂಬುದು ಕೇವಲ ಪಶುಶಕ್ತಿ ಇದ್ದಂತೆ. ವಿಚಾರ, ವಿವೇಕ, ಸದ್ಭಾವನೆ, ಇವುಗಳ ಸಂಸ್ಕಾರವು ಮನುಷ್ಯನಿಗೆ ಇಲ್ಲದೆ ಹೋಗಿದ್ದರೆ, ಅವನು ಕೇವಲ ಪಶುವಾಗಿಯೆ ಉಳಿಯುತ್ತಿದ್ದನು. ಆದರೆ ಬರಿ ವಿಚಾರ, ವಿವೇಕ ಸದ್ಭಾವನೆಗಳು ಮನುಷ್ಯನನ್ನು ದೇವಯೋನಿಗೆ ಒಯ್ಯಲು ಸಾಲವು. ತನ್ನ ಉತ್ಕ್ರಾಂತಿಯ ಜ್ಞಾನೋತ್ಸಾಹಗಳಿಂದ ಕೂಡಿದ ನೀತಿಶಕ್ತಿ, ಸೌಂದರ್ಯೋಪಾಸನೆ ಇವು ಮನುಷ್ಯನಿಗೆ ಅವಶ್ಯ. ಆದರೆ ಇವು ಕೂಡ ಮಾನವನನ್ನು ಅತಿಮಾನವನ ಮಟ್ಟಕ್ಕೆ ಒಯ್ಯಬಲ್ಲವು ಹೊರತು ದೇವಯೋನಿಗೆ ಮುಟ್ಟಿಸಲಾರವು. ಆ ಮಟ್ಟದಲ್ಲಿ ಶುದ್ಧ ಆತ್ಮ-ಶಕ್ತಿಯ ಆವಿರ್ಭಾವವು ಅವಶ್ಯ. ಆತ್ಮಶಕ್ತಿಯು ನೀತಿಶಕ್ತಿ ಮುಂತಾದವುಗಳಿಗೆಲ್ಲ ತಾಯಿಬೇರು ಇದ್ದಂತೆ, ಮೂಲಾಧಾರವಿದ್ದಂತೆ. ಆ ಶಕ್ತಿ ಜಾಗ್ರತವಾಯಿತೆಂದರೆ ಆನಂದಮಯ ಕೋಶವನ್ನು ಸಹ ದಾಟಿ, 'ಉಪಸಂಕ್ರಮಿಸಿ,' ಮನುಷ್ಯನನ್ನು ಶುದ್ಧಾ-ನಂದಮಯವಾದ ದೇವಯೋನಿಗೆ ಮುಟ್ಟಿಸಬಲ್ಲದು. ಅಲ್ಲಿ ಕೇವಲ ಶಾಂತಾನಂದವಷ್ಟೇ ಅಲ್ಲ, ಲೀಲಾನಂದದ ಸಾಮ್ರಾಜ್ಯವು ನೆಲೆಗೊಳ್ಳುವದು.

ಶಕ್ತಿಶಾಸ್ತ್ರವು ಕೇವಲ ಮನುಷ್ಯನ ಉತ್ಕ್ರಾಂತಿಗೆ ಮಾತ್ರ ಅನ್ವಯಿಸುವದೆಂದು ತಿಳಿಯಕೂಡದು ಅದು ವಿಶ್ವದಲ್ಲೆಲ್ಲ ವ್ಯಾಪ್ತವು. ಜಡ-ಪ್ರಾಣ-ಚೇತನ-ಚಿತ್-ಶುದ್ಧಚಿತ್-ಚಿದ್ಘನ ಈ ಮುಂತಾದ ಮೆಟ್ಟಲುಗಳಲ್ಲೆಲ್ಲ ಶಕ್ತಿಶಾಸ್ತ್ರವೇ ಕೆಲಸ ಮಾಡುತಿರುವದು ನಮಗೆ ಕಂಡು ಬರುವದು. ಒಂದೇ ಒಂದು ಪರಮ ಶಕ್ತಿಯಿಂದ ನಿಯಮಿತವಾದ ಈ ವಿಶ್ವದಲ್ಲಿ ಹಲವಾರು ಪರಸ್ಪರ ವಿರೋಧಿ ಶಾಸ್ತ್ರಗಳು ತಮ್ಮ ಪ್ರಭಾವವನ್ನು ಬೀರಲಾರವು. ಹಾಗೆ ಆದರೆ ಅನವಸ್ಥಾ ಪ್ರಸಂಗವು ಉಂಟಾಗುವದು.

ಈ ವಿಶ್ವದಲ್ಲಿ ಏನಾದರೂ ಹೆಚ್ಚು ಎದ್ದು ಕಾಣುತ್ತಿದ್ದರೆ ಅದು ವ್ಯವಸ್ಥೆ, ನಿಯಮಬದ್ಧವಾದ ಅನಂತಕ್ರಿಯಾಮಾಲೆ; ಬಾಹ್ಯವೈವಿಧ್ಯ ಆಂತರಿಕ ಏಕಸೂತ್ರತೆ; ವಿರೋಧಾಭಾಸಯುಕ್ತವಾದ ಸಂತತ ಘಟನಾಪರಂಪರೆ; ಒಂದೇ ಮರ್ಮದಿಂದ ಹೊಂದಿಸಲಾದ ಧರ್ಮಕರ್ಮಗಳ ಅವಿಭಾಜ್ಯ ಸರಪಳಿ. ಈ ರಹಸ್ಯಮಯ ಜೀವನದ ಗುಟ್ಟನ್ನು ಶಕ್ತಿಶಾಸ್ತ್ರದ ಅಭ್ಯಾಸದಿಂದಲೆ ತಿಳಿದುಕೊಳ್ಳುವದು ಸಾಧ್ಯ.

---

## ಸಾಮಗಾನ

ನಾಲಗೆಯ ದಾರಿಗೂ ನಡೆವ ಹೆಜ್ಜೆಗು ನಡುವೆ-
ಮಂಜುಸಮತೆಯ ಗೋರಿ;
ಅದರೆದುರು ನಡೆದಿಹುದು; ಸಾಮಗಾನದ ಲಹರಿ—!
"ಹೃದಯ ಹಿಂಡಿದರೇನೆ-ಬಾಳು, ಹನಿ ಹನಿ ಜೇನು."
ಬಾಳು ಹೋಳನು ಮಾಡಿ; ರಸನೆ ಕಟ್ಟದೆ ಜೇನು!
ಧವಳತನದಗ್ಗಳಿಕೆಯಲಿ ತಗ್ಗು-ದಿನ್ನೆಯ ಮುಸುಕಿ-
ಪರೋಪದೇಶದ ಪತಾಕೆ ನಿಗಚಿ ನಾಲ್ಕೂ ದಿಕ್ಕು;
ಕಾಲವರಿತು ಕವಾತು ಮಾಡುವ-ಕಾಲಹುಂಜ-
'ನನ್ನ ಹೊತ್ತಿನಮುಖವೆ, ಬೆಳಗು ನಾಡಿಗೆ' ಎನುವ.

* *

ಬಿಳಿಯ ಕಾಗದ ಸುರುಳಿ-ಮೆದುಳನೆಗಡಿಗೆ ಮುದ್ದು:-
ಈ ತಲೆಯ ಜಂತುಗಳಿಗೆಷ್ಟು-ಡೈಜೆಷ್ಟು!
ಜಗದ ಕಾಡೂಕೂಡ ಸಾಲದಾಗಿವೆ ಇವಕೆ;
ಅಣುಬಾಂಬಿಗೂ ಹರಿತ-ಈ ರೋಗ ಸಿಡಿತ;
ಏನಾದರೂ ಇದು ಬಲು ಕೆಟ್ಟ ಸುಂಕರೋಗ!
ಮೊದಮೊದಲು ಈ ರೋಗ ಕವಿಕುಲಕೆ ಬಹಳಿತ್ತು;
ಮುದ್ದುಕೊಂಡೇ ಆದ, ಕವಿಪೂರದಿವಾಳೀ!
ಇವನ ಕಸಬೂಕೂಡ ಕಸಬರಿಗೆಗಿಂತಲೂ ಕಡೆಯಾಯಿತೀಗೀಗ

ಮಗು ಬಂದು ಕೇಳಿದನು:—
"ಓ - ತಂದೆ,
ತಲೆಗೆ - ತಲೆ ಕೂಡಿಸಿದರೆಷ್ಟು ತಲೆ?"
ನನ್ನ ತಲೆಯೊಳಗೆ ಮಲಗಿದ್ದ ಮೆದುಳಿದ್ದು ನಡುಗಿತು
ಒಮ್ಮೆಲೆ!

ನಾನಾಗ, ತಡ ಮರಸಿ:
"ಮಗುಽಽ,
ಬಾ, ಇಲ್ಲಿ;
ಲೆಕ್ಕ ತಪ್ಪಾಗಿರಬೇಕು ... .... !
ಕಳೆದುಬಿಡು; ತಲೆಯೊಳಗೆ ತಲೆಯು".
ಮಗು ಬಿಟ್ಟ ಪ್ರಶ್ನೆಗೆ —
ತಲೆಬುರುಡೆ ತಿರುಗುತಿದೆ; ಮೆದುಳ ದಾರವ ಕಳಚಿ!

ಕಣ್ಣು ಕಾಣದ ನ್ಯಾಯ —
ತರ್ಕದ ಬಿಸಿಲುಗೋಲನು ಹಿಡಿದು;
ನಡೆದಿಹುದು; ರಾಜಮಾರ್ಗದ ನಡುವೆ:—
"ಓ, ಶಿವನೆ ಭಗವಂತ!
ಕಣ್ಣು ಕಾಣದ ಪರದೇಸಿ;
ದುಡ್ಡು ಕೊಟ್ಟವರೆ - ತಾಯಿ-ತಂದೆ!
ಧರುಮವೆ, ತಾಯಿ-ತಂದೆ".

—ರಾಘವೇಂದ್ರ

ಲೇಖಕರು :
**ಪ್ರೊ. ಕೆ. ಟಿ. ಪಾಂಡುರಂಗಿ**
ಸೆಂಟ್ರಲ್ ಕಾಲೇಜ
ಬೆಂಗಳೂರು

# ಮಹಾಭಾರತದಲ್ಲಿಯ ಪಶುಪಕ್ಷಿಗಳ ಕಥೆಗಳು

ಪಶುಪಕ್ಷಿಗಳ ಕಥಾನಕಗಳಿಂದ ನೀತಿಯನ್ನು ಬೋಧಿಸುವ ಸಂಪ್ರದಾಯ ಜಗತ್ತಿನ ಎಲ್ಲ ಭಾಷೆಗಳಲ್ಲಿ ಸಾಮಾನ್ಯವಾಗಿರುವುದು. ಭಾರತದಲ್ಲಿ ಸಂಸ್ಕೃತದಲ್ಲಿ ಈ ಸಾಹಿತ್ಯ ವಿಪುಲವಾಗಿದೆ. ಪಂಚತಂತ್ರ ಹಿತೋಪದೇಶ ತುಂಬ ಖ್ಯಾತವಾಗಿವೆ. ಮಹಾಭಾರತದಲ್ಲಿ ಕೂಡ ಸಾಂದರ್ಭಿಕವಾಗಿ ಇಂಥ ಹಲವಾರು ಕಥೆಗಳು ಬಂದಿವೆ. ಇವು ನೀತಿ, ಧರ್ಮ ವ್ಯವಹಾರಚಾತುರ್ಯಗಳನ್ನು ಬೋಧಿಸುತ್ತಿವೆ. ಮಾನವ ಸ್ವಭಾವದ ವಿಶ್ಲೇಷಣೆ ಇವುಗಳಲ್ಲಿರುವುದು. ಇಂಥ ಕೆಲ ಕಥೆಗಳನ್ನು ಹಿನ್ನೆಲೆಯೊಂದಿಗೆ ಇಲ್ಲಿ ವಿವರಿಸಲಾಗಿದೆ.

---

ವ್ಯವಹಾರಚಾತುರ್ಯ ಮತ್ತು ರಾಜನೀತಿಗಳನ್ನು ಬೋಧಿಸುವ 'ಪಂಚತಂತ್ರ' ಮತ್ತು 'ಹಿತೋಪದೇಶ'ಗಳೆಂಬ ಪಶು-ಪಕ್ಷಿಗಳ ಸಂಸ್ಕೃತ ಕಥಾಸಂಕಲನಗಳು ಹಾಗೂ ಗ್ರೀಕ ಭಾಷೆಯಲ್ಲಿಯ ಎಸೋಪನ ನೀತಿ ಕಥೆಗಳೂ 'ಅರೆಬಿಯನ್ ನೈಟ್ಸ್' ಕಥೆಗಳೂ ಸರ್ವವಿದಿತವಾಗಿವೆ.

ಪಶು-ಪಕ್ಷಿಗಳ ರೂಪಕಗಳು ಸಾಹಿತ್ಯದಲ್ಲಿ ಪ್ರಾಚೀನ ಕಾಲದಿಂದಲೂ ಕಂಡುಬರುತ್ತವೆ. ಋಗ್ವೇದದಲ್ಲಿ ಸೂರ್ಯನನ್ನುಪಕ್ಷಿಯೆಂದು ಅನೇಕ ಕಡೆಗೆ ವರ್ಣಿಸಲಾಗಿದೆ. ಅವನ ಕಿರಣಗಳನ್ನು ಕುದುರೆಗಳೆಂದು ವರ್ಣಿಸಲಾಗಿದೆ. ಇಂದ್ರನು ಕಪಿಂಜಲಪಕ್ಷಿಯ ರೂಪದಲ್ಲಿ ಬಂದ ವರ್ಣನೆಯಿದೆ. ಉಪನಿಷತ್ತುಗಳಲ್ಲಿ ಜೀವ-ಪರಮಾತ್ಮರನ್ನು ಎರಡುಪಕ್ಷಿಗಳೆಂದು ರೂಪಕಮಾಡಲಾಗಿದೆ. ಯಜ್ಞಕುಂಡವನ್ನು ಶ್ಯೇನಪಕ್ಷಿಯ ಆಕಾಶದಲ್ಲಿ ರಚಿಸುವುದೂ ಯಜ್ಞದಮಂತ್ರಗಳನ್ನು ಈ ಶ್ಯೇನದ ರೆಕ್ಕೆ, ಪುಚ್ಛ ಇತ್ಯಾದಿಯಾಗಿ ವರ್ಗೀಕರಿಸುವದೂ ಪ್ರಸಿದ್ಧವಾಗಿದೆ. ಅನೇಕ ಋಷಿಗಳೂ ದೇವತೆಗಳೂ ಪಶು ಪಕ್ಷಿಗಳ ರೂಪಗಳನ್ನು ತಾಳಿದ ಉದಾಹರಣೆಗಳಿವೆ. ಮಾನವರು ಮೀನ ಕಪ್ಪೆಇತ್ಯಾದಿಗಳ ಜೊತೆಗೆ ವಿವಾಹವಾದ ಪ್ರಸಂಗಗಳೂ ಪಶು ಪಕ್ಷಿಗಳಾಗಿ ಪರಿವರ್ತಿತವಾದ ಸಂದರ್ಭಗಳೂ ಬಂದಿವೆ. ಆದರೆ ಇವೆಲ್ಲ ಪಶು-ಪಕ್ಷಿಗಳ ಕಥೆಗಳ ವರ್ಗಕ್ಕೆ ಸೇರುವದಿಲ್ಲ.

ನಮಗೆ ಉಪಲಬ್ಧವಿರುವ ಪಶು-ಪಕ್ಷಿಗಳ ಸಾಹಿತ್ಯದ ಉಲ್ಲೇಖದಲ್ಲಿ ಋಗ್ವೇದದಲ್ಲಿಯ (vii 103) ಮಂಡೂಕಸೂಕ್ತದಲ್ಲಿ ಬರುವ ಸಂದರ್ಭವು ಮೊದಲನೆಯದು. ಆದರೆ ಇದನ್ನು ಕಥೆಯೆಂದು ಹೇಳಲು ಬರುವದಿಲ್ಲ. ಛಾಂದೋಗ್ಯದಲ್ಲಿಯ ನಾಯಿಗಳ ಕಥೆಯೂ (1.12) ಆಧ್ಯಾತ್ಮಿಕ ರೂಪಕವಾಗಿದೆ. ಬೃಹದ್ದೇವತೆಯಲ್ಲಿ ಬರುವ 'ವಸಿಷ್ಠ ಮತ್ತು ವರುಣನ ನಾಯಿ ಹಾಗೂ 'ಇಂದ್ರನು ಪಣಿಗಳನ್ನು ಹುಡುಕಲು ಕಳಿಸಿದ ಸರಮಾ ನಾಯಿ'ಯ ಕಥೆಗಳು ಮಾತ್ರ ಕಥೆಯ ವಸ್ತು ಮತ್ತು ಉದ್ದೇಶಗಳನ್ನು ಪಡೆದಿವೆ. ಪತಂಜಲಿಯ ಮಹಾಭಾಷ್ಯದಲ್ಲಿ ಬರುವ 'ಕಾಕತಾಲೀಯ' 'ಅಜಾಕೃಪಾಣೀಯ' ಎಂಬ ಪದಪ್ರಯೋಗಗಳು ಅವುಗಳ ಹಿಂದೆ ಪರಂಪರಾಗತವಾದ ನಿದರ್ಶನ ರೂಪವಾದ ಕಥೆಗಳಿರುವವನ್ನು ಸೂಚಿಸುತ್ತವೆ. ಬುದ್ಧನ ಜಾತಕಮಾಲೆ ಮತ್ತು ಅವದಾನಗಳಲ್ಲಿ ಪಶುಪಕ್ಷಿಗಳ ಕಥೆಗಳು ವಿಪುಲವಾಗಿ ಬಂದಿವೆ. ಪಂಚತಂತ್ರದಲ್ಲಿ ಈ ಕಥೆಗಳು ಪರಿಪಕ್ವವಾದ ರೂಪವನ್ನು ಪಡೆದಿವೆ. 'ಹಿತೋಪದೇಶ'ವು 'ಪಂಚತಂತ್ರ'ದ ಇನ್ನೊಂದು ರೂಪಾಂತರವೇ ಆಗಿದೆ. ಇದರಲ್ಲಿ ಬರುವ ೪೦ ಕಥೆಗಳಲ್ಲಿ ೨೫ ಕಥೆಗಳು ಪಂಚತಂತ್ರದಿಂದಲೇ ಆಯ್ದುಕೊಂಡ ಕಥೆಗಳಾಗಿವೆ. ಹೇಮಚಂದ್ರ, ಸಿದ್ಧರ್ಷಿ ಮೊದಲಾದ ಜೈನಲೇಖಕರೂ ತಮ್ಮ ತಮ್ಮ ಇಂಥ ಕಥಾ ಸಂಕಲನಗಳನ್ನು ರಚಿಸಿದ್ದಾರೆ.

ಪಾಶ್ಚಾತ್ಯಸಾಹಿತ್ಯದಲ್ಲಿ ಹೆಸಿಯಡ್ (Hesiod) ಎಂಬ ಗ್ರೀಕ ಲೇಖಕನ 'Works and Days' ಎಂಬ ಗ್ರಂಥದಲ್ಲಿಯ 'ಗಿಡುಗ ಮತ್ತು ಕೋಗಿಲೆ' ಎಂಬ ಕಥೆಯು ಪ್ರಾಚೀನವಾದುದು. ನಂತರ ಎಸೋಪನು ತನ್ನ ಕಥೆಗಳನ್ನು ಹೇಳಿದನು. ಎಸೋಪನ ಕಾಲವು ಕ್ರಿ. ಪೂ. ಆರನೆಯ ಶತಕವಾಗಿದ್ದರೂ ನಮಗೆ ಉಪಲಬ್ಧವಿದ್ದ ಅವನ ಕಥಾ ಸಂಕಲನವು ಮಾತ್ರ ಕ್ರಿ.ಶ. ೧೪ನೆಯ ಶತಕದಷ್ಟು ಇತ್ತೀಚಿನದು. ಎಸೋಪನು ತನ್ನ ಕಥೆಗಳನ್ನು ಬರೆದಿಡಲಿಲ್ಲ, ಬಾಬ್ರಿಯಸ್ ಎಂಬ ರೋಮನ್ನನು ಕ್ರಿ.ಶ. ೨ನೆಯ ಶತಕದಲ್ಲಿ ಎಸೋಪನು ಹೇಳಿದ ಕಥೆಗಳನ್ನು ಕಾವ್ಯರೂಪದಲ್ಲಿ ಬರೆದಿಟ್ಟನು. ಅದೂ ಈಗ ಉಪಲಬ್ಧವಿಲ್ಲ. ಬಾಬ್ರಿಯಸ್‌ನ ಕೃತಿಯು ಸಿರಿಯನ್ ಭಾಷೆಯಲ್ಲಿ ಭಾಷಾಂತರಿಸಲ್ಪಟ್ಟಿತು. ಇದನ್ನು ಪ್ಲೆನುಡಿಸ್ ಎಂಬವನು ಮತ್ತೆ ಗ್ರೀಕ ಭಾಷೆಗೆ ಭಾಷಾಂತರಿಸಿದನು ಇದೇ ನಮಗೆ ಈಗ ಉಪಲಬ್ಧವಿರುವ ಎಸೋಪನ ಕಥಾಸಂಕಲನ. ಪಂಚತಂತ್ರದ ಕಥೆಯೂ ಹೀಗೆಯೇ ಇದೆ. ಮೂಲ ಪಂಚತಂತ್ರವು ಈಗ ಉಪಲಬ್ಧವಿಲ್ಲ. ಇದು ಕ್ರಿ. ಪೂ. ಮೂರರಿಂದ ಕ್ರಿ. ಶ. ಐದರ ಕಾಲಾವಧಿಯಲ್ಲಿ ರಚಿತವಾಗಿರಬೇಕೆಂದು ಊಹಿಸಲಾಗಿದೆ. ಕ್ರಿ. ಶ. ಐದರಲ್ಲಿ ಇದು ಪಹ್ಲ್ವಿ ಭಾಷೆಯಲ್ಲಿ ಬ್ರುಝೋ ( Bruzeo ) ಎಂಬವನಿಂದ ಪರ್ಶಿಯಾದ ರಾಜ ನೆಸಿರವಾನನ ಆಜ್ಞೆಯಂತೆ ಭಾಷಾಂತರಿಸಲ್ಪಟ್ಟಿತು. ಈ ಭಾಷಾಂತರವು ಈಗ ಉಪಲಬ್ಧವಿಲ್ಲ. ಮುಂದೆ ಕ್ರಿ. ಶ. ಆರರಲ್ಲಿ ಸಿರಿಯನ್ ಭಾಷೆಯಲ್ಲಿ ಭಾಷಾಂತರಿತವಾಯಿತು. ಎಸೋಪನ ನೀತಿಯುಕಥೆಗಳೂ ಪಂಚತಂತ್ರದ ಕಥೆಗಳೂ ಸ್ವಲ್ಪ ಹೆಚ್ಚು ಕಡಿಮೆ ಒಂದೇ ಕಾಲದಲ್ಲಿ ಹೀಗೆ ಸಿರಿಯನ್ ಭಾಷೆಗೆ ಬಂದು ಸೇರಿದವು. ಇದರಿಂದಾಗಿ ಎಸೋಪನ ಕಥೆಗಳು ಸಿರಿಯನ್‌ದಿಂದ ತಿರುಗಿ ಗ್ರೀಕಿಗೆ ಭಾಷಾಂತರವಾಗುವಾಗ ಪಂಚತಂತ್ರದ ಕೆಲವು ಕಥೆಗಳು ಅದರಲ್ಲಿ ಸೇರಿಕೊಂಡವು. ಪಂಚತಂತ್ರವು ಮಾತ್ರ ಸಿರಿಯನ್ ಭಾಷೆಯಿಂದ ತಿರುಗಿ ಸಂಸ್ಕೃತಕ್ಕೆ ಬರಲಿಲ್ಲ. ಅದರ ಸಂಸ್ಕೃತ ರೂಪವು ಸ್ವತಂತ್ರವಾಗಿ ಭಾರತದಲ್ಲಿ ಪ್ರಚುರ ಪಡೆಯುತ್ತಲೇ ಇದ್ದಿತು. ಗುಣಾಢ್ಯನ ಬೃಹತ್ಕಥೆ ಮತ್ತು ಸೋಮದೇವನ ಕಥಾಸರಿತ್‌ಸಾಗರದಲ್ಲಿ ಇವು ಸಮ್ಮಿಲಿತವಾದವು. 'ತಂತ್ರಾಖ್ಯಾಯಿಕೆ' ಎಂಬ ಹೆಸರಿನಲ್ಲಿ ಕಾಶ್ಮೀರದಲ್ಲಿಯೂ 'ಪಂಚತಂತ್ರ'ವೆಂಬ ಹೆಸರಿನಲ್ಲಿ ದಕ್ಷಿಣಭಾರತದಲ್ಲಿಯೂ

ಪ್ರಚುರಪಟ್ಟವು. ಸಿರಿಯನ್ ಭಾಷೆಯಿಂದ ಪಂಚತಂತ್ರದ ಕಥೆಗಳು ಅರೇಬಿಕ್ (ಕ್ರಿ. ಶ. ೮) ಹಿಬ್ರೂ ಮತ್ತು ಗ್ರೀಕ (ಕ್ರಿ. ಶ. ೧೧) ಲ್ಯಾಟಿನ್ (ಕ್ರಿ. ಶ. ೧೨) ಜರ್ಮನ್, ಇಟಾಲಿಯನ್ ಮತ್ತು ಫ್ರೆಂಚ (ಕ್ರಿ. ಶ. ೧೫, ೧೬, ೧೭) ಭಾಷೆಗಳಲ್ಲಿ ಪರಿವರ್ತಿತವಾದವು. ಈ ಭಾಷೆಗಳಲ್ಲಿ ಪಂಚತಂತ್ರದ ಕಥೆಗಳು ಕಲಿಲಗ್ ಮತ್ತು ದಮನಗ್ ಹಾಗೂ ಕಲಿಲಹ್ ಮತ್ತು ದಮನಹ್ ಎಂಬ ಹೆಸರುಗಳಿಂದ ಪ್ರಸಿದ್ಧವಾಗಿವೆ. ಕಳೆದ ಶತಮಾನದಲ್ಲಿ ಪಂಚತಂತ್ರವು ಮತ್ತೊಮ್ಮೆ ಯುರೋಪದ ಎಲ್ಲ ಭಾಷೆಯಲ್ಲಿಯೂ ಭಾಷಾಂತರಿತವಾಯಿತು. ಈಗ ಅದು ಜಗತ್ಪ್ರಸಿದ್ಧವಾದ ಪಶು-ಪಕ್ಷಿಗಳ ಕಥಾಸಂಕಲನವಾಗಿದೆ.

ಮಹಾಭಾರತದಲ್ಲಿ ಸುಮಾರು ೧೫ ಪಶುಪಕ್ಷಿಗಳ ಕಥೆಗಳು ಬಂದಿವೆ. ಪಶುಪಕ್ಷಿಗಳ ಕಥೆಗಳು ಎರಡು ವಿಧವಾಗಿರುತ್ತವೆ. ಮಾನವರ ಭಾವನೆಗಳನ್ನೂ ವರ್ತನೆಗಳನ್ನೂ ಪಶುಪಕ್ಷಿಗಳಿಗೆ ಅನ್ವಯಿಸಿ ಹೇಳಿದ ಕಥೆಗಳು (Fables) ಒಂದು ವಿಧ. ಪಶುಪಕ್ಷಿಗಳಲ್ಲಿರುವ ಅಲ್ಪಬುದ್ಧಿ, ಅಜಾಗರೂಕತೆಗಳನ್ನು ತೋರಿಸಿ ಮಾನವನು ಅವುಗಳಿಗಿಂತ ಹೆಚ್ಚಿನ ಮಟ್ಟದಲ್ಲಿ ನಡೆದುಕೊಳ್ಳಬೇಕೆಂದು ಸೂಚಿಸುವ ಹಾಗೂ ಪಶುಪಕ್ಷಿಗಳೂ ಒಳ್ಳೆಯ ರೀತಿಯಿಂದ ನಡೆದುಕೊಂಡ ಸಂದರ್ಭಗಳನ್ನು ತೋರಿಸಿ ಮಾನವನು ಅವುಗಳಿಂದಲಾದರೂ ಪಾಠ ಕಲಿಯಬೇಕೆಂದು ತೋರಿಸುವ ನಿದರ್ಶನರೂಪವಾದ ಕಥೆಗಳು (Parables) ಇನ್ನೊಂದು ವಿಧ. ಪಂಚತಂತ್ರ, ಹಿತೋಪದೇಶ ಮತ್ತು ಎಸೋಪನ ನೀತಿ-ಕಥೆಗಳು ಮೊದಲನೆಯ ವರ್ಗಕ್ಕೆ ಸೇರಿದವು. ಬೈಬಲ್ಲಿನಲ್ಲಿಯೂ ಬುದ್ಧನಜಾತಕಗಳಲ್ಲಿಯೂ ಬರುವ ಕಥೆಗಳು ಎರಡನೆಯ ವರ್ಗಕ್ಕೆ ಸೇರಿದವು. ಮಹಾಭಾರತದಲ್ಲಿ ಬರುವ ೧೫ ಕಥೆಗಳಲ್ಲಿ ಈ ಎರಡು ಗುಂಪಿಗೂ ಸೇರಿದ ಕಥೆಗಳಿವೆ. ಮಾನವನು ಪೂರ್ವಜನ್ಮ ಅಥವಾ ಮುಂದಿನ ಜನ್ಮದಲ್ಲಿ ಪಶು-ಪಕ್ಷಿಯಾದ ಸಂದರ್ಭದ ಕಥೆಗಳೂ ಋಷಿದೇವತೆಗಳು ಪಶುಪಕ್ಷಿಗಳ ರೂಪವನ್ನು ತಾಳಿ ಬಂದ ಕಥೆಗಳೂ ಮೇಲಿನ ಎರಡು ವರ್ಗಕ್ಕೂ ಸೇರಿದವಲ್ಲ. ಅವುಗಳನ್ನು ಪಶುಪಕ್ಷಿಗಳ ಕಥಾಸಾಹಿತ್ಯಕ್ಕೆ ಸೇರಿಸುವದಿಲ್ಲ. ಬುದ್ಧನ ಜಾತಕಗಳಲ್ಲಿಯೂ ಜೈನವಾಙ್ಮಯದಲ್ಲಿಯೂ ಈ ಪೂರ್ವೋತ್ತರ ಜನ್ಮದ ಕಥೆಗಳು ವಿಪುಲವಾಗಿ ಬಂದಿವೆ. ಆದರೆ ಅವುಗಳಿಗೂ ಮೇಲೆ ಹೇಳಿದ ಎರಡು ವಿಧವಾದ ಕಥೆಗಳಿಗೂ ವಿಶೇಷವಾದ ಸಂಬಂಧವಿಲ್ಲ. ಜಾತಕಗಳಲ್ಲಿ ನಿದರ್ಶನರೂಪದಲ್ಲಿ ಬಂದ ಪಶುಪಕ್ಷಿಗಳ ಕಥೆಗಳು ಮಾತ್ರ ಮೇಲಿನ ವರ್ಗಕ್ಕೆ ಸೇರುತ್ತವೆ.

ಮಹಾಭಾರತದ ಈ ಹದಿನೈದು ಕಥೆಗಳಲ್ಲಿ ಸುಮಾರು ಅರ್ಧದಷ್ಟು ಕಥೆಗಳು 'ಪಂಚತಂತ್ರ' ಮತ್ತು 'ಹಿತೋಪದೇಶ'ಗಳಲ್ಲಿ ಬರುತ್ತವೆ. ಆದುದರಿಂದ ಈ ಕಥೆಗಳು ಮಹಾಭಾರತದಲ್ಲಿ ನಂತರ ಸೇರಿಕೊಂಡ ಕಥೆಗಳಾಗಿರಬಹುದೇ ಎಂಬ ಸಂದೇಹವುಂಟಾಗುವದು ಸಹಜ. ಆದರೆ ಸುಮಾರು ಕಾಲುಶತಮಾನದಿಂದ ಪರಿಶ್ರಮಪಟ್ಟು ಸಿದ್ಧಪಡಿಸಿದ ಮಹಾಭಾರತದ ವಿಮರ್ಶಾತ್ಮಕವಾದ (ಭಾಂಡಾರಕರ ಸಂಸ್ಥೆಯವರು ಪ್ರಕಟಿಸಿದ) ಸಂಸ್ಕರಣದಲ್ಲಿ ಈ ಹದಿನಾರುಕಥೆಗಳಲ್ಲಿ ಕೇವಲ ಮೂರನ್ನು ಮಾತ್ರ ನಂತರ ಸೇರಿದವೆಂದು ನಿರ್ಧರಿಸಿ ಉಳಿದವುಗಳನ್ನು ಮೂಲಪಾಠಗಳಲ್ಲಿ ಹಾಕಿರುವದನ್ನು ಇಲ್ಲಿ ಗಮನಿಸಬಹುದು. ಅಲ್ಲದೆ ಈ ಕಥೆಗಳನ್ನು ಹೇಳಿದ ಸಂದರ್ಭಗಳಲ್ಲಿ ಕಥೆಗಳು ಯೋಗ್ಯವಾಗಿ ಹೊಂದುತ್ತವೆ ಹಾಗೂ ಇವುಗಳನ್ನು ಬಿಟ್ಟರೆ ಅಲ್ಲಿಯ ಪ್ರತಿಪಾದನೆ ಪೂರ್ಣವೆನಿಸುವದಿಲ್ಲ. ಕಥೆಯನ್ನು ಪೂರ್ಣವಾಗಿ ಒಂದೇ ಕಡೆಗೆ ಹೇಳಿದ್ದರೂ ಆ ಕಥೆಯ ಸಾರದ ನಿದರ್ಶನಶ್ಲೋಕಗಳೂ ಕಥೆಯ ಹೆಸರಿನ ಸಂಕೇತವಾಕ್ಯಗಳೂ ಅನೇಕ ಕಡೆಗೆ ಬರುತ್ತವೆ. ಕಥೆಯ ಸಾರರೂಪವಾದ ಪ್ರಾಚೀನ ಗಾಥಾಶ್ಲೋಕಗಳೂ ಕೆಲವು ಕಥೆಗಳಲ್ಲಿ ಬರುತ್ತವೆ. ಕಥೆಯನ್ನು ಆರಂಭಿಸುವಾಗ 'ಇತಿಹಾಸ, ಪುರಾತನಮ್ ಆಖ್ಯಾನಂ' ಎಂದು ಆರಂಭಿಸಲಾಗುತ್ತದೆ. ಆದುದರಿಂದ ಕಥೆಗಳು ಬಹುಕಾಲದಿಂದ ಪ್ರಚಲಿತವಾಗಿದ್ದು ಇವುಗಳಲ್ಲಿಯ ನೀತಿಪಾಠಗಳು ಜನಜನಿತವಾಗಿದ್ದಂತೆಯೂ ಮಹಾಭಾರತದಲ್ಲಿ ಸಂದರ್ಭಾನುಸಾರವಾಗಿ ಕೆಲವು ಕಡೆಗೆ ವಿಸ್ತಾರವಾಗಿಯೂ ಇನ್ನು ಕೆಲವು ಕಡೆಗೆ ನಿರ್ದೇಶಮಾತ್ರದಿಂದಲೂ ಈ ಕಥೆಗಳನ್ನು ಬಳಿಸಿಕೊಂಡಂತೆಯೂ ಕಂಡುಬರುವದು. ಆದುದರಿಂದಲೇ 'ಪಂಚತಂತ್ರ' 'ಹಿತೋಪದೇಶ'ಗಳ ಈ ಕಥೆಗಳಲ್ಲಿಯೂ ಇನ್ನಿತರ ಕಥೆಗಳಲ್ಲಿಯೂ ಮಹಾಭಾರತದ ಶ್ಲೋಕಗಳು ವಿಪುಲವಾಗಿ ಕಂಡುಬರುವವು. ಈ ಕಥೆಗಳು ಮಹಾಭಾರತಕ್ಕೂ ಪಂಚತಂತ್ರ-ಹಿತೋಪದೇಶಗಳಿಗೂ ಅತಿ ಪ್ರಾಚೀನವಾಗಿ ಜನಜನಿತವಾಗಿ ಪ್ರವಾಹನಿತ್ಯವಾಗಿ ಬಂದ ಸ್ವತ್ತು. ಇವುಗಳ ಕಥನಕೌಶಲ್ಯವು ಮಾತ್ರ ಆಯಾ ಗ್ರಂಥಕಾರರಿಗೆ ಸೇರಿದ್ದು, ಆದುದರಿಂದಲೇ ಕೇವಲ ೧೫ ಕಥೆಗಳು ಮಾತ್ರ ಮಹಾಭಾರತದಲ್ಲಿ ಪೂರ್ಣವಾಗಿ ಹೇಳಲ್ಪಟ್ಟಿದ್ದರೂ ಇನ್ನೂ ಅನೇಕ ಕಥೆಗಳು ಕೇವಲ ಸಾರವಾಕ್ಯ ಅಥವಾ ಸಂಕೇತವಾಕ್ಯಗಳಿಂದ ಸೂಚಿಸಲ್ಪಟ್ಟಿವೆ. ಬಹುಶಃ ಅವು ಒಂದುಕಾಲದಲ್ಲಿ ತುಂಬ ಪರಿಚಿತವಾದ ಕಥೆಗಳಾಗಿರಬಹುದು. ಅವುಗಳಲ್ಲಿಯೆ ಕೆಲವನ್ನು 'ಪಂಚತಂತ್ರ' 'ಹಿತೋಪದೇಶ'ಗಳು ವಿಸ್ತರಿಸಿ ಬರೆದಿವೆ. ಮಹಾಭಾರತದ ಕೆಲ ಕಥೆಗಳ ಸಾರವನ್ನು ಕೆಳಗೆ ಕೊಡಲಾಗಿದೆ.

## ೧ ಸಂಗಡಿಗರನ್ನು ವಂಚಿಸಿದ ನರಿ

ಈ ಕಥೆಯು ಆದಿಪರ್ವದ ಕಣಿಕನೀತಿಯಲ್ಲಿ ಹಾಗೂ ಶಾಂತಿಪರ್ವದ ಕಣಿಕೋಪದೇಶದಲ್ಲಿ ಹೀಗೆ ಎರಡು ಕಡೆಗೆ ಬರುತ್ತದೆ. ಧೃತರಾಷ್ಟ್ರನು ಯುಧಿಷ್ಠಿರನಿಗೆ ಯುವರಾಜ ಪಟ್ಟಾಭಿಷೇಕವನ್ನು ಮಾಡಿದ ಮೇಲೆ ಅವನೂ ಅವನ ತಮ್ಮಂದಿರೂ ಪ್ರಜೆಗಳ ಪ್ರೀತಿಗೆ ಪಾತ್ರರಾಗುತ್ತಿರುವದನ್ನೂ ತಮ್ಮ ಪರಾಕ್ರಮ ಮತ್ತು ಕೀರ್ತಿಗಳನ್ನು ಹೆಚ್ಚಿಸಿಕೊಳ್ಳುತ್ತಿರುವದನ್ನೂ ಕಂಡು ಧೃತರಾಷ್ಟ್ರನಿಗೆ ಅಸೂಯೆಯುಂಟಾಗುವದು. ಆಗ ರಾಜನೀತಿಯಲ್ಲಿ ಚತುರನಾದ ಕಣಿಕನೆಂಬವನನ್ನು ಕರೆದು ಪಾಂಡವರೊಡನೆ ಹೇಗೆ ನಡೆದುಕೊಳ್ಳಬೇಕೆಂದು ಕೇಳುವನು. ಆಗ ಕಣಿಕನು-ಅವನಿಗೆ ಭೇದೋಪಾಯವನ್ನು ವಿವರಿಸುತ್ತ ಈ ಕಥೆಯನ್ನು ಹೇಳುವನು.

ಒಂದು ಅಡವಿಯಲ್ಲಿ ಒಂದು ನರಿ, ಹುಲಿ, ಇಲಿ, ತೋಳ ಮತ್ತು ಮುಂಗುಲಿಗಳು ಸಂಗಡಿಗರಾಗಿದ್ದವು. ಅದೇ ಅಡವಿಯಲ್ಲಿ ಬಹು ವೇಗವಾಗಿ ಓಡುವ ಜಿಂಕೆಯೊಂದಿತ್ತು. ಅದರ ಮಾಂಸವನ್ನು ಕಬಳಿಸಬೇಕೆಂದು ಆಲೋಚಿಸಿದ ನರಿಯು ಸಂಗಡಿಗರನ್ನು ಹುರಿದುಂಬಿಸಿ ಜಿಂಕೆಯು ಮಲಗಿದಾಗ ಇಲಿಯು ಕಾಲು ಕತ್ತರಿಸುವಂತೆಯೂ ಹುಲಿಯು ಕೊಲ್ಲುವಂತೆಯೂ ಮಾಡಿತು. ಹೀಗೆ ಜಿಂಕೆಯ ಶವ ದೊರೆತ ಮೇಲೆ ನರಿಯು ನೀವೆಲ್ಲ ಸ್ನಾನಮಾಡಿ ಬನ್ನಿರಿ ಎಂದು ಎಲ್ಲರನ್ನೂ ಕಳಿಸಿತು. ಮೊದಲು ತಿರುಗಿ ಬಂದ ಹುಲಿಗೆ 'ಮೃಗರಾಜನೇ ಇಲಿಯು ಹಿಡಿದ ಜಿಂಕೆಯನ್ನು ಕೊಂದು ತಿನ್ನಲು ನಿನಗೆ ನಾಚಿಕೆಯಾಗುವದಿಲ್ಲವೇ' ಎಂದು ಇಲಿಯು ನಿನ್ನನ್ನು ಹೀಯಾಳಿಸಿತು ಎಂದು ಹೇಳಿತು. ಹುಲಿಯು ಇಲಿಯ ಈ ಮಾತು ನಿಜ. ನನ್ನ ಪರಾಕ್ರಮದಿಂದ ಕೊಂದದ್ದನ್ನೇ ನಾನು ತಿನ್ನುವೆನು ಎಂದು ಹೊರಟುಹೋಯಿತು. ನಂತರ ಬಂದ ಇಲಿಗೆ 'ಮುಂಗುಲಿಗೆ ಜಿಂಕೆಯ ಮಾಂಸವು ವಿಷವಂತೆ. ಅದು ನಿನ್ನನ್ನೇ ತಿನ್ನಲು ಆಲೋಚಿಸುತ್ತಿದೆ. ನೀನು ಬೇಗನೆ ಸುರಕ್ಷಿತ ಸ್ಥಳಕ್ಕೆ ಹೋಗು.' ಎಂದು ಅದನ್ನು ಓಡಿಸಿತು. ಬಳಿಕ ಬಂದ ತೋಳವನ್ನು ಕುರಿತು 'ಮೃಗರಾಜನು ಅದೇಕೋ ಬಹಳ ಸಿಟ್ಟಿಗೆದ್ದಿರುವನು. ಸಕಲತ್ರವಾಗಿ ಆಹಾರಕ್ಕೆ ಬರುವೆನು ಎಂದು ಗುಡುಗಿ ಹೋಗಿರುವನು. ನಮಗೆ ಉಳಿಗಾಲವಿಲ್ಲ' ಎಂದಿತು. ತೋಳವು ಗಾಬರಿಯಾಗಿ ಹೊರಟು ಹೋಯಿತು. ಕೊನೆಗೆ ಬಂದ ಮುಂಗುಲಿಗೆ 'ಹುಲಿ ಮತ್ತು ತೋಳಗಳು ನನ್ನೊಡನೆ ಯುದ್ಧಮಾಡಿ ಸೋತು ಹೋಗಿರುವವು. ನೀನೂ ಬೇಕಾದರೆ ಯುದ್ಧ ಮಾಡು, ಎಂದಿತು. ಮುಂಗುಲಿಯು 'ಹುಲಿ ಮತ್ತು ತೋಳಗಳನ್ನು ಸೋಲಿಸಿದ ನಿನ್ನೊಡನೆ ನನಗೆ ಯುದ್ಧ ಬೇಡ' ಎಂದು ಹೊರಟುಹೋಯಿತು. ಕೊನೆಗೆ ನರಿಯೊಂದೇ ಜಿಂಕೆಯ ಮಾಂಸವನ್ನು ತಿಂದಿತು. ಆದುದರಿಂದ

ಭಯೇನ ಭೇದಯೇತ್ ಭೀರುಮ್
ಶೂರಮಂಜಲಿಕರ್ಮಣಾ ।
ಲುಬ್ಧಮರ್ಥಪ್ರದಾನೇನ ಸಮಮ್
ನ್ಯೂನಂ ತಥೌಜಸಾ

ಅಂಜುಬುರುಕರನ್ನು ಅಂಜಿಸಿಯೂ ಶೂರರನ್ನು ನಮಸ್ಕರಿಸಿಯೂ ಲೋಭಿಗಳನ್ನು ಅರ್ಥದಿಂದಲೂ ಸಮ ಮತ್ತು ನ್ಯೂನರಾದವರನ್ನು ಪರಾಕ್ರಮದಿಂದಲೂ ಅಂಕಿತದಲ್ಲಿಟ್ಟುಕೊಳ್ಳಬೇಕೆಂದು ಕಣಿಕನು ಧೃತರಾಷ್ಟ್ರನಿಗೆ ಉಪದೇಶಿಸುವನು.

ಈ ಕಥೆಯು ಪಂಚತಂತ್ರದ ನಾಲ್ಕನೆಯ ತಂತ್ರದಲ್ಲಿ ಬರುವ 'ಚತುರ ನರಿ'ಯ ಕಥೆಯನ್ನು ಬಹುಮಟ್ಟಿಗೆ ಹೋಲುತ್ತದೆ. ತನಗೆ ದೊರೆತ ಆಹಾರಕ್ಕೆ ಕಂಟಕರಾಗಬಾರದೆಂದು ಭೇದೋಪಾಯದಿಂದ

ಸಿಂಹ, ಹುಲಿ, ಚಿರ್ಚು ಮತ್ತು ಇನ್ನೊಂದು ನರಿಯನ್ನು ಉಪಾಯದಿಂದ ಅಲ್ಲಿ ದೂರ ಕಳಿಸಲಾಗಿದೆ. ಆದರೆ ಮಹಾಭಾರತದ ಈ ಕಥೆಯಲ್ಲಿ ಆಹಾರವ್ಯಗವು ಪಂಚತಂತ್ರದಂತೆ ಅನಾಯಾಸವಾಗಿ ದೊರೆಯದೆ ಚತುರತೆಯಿಂದ ದೊರಕಿಸಿಕೊಳ್ಳಲ್ಪಟ್ಟಿದೆ. ಒಂದೊಂದು ಪ್ರಾಣಿಯನ್ನು ತಿರುಗಿ ಕಳಿಸಲು ಹೂಡಿದ ಉಪಾಯಗಳೂ ಇಲ್ಲಿ ಹೆಚ್ಚು ಕುಶಲವಾಗಿವೆ. ಆದರೆ ಆಹಾರಕ್ಕೆ ಪಾಲುಗಾರರಾಗಿ ಬಂದ ಪ್ರಾಣಿಗಳು ಮಾತ್ರ ಸಮಯೋಗ್ಯತೆಯುವುಗಳಾಗಿಲ್ಲ. ಅನ್ಯರ ಪರಿಶ್ರಮದಿಂದ ಆಹಾರವನ್ನು ದೊರಕಿಸಿ ಅವರನ್ನೇ ವಂಚಿಸಿದ ಮಹಾಭಾರತದ ಕಥೆಯ ನರಿಯು ಅನಾಯಾಸವಾಗಿ ದೊರೆತ ಆಹಾರವನ್ನು ಅನ್ಯರಿಗೆ ಕೊಡುವುದನ್ನು ತಪ್ಪಿಸಿದ ಪಂಚತಂತ್ರದ ನರಿಗಿಂತ ಭೇದೋಪಾಯದಲ್ಲಿ ಹೆಚ್ಚು ಕುಶಲವಾಗಿದೆ.

ಕಣಿಕನೀತಿಯ ಭಾಗವು ಪ್ರಕ್ಷಿಪ್ತವೆಂದು ಪರಿಗಣಿಸಲ್ಪಟ್ಟಿದೆ. ಆದುದರಿಂದ ಆ ಭಾಗದಲ್ಲಿ ಬಂದ ಈ ಕಥೆಯೂ ಪ್ರಕ್ಷಿಪ್ತವಾಗುವದು. ಈ ಅಭಿಪ್ರಾಯದ ವಿವೇಚನೆಯು ಇಲ್ಲಿ ಪ್ರಕೃತವಲ್ಲ.

## ೨ ನಂಬಿದ ಪಕ್ಷಿಗಳ ತತ್ತಿಯನ್ನು ತಿಂದ ಹಂಸ

ಈ ಕಥೆಯು ಸಭಾಪರ್ವದಲ್ಲಿ ಶಿಶುಪಾಲನು ಭೀಷ್ಮನನ್ನು ನಿಂದಿಸುವಾಗ ಬರುತ್ತದೆ. ಶ್ರೀಕೃಷ್ಣನಿಗೆ ಅಗ್ರಪೂಜೆಯನ್ನು ಮಾಡಲು ಹೇಳುವ ಭೀಷ್ಮನು ಯುಧಿಷ್ಠಿರನಿಗೆ ಯೋಗ್ಯವಾದ ಮಾರ್ಗದರ್ಶನಮಾಡುತ್ತಿಲ್ಲವೆಂದೂ ತನ್ನನ್ನು ನಂಬಿದ ಜ್ಞಾತಿಗಳಿಗೆ ಕಂಟಕನಾಗಿ ವರ್ತಿಸುತ್ತಿರುವನೆಂದೂ ಆದುದರಿಂದ ಕೊನೆಗೆ ಅವರಿಂದಲೇ ಅವನಿಗೆ ಸಾವು ಬರುವುದೆಂದೂ ವಾದಿಸಿ ಈ ಕಥೆಯನ್ನು ಹೇಳುವನು.

ಒಂದು ಸಮುದ್ರದ ದಂಡೆಯ ಮೇಲೆ ಒಂದು ಹಂಸವಿತ್ತು. ಅದು ಯಾವಾಗಲೂ ಧರ್ಮವನ್ನು ಉಪದೇಶಿಸುತ್ತ ತಾನು ಮಾತ್ರ ಅಧರ್ಮದಿಂದ ನಡೆದುಕೊಳ್ಳುತ್ತಿದ್ದಿತು. ಅದರ ಧರ್ಮದ ಮಾತುಗಳನ್ನು ಕೇಳಿ ಇತರ ಪಕ್ಷಿಗಳು ಅದನ್ನು ನಂಬಿ ತಮ್ಮ ತತ್ತಿಗಳನ್ನು ಅದರ ಹತ್ತಿರ ಬಿಟ್ಟುಹೋಗುತ್ತಿದ್ದವು. ಆದರೆ ತತ್ತಿಗಳು ಕಡಿಮೆಯಾಗುತ್ತಿರುವದನ್ನು ನೋಡಿ ಒಂದು ದಿನ ಒಂದು ಪಕ್ಷಿಯು ಅಲ್ಲಿಯೇ ಹತ್ತಿರದಲ್ಲಿ ಉಳಿದು ಹಂಸವು ತತ್ತಿಗಳನ್ನು ತಿನ್ನುವದನ್ನು ನೋಡಿತು. ಆಗ ಎಲ್ಲ ಪಕ್ಷಿಗಳೂ ಸೇರಿ ಅದನ್ನು ಕೊಂದವು. ಈ ಹಂಸದಂತೆ ನೀನೂ ನಿನ್ನ ಜ್ಞಾತಿಗಳ ಕೈಯಿಂದಲೇ ಸಾಯುವಿ ಎಂದು ಶಿಶುಪಾಲನು ಭೀಷ್ಮನನ್ನು ಹೀಯಾಳಿಸುವನು.

**ಅಂತರಾತ್ಮನ್ಯಭಿಹತೇ ರ್ಷಿ ಪತ್ರರಥಾಶುಚಿ।**
**ಅಂಡಭಕ್ಷಣಕರ್ಮೈತತ್ ತವ**
**ವಾಚಮತೀಯತೇ॥**

'ಹಂಸನೇ! ನಿನ್ನನ್ನು ಈ ಪಕ್ಷಿಗಳು ಹಿಂಸಿಸುವಾಗ ಅಸಹ್ಯವಾಗಿ ಕೂಗುತ್ತಿರುವಿ. ಆದರೆ ನಿನ್ನ ದುಷ್ಕೃತ್ಯದ ಅಪಸ್ವರವು ಅದನ್ನು ಮೀರಿಸುತ್ತದೆ' ಎಂಬ ಪ್ರಾಚೀನ ಗಾಥೆಯನ್ನು ಈ ಕಥೆಯ ಕೊನೆಗೆ ಕೊಟ್ಟಿದೆ. ಇದು ಈ ಕಥೆಯ ಪ್ರಾಚೀನತೆಯನ್ನು ತೋರಿಸುತ್ತದೆ. ಈ ಗಾಥಾಶ್ಲೋಕವು ಕೂಟಶ್ಲೋಕವೂ ಆಗಿದ್ದು ಇದಕ್ಕೆ ಆಧ್ಯಾತ್ಮಿಕವಾದ ಅರ್ಥವಿದೆ. ಈ ಕಥೆಯು ಪ್ರಕ್ಷಿಪ್ತವೆಂದು ಪರಿಗಣಿಸಲ್ಪಟ್ಟಿಲ್ಲ.

## ೩ ಸಿಂಹದ ಬಾಯಿಯಲ್ಲಿಯ ಮಾಂಸವನ್ನು ತಿನ್ನುವ ಭುಲಿಂಗ

ಈ ಕಥೆಯನ್ನು ಶಿಶುಪಾಲನು ಭೀಷ್ಮನಿಗೆ ಹೇಳುವನು. ಹಿಮಾಲಯದ ಒಂದು ಬದಿಯಲ್ಲಿ ಒಂದು ಭುಲಿಂಗ ಪಕ್ಷಿಯಿದ್ದಿತು. ಅದು ಯಾವಾಗಲೂ ಪರರಿಗೆ 'ದುಡುಕಬೇಡಿರಿ' 'ಸಂಕಟದಲ್ಲಿ ಬೀಳುವಂಥ ಕಾರ್ಯವನ್ನು ಮಾಡಬೇಡಿರಿ' ಎಂದು ಹೇಳುತ್ತ ತಾನು ಮಾತ್ರ ವಿಪತ್ಕಾರಕ ಕಾರ್ಯದಲ್ಲಿ ತೊಡಗಿದ್ದಿತು. ಸಿಂಹದ ಬಾಯಿಯಲ್ಲಿಯ ಮಾಂಸವನ್ನು ತಿನ್ನುತ್ತಿದ್ದಿತು. ಸಿಂಹದ ಹಲ್ಲುಗಳ ಸಂದಿಯಲ್ಲಿಯ ಮಾಂಸದ ಚೂರುಗಳನ್ನು ಕಿತ್ತಿಕೊಳ್ಳುತ್ತಿತ್ತು. ಇಲ್ಲಿರುವ ರಾಜರನ್ನೆಲ್ಲ ಅಲಕ್ಷ್ಯಮಾಡಿ ಕೃಷ್ಣನಿಗೆ ಅಗ್ರಪೂಜೆಯನ್ನು ಮಾಡಲು ಹೇಳುವ ನಿನ್ನ ಕೃತಿಯೂ ಸಿಂಹದ ಬಾಯಿಯಲ್ಲಯ ಮಾಂಸವನ್ನು ತಿನ್ನುವ ಭುಲಿಂಗದ ಕೃತಿಯಂತಿದೆ ಎಂದು ಶಿಶುಪಾಲನು ಭೀಷ್ಮನೊಡನೆ ವಾದಿಸುವನು. ಮಹಾಭಾರತದ ವಿಮರ್ಶಾತ್ಮಕ ಸಂಸ್ಕರಣದಲ್ಲಿ ಈ ಕಥೆಯ ವಿವರಗಳನ್ನು ಕೊಡದಿದ್ದರೂ "ಭುಲಿಂಗಶಕುನಿಃ ಯಥಾ" ಎಂದು ಈ ಕಥೆಯ ಉಲ್ಲೇಖ ಬಂದಿದೆ.

## ೪ ಬಂಗಾರದ ಹಿಕ್ಕಿಯನ್ನು ಹಾಕುವ ಪಕ್ಷಿಗಳು

ಈ ಕಥೆಯನ್ನು ಸಭಾಪರ್ವದಲ್ಲಿ ದ್ಯೂತವು ನಡೆದಾಗ ವಿದುರನು ಧೃತರಾಷ್ಟ್ರನಿಗೆ ಹೇಳುವನು.

ಧೃತರಾಷ್ಟ್ರ! ನಿನ್ನ ಮಗ ದುರ್ಯೋಧನನು ಹುಟ್ಟಿದಾಗಿನಿಂದಲೇ ಅನಿಷ್ಟಸೂಚಕನಾಗಿರುವನು. ಅವನನ್ನು ಎತ್ತಿಕಟ್ಟಿ ಪಾಂಡವರನ್ನು ಹಿಂಸಿಸಬೇಡ. ಹಿಂದಕ್ಕೆ ಒಬ್ಬ ರಾಜನು ಬಂಗಾರದ ಹಿಕ್ಕಿಯನ್ನು ಹಾಕುವ ಪಕ್ಷಿಗಳನ್ನು ಬಂಗಾರದ ಆಸೆಯಿಂದ ಹಿಂಸಿಸಿ ಹಾನಿಗೊಳಗಾದನು. ಆದುದರಿಂದ ಪಾಂಡವರನ್ನು ರಾಜ್ಯಲೋಭದಿಂದ ಹಿಂಸಿಸಬೇಡ.

ಬಂಗಾರವನ್ನು ಕೊಡುವ ಪಕ್ಷಿಗಳ ಎರಡು ಕಥೆಗಳು ತಂತ್ರಾಖ್ಯಾಯಿಕೆ (ಪಂಚತಂತ್ರ ಕಾಶ್ಮೀರದ ಪಾಠ) ಯಲ್ಲಿ ಬರುತ್ತವೆ. ಮೊದಲನೆಯ ಕಥೆಯಲ್ಲಿ ಆರು ತಿಂಗಳಿಗೊಮ್ಮೆ ಬಂಗಾರದ ಪುಚ್ಛಗಳನ್ನುದುರಿಸುವ ಹಂಸಗಳು ಒಬ್ಬ ರಾಜನ ಸರೋವರದಲ್ಲಿರುತ್ತವೆ. ಆ ಸರೋವರಕ್ಕೆ ಒಂದು ದಿನ ಇನ್ನೊಂದು ದೊಡ್ಡ ಬಂಗಾರದ ಪಕ್ಷಿಯು ಬರುತ್ತದೆ. ಅದಕ್ಕೆ ಈ ಹಂಸಗಳು ಸ್ಥಳ ಕೊಡುವದಿಲ್ಲ. ರಾಜನು ಇದರಿಂದ ಕುಪಿತನಾಗಿ ಆ ಹಂಸಗಳನ್ನು ತನ್ನ ಸರೋವರದಿಂದ ಹೊರಕ್ಕೆ ಹಾಕುತ್ತಾನೆ. ಎರಡನೆಯ ಕಥೆಯಲ್ಲಿ ಬಂಗಾರದ ಹಿಕ್ಕಿಯನ್ನು ಹಾಕುವ ಒಂದು ಪಕ್ಷಿಯು ಒಬ್ಬ ಬೇಡನ ಕೈಗೆ ಸಿಗುತ್ತದೆ. ಅವನು ಅದರ ವಿಷಯವನ್ನು ರಾಜನಿಗೆ ಹೇಳುತ್ತಾನೆ. ಆದರೆ ಮಂತ್ರಿಯು ಇದು ಅಸಂಭವ ಎನ್ನುತ್ತಾನೆ. ಆಗ ಅವರೆಲ್ಲರೂ ಆ ಪಕ್ಷಿಯನ್ನು ಬಿಟ್ಟುಬಿಡುತ್ತಾರೆ. ಇವರ ಮೂರ್ಖತನಕ್ಕಾಗಿ ಪಕ್ಷಿಯು ನಕ್ಕು ರಾಜದ್ವಾರದ ಮೇಲೆ ಬಂಗಾರದ ಹಿಕ್ಕಿಯನ್ನು ಹಾಕಿ ಹೊರಟು ಹೋಗುತ್ತದೆ. ಈ ಎರಡನೆಯ ಕಥೆಯು ದಾಕ್ಷಿಣಾತ್ಯ ಪಾಠದ ಪಂಚತಂತ್ರದಲ್ಲಿಯೂ ಬರುತ್ತದೆ. ಮಹಾಭಾರತದ ಕಥೆಯು ಇವೆರಡಕ್ಕಿಂತ ಭಿನ್ನವಾಗಿದ್ದು ಬಂಗಾರದ ತತ್ತಿಯನ್ನು ಹಾಕುವ ಪಕ್ಷಿಯ ಕಥೆಯನ್ನು ಹೋಲುತ್ತದೆ. ಆದರೆ ತತ್ತಿಗೆ ಬದಲಾಗಿ ಬಂಗಾರ ಹಿಕ್ಕಿ ಹಾಕುವ ಪಕ್ಷಿ ಎಂದು ವರ್ಣಿಸಲಾಗಿದೆ. ಈ ಕಥೆಯು ಸಾರರೂಪವಾದ ಪಥ್ಯವೂ ಪ್ರಾಚೀನ ಗಾಥಾರೂಪದಲ್ಲಿದ್ದು ಮಹಾಭಾರತದ ವಿಮರ್ಶಾತ್ಮಕ ಸಂಸ್ಕರಣದಲ್ಲಿ ಈ ಕಥೆಯನ್ನೂ ಮೂಲಪಾಠದಲ್ಲಿಯೇ ತೋರಿಸಲಾಗಿದೆ. ಪ್ರಕ್ಷಿಪ್ತವೆಂದು ಪರಿಗಣಿಸಿಲ್ಲ.

## ೫ ಅಂತಃಕಲಹದಿಂದ ಸಾವಿಗೀಡಾದ ಪಕ್ಷಿಗಳು

ಈ ಕಥೆಯನ್ನು ಉದ್ಯೋಗಪರ್ವದಲ್ಲಿ ವಿದುರನು ಕೌರವ ಪಾಂಡವರಲ್ಲಿ ಅಂತಃಕಲಹವು ಯೋಗ್ಯವಲ್ಲವೆಂದು ವಿವರಿಸಲು ಧೃತರಾಷ್ಟ್ರನಿಗೆ ಹೇಳಿದ್ದಾನೆ.

ಓರ್ವ ಕಟುಕನು ಒಮ್ಮೆ ಬಲೆಯನ್ನು ಒಂದು ಗಿಡದ ಕೆಳಗೆ ಪಸರಿಸಿದನು. ಆಗ ಅದರಲ್ಲಿ ಎರಡು ಪಕ್ಷಿಗಳು ಸಿಕ್ಕಿಕೊಂಡವು. ಆದರೆ ಅವೆರಡೂ ಸೇರಿ ಬಲೆಯನ್ನೇ ಎತ್ತಿಕೊಂಡು ಮೇಲಕ್ಕೆ ಹಾರಿದವು. ಕಟುಕನು ಅವು ಹಾರಾಡಿದ ಕಡೆಗೆಲ್ಲ ಓಡತೊಡಗಿದನು. ಆಗ ಸಮೀಪದ ಆಶ್ರಮದ ಓರ್ವ ಮುನಿಯು ನೀನು ಹೀಗೆ ಭೂಮಿಯ ಮೇಲೆ ಓಡಿ ಏನು ಪ್ರಯೋಜನ? ಎಂದು ಕೇಳಲು ಕಟುಕನು ಈ ಪಕ್ಷಿಗಳಲ್ಲಿ ಅಂತಃಕಲಹ ಬಂದಾಗ ಅವು ನೆಲಕ್ಕೆ ಬರುವದು ಖಂಡಿತ ಎಂದನು. ಮುಂದೆ ತುಸು ಹೊತ್ತಿನಲ್ಲಿಯೇ ಅವೆರಡರಲ್ಲಿ ಜಗಳವುಂಟಾಗಿ ಅವು ನೆಲಕ್ಕುರುಳಿದವು. ಕಟುಕನು ಅವನ್ನು ಎತ್ತಿಕೊಂಡು ಹೋದನು. ಆದುದರಿಂದ ಕೌರವ ಪಾಂಡವರ ಜಗಳ ತರವಲ್ಲ ಎಂದು ವಿದುರನು ಹೇಳುವನು.

ಬಲೆಯಲ್ಲಿ ಸಿಕ್ಕ ಪಾರಿವಾಳಗಳು ಸಂಘಶಕ್ತಿಯಿಂದ ಬಲೆಯನ್ನೇ ಎತ್ತಿಕೊಂಡು ಹೋಗಿ ಪಾರಾದ ಕಥೆಯು ಪಂಚತಂತ್ರ ಹಿತೋಪದೇಶ ಎರಡರಲ್ಲಿಯೂ ಬರುತ್ತದೆ. ಆದರೆ ಇಲ್ಲಿ ಅಂತಃಕಲಹದಿಂದ ಸಂಘಟನೆಯು ಒಡೆದು ಹಾನಿಗೀಡಾದ ಕಥೆಯಿದೆ. ಈ ಕಥೆಯೂ ಪ್ರಕ್ಷಿಪ್ತಭಾಗವೆಂದು ಪರಿಗಣಿಸಲ್ಪಟ್ಟಿಲ್ಲ.

ಮಹಾಭಾರತದಲ್ಲಿ ಬಂದ ಈ ಪಶು-ಪಕ್ಷಿಗಳ ಕಥೆಗಳು ನಮಗ ನೀತಿ, ಧರ್ಮ, ವ್ಯವಹಾರ ಚಾತುರ್ಯಗಳನ್ನು ಬೋಧಿಸುತ್ತವೆ. ಮಾನವ ಸ್ವಭಾವವನ್ನು ವಿಶ್ಲೇಷಿಸಿ ತಿಳಿಸುತ್ತವೆ. ಇಂಥ ನೂರಾರು ಕಥೆಗಳು ಪ್ರಾಚೀನ ಕಾಲದಿಂದಲೂ ಪ್ರಚಾರದಲ್ಲಿದ್ದವು. ಜನಪ್ರಿಯವಾಗಿದ್ದವು. ಅವುಗಳಲ್ಲಿ ಕೆಲವು ಮಾತ್ರ ಈಗ ಉಳಿದುಕೊಂಡಿವೆ. ಪಂಚತಂತ್ರ ಮತ್ತು ಹಿತೋಪದೇಶಗಳಂಥ ಕಥಾಸಂಕಲನಗಳ ಪ್ರಯತ್ನಗಳು ಇನ್ನೂ ಹೆಚ್ಚಾಗಿ ನಡೆದಿದ್ದರೆ ಬಹುಶಃ ಇನ್ನೂ ಅನೇಕ ಕಥೆಗಳು ಉಳಿದುಕೊಳ್ಳುತ್ತಿದ್ದವು.

ಲೇಖಕರು :
ಶ್ರೀ ಕೃಷ್ಣಮೂರ್ತಿ ಕಿತ್ತೂರ
ಹುಬ್ಬಳ್ಳಿ

# ಶ್ವಾನ

ನಾಯಿ ನಂಬಿಗಸ್ಥ ಪ್ರಾಣಿ ಎಂದು ಕೆಲವರು ಸಾಕಿದರೆ ಇನ್ನು ಹಲವರು ಬಂಗ್ಲೆಯ ಶೋಭೆಗಾಗಿ ಸಾಕುತ್ತಿರುವರು. ಆದಕ್ಕಿಂತ ಹೆಚ್ಚಾಗಿ ಅದು ಕೃತಜ್ಞವಾಗಿರುವ ಪ್ರಾಣಿ ಎಂಬುದನ್ನು ಲೇಖಕರು ಸ್ವಾನುಭವದಿಂದ ಇಲ್ಲಿ ನಿರೂಪಿಸಿದ್ದಾರೆ.

ಮನುಷ್ಯ ಪ್ರೀತಿಸುವ ಸಾಕುಪ್ರಾಣಿಗಳು ಹಲವಾರು. ಆದರೆ ನಾಯಿಯಷ್ಟು ಮಾನವನ ಪ್ರೀತಿ ಲಲ್ಲೆಗಳನ್ನು ಪಡೆದ ಭಾಗ್ಯ ಇನ್ನಾವ ಪ್ರಾಣಿಗೂ ಇಲ್ಲವೆಂದೇ ಹೇಳಬಹುದು. ನಾಯಿ ಬಲು ನಂಬಿಗಸ್ಥ ಪ್ರಾಣಿ ಎನ್ನುತ್ತಾರೆ; ಅದರ ಚುರುಕು ಬುದ್ಧಿಯನ್ನು ಹೊಗಳುತ್ತಾರೆ; ಅದರ ಸ್ನೇಹಮಯತೆಯನ್ನು ಕೊಂಡಾಡುತ್ತಾರೆ. ಬಾಲಕರಿಂದ ವೃದ್ಧರವರೆಗೂ ನಾಯಿಯನ್ನು ಪ್ರೀತಿಸುವವರಿದ್ದಾರೆ. ಗಂಡಸರಂತೆ ಹೆಂಗಸರೂ ಅದನ್ನು ಲಲ್ಲೆಗೈಯುತ್ತಾರೆ. ಬೇಟೆಗಾರರಂತೆ, ಆಟಗಾರ ಸುಖಪುರುಷರಿಗೂ ನಾಯಿ ಸಂಗಾತಿ. ನಾಯಿ ತಮ್ಮ ಮನೆಯನ್ನು ಕಾಯುತ್ತದೆ ಎಂದು ಭಾಗ್ಯವಂತರು ಅದನ್ನು ಸಾಕುತ್ತಾರೆ. ಅದರಂತೆ ಮನೆಗೆ— ಅಲ್ಲ, ಬಂಗಲೆಗೆ—ಭೂಷಣವೆಂದು (!) ನಾಯಿಯನ್ನು ಸಾಕುವ ಮಹಾನುಭಾವರಿಗೂ ಕೊರತೆಯಿಲ್ಲ.

ಅಂತೂ ನಾಯಿ ಮಾನವನ ಜೀವನದಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿದೆ ಎನ್ನಲಡ್ಡಿಯಿಲ್ಲ. ಆದರೆ ನಾಯಿಯೆಂದಕೂಡಲೆ / ಮುದುಡಿಕೊಳ್ಳುವ ನನ್ನಂಥ ಶ್ವಾನದ್ವೇಷಿಗಳಿಗೂ ಕೊರತೆಯಿಲ್ಲ. ನನಗೂ ನಾಯಿಗೂ ಮೂವತ್ತಾರರ ಸ್ನೇಹ. ನಾನು ಹೋಗುತ್ತಿರುವ ದಾರಿಯಲ್ಲಿ— ಅದು ಎಂಥದೇ ಇರಲಿ,— ನಾಯಿ ಬರುವುದು ಕಂಡರಾಯಿತು, ನನ್ನ ಕಾಲುಗಳು ತಾವಾಗಿಯೇ ಹಿಂದುಮುಂದಾಗಿ ಧಾವಿಸುತ್ತವೆ. ನಮ್ಮ ಈ ಎಣ್ಣೆಸೀಗೆ ಸಂಬಂಧ ಬಹು ಹಳೆಯದು.

ಒಮ್ಮೆ ನಮ್ಮ ಮನೆಯ ಅಂಗಳದಲ್ಲಿ ಒಂದು ನಾಯಿ ಮರಿ ಹಾಕಿತ್ತಂತೆ. ಆಗಿನ್ನೂ ಮೂರು ವರ್ಷದ ಮಗುವಾಗಿದ್ದ ನಾನು ಅದರ ಕುನ್ನಿಯೊಂದನ್ನು ಹಿಡಿದುಕೊಂಡು ಆಡತೊಡಗಿದಾಗ, ಆ ತಾಯಿನಾಯಿ ಬಂದು ನಿರಪರಾಧಿಯಾದ ನನ್ನನ್ನು ಕಚ್ಚಿಬಿಟ್ಟಿತಂತೆ. ಅದು ನನಗೀಗ ನೆನಪಿಲ್ಲ. ಆದರೆ ನಾಯಿಯನ್ನು ಕಂಡು ಹೆದರುವ ನನ್ನನ್ನು ಕಂಡಾಗಲೆಲ್ಲ ನನ್ನ ಅಜ್ಜಿ ಈಗಲೂ ಆ ಸಂಗತಿಯನ್ನು ಹೇಳಿ, "ಆಗಿನ ನಿನ್ನ ಧೈರ್ಯ ಈಗ ಎಲ್ಲಿ ಹೋಯಿತೋ ?" ಎಂದು ಚೇಷ್ಟೆ ಮಾಡುತ್ತಾಳೆ. ಅಂದು ನಾಯಿ ಕಚ್ಚಿದ ನೆನಪು ಬಹುಶಃ ನನ್ನ ಅವಚೇತನಾವಸ್ಥೆಯಲ್ಲಿ (sub conscious) ಈಗಲೂ ಇದ್ದಿರಬೇಕು. ಇಲ್ಲವಾದರೆ ಯಾರಿಗೂ ಹೆದರದ ನಾನು ನಾಯಿಗೆ ಇಷ್ಟೊಂದು ಹೆದರುವ ಕಾರಣವೇನು?

ನಿಜವಾಗಿಯೂ ನಾಯಿಗಳ ಬಗ್ಗೆ ನನ್ನಲ್ಲಿ ಒಂದು ಪ್ರಕಾರದ ವೈರವೇ ಇದೆಯೆನ್ನಲಡ್ಡಿಯಿಲ್ಲ. ಆದರೆ ಆದಕ್ಕಿಂತ ಹೆಚ್ಚಾಗಿ ಭೀತಿಯೂ ಇದೆ. ನಾಯಿಗಳನ್ನು ಸಾಲಾಗಿ ನಿಲ್ಲಿಸಿ ಗುಂಡು ಏಕೆ ಹಾರಿಸಬಾರದು ಎಂಬ ಆವೇಶವೂ ನನ್ನಲ್ಲಿ ಒಮ್ಮೊಮ್ಮೆ ಬರುವುದುಂಟು. ಆದರೆ ಅವುಗಳನ್ನು ಕಂಡ ಕೂಡಲೆ ನನ್ನ ಎದೆ ಹೆದರಿಕೆಯಿಂದ ಡವಡವ ಹೊಡೆದುಕೊಳ್ಳಲಾರಂಭಿಸುತ್ತದೆ, ಅದರಲ್ಲೂ ಹಳ್ಳಿಯ ನಾಯಿಗಳೆಂದರೆ ನನ್ನ ಮೈಮೇಲೆ ಮುಳ್ಳೇ ಬರುತ್ತದೆ.

ಅದರಂತೆ ಅವುಗಳಲ್ಲಿ ದುರ್ದೈವಿಗಳಾದ, ಯಾರ ಪ್ರೀತಿಗೂ ಪಾತ್ರವಾಗದೆ ಬೀದಿ ಬೀದಿ ಅಲೆದಾಡಿ, ಹುಡುಗರಿಂದ ಕಲ್ಲಿನ ಏಟುಗಳನ್ನು ತಿಂದು ನಾಲಗೆ ಇಳಿಬಿಟ್ಟು ತೇಕುತ್ತ, ಮನೆಯ ಮುಂದೋ ಹಿಂದೊ ಚೂರು ತುಣುಕುರೊಟ್ಟಿಗಾಗಿ ಬಂದು ದೈನ್ಯವಾಗಿ ನಿಲ್ಲುವ ಬಡಪ್ರಾಣಿಗಳನ್ನು ಕಂಡಾಗ ನನಗೆ ಕೆಲವು ಸಲ ಕನಿಕರವೂ ಎನಿಸುತ್ತದೆ. ಇಂಥ ಕನಿಕರದ ಭಾವನೆ ನನ್ನಲ್ಲಿ ಉದಯಿಸಿದಾಗಲೆಲ್ಲ, ಅವುಗಳ ಬಾಳುವೆಯ ಅರ್ಥವೇನು ಎಂಬ ವಿಚಾರ ನನ್ನ ತಲೆಯಲ್ಲಿ ಸುಳಿದು ಹೋಗುತ್ತದೆ. ಮನುಷ್ಯ ಎಷ್ಟೋ ಸಲ ಮನುಷ್ಯನನ್ನೇ "ನಾಯಿ" ಎಂದು ಬೈಯುತ್ತಾನೆ. ಹೀಗೆ ಬೈಯ್ಯುವಾಗಲೆಲ್ಲ ತಾನು ನಾಯಿಗಿಂತ ಶ್ರೇಷ್ಠ ಎಂಬ ಮಾನವನ ಮನೋಭಾವ ಎದ್ದು ಕಾಣುತ್ತದೆ. ಆದರೆ ನಾಯಿಗಳು ಕೂಡ ತಮ್ಮ ಜಾತಿಬಾಂಧವರನ್ನು ಬೈಯ್ಯುವಾಗ "ಏ ಮಾನವಾ!" ಎಂದು ಸಂಬೋಧಿಸುತ್ತಿರಬಹುದೇ ಎಂಬ ಸಂದೇಹ ನನ್ನನ್ನು ಆಗಾಗ ಕೆಣಕದೇ ಇಲ್ಲ!

ಅದೇನೇ ಇರಲಿ, ಇತ್ತೀಚೆ ನಾನೂ ನಾಯಿಗಳನ್ನು ಪ್ರೀತಿಸಲು ಪ್ರಯತ್ನಿಸುತ್ತಿದ್ದೇನೆ. ಅವುಗಳ ಬಗ್ಗೆ ಇರುವ ಭೀತಿಯನ್ನು ನನ್ನಿಂದ ಕಿತ್ತೊಗೆಯಲು ಯತ್ನಿಸುತ್ತಿದ್ದೇನೆ ಎಂದು ಹೇಳಿದರೆ "ಈ ಮಾರ್ಪಾಡಿಗೆ ಏನು ಕಾರಣ?" ಎಂದು ನೀವು ಕೇಳಬಹುದು. ಉಂಟು, ಅದಕ್ಕೆ ಕಾರಣವುಂಟು.

ಅದು ನಡೆದುದು ಹೀಗೆ:— ಆಗ ನಾನು ಅಗ್ರಿಕಲ್ಚರ ಡಿಪಾರ್ಟಮೆಂಟಿನಲ್ಲಿ ಅಸಿಸ್ಟಂಟನೆಂದು ಕೆಲಸ ಮಾಡುತ್ತಿದ್ದೆ. ನನ್ನ ಕಾರ್ಯಕ್ಷೇತ್ರ ಒಂದು ಚಿಕ್ಕ ಹಳ್ಳಿ. ರೇಲ್ವೆ ನಿಲ್ದಾಣದಿಂದ ಎರಡು ಮೈಲು ದೂರ ಹಾದಿ ತುಳಿದು ಅದನ್ನು ಸೇರಬೇಕು. ತಿಂಗಳಿಗೆ ಏನಿಲ್ಲೆಂದರೂ ಎರಡು ಮೂರು ಬಾರಿಯಾದರೂ ನನಗೆ ತಾಲೂಕಿನ ಸ್ಥಳಕ್ಕೆ ಹೋಗಬೇಕಾಗುತ್ತಿತ್ತು. ಹಾಗೆ ಹೋಗಿ ಬರಬೇಕಾದಾಗಲೆಲ್ಲ ರಾತ್ರಿಯಾಗುವ ಮೊದಲೇ ನನ್ನ ಗೂಡನ್ನು ಸೇರುವ ದಕ್ಷತೆಯನ್ನು ವಹಿಸುತ್ತಿದ್ದೆ. ಕಳ್ಳರ ಹೆದರಿಕೆ ಇದಕ್ಕೆ ಕಾರಣವಲ್ಲ, ಭೂತ ಪಿಶಾಚಿಗಳ ಭಯವೂ ಅಲ್ಲ, ಅಥವಾ ನನಗೆ ಇರುಳು ಕಣ್ಣು ಕಾಣುತ್ತಿರಲಿಲ್ಲವೆಂತಲೂ ಅಲ್ಲ. ಹಾಗಾದರೆ ಏನು ಕಾರಣವೆನ್ನುವಿರಾ? ಅವೇ ಬೊಗಳುವ ನಾಯಿಗಳು!

ಅದೊಂದು ಸಣ್ಣ ಹಳ್ಳಿ ಎಂದೆನಲ್ಲ. ಜನವಸತಿ ತೀರ ಕಡಿಮೆ. ಮನೆಗಳು-ಗುಡಿಸಲುಗಳು ಎಲ್ಲ ಕೂಡಿದರೆ ಸಂಖ್ಯೆ ನೂರನ್ನು ಮಿಕ್ಕುತ್ತಿರಲಿಲ್ಲ. ಊರಲ್ಲಿ ಸದಾ ಶಾಂತ ವಾತಾವರಣ, ಜನರಲ್ಲಿ ಮುಕ್ಕಾಲು ಪಾಲಿಗಿಂತ ಹೆಚ್ಚು ಜನ ರೈತರೋ ಕೂಲಿಕಾರರೋ ಆಗಿದ್ದರು. ಹಗಲು ಹೊತ್ತೆಲ್ಲ ಹೊಲಗಳಲ್ಲಿ ದುಡಿದು ದಣಿದುಬಂದು ರಾತ್ರಿ ಗಾಢ ನಿದ್ರೆ ಮಾಡುವ ಪದ್ಧತಿ ಅವರದು. ರಾತ್ರಿ ಎಂಟು ಗಂಟೆಯ ನಂತರ ಅಲ್ಲಿ ನಿಮಗೆ ಯಾರ ಧ್ವನಿಯೂ ಕೇಳಬಾರದು.

ಯಾರ ಧ್ವನಿಯೂ ಅಂದರೆ ಮನುಷ್ಯರ ಧ್ವನಿ ಎಂದೇ ನನ್ನ ಅಭಿಪ್ರಾಯ. ಯಾಕೆಂದರೆ ಉಳಿದ ಧ್ವನಿಗಳಿಗೇನೂ ಅಲ್ಲಿ ಕೊರತೆ ಇರಲಿಲ್ಲ. ಹಾಳು ಹನುಮಪ್ಪನಗುಡಿಯ ಗೂಡಿನಲ್ಲಿಂದ ಕೂಗುವ ಹಃವಾರು ಪಕ್ಷಿಗಳ ಕೂಗು, ಜಗಳವಾಡುವ ಬೆಕ್ಕುಗಳ ಕಿರಚಾಟ, ಗಂಟೆಗೊಮ್ಮೆ ಕಿರಚುವ ಕತ್ತೆಗಳ ಆರ್ಭಟ, ಇವೆಲ್ಲವನ್ನು ಮೀರಿಸಿ ಬೊಗಳುವ ನಾಯಿಗಳ ಬೊಬ್ಬಾಟ--ಇವಕ್ಕೆ ಮಿತಿಯೇ ಇರಲಿಲ್ಲ. ಕಾರಣವಿಲ್ಲದೆ ಬೊಗಳುವ ನಾಯಿಗಳ ಆರ್ಭಟ ಮಾತ್ರ ನನಗೆ ಅರ್ಥವೇ ಆಗುತ್ತಿರಲಿಲ್ಲ.

ಅವು ಭಯಂಕರವಾಗಿ ಬೊಗಳುವ ಧ್ವನಿ ಯಾವಾಗಲೂ ನನ್ನನ್ನು ಅಸ್ವಸ್ಥಗೊಳಿಸುತ್ತಿತ್ತು. ಆ ಊರಿಗೆ ಹೋದ ಮೊದಲ ದಿನಗಳಲ್ಲಂತೂ ಅವುಗಳ ಬೊಗಳುವಿಕೆಯಿಂದ ನನಗೆ ರಾತ್ರಿಯೆಲ್ಲ ನಿದ್ರೆಯೇ ಹತ್ತುತ್ತಿರಲಿಲ್ಲ. ನಟ್ಟನಡು ರಾತ್ರಿಯಲ್ಲಿ ಅವೆಲ್ಲವೂ ಕೂಡಿ 'ಸರ್ರ್ಯೋ ಮರ್ರ್ಯೋ' ಎಂದು ಅಳುವ ಹಾಗೆ ಕೂಗುತ್ತಿದ್ದವು. ಆ ಕೂಗಂತೂ ನನ್ನ ಹೃದಯದಲ್ಲಿ ಯಾವುದೋ ಒಂದು ಅವರ್ಣನೀಯವಾದ ಭೀತಿಯನ್ನು ಹುಟ್ಟಿಸುತ್ತಿತ್ತು! ಆ ಕೂಗಿನಿಂದ ಎಚ್ಚರವಾದ ನನಗೆ ಮುಂದೆ ಎಷ್ಟೋ ವೇಳೆಯ ವರೆಗೆ ನಿದ್ರೆಯೇ ಬರುತ್ತಿರಲಿಲ್ಲ.

ಇಷ್ಟೆಲ್ಲ ಹೇಳಿದ ಮೇಲೆ, ಆ ಹಳ್ಳಿಯಲ್ಲಿ ನಾನು ನಾಯಿಗಳಿಂದ ಮೂರು ಹರದಾರಿ ದೂರ ಇರುತ್ತಿದ್ದೆ



ನೆಂದು ಬೇರೆ ಹೇಳಬೇಕಾಗಿಲ್ಲ. ಅವುಗಳನ್ನು ನನ್ನ ಮನೆಯ ಸಮೀಪವೇ ಬರಗೊಡುತ್ತಿರಲಿಲ್ಲ.

ಹೀಗಿದ್ದರೂ ಆ ಒಂದು ನಾಯಿ ಮಾತ್ರ ನನ್ನ ಮನೆಯ ಸಮೀಪ ಸುಳಿಯಿತು. ಒಂದುಸಲ ಬಿಸಲುಗಾಲದ ಮಧ್ಯಾಹ್ನ ರಣರಣ ಉರಿಬಿಸಿಲು ಸುಡುತ್ತಿತ್ತು. ಹೊಲಗಳಲ್ಲಿ 'ಬಂಡು' ಹಾಕಿಸುವ ಕೆಲಸದ ನನ್ನ 'ಮೇಲ್ವಿಚಾರಣೆಯನ್ನು ಆ ದಿನ ಬೇಗನೆ ಮುಗಿಸಿ ಮನೆಗೆ ಬಂದು ಸ್ವಯಂಪಾಕು ಮಾಡಿಕೊಂಡು ಉಂಡು ಎರಡು ತಂಬಿಗೆ ನೀರು ಕುಡಿದು 'ಉಶ್ಯಪ್ಪ' ಎಂದು ಪಡಸಾಲೆಯಲ್ಲಿ ಒರಗಿಕೊಂಡಿದ್ದೆ. ಏನೋ ಪುಸ್ತಕ ಓದುತ್ತಿದ್ದ ನನ್ನ ದೃಷ್ಟಿ ಸಹಜವಾಗಿ ಬಾಗಿಲ ಕಡೆಗೆ ಹೋಯಿತು. ಎಲುಬಿನ ಹಂದರವೇ ಆದ ಕಪ್ಪುಬಣ್ಣದ ನಾಯಿಯೊಂದು ಕಟ್ಟೆಯ ಪಾವಟಿಗೆಯ ಮೇಲೆ—ನಾನು ಕೈ ತೊಳೆದುಕೊಳ್ಳುವಾಗ ಬಿದ್ದ ನೀರನ್ನು ಲೊಚ ಲೊಚ ಕುಡಿಯುತ್ತಿತ್ತು. ಆ ದೃಶ್ಯ ಅದೇಕೋ ನನ್ನ ಹೃದಯವನ್ನು ಕರಗಿಸಿತು. ಅದು ಬಡಕಲಾಗಿ ಸಾಯಲಾಗಿದ್ದರೂ ಅದೂ ಒಂದು ನಾಯಿ ಎಂಬುದನ್ನೇ ನಾನು ಆ ಕ್ಷಣ ಮರೆತುಬಿಟ್ಟೆ. ನನಗೇ ಅರಿವಿಲ್ಲದಂತೆ ಎದ್ದು, ಬೆಳಿಗ್ಗೆ ತಿಂದು ಉಳಿದ ಬ್ರೆಡ್ಡಿನ ಚೂರೊಂದನ್ನು ತಂದು ಅದರ ಮುಂದೆ ಎಸೆದೆ. ನಾನು ಕಲ್ಲನ್ನೇ ಒಗೆದೆನೋ ಎಂಬಂತೆ ಹೆದರಿ ಅದು ಚಟಕ್ಕನೆ ಮೂರು ಮಾರು ದೂರ ಜಿಗಿಯಿತು. ತನ್ನ ಎದುರಿಗೆ ಬಿದ್ದುದು ಕಲ್ಲಲ್ಲ, ಖಾದ್ಯ ಎಂದು ತಿಳಿದಾಗ ನನ್ನೆಡೆಗೊಮ್ಮೆ ಕೃತಜ್ಞತೆಯಿಂದೆಂಬಂತೆ ನೋಡಿ ಆ ಚೂರನ್ನು ತಿನ್ನತೊಡಗಿತು.

ಮರುದಿನವೂ ಆ ನಾಯಿ ಅದೇ ಸಮಯಕ್ಕೆ ಬಂದಾಗ ನನಗೆ ಅಷ್ಟೊಂದು ಕನಿಕರವೆನಿಸದಿದ್ದರೂ ಏನೋ ಸ್ವಲ್ಪ ತಿನ್ನಲಿಕ್ಕೆ ಹಾಕಿ ಬಾಗಿಲನ್ನು ಮುಂದೆ ಮಾಡಿದೆ. ಅದಕೆ ನನ್ನ ಅವಜ್ಞೆ ತಿಳಿಯಲಿಲ್ಲವೆಂದು ಕಾಣುತ್ತದೆ. ಅದು ಮೂರನೆಯ ದಿನವೂ ಅದೇ ವೇಳೆಗೆ ಬಂದು ನಿಂತಿತು. ಅದು ನನ್ನ ಕೂಡ ಬೆಳೆಸುತ್ತಿರುವ ಸಲಿಗೆಯನ್ನು ಕಂಡು ತಡೆಯಲಾರದೆ ನಾನು ಧಡಾರನೆ ಬಾಗಿಲನ್ನು ಹಾಕಿಬಿಟ್ಟು, ನನ್ನ ಕೆಲಸದಲ್ಲಿ ತೊಡಗಿದೆ.

ಮುಂದೆ ಐದು ನಿಮಿಷಗಳನಂತರ ಯಾರೋ ಬಾಗಿಲನ್ನು ತಟ್ಟಿದಂತಾಯಿತು. ಇಂಥ ಬಿಸಲಲ್ಲಿ ಯಾರು ಬಂದರೆಂದು ಬಾಗಿಲು ತೆರೆದು ನೋಡಿದರೆ, ಅದೇ ದರಿದ್ರ ನಾಯಿ ನಿಂತಿತ್ತು. ನನಗೆ ಒಮ್ಮೆಲೇ ಸಿಟ್ಟು ನೆತ್ತಿಗೇರಿ ಬೆತ್ತವೊಂದನ್ನು ತಂದು ಅದರ ಕಡೆಗೆ ಬೀಸಿದೆ.

ಮುಂದೆ ಮರುದಿನವೂ ಅದು ನನ್ನ ಮನೆಗೆ ಬಂದಿತೋ ಇಲ್ಲವೋ ನನಗೆ ತಿಳಿಯಲಿಲ್ಲ. ಯಾಕಂದರೆ ಮರುದಿನ ಬೆಳಗಿನ ಗಾಡಿಯಿಂದ ನಾನು ತಾಲೂಕಿನ ಸ್ಥಳಕ್ಕೆ ಕೆಲಸಕ್ಕಾಗಿ ಹೋಗಬೇಕಾಗಿತ್ತು. ಹಾಗೆ ಹೋದ ನನಗೆ ಅಂದು ಮಧ್ಯಾಹ್ನ ಜ್ವರ ಬಂದು ೧೦-೧೨ ದಿನಗಳ ವರೆಗೆ ಅದೇ ಊರಿನ ನನ್ನ ಗೆಳೆಯನೊಬ್ಬನ ಮನೆಯಲ್ಲಿ ಉಪಚಾರ ಪಡೆಯಬೇಕಾಯಿತು. ಮುಂದೆ ಎಂಟು ದಿನ ಹೆಚ್ಚಿಗೆ ರಜೆ ಪಡೆದು ನನ್ನ ಊರಿಗೆ ಹೋಗಿ ವಿಶ್ರಾಂತಿ ಪಡೆದು, ಆರೋಗ್ಯ ತುಂಬ ಸುಧಾರಿಸಿದ ನಂತರ ಕೆಲಸಕ್ಕೆ ಹಾಜರಾದೆ.

ಅಂದು ತಾಲೂಕಿನ ನನ್ನ ಆಫೀಸಿನಲ್ಲಿ ಕೆಲಸಕ್ಕೆ ಹಾಜರ ಆದ ರಿಪೋರ್ಟು ಕೊಟ್ಟು, ಮಧ್ಯಾಹ್ನದ ಗಾಡಿಯಿಂದ ಊರಿಗೆ ಹೊರಟೆ. ರಾತ್ರಿಯಾಗುವ ಮೊದಲೇ ಊರು ಮುಟ್ಟಲು ಆ ಗಾಡಿ ಅನುಕೂಲವಾಗಿತ್ತು. ಆದರೆ ದುರ್ದೈವದಿಂದ ಆ ದಿನ ಮಧ್ಯ ಎಂಜಿನು ಕೆಟ್ಟುಹೋಗಿ ನನ್ನ ಹಳ್ಳಿಯ ನಿಲ್ದಾಣ ಮುಟ್ಟುವಾಗಲೇ ರಾತ್ರಿ ಹತ್ತೂ ಮುಕ್ಕಾಲು ಗಂಟೆಯಾಗಿತ್ತು. ನಾನು ನನ್ನ ಹಳ್ಳಿಯ ಮಾರ್ಗವನ್ನೇ ತುಳಿಯತೊಡಗಿದೆ. ಸುದೈವಕ್ಕೆ ಅಂದು ಬೆಳದಿಂಗಳ ರಾತ್ರಿಯಾದ್ದರಿಂದ, ಕಾಲುದಾರಿ ತಪ್ಪದೆ ನಾನು ಊರು ಮುಟ್ಟಿದೆ. ಆದರೆ ಊರು ಸಮೀಪ ಬಂದಂತೆ ನನಗೆ ಹೆದರಿಕೆಯಿಂದ ಎದೆ ಧಡಧಡ ಹೊಡೆದುಕೊಳ್ಳತೊಡಗಿತು. ಅದೇ ನಾಯಿಗಳ ಹೆದರಿಕೆ! ಎಡಗೈಯಲ್ಲಿ ಜೀವ ಹಿಡಿದುಕೊಂಡು ಊರ ಅಗಸೆಯನ್ನು ಮುಟ್ಟಿದೆ. ಅಗಸೆಯನ್ನು ದಾಟಿ ಒಂದು ಓಣಿ ಕ್ರಮಿಸಿದರೆ, ಎರಡನೆಯ ಬೀದಿಯ ಕೊನೆಗಿರುವುದೇ ನನ್ನ ಮನೆ.

ಅಗಸೆಯಲ್ಲಿ ನನ್ನ ಸುದೈವಕ್ಕೆ ಒಂದು ನಾಯಿಯೂ ಕಾಣಲಿಲ್ಲ. ಆ ಕಡೆಗೆ ಈ ಕಡೆಗೆ ಹಿಂದೆ ಮುಂದೆ ನೋಡುತ್ತ ಕಳ್ಳರಿಗಿಂತ ಕಳ್ಳನಾಗಿ ನಾನು ತುದಿಗಾಲ ಮೇಲೆ ನಡೆಯುತ್ತ ಮುಂದೆ ಸಾಗಿದೆ. ಆ ಓಣಿಯನ್ನು ದಾಟಿದೆ. ಇನ್ನೇನು ಒಂದೇ ನಿಮಿಷದಲ್ಲಿ ನನ್ನ ಮನೆ ಸೇರುತ್ತೇನೆ, ಎನ್ನುವಾಗ ಒಮ್ಮೆಲೇ ನನ್ನ ಎಡಬದಿಯಿಂದ ಒಂದು ಒವ್ ಎಂಬ ಧ್ವನಿ ಕೇಳಿ ಬೆಚ್ಚಿಬಿದ್ದೆ. ಎಲ್ಲಿಂದಲೋ ಧೈರ್ಯ ತಂದುಕೊಂಡು ಹಚ್ ಎಂದು ಒದರಿಕೊಂಡು ಮುಂದೆ ಸಾಗಲೆತ್ನಿಸಿದೆ. ಆದರೆ ಆ ನಾಯಿ ನನ್ನ ಸಮೀಪಕ್ಕೆ ಬಂದು ಬೊಗಳತೊಡಗಿ, ನನ್ನನ್ನು ಮುಂದೆ ಹೋಗಗೊಡಲೇ ಇಲ್ಲ. ಏನು ಮಾಡಬೇಕೆಂದು ತಿಳಿಯದೆ ಹಚಾಽ ಹಚಾಽಽ ಎನ್ನುತ್ತ ನಿಂತಿರುವಾಗ, ಬೊಗಳುವ ನಾಯಿಗಳ ಒಂದು ಪಡೆಯೇ ಕ್ಷಣಾರ್ಧದಲ್ಲಿ ಬಂದು ನನ್ನನ್ನು ಮುತ್ತಿಬಿಟ್ಟಿತು. ನನ್ನ ಮೈ ಬೆವರಿತು. ಹಚಾ ಎನ್ನಬೇಕೆಂದರೂ ನನ್ನ ನಾಲಗೆಯೇ ಏಳದಾಯಿತು. ಒಂದು ಕ್ಷಣ ಕಣ್ಣಿಗೆ ಕತ್ತಲು ಕವಿದಂತಾಯಿತು! ಆ ರಾಕ್ಷಸಗಳಾದರೋ ಒಂದಕ್ಕಿಂತ ಒಂದು ಹೆಚ್ಚು ಕರ್ಕಶವಾಗಿ ಬೊಗಳುತ್ತ ನನ್ನ ಮೇಲೆ ಏರಿಬರತೊಡಗಿವೆ. ನನ್ನ ಸುತ್ತು ನೆರೆದ ನಾಯಿಗಳು ಸಾಲದೆಂಬಂತೆ ದೂರದಿಂದ ಇನ್ನೊಂದು ಬಡಕಲುನಾಯಿ ತನ್ನ ಅಶಕ್ತ ಸ್ವರದಲ್ಲೇ ಬೊಗಳುತ್ತ ನನ್ನೆಡೆಗೆ ಬಂದಿತು. ಅದು ಬೊಗಳುತ್ತ ನನ್ನ ಮೇಲೆಯೇ ಏರಿಬಂದಿತು. ಇಂಥ ಕ್ಷುದ್ರ ನಾಯಿಯೇ ಮೊದಲು ನನ್ನನ್ನು ಕಚ್ಚಬೇಕೇ ಎಂದೆನಿಸಿತು ನನಗೆ, ಆ ಮರಣಾಸನ್ನ ಕ್ಷಣದಲ್ಲಿ ಕೂಡ!

ಆದರೆ ವಿಚಿತ್ರ! ಅದು ನನ್ನ ಹತ್ತಿರ ಬಂದುದು ಬೊಗಳುವುದನ್ನೇ ನಿಲ್ಲಿಸಿ, ಕುಂಯ್ ಕುಂಯ್ ಎಂದು ಬಾಲವನ್ನು ಅಲುಗಾಡಿಸುತ್ತ ನಿಂತುಬಿಟ್ಟಿತು! ಕ್ಷಣಾರ್ಧದಲ್ಲಿ ಉಳಿದ ನಾಯಿಗಳ ಬೊಗಳಾಟವೂ ಕಡಿಮೆಯಾಯಿತು. ನಾನು ಕನಸಿನಲ್ಲಿರುವೆನೋ ಎಚ್ಚರಾಗಿರುವೆನೋ ಎಂದುಕೊಂಡೆ. ಇನ್ನೇನು ನಾಯಿಗಳೆಲ್ಲ ಕಚ್ಚಿಕೊಂದುಬಿಡುತ್ತವೆ ಎನ್ನುವಾಗ ಅವುಗಳೆಲ್ಲ ಬಿಳಿಯ ಧ್ವಜವನ್ನು ತೋರಿಸಬೇಕೇ ?

"ದೇವರೇ, ಪಾರಾದೆ" ಎಂದು ನಿಟ್ಟುಸಿರಿನೊಂದಿಗೆ ಬೆವರು ಒರೆಸಿಕೊಳ್ಳುತ್ತ ನನ್ನ ಮನೆ ಸೇರಿದೆ!

ಈ ಘಟನೆಯ ನಂತರ, ನಾಯಿಗಳ ಬಗ್ಗೆ ಇದ್ದ ನನ್ನ ಮನೋಭಾವನೆ ತುಸು ಬದಲಾಗಿದೆಯಾದರೂ ಬೊಗಳುವ ನಾಯಿಗಳ ಹೆದರಿಕೆ ಮಾತ್ರ ಇನ್ನೂ ಉಳಿದೇ ಇದೆ.

ಆದರೆ, ಆ ಬಡಕಲು ನಾಯಿಯ ನೆನಪು ಬಂದಾಗಲೆಲ್ಲ ನನ್ನಲ್ಲಿ ಒಂದು ವಿಚಾರ ತಾನೇ ತಾನಾಗಿ ಸುಳಿಯುತ್ತಿದೆ: ಅದು ಎರಡೇ ಎರಡು ದಿನ ಹಾಕಿದ ಬ್ರೆಡ್ಡಿನ ಚೂರನ್ನು ನೆನೆಯಿತೇ ವಿನಾ ಮೂರನೆಯ ದಿನದ ಬೆತ್ತದ ಏಟನ್ನು ನೆನೆಯಲಿಲ್ಲ. ಹತ್ತಾರು ನಾಯಿಗಳು ನನ್ನನ್ನು ಹರಿದು ತಿನ್ನುವ ಆ ದುರ್ಧರ ಕ್ಷಣದಲ್ಲಿ ಅದು ನನ್ನ ರಕ್ಷಣೆ ಮಾಡಿ ತನ್ನ ಕೃತಜ್ಞತೆಯನ್ನು ಸಲ್ಲಿಸಿತು!

ಈ ಮನೋಭಾವ ಮಾನವರಲ್ಲೂ ಬೆಳೆದರೆ?

---

ಲೇಖಕರು :
ಶ್ರೀ. ವಿ. ಕೃ. ಗೋಕಾಕ
ಹಾಗೂ
ಶ್ರೀಮತಿ ಯಶೋದಾ ಭಟ್

# ಭಾರತದಲ್ಲಿ ಇಂಗ್ಲಿಷಿನ ಸ್ಥಾನಮಾನ

ಇಂಗ್ಲೀಷು ನಮಗೆ ವಿದೇಶಭಾಷೆ. ಆದರೆ ಬ್ರಿಟಿಷರ ಕಾಲದಲ್ಲಿ ಅದು ಆಡಳಿತಭಾಷೆಯಾಗಿ ಭಾರತೀಯರ ಮೇಲೆ ಆಳವಾದ ಪ್ರಭಾವ ಬೀರಿದೆ. ಅದಲ್ಲದೆ ಅದು ಸಿರಿವಂತಭಾಷೆ. ಜಗತ್ತಿನ ಬಹುಭಾಗದಲ್ಲಿ ಅದು ಪ್ರಚಲಿತವಿದೆ. ವಿದೇಶಗಳಿಂದ ತಾಂತ್ರಿಕ ಜ್ಞಾನ ಪಡೆಯುವುದಕ್ಕೆ ಸಾಧನವಾಗಿದೆ. ಈಗ ಸ್ವಾತಂತ್ರ್ಯಾನಂತರ ನಾವು ಈ ಭಾಷೆಗೆ ಯಾವ ಸ್ಥಾನ ಕೊಡಬೇಕು ಎಂಬ ಪ್ರಶ್ನೆ ತಲೆದೋರಿದೆ. ಅದು ವಿವಾದಾಸ್ಪದ ಪ್ರಶ್ನೆಯೂ ಎನಿಸಿದೆ. ಈ ಸಮಸ್ಯೆಗೆ ಪರಿಹಾರವೇನೆಂಬುದಕ್ಕೆ ಈ ಲೇಖನದಲ್ಲಿ ಅನುಭವಪೂರ್ಣ ವಿವರಣೆ ನೀಡಲಾಗಿರುವುದು.

ಐತಿಹಾಸಿಕ ಕಾರಣಗಳಿಂದಾಗಿ ನಮಗೆ ಸಂಬಂಧ ಬಂದ ಇಂಗ್ಲಿಷ್‌ಭಾಷೆ ಅಮೌಲ್ಯವಾದ ಕಾಣಿಕೆಯಾಗಿ ಪರಿಣಮಿಸಿತು. ಬ್ರಿಟಿಶರು ನಮ್ಮ ದೇಶವನ್ನು ಬಿಟ್ಟುಹೋದರೂ ಅವರ ಭಾಷೆಯು ಇಲ್ಲಿ ಉಳಿಯಿತು. ಭಾರತವು ಬ್ರಿಟಿಷರ ವಶದಲ್ಲಿದ್ದಾಗ ಇಂಗ್ಲಿಷು ನಮ್ಮ ದೇಶದ ಆಡಳಿತ-ವ್ಯವಹಾರಗಳ ಭಾಷೆಯಾಗಿತ್ತು; ಶಿಕ್ಷಣದ ಮಾಧ್ಯಮವಾಯಿತು; ಅಂತರ್—ಪ್ರಾಂತೀಯ ವ್ಯವಹಾರದ ಭಾಷೆಯೂ ಆಗಿತ್ತು. ಹೀಗಾಗಿ ಇಂಗ್ಲೀಷರು ಮರಳುವಾಗ ಅವರ ಭಾಷೆಗೆ ನಮ್ಮ ದೇಶದಲ್ಲಿ ಭದ್ರವಾದ ಸ್ಥಾನವು ದೊರೆತಿತ್ತು.

ಆದರೆ ಸ್ವಾತಂತ್ರ್ಯೋತ್ತರ ಭಾರತದಲ್ಲಿ ಇಂಗ್ಲಿಷಿನ ಸ್ಥಾನಮಾನದ ಬಗ್ಗೆ ವಿಚಾರವಿನಿಮಯ ನಡೆಯಿತು. ನಮ್ಮ ಪಾರತಂತ್ರ್ಯದ ದ್ಯೋತಕವಾದ ಈ ಭಾಷೆಗೆ ನಮ್ಮ ದೇಶದಲ್ಲಿ ಹೆಚ್ಚಿನ ಸ್ಥಾನವನ್ನು ಕೊಡಬಾರದೆಂದು ನಮಗನಿಸಿತು. ಇಂಗ್ಲಿಷಿನ ಮುಖಾಂತರ ನಮ್ಮ ವ್ಯವಹಾರ, ಶಿಕ್ಷಣ ಎಲ್ಲ ನಡೆದರೆ ನಮ್ಮ ಭಾರತೀಯ ಭಾಷೆಗಳ ಬೆಳವಣಿಗೆ ಆಗಲಿಕ್ಕಿಲ್ಲವೆಂಬ ಭಯವೂ ಹುಟ್ಟಿತು. ಆದ್ದರಿಂದ ಸ್ವಾಭಿಮಾನಕ್ಕಾಗಿ, ನಮ್ಮ ಭಾಷೆಗಳ ಪ್ರಗತಿಗಾಗಿ ನಮ್ಮ ಶಿಕ್ಷಣಕ್ರಮದಲ್ಲಿ ಇಂಗ್ಲಿಷಿನ ಅಭ್ಯಾಸಕ್ಕೆ ಮೊದಲಿನಷ್ಟು ಮಹತ್ವದ ಸ್ಥಾನವನ್ನು ಕೊಡಬಾರದೆಂಬ ಲಹರಿ ಎದ್ದಿತು. ಹಾಯಸ್ಕೂಲುಗಳಲ್ಲಿ ಎರಡು ಮೂರು ವರುಷ ತಡವಾಗಿ ಇಂಗ್ಲಿಷನ್ನು ಕಲಿಸಲು ಕೆಲವೆಡೆಗೆ ಆರಂಭವಾಯಿತು. ಹಲವಾರು ಕಾಲೇಜುಗಳಲ್ಲಿ, ಯುನಿವ್ಹರ್ಸಿಟಿಗಳಲ್ಲಿ ಪ್ರಾಂತೀಯ ಭಾಷೆಯು ಶಿಕ್ಷಣದ ಮಾಧ್ಯಮವಾಗಬೇಕೆಂಬ ಪ್ರಯತ್ನ ನಡೆಯಿತು.

ಈಗ ೧೬ ವರುಷಗಳ ಸ್ವಾತಂತ್ರ್ಯದ ನಂತರ ಪರಿಸ್ಥಿತಿಯನ್ನು ಅವಲೋಕಿಸಿದಾಗ ನಮಗೆ ಗೋಚರವಾಗುವ ಸಂಗತಿಯೆಂದರೆ,— ಇಂಗ್ಲಿಷಿನ ಸ್ಥಾನವನ್ನು ಯಾವ ಭಾರತೀಯ ಭಾಷೆ ಸ್ವೀಕರಿಸಬೇಕು ಎಂಬುದರ ಬಗ್ಗೆ ನಮ್ಮಲ್ಲಿ ಏಕಮತವಿಲ್ಲ; ಅಂತಹ ಸ್ಥಾನವನ್ನು ಸ್ವೀಕರಿಸುವ ಸ್ಥಿತಿಯಲ್ಲಿ ಯಾವ ಭಾಷೆಯೂ ಇಲ್ಲ. ಇತ್ತೀಚೆಗೆ ಪಾರ್ಲಿಮೆಂಟಿನಲ್ಲಿ ಆಡಳಿತದ ಭಾಷೆಯ ಬಗ್ಗೆ ಪಾಸಾದ ವಿಧೇಯಕವೇ (Official Language Bill) ಇದಕ್ಕೆ ಒಳ್ಳೆಯ ಉದಾಹರಣೆ. ಈ ಕಾಯದೆಯ ಪ್ರಕಾರ ಇಂಗ್ಲಿಷ್ ಭಾಷೆ ನಮ್ಮ ದೇಶದ ಆಡಳಿತದಲ್ಲಿ ಸಹಾಯಕಭಾಷೆಯಾಗಿ ಸದ್ಯಃ ಅಷ್ಟೇ ಅಲ್ಲ, ೧೯೬೫ರ ನಂತರವೂ ಉಳಿಯುತ್ತದೆ. ನಮ್ಮ ಶಿಕ್ಷಣರಂಗದಲ್ಲಿಯೂ ಹೆಚ್ಚಿನ ಬದಲಾವಣೆಯಾಗಿಲ್ಲ. ಮೊದಲಿನಂತೆಯೇ ಇಂಗ್ಲಿಷ್ ಮಾಧ್ಯಮವುಳ್ಳ ಅನೇಕ ಶಾಲೆಗಳಿವೆ, ಅಂತಹ ಹಲವಾರು ಶಾಲೆಗಳು ತಲೆಯೆತ್ತುತ್ತಿವೆ, ಅವುಗಳನ್ನು ಪೋಷಿಸುವ ಉತ್ಸಾಹಿ ಪಾಲಕರೂ ಇದ್ದಾರೆ. ಕೆಲವು ಪ್ರಾಂತಗಳಲ್ಲಿ ಮತ್ತೆ ಮೊದಲಿನಂತೆ ಶಿಕ್ಷಣಕ್ರಮದ ಮೂರನೆಯ ವರುಷದಲ್ಲಿಯೇ ಇಂಗ್ಲಿಷ್‌ನ್ನು ಕಲಿಸಲು ಆರಂಭಿಸಿದ್ದಾರೆ. ದೇಶದಾದ್ಯಂತ ಇಂಗ್ಲಿಷನ್ನು ಕಲಿಸುವ ಶಿಕ್ಷಕರಿಗೆ ಹೆಚ್ಚಿನ ತರಬೇತಿಯನ್ನು ಕೊಡಲು ಅನೇಕ ಸಂಸ್ಥೆಗಳು ಹುಟ್ಟುತ್ತಿವೆ. ಇಂಗ್ಲೀಷಿನಲ್ಲಿಯೇ ಉತ್ತಮ ಗ್ರಂಥಗಳನ್ನು ಬರೆಯುವ ಲೇಖಕರು ಇಂದೂ ಇದ್ದಾರೆ.

ಹೀಗೆ ನಮ್ಮ ದೇಶದಲ್ಲಿಯ ಈಗಿನ ಪರಿಸ್ಥಿತಿಯು ತುಂಬ ವಿಚಿತ್ರವಾಗಿದೆ. ಇಂಗ್ಲಿಷ್ ಭಾಷೆಯ ಸ್ಥಾನವನ್ನು ಭಾರತೀಯ ಭಾಷೆ ಸ್ವೀಕರಿಸಬೇಕೆಂಬ ಮನಸ್ಸೇನೋ ಇದೆ. ಆದರೆ ವಸ್ತುತಃ ಪರಿಸ್ಥಿತಿಯಲ್ಲಿ ಹೆಚ್ಚಿನ ಬದಲಾವಣೆಯಿಲ್ಲ. ಹೀಗೇಕೆ ? ಎಂಬುದು ವಿಚಾರ ಮಾಡುವಂತಹ ಪ್ರಶ್ನೆ. ಅಂತೆಯೇ ಇಂಗ್ಲಿಷ್‌ಭಾಷೆಯ ಸ್ಥಾನಮಾನದ ಬಗ್ಗೆ ವಿಚಾರವಿನಿಮಯ ಮಾಡುವದು ಅತ್ಯಗತ್ಯವೆನಿಸಿದೆ.

ಈ ವಿಷಯವಾಗಿ ವಿಚಾರ ಮಾಡುವಾಗ ನಾವು ನಮ್ಮ ದೇಶದ ಪರಿಸ್ಥಿತಿಯ ಬಗ್ಗೆಯೂ ವಿಚಾರ ಮಾಡುವುದು ಅವಶ್ಯ. ಇಂಗ್ಲಿಷ್ ಭಾಷೆಯು ಸಮೃದ್ಧವಾದ ಭಾಷೆ, ಇಂದಿನ ಜಗತ್ತಿನಲ್ಲಿ ಮುಂದುವರಿದ ದೇಶಗಳ ಭಾಷೆ. ನಮ್ಮ ದೇಶವೋ ಹಿಂದುಳಿದ ದೇಶ. ನಮಗೆ ಪ್ರಗತಿ ಬೇಕಾದರೆ ಜಗತ್ತಿನ ಎಲ್ಲ ಮುಂದುವರಿದ ದೇಶಗಳ ನಿಕಟ ಸಂಪರ್ಕವು ಬೇಕೇ ಬೇಕು. ಇಂತಹ ಸಂಪರ್ಕವನ್ನು ಬೆಳೆಸುವದಕ್ಕಾಗಿ ಇಂಗ್ಲಿಷ್ ಭಾಷೆಯ ಜ್ಞಾನವು ತುಂಬ ಅಗತ್ಯವಾಗಿದೆ. ಫ್ರೆಂಚ್ ಅಥವಾ ರಶಿಯನ್ ಮುಂತಾದ ಯುರೋಪಿಯನ್ ಭಾಷೆಗಳನ್ನು ಕಲಿತರೂ ನಮ್ಮ ಉದ್ದೇಶವು ಸಫಲವಾಗುತ್ತದೆ. ಆದರೆ ಸುಮಾರು ನೂರು ವರುಷಕ್ಕೂ ಹೆಚ್ಚು ಕಾಲ ನಾವು ಇಂಗ್ಲಿಷ್ ಭಾಷೆಯನ್ನು ಬಳಸಿದ್ದೇವೆ. ಆದಕಾರಣ ಇದೇ ಭಾಷೆಯನ್ನೇ ನಾವು ಮುಂದೆಯೂ ಇಟ್ಟುಕೊಂಡರೆ ಒಳಿತೆಂಬುದರಲ್ಲಿ ಸಂದೇಹವಿಲ್ಲ. ಇನ್ನು ಪ್ರಶ್ನೆ ಏಳುವದೆಂದರೆ,— ಇಂಗ್ಲಿಷ್ ಭಾಷೆ ನಮ್ಮ ಶಿಕ್ಷಣದ ಮಾಧ್ಯಮವಾಗಬೇಕೇ ? ನಮ್ಮ ದೇಶದ ವ್ಯವಹಾರದ ಭಾಷೆಯೂ ಆಗಬೇಕೇ ? ಅಥವಾ ಇಂಗ್ಲಿಷ್ ಒಂದು ಅಂತಾರಾಷ್ಟ್ರೀಯ ಭಾಷೆ ಎಂದು ದ್ವಿತೀಯ ಇಲ್ಲವೆ ತೃತೀಯ ಭಾಷೆಯಾಗಿ ಉಳಿಯಬೇಕೆ ?

ಈ ಸಂದರ್ಭದಲ್ಲಿ ನೆನಪಿಡಬೇಕಾದ ಮತ್ತೊಂದು ಸಂಗತಿ ಇದು; ನಮ್ಮ ರಾಷ್ಟ್ರದ ಜೀವನದಲ್ಲಿ ಮೂರು ಸ್ತರಗಳಿವೆ. ಮೊದಲನೆಯದಾಗಿ, ನಮಗೆ ಸ್ವಾತಂತ್ರ್ಯವು ಲಭಿಸಿದೊಡನೆ ಎಲ್ಲ ಹೊಣೆ



“ಮಾವಯ್ಯ, ಪ್ರತಿಸಾರಿನೂ ಬಂದಾಗ, ‘ನೀನು ಸರಿಯಾಗಿ ಊಟ ಮಾಡ್ಲಿಲ್ಲ’ ಅಂತಿದ್ರಿ. ಅದಕ್ಕೆ ಈ ಸಲ ನಮ್ಮ ಗೆಳೆಯನ್ನ ಕರಕೊಂಡು ಬಂದೀನಿ”

ಗಳನ್ನೂ ನಾವೇ ಹೊರುವ ಪ್ರಸಂಗವು ಬಂದಿತು; ಕಾರಣ ಒಂದು ಬಗೆಯ ಇಕ್ಕಟ್ಟಿನಲ್ಲಿ ನಾವು ಸಿಕ್ಕಿಕೊಂಡೆವು. ಏಕೆಂದರೆ ಅಂತಹ ಹೊಣೆಗಾಗ್ಗಿ ನಾವು ದೀರ್ಘವಾದ ಸಿದ್ಧತೆಯನ್ನು ಮಾಡಿರಲಿಲ್ಲ. ಎರಡನೆಯದಾಗಿ ನಾವು ನಮ್ಮ ಸ್ವಂತ ಕಾಲಿನ ಮೇಲೆ ನಿಂತು ಪ್ರಗತಿಪಥದಲ್ಲಿ ಸಾಗುತ್ತಿದ್ದೇವೆ, ಸ್ವಯಂಪೂರ್ಣರಾಗಬಯಸುತ್ತೇವೆ. ಮೂರನೆಯದಾಗಿ ನಮ್ಮ ದೇಶದ ಸಂಸ್ಕೃತಿಯನ್ನು ಪರಕೀಯರಿಗೆ ತಿಳಿಸಿಕೊಡುವ ಪ್ರಯತ್ನವನ್ನೂ ಮಾಡುತ್ತಿದ್ದೇವೆ. ಈ ಮೂರೂ ಮಟ್ಟ ಅಥವಾ ಅವಸ್ಥೆಗಳಲ್ಲಿಯೂ ನಮಗೆ ಇಂಗ್ಲಿಷ್‌ಭಾಷೆಯ ಅಗತ್ಯವಿದೆ—ಆದರೆ ಬೇರೆ ಬೇರೆ ಉದ್ದೇಶಗಳಿಗಾಗಿ ಈ ಮೂರು ಅವಸ್ಥೆಗಳನ್ನೂ ಅವುಗಳಲ್ಲಿ ಇಂಗ್ಲಿಷ್ ಭಾಷೆ ನಮಗೆ ಏಕೆ ಬೇಕು ಎಂಬುದನ್ನೂ ನಾವು ಗಮನಿಸಿದಾಗ ಇಂಗ್ಲಿಷಿನ ಸ್ಥಾನದ ಬಗ್ಗೆ ನಮಗೆ ಚೆನ್ನಾಗಿ ಕಲ್ಪನೆ ಬರಬಹುದು.

ನಾವು ಸ್ವತಂತ್ರರಾದೊಡನೆ, ನಮ್ಮ ದೇಶದ ಎಲ್ಲ ಹೊಣೆಗಾರಿಕೆಗಳೂ ನಮ್ಮ ಮೇಲೆ ಬಂದುಬಿದ್ದವು. ಆದರೆ ಅವುಗಳಿಗಾಗಿ ನಾವು ಸಿದ್ಧತೆಯನ್ನು ಮಾಡಿರಲಿಲ್ಲ. ಅದ್ದರಿಂದ ಮೊದಲಿನ ಕೆಲ ವ್ಯವಸ್ಥೆಗಳನ್ನೇ ಇಟ್ಟುಕೊಂಡೆವು. ಅವುಗಳಲ್ಲಿ ಇಂಗ್ಲಿಷ್ ಭಾಷೆಯೂ ಒಂದು. ನಮ್ಮ ದೇಶದ ವ್ಯವಹಾರಕ್ಕಾಗಿ ಭಾರತೀಯ ಭಾಷೆಯೊಂದನ್ನು ಕೂಡಲೇ ಆಯ್ದುಕೊಳ್ಳುವುದು ಸಾಧ್ಯವಿರಲಿಲ್ಲ. ಅದ್ದರಿಂದ ಇಂಗ್ಲಿಷಿಗೆ ಮೊದಲಿದ್ದ ಸ್ಥಾನವನ್ನೇ ಕೊಟ್ಟೆವು. ಹಿಂದಿ ನಮ್ಮ ರಾಷ್ಟ್ರಭಾಷೆಯಾಗಬೇಕೆಂಬುದು ನಮ್ಮ ನಿರ್ಣಯವಾಗಿದೆ. ಆದರೆ ದಕ್ಷಿಣದಲ್ಲಿ ಇದಕ್ಕೆ ವಿರೋಧವಿದೆ. ಮೇಲಾಗಿ ಹಿಂದಿ ಭಾಷೆ ಸಹ ಇನ್ನೂ ಸಾಕಷ್ಟು ಬೆಳವಣಿಗೆಯನ್ನು ಹೊಂದಿಲ್ಲದಕಾರಣ ಈಗಲೇ ಬದಲಾವಣೆಯನ್ನು ಮಾಡುವುದು ಸಾಧ್ಯವೂ ಇಲ್ಲ. ಅದ್ದರಿಂದ ನಮ್ಮ ರಾಷ್ಟ್ರೀಯ ಭಾಷೆಯ ಬಗ್ಗೆ ನಮ್ಮಲ್ಲಿ ಏಕಮತವೊಂದು ಸಿದ್ಧವಾಗುವ ವರೆಗೆ ಇಂಗ್ಲಿಷಿಗೆ ಮೊದಲಿದ್ದ ಸ್ಥಾನ ಅನುಷಂಗಿಕವಾಗಿಯಾದರೂ ಉಳಿಯುತ್ತದೆ.

ಇನ್ನು ಶಿಕ್ಷಣರಂಗದತ್ತ ಹೊರಳಿದಾಗ, ಅಲ್ಲಿಯ ಮುಖ್ಯ ಸಮಸ್ಯೆಯೆಂದರೆ ಶಿಕ್ಷಣದ ಮಾಧ್ಯಮದ್ದು. ಇಂಗ್ಲಿಷ್ ಭಾಷೆ ಕೊನೆವರೆಗೆ ನಮ್ಮ ಶಿಕ್ಷಣದ ಮಾಧ್ಯಮವಾಗಲಾರದು. ಆದರೆ ಪ್ರಾಂತೀಯಭಾಷೆಯನ್ನು ಮಾಧ್ಯಮವನ್ನಾಗಿ ಈಗಲೇ ಮಾಡಿದರೆ, ಅದರಿಂದ ಅನೇಕ ಸಮಸ್ಯೆಗಳು ತಲೆಯೆತ್ತುತ್ತಿವೆ. ಮುಖ್ಯವಾಗಿ ಭಾರತದ ಶೈಕ್ಷಣಿಕ ಐಕ್ಯಕ್ಕೆ ತೊಡಕು ಬರಬಹುದು. ಹಿಂದಿ ದೇಶದಾದ್ಯಂತ ಶಿಕ್ಷಣದ ಮಾಧ್ಯಮವಾಗಲು ಪ್ರಾಂತೀಯ ಜನರ ವಿರೋಧವಿದೆ. ಅದರಂತೆಯೇ ಅಖಿಲ ಭಾರತ ಪರೀಕ್ಷೆಗಳ ( All India competitive examinations ) ಮಾಧ್ಯಮದ ಪ್ರಶ್ನೆಯು ದೊಡ್ಡ ಸಮಸ್ಯೆಯಾಗುತ್ತದೆ. ಇದೇ ರೀತಿಯಲ್ಲಿ ಅಖಿಲ ಭಾರತೀಯ ಸರ್ವಿಸಿನಲ್ಲಿದ್ದ ಅಧಿಕಾರಿಗಳ ಅಂತರ್-ಪ್ರಾಂತೀಯ ಜೀವನವೂ ಕಷ್ಟಮಯವಾಗುತ್ತದೆ. ಈ ಎಲ್ಲ ತೊಡಕುಗಳೊಳಗಿಂದ ಇದ್ದ ದಾರಿಯೆಂದರೆ ಇದು:

೧. ಪ್ರಾಂತೀಯ ಭಾಷೆ, ಇಂಗ್ಲಿಷ್ ಹಾಗೂ ಹಿಂದಿ ಈ ಮೂರೂ ಭಾಷೆಗಳನ್ನೂ ವಿದ್ಯಾರ್ಥಿಯು ಚೆನ್ನಾಗಿ ಕಲಿತಿರಬೇಕು. ಈ ಮೂರು ಭಾಷೆಗಳಲ್ಲಿ ಯಾವ ಭಾಷೆ ಮಾಧ್ಯಮವಾದರೂ ಜ್ಞಾನವನ್ನು ಗ್ರಹಿಸುವದಕ್ಕೆ ವಿದ್ಯಾರ್ಥಿಗೆ ತೊಂದರೆಯಾಗಿರಬಾರದು-

೨. ಕಾಲೇಜಿನ ಶಿಕ್ಷಣಕ್ರಮದಲ್ಲಿ ಇಂಗ್ಲಿಷ್‌ನ್ನು ಕಡ್ಡಾಯವಾಗಿ ಕಲಿಸಬೇಕು. ಅಂದರೆ ವಿದ್ಯಾರ್ಥಿಯು ಸ್ನಾತಕೋತ್ತರ ಶಿಕ್ಷಣದಲ್ಲಿ ಇಂಗ್ಲಿಷ್ ಭಾಷೆಯನ್ನು ಅವಶ್ಯಬಿದ್ದರೆ ಮಾಧ್ಯಮವನ್ನಾಗಿ ಸ್ವೀಕರಿಸಬಹುದು.

೩. ವಿವಿಧ ವಿಷಯಗಳ ಮೇಲಿ ಅತ್ಯುತ್ತಮ ಇಂಗ್ಲಿಷ್ ಗ್ರಂಥಗಳನ್ನು ನಮ್ಮ ಭಾಷೆಗಳಿಗೆ ಅನುವಾದಿಸಬೇಕು.

೪. ತಮ್ಮ ನೆರೆ-ಹೊರೆಯ ಪ್ರಾಂತಗಳ ಭಾಷೆಗಳನ್ನೂ ಪ್ರಾಧ್ಯಾಪಕರು ಕಲಿಯಬೇಕು. ಅಂದರೆ ಯುನಿವರ್ಸಿಟಿ ಪರೀಕ್ಷೆಗಳಲ್ಲಿ ಅಂತರ್‌ಪ್ರಾಂತೀಯ ಪರೀಕ್ಷಕರನ್ನು ನೇಮಿಸಬಹುದು.

ನಮ್ಮ ಶಿಕ್ಷಣದ ಮಾಧ್ಯಮವು ಯಾವ ಭಾಷೆಯಾಗಬೇಕು ಎಂಬ ಚರ್ಚಾಸ್ಪದ ವಿಷಯದಲ್ಲಿ ಒಮ್ಮೆಲೇ ನಿರ್ಣಯವಾಗುವದು ತುಂಬ ಕಠಿಣ. ಏಕೆಂದರೆ ಪ್ರತಿಯೊಂದು ಭಾಷೆಗೂ ಸಾಕಷ್ಟು ಸಮರ್ಥನವಿದೆ. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ಭಾರತವು ಹಾಯ್ದುಹೋಗುತ್ತಿದ್ದ ಸಂಧಿಕಾಲದ ಪರಿಸ್ಥಿತಿಯಲ್ಲಿ ಇಂತಹ ಪ್ರಶ್ನೆಗೆ ಉತ್ತರವು ಸಿಗುವದು ಕಠಿಣ. ಯಾವುದೇ ನಿರ್ಣಯವಾಗುವ ಮುನ್ನ ಸಾಕಷ್ಟು ಚರ್ಚೆ, ತರ್ಕ, ವಾದ-ವಿವಾದ ನಡೆಯುತ್ತವೆ. ಇವುಗಳ ಪರಿಣಾಮವಾಗಿ ಅಂತಿಮ ನಿರ್ಣಯವೊಂದು ಸಿದ್ಧವಾಗುತ್ತದೆ. ಇಂತಹ ವಾದ, ವಿವಾದ, ಚರ್ಚೆ ನಮ್ಮ ದೇಶದಲ್ಲಿ ಈಗ ನಡೆಯುತ್ತಿವೆ. ಅಂತಿಮ ನಿರ್ಣಯ ಪಾರ್ಲಿಮೆಂಟಿನಲ್ಲಿ ರೂಪುಗೊಂಡಿದೆ.

ನಮ್ಮ ದೇಶದ ಈಗಿನ ಜೀವನದ ಮತ್ತೊಂದು ಸ್ತರವೆಂದರೆ, ಸರ್ವತೋಮುಖ ಪ್ರಗತಿಗಾಗಿ ನಮ್ಮ ಸಂತತ ಪ್ರಯತ್ನ. ಎಲ್ಲ ಕ್ಷೇತ್ರಗಳಲ್ಲಿಯೂ ಸ್ವಯಂಪೂರ್ಣರಾಗಿ, ಜಗತ್ತಿನ ಎಲ್ಲ ಮುಂದುವರೆದ ರಾಷ್ಟ್ರಗಳ ಸರಿಸಮಾನರಾಗಿ ನಾವು ನಿಲ್ಲಬೇಕು, ಅದ್ದರಿಂದ ನಾವು ಮಾಡಬೇಕಾದ ಪ್ರಗತಿಗೆ ಮಿತಿಯೇ ಇಲ್ಲ. ಔದ್ಯೋಗೀಕರಣ, ವಿಜ್ಞಾನ, ತತ್ತ್ವಜ್ಞಾನ,ಸಾಹಿತ್ಯ ಎಲ್ಲದರಲ್ಲಿಯೂ ಮುಂದುವರಿಯಬೇಕು. ನಮ್ಮ ದೇಶದಲ್ಲಿ ಹೊಸ ಹೊಸ ಕಾರಖಾನೆಗಳನ್ನು ಕಟ್ಟುವ ಸಲುವಾಗಿ, ವಿದ್ಯುತ್ತನ್ನು, ಅಣುಶಕ್ತಿಯನ್ನು ತಯಾರಿಸುವುದಕ್ಕಾಗಿ, ನೀರಾವರಿ ಯೋಜನೆಗಳನ್ನು ಕೈಕೊಳ್ಳುವುದಕ್ಕಾಗಿ, ವಿಮಾನುಗಳನ್ನು, ಹಡಗುಗಳನ್ನು ತಯಾರಿಸಲು, ಇವುಗಳ ಉಗಮಸ್ಥಾನವಾಗಿದ್ದ ಪಾಶ್ಚಿಮಾತ್ಯದೇಶಗಳಿಂದ ನಾವು ಕಲಿಯುವದು ಅಗತ್ಯ. ಈ ಉದ್ದೇಶಕ್ಕಾಗಿ ನಾವು ಇಂಗ್ಲಿಷ್‌ಭಾಷೆಯನ್ನು ಚೆನ್ನಾಗಿ ಕಲಿಯಬೇಕು. ಅದ್ದರಿಂದ ಒಂದುರೀತಿಯಿಂದ ಸದ್ಯದ ಪರಿಸ್ಥಿತಿಯಲ್ಲಿ ನಮಗೆ ಇಂಗ್ಲಿಷ ಭಾಷೆಯ ಅಗತ್ಯವು ಮೊದಲಿನಗಿಂತ ಹೆಚ್ಚಿದೆ. ಈ ಸಂದರ್ಭದಲ್ಲಿ ಕೆಳಗಿನ ಮಾತುಗಳು ಗಮನಾರ್ಹವಾಗಿವೆ :—

(೧) ನಮ್ಮ ದೇಶದಲ್ಲಿಯ ಶಿಕ್ಷಣದ ಮಾಧ್ಯಮವು ಪ್ರಾಂತೀಯಭಾಷೆಯಾದರೂ ವಿಜ್ಞಾನ, ಕಾಯ್ದೆ, ವೈದ್ಯ ಶಾಸ್ತ್ರ, ಇಂಜಿನೀಯರಿಂಗ್ ಮುಂತಾದ ವಿಷಯಗಳನ್ನು ನಮ್ಮ ಭಾಷೆಗಳಲ್ಲಿ ಕಲಿಸುವದು ತುಂಬ ಕಠಿಣ.ಮೇಲಾಗಿ ಈ ವಿಷಯಗಳಲ್ಲಿಯ ಅತ್ಯುತ್ತಮ ಪುಸ್ತಕಗಳು ಇಂಗ್ಲಿಷಿನಲ್ಲಿಯೇ ಇರುತ್ತವೆ, ಹೊಸ ಹೊಸ ದೃಷ್ಟಿ ಅಲ್ಲಿ ಮೂಡುತ್ತಿದೆ. ಅದ್ದರಿಂದ ವಿದ್ಯಾರ್ಥಿಗಳು ಅವುಗಳನ್ನು ಓದದೆ ಗತ್ಯಂತರವಿಲ್ಲ.

(೨) ಮೇಲೆ ಹೇಳಿದ ಮಾತು ಸಾಹಿತ್ಯ, ತತ್ತ್ವಜ್ಞಾನ ಇವೇ ಮೊದಲಾದ ವಿಷಯಗಳಿಗೂ ಅನ್ವಯಿಸುತ್ತದೆ. ನಮ್ಮ ದೇಶದಲ್ಲಿ ಬೌದ್ಧಿಕಜಾಗ್ರತಿಯು ಯುರೋಪಿಯನ್ ದೇಶಗಳಲ್ಲಿದ್ದಷ್ಟು ಇರದಿದ್ದ ಕಾರಣ ನಾವು ಇಂಗ್ಲಿಷನ್ನು ಕಲಿತು

ಪಾಶ್ಚಿಮಾತ್ಯ ದೃಷ್ಟಿಕೋನಗಳನ್ನು ತಿಳಿದುಕೊಳ್ಳ ಬೇಕಾಗಿದೆ.

(೩) ಇಂಗ್ಲಿಷಭಾಷೆಯಲ್ಲಿ ನಮಗೆ ಜಗತ್ತಿನ ಸಮಗ್ರ ಜ್ಞಾನಭಾಂಡಾರವು ಸಿಕ್ಕುತ್ತದೆ. ರಶಿಯನ್, ಫ್ರೆಂಚ್ ಮುಂತಾದ ಎಲ್ಲ ಭಾಷೆಗಳಲ್ಲಿಯ ಉತ್ತಮ ಕೃತಿಗಳು ಇಂಗ್ಲಿಷಿನಲ್ಲಿ ನಿತ್ಯವೂ ಭಾಷಾಂತರವಾಗುತ್ತಿವೆ. ಆದ್ದರಿಂದ ಇಂಗ್ಲಿಷನ್ನು ಕಲಿತರೆ ಜಗತ್ತಿನಲ್ಲಿಯ ಎಂತಹ ಜ್ಞಾನವನ್ನೂ ನಮ್ಮದಾಗಿರಿಸಿಕೊಳ್ಳಬಲ್ಲೆವು. ನಮ್ಮ ಇಂಜನೀಯರರು, ಡಾಕ್ಟರರು ಇಂಗ್ಲಿಷನ್ನು ಕಲಿಯುವದರಿಂದ ತಮ್ಮ ತಮ್ಮ ಕ್ಷೇತ್ರಕ್ಕೆ ಸಂಬಂಧಪಟ್ಟ ಅತ್ಯುತ್ತಮ ಪುಸ್ತಕಗಳನ್ನು ಓದಿಕೊಳ್ಳಬಲ್ಲರು. ಮುಂದೆ ನಾವು ಇಂಗ್ಲಿಷಭಾಷೆಯ ಸಂಪರ್ಕವನ್ನು ಕಡಿದುಕೊಳ್ಳುವುದರ ಸಲುವಾಗಿಯಾದರೂ ಈಗ ಇಂಗ್ಲಿಷನ್ನು ಚೆನ್ನಾಗಿ ಕಲಿತು, ಸ್ವಯಂಪೂರ್ಣರಾಗಬೇಕಾಗಿದೆ.

ನಮ್ಮ ದೇಶದ ಪ್ರಗತಿಗಾಗಿ ಸಹಾಯವಾಗಬೇಕೆಂದು ಇಂದು ಇಂಗ್ಲಿಷಭಾಷೆಯನ್ನು ಕಲಿಯಬೇಕಾಗಿದೆ. ಈ ಉದ್ದೇಶವನ್ನು ಸಾಧಿಸಬೇಕಾದರೆ ನಮ್ಮ ಶಿಕ್ಷಣದ ಮಾಧ್ಯಮವು ಇಂಗ್ಲಿಷ ಆಗುವುದು ಅಗತ್ಯವಿಲ್ಲ. ಆದರೆ ನಮ್ಮ ಶಿಕ್ಷಣಕ್ರಮದಲ್ಲಿ ಇಂಗ್ಲಿಷಿಗೆ ಎರಡನೆಯ ಭಾಷೆಯ (Second Language) ಸ್ಥಾನವನ್ನು ಕೊಡಬೇಕು, ಮತ್ತು ನಾವು ಇಂಗ್ಲಿಷಭಾಷೆಯನ್ನು ಕಲಿಸುವ ರೀತಿಯಲ್ಲಿಯೂ ಬದಲಾವಣೆಯಾಗಬೇಕು. ಇದುವರೆಗೆ ನಮ್ಮ ಶಿಕ್ಷಣಕ್ರಮದಲ್ಲಿ ಇಂಗ್ಲಿಷಿಗೆ ಕೊಟ್ಟ ಸ್ಥಾನ ಹಾಗೂ ಅದನ್ನು ಕಲಿಸುವ ರೀತಿ ಇನ್ನು ಮುಂದೆ ಉಪಯುಕ್ತವಾಗಲಾರವು. ಇನ್ನು ಮುಂದೆ ಆಗಬೇಕಾದ ಬದಲಾವಣೆಗಳಿವು :—

(೧) ಇದುವರೆಗೆ ನಮ್ಮ ಕಾಲೇಜುಗಳಲ್ಲಿ ಹೆಚ್ಚಾಗಿ ಇಂಗ್ಲಿಷ ಸಾಹಿತ್ಯ, ಸಾಹಿತ್ಯಚರಿತ್ರೆ ಕಲಿಸುತ್ತಿದ್ದೆವು. ಇನ್ನು ಮುಂದೆ ಇಂಗ್ಲಿಷಭಾಷೆಯನ್ನು ಕಲಿಸಬೇಕು. ಇಂಗ್ಲಿಷಸಾಹಿತ್ಯವನ್ನು ವಿಶೇಷವಾಗಿ ಅಭ್ಯಸಿಸುವ ವಿದ್ಯಾರ್ಥಿಗೆ ಇಂಗ್ಲಿಷ ಭಾಷೆಯ ಉತ್ತಮ ಜ್ಞಾನವಿರಬೇಕು.

(೨) ಇಂಗ್ಲಿಷನ್ನು ಸ್ವೇಚ್ಛೆಯಿಂದ ವಿಶೇಷವಾಗಿ ಅಭ್ಯಾಸಮಾಡಿದ ವಿದ್ಯಾರ್ಥಿಗಳು ಸಂಶೋಧನೆ ಮಾಡಬಯಸಿದರೆ, ಇಂಗ್ಲಿಷ ಲೇಖಕರ ಮೇಲೆ ಸಂಶೋಧನೆಮಾಡುವುದರ ಬದಲು, ನಮ್ಮ ಭಾಷೆಗಳಲ್ಲಿಯ ಉತ್ತಮ ಕೃತಿಯೊಂದನ್ನು ಇಂಗ್ಲಿಷಿಗೆ ಅನುವಾದಿಸಿ, ಅದಕ್ಕೆ ವಿಮರ್ಶಾತ್ಮಕ ಮುನ್ನುಡಿಯೊಂದನ್ನು ಬರೆಯಬಹುದು. ಇಂತಹ ಕೃತಿಗೆ ಪಿಎಚ್. ಡಿ. ಪದವಿಯನ್ನು ಕೊಡಬಹುದು. ಈ ರೀತಿಯ ಕೆಲಸದಿಂದ ಪರದೇಶಗಳಲ್ಲಿಯೂ ನಮ್ಮ ಸಾಹಿತ್ಯದ ಬಗ್ಗೆ ಹೆಚ್ಚು ಆದರ, ಉತ್ಸುಕತೆ ಹುಟ್ಟಬಹುದು. ಇತ್ತೀಚೆಗೆ ಮಲೆಯಾಳಂ ಕಾದಂಬರಿಯೊಂದರ 'ಶೆಮ್ಮೀನ್'(Chemmeen) ಎಂಬ ಇಂಗ್ಲಿಷ ಭಾಷಾಂತರವು ಪರದೇಶಗಳಲ್ಲಿಯೂ ಖ್ಯಾತಿಯನ್ನು ಪಡೆದಿದೆ. ಈ ತರಹದ ಭಾಷಾಂತರಗಳು ತುಂಬ ಸ್ವಾಗತಾರ್ಹವಾಗಿವೆ.

(೩) ಸದ್ಯಃ ನಮ್ಮ ದೇಶದಲ್ಲಿ ಹಲವಾರು ಪಠ್ಯ ಪುಸ್ತಕಗಳು ಇಂಗ್ಲೀಷಿನಲ್ಲಿ ಅಚ್ಚಾಗುತ್ತಿವೆ. ಆದರೆ ಪಶ್ಚಿಮದಲ್ಲಿ ಉತ್ತಮ ಪಠ್ಯಪುಸ್ತಕಗಳು ಅಚ್ಚಾಗುತ್ತಿದ್ದರಿಂದ ನಾವು ಇಂಗ್ಲೀಷಿನಲ್ಲಿ ಬರೆದರೆ ಅವು ಕೇವಲ 'guides' ಆಗಿ ಪರಿಣಮಿಸುತ್ತವೆ. ಹೀಗೆ ಮಾಡುವ ಬದಲು ಮೂಲ ಇಂಗ್ಲಿಷ್ ಗ್ರಂಥಗಳನ್ನು ನಮ್ಮ ವಿದ್ಯಾರ್ಥಿಗಳಿಗೆ ಸಂಕ್ಷಿಪ್ತವಾಗಿ ಹಾಗೂ ಸುಲಭವಾದ ಇಂಗ್ಲೀಷಿನಲ್ಲಿ ಒದಗಿಸಿದರೆ ಹೆಚ್ಚು ಒಳಿತಾಗುತ್ತದೆ. ಎಂಡನೆಯದಾಗಿ ನಮ್ಮ ಭಾಷೆಗಳಲ್ಲಿ ಪಠ್ಯಪುಸ್ತಕಗಳನ್ನು ಹೆಚ್ಚು ಹೆಚ್ಚಾಗಿ ಬರೆದರೆ ಅವು ಲಾಭದಾಯಕವಾಗುತ್ತವೆ.

(೪) ನಮ್ಮ ದೇಶದ ಇತಿಹಾಸ, ಅರ್ಥಶಾಸ್ತ್ರ, ತತ್ತ್ವಜ್ಞಾನ, ರಾಜಕಾರಣ ಮುಂತಾದ ವಿಷಯಗಳ ಮೇಲೆ ನಮ್ಮ ಲೇಖಕರು, ವಿಚಾರವಂತರು, ಇಂಗ್ಲೀಷಿನಲ್ಲಿ ಬರೆದರೆ ಅದು ತುಂಬ ಒಳಿತು. ಡಾ. ರಾಧಾಕೃಷ್ಣನ್ ಹಾಗೂ ಪಂಡಿತ ನೆಹರೂರ ಕೃತಿಗಳು ಇದಕ್ಕೆ ಉತ್ತಮ ನಿದರ್ಶನಗಳು. ಪಶ್ಚಿಮದ ರಾಜಕಾರಣದ ಮೇಲಾಗಲಿ, ಇತಿಹಾಸದ ಮೇಲಾಗಲಿ ನಾವು ಬರೆಯಬಾರದೆಂದಲ್ಲ. ನಮಗೆ ಅಂತಹ ಪ್ರತಿಭೆಯಿದ್ದರೆ ಹಾಗೂ ಮಾಡಬಹುದು. ಆದರೆ ಸಾಮಾನ್ಯವಾಗಿ ನಮ್ಮ ದೇಶದ ಬಗ್ಗೆ ನಾವು ಬರೆದುಕೊಂಡ ಇಂಗ್ಲೀಷ್ ಕೃತಿಗಳಿಗೆ ಹೆಚ್ಚು ಬೆಲೆಯಿದೆ.

(೫) ನಮ್ಮ ಸಾಹಿತ್ಯದಲ್ಲಿ ಇಂಗ್ಲೀಷಿನ ಉತ್ತಮ ಕೃತಿಗಳು ಭಾಷಾಂತರವಾಗಬೇಕು; ಭಾರತೀಯ ಕೃತಿಗಳ ಅನುವಾದವು ಇಂಗ್ಲೀಷಿಗಾಗಬೇಕು. ಇನ್ನು ಕೆಲವರ ಪ್ರತಿಭೆಯು ಇಂಗ್ಲೀಷಿನಲ್ಲಿಯೂ ಉತ್ತಮವಾಗಿ ವ್ಯಕ್ತವಾಗಬಲ್ಲದು. ಅಂಥವರು

ನಮ್ಮ ಜನಜೀವನವನ್ನು, ಸಂಸ್ಕೃತಿಯನ್ನು ಇಂಗ್ಲಿಷಿನಲ್ಲಿಯೇ ಚಿತ್ರಿಸಬಹುದು. ಶ್ರೀ. ರಾಜಾರಾವ್ ಶ್ರೀ ಮುಲ್ಕರಾಜ ಆನಂದ, ಶ್ರೀ. ಆರ್. ಕೆ. ನಾರಾಯಣ ಮುಂತಾದವರು ಇದಕ್ಕೆ ಒಳ್ಳೆಯ ಉದಾಹರಣೆಯಾಗಿದ್ದಾರೆ.

ಮೇಲೆ ಸೂಚಿಸಿದ ಬದಲಾವಣೆಗಳನ್ನು ಮಾಡಿದರೆ ನಮ್ಮ ದೇಶದಲ್ಲಿ ಇಂಗ್ಲಿಷ್ ಭಾಷೆಗೆ ಸಲ್ಲದ ಮಹತ್ವವು ದೊರಕದೆ, ನಿಜವಾದ, ಅರ್ಥಪೂರ್ಣವಾದ ಹಾಗೂ ಯೋಗ್ಯವಾದ ಸ್ಥಾನವು ದೊರಕುತ್ತದೆ. ಇಂಗ್ಲಿಷ್ ಭಾಷೆಯ ಅಭ್ಯಾಸವೂ ಚೆನ್ನಾಗಿ ಸಾಗಿ, ಅದು ಉಪಯುಕ್ತವೂ ಆಗುತ್ತದೆ. ಮೇಲಾಗಿ ಇಂಗ್ಲಿಷ್ ಭಾಷೆಯ ಹೊರೆಯನ್ನು ನಾವು ಅನಿವಾರ್ಯವಾಗಿ ಹೊಕ್ಕಂತೆ ಆಗದೆ, ಅದನ್ನು ನಮ್ಮ ಅನುಕೂಲಕ್ಕಾಗಿ ಬಳಸಿ ಕೊಂಡಂತಾಗುತ್ತದೆ.

ಕೊನೆಯದಾಗಿ ನಮ್ಮ ದೇಶವು ಔದ್ಯೋಗಿಕರಣ ಇತ್ಯಾದಿಗಳಲ್ಲಿ ಸ್ವಯಂಪೂರ್ಣವಾದಾಗ, ಉನ್ನತಾವಸ್ಥೆಯನ್ನು ಮುಟ್ಟಿದಾಗ, ನಮ್ಮ ಸಂಸ್ಕೃತಿಯನ್ನು ಪರಕೀಯರಿಗೆ ತಿಳಿಸಿಕೊಡುವುದಕ್ಕಾಗಿ ನಾವು ಇಂಗ್ಲಿಷ್ ಭಾಷೆಯನ್ನು ಕಲಿಯಬೇಕು. ಎಲ್ಲ ಅಂತಾರಾಷ್ಟ್ರೀಯ ಸಭೆಗಳು, ವ್ಯವಹಾರಗಳು ಇಂಗ್ಲಿಷ್ ಅಥವಾ ಫ್ರೆಂಚ್ ಭಾಷೆಗಳಲ್ಲಿ ನಡೆಯುತ್ತಿದ್ದ ಕಾರಣ, ನಮ್ಮ ದೇಶದ ರಾಯಭಾರಿಗಳಿಗೆ, ಮುತ್ಸದ್ದಿಗಳಿಗೆ ಇಂಗ್ಲಿಷನ್ನು ಸೊಗಸಾಗಿ ಬರೆಯಲು, ನಯವಾಗಿ ಮಾತನಾಡಲು ಬರುವುದು ಅತ್ಯಗತ್ಯ. ಆಗ ಇಂಗ್ಲಿಷ್ ಭಾಷೆಯನ್ನು ನಾವು ಅನಿವಾರ್ಯವಾಗಿ ಕಲಿಯುವ ಪ್ರಸಂಗವಿರುವದಿಲ್ಲ. ನಮ್ಮ ಪ್ರಗತಿಗಾಗಿ, ಎರಡನೆಯ ಭಾಷೆಯ ಸ್ಥಾನವನ್ನೂ ಕೊಡುವ ಅಗತ್ಯವಿರುವದಿಲ್ಲ. ಆದರೆ ಅದೊಂದು ಜಾಗತಿಕ ಭಾಷೆಯೆಂದು ಅಂತಾರಾಷ್ಟ್ರೀಯ ವ್ಯವಹಾರಕ್ಕಾಗಿ ಕಲಿಯುವೆವು. ಕೆಲವು ವ್ಯಕ್ತಿಗಳು ಸ್ವೇಚ್ಛೆಯಿಂದ ಇಂಗ್ಲಿಷನ್ನು ಸ್ವಂತ ಪ್ರೀತಿಗಾಗಿ ಕಲಿಯಬಹುದು. ನಮ್ಮ ದೇಶದ ಸರ್ವಸಾಮಾನ್ಯರಿಗೆ ಇಂಗ್ಲಿಷಿನ ಸಾಧಾರಣ ಜ್ಞಾನವಿದ್ದು, ಎಲ್ಲ ಕ್ಷೇತ್ರಗಳಲ್ಲಿಯ ಮುಂದಾಳುಗಳಿಗೆ ಉತ್ತಮ ಜ್ಞಾನವಿದ್ದರೆ ಸಾಕು.

ಇಂಗ್ಲಿಷ್ ಭಾಷೆಯ ಸ್ಥಾನಮಾನವನ್ನು ಕುರಿತು ವಿಚಾರ ಮಾಡುವಾಗ ಏಳುವ ಗೊಂದಲಕ್ಕೆ ಮುಖ್ಯ ಕಾರಣವೆಂದರೆ,— ಮೇಲೆ ವಿವರಿಸಿದ ನಮ್ಮ ರಾಷ್ಟ್ರದ ಜೀವನದಲ್ಲಿಯ ಮೂರು ಅವಸ್ಥೆಗಳು ಏಕಕಾಲಕ್ಕೇ ರಾಷ್ಟ್ರಜೀವನದಲ್ಲಿ ಕಾಣಿಸಿಕೊಂಡಿವೆ. ಸ್ವಾತಂತ್ರ್ಯೋತ್ತರ ಬಿಕ್ಕಟ್ಟಿನ ಪರಿಸ್ಥಿತಿಯು ಒಂದೆಡೆಗೆ ಇದೆ. ಮತ್ತೊಂದೆಡೆಗೆ ನಾವು ಪ್ರಗತಿಪಥದಲ್ಲಿ ಸಾಗಿದ್ದೇವೆ. ನಮ್ಮ ಸಂಸ್ಕೃತಿಯನ್ನು ಪರಕೀಯರಿಗೆ ತಿಳಿಸಿಯೂ ಕೊಡುತ್ತಿದ್ದೇವೆ. ಆದ್ದರಿಂದ ಯಾವ ಉದ್ದೇಶಕ್ಕಾಗಿ ನಾವು ಇಂಗ್ಲಿಷ್ ಭಾಷೆಯನ್ನು ಕಲಿಯಬೇಕೆಂಬ ಪ್ರಶ್ನೆ ಈ ಮೂರು ಸೆಳವುಗಳಲ್ಲಿ ಸಿಕ್ಕು ಸಂದಿಗ್ಧವಾಗಿದೆ. ಅಂತೆಯೇ ಈ ಮೂರು ಸ್ತರಗಳನ್ನು ಬಿಡಿಸಿನೋಡುವುದು ಅಗತ್ಯ.

ಒಟ್ಟಿನಲ್ಲಿ ನೋಡಿದರೆ ಇಂಗ್ಲಿಷ್ ಭಾಷೆಯು ನಮ್ಮ ದೇಶದಲ್ಲಿ ಆಡಳಿತದ ಸಹಾಯಕ ಭಾಷೆಯಾಗಿ ಮತ್ತು ಉಚ್ಚಶಿಕ್ಷಣದ ಮಾಧ್ಯಮವಾಗಿ ಇನ್ನೂ ಹಲವಾರು ವರುಷಗಳವರೆಗೆ ಉಳಿಯುವ ಲಕ್ಷಣವಿದೆ. ಈ ವಿಷಯದಲ್ಲಿ ಏಕಮತವೊಂದು ಸಿದ್ಧವಾಗುವವರೆಗೆ ಇದು ಅನಿವಾರ್ಯವೇ ಸರಿ. ಆದರೆ ಅಂತಹ ಅಭಿಪ್ರಾಯವೊಂದು ಒಮ್ಮೆಲೇ ಸಿದ್ಧವಾಗುವದು ಸಾಧ್ಯವಿಲ್ಲ. ಇಂದು ನಡೆದ ವಾದವಿವಾದ, ವಿಚಾರ-ವಿನಿಮಯ ಇವುಗಳ ಪರಿಣಾಮವಾಗಿ ಏಕಮತವೊಂದು ನಿರ್ಮಾಣವಾಗುತ್ತದೆ. ವಸ್ತುಸ್ಥಿತಿ ಹೀಗಿರುವಾಗ ನಾವು ಇಂಗ್ಲೀಷ್ ಭಾಷೆಗೆ ದ್ವಿತೀಯ ಸ್ಥಾನವನ್ನು ಕೊಟ್ಟು ಚೆನ್ನಾಗಿ ಅಭ್ಯಾಸ ಮಾಡಬೇಕು. ಮುಂದೆಯೂ ನಮ್ಮ ದೇಶದ ಸಂಸ್ಕೃತಿಯನ್ನು ಪರದೇಶದಲ್ಲಿ ಬಿತ್ತರಿಸಲು ಜಾಗತಿಕ ಭಾಷೆಯಾದ ಇಂಗ್ಲೀಷನ್ನು ನಾವು ಕಲಿಯದೆ ಗತ್ಯಂತರವೇ ಇಲ್ಲ. ಎಲ್ಲ ಮುಂದುವರಿದ ರಾಷ್ಟ್ರಗಳ ಕೂಟದಲ್ಲಿ ಭಾರತಕ್ಕೆ ಗಣ್ಯವಾದ ಸ್ಥಾನವು ದೊರೆತಾಗ, ನಾವು ಇಂಗ್ಲಿಷ್‌ನ್ನು ಕಲಿತಂತೆ, ಉಳಿದ ಜನ ಹಿಂದಿ ಅಥವಾ ಕನ್ನಡವನ್ನು ಕಲಿಯಬಹುದು.




# ನಮ್ಮ ಶಿಕ್ಷಣದ ಮಟ್ಟ ಕಡಿಮೆಯಾಗಿದೆಯೇ?

## ನಮ್ಮ ಶಿಕ್ಷಣ ಮಟ್ಟ ಕಡಿಮೆಯಾಗಿದೆ

ಲೇಖಕರು :
ಶ್ರೀ ಪಿ. ಕೋದಂಡರಾವ
ಬೆಂಗಳೂರು

ಭಾರತವು ಸ್ವತಂತ್ರವಾದ ನಂತರ ಶಿಕ್ಷಣದ ಮಟ್ಟವು ಎಲ್ಲ ಘಟ್ಟಗಳಲ್ಲಿ ಸಾಕಷ್ಟು ಕಡಿಮೆಯಾಗಿದೆಯೆಂಬಲ್ಲಿ ಸಂದೇಹವಿಲ್ಲ. ಅದಕ್ಕೆ ಅನೇಕ ಕಾರಣಗಳು ಇವೆ. ಜನಸಂಖ್ಯೆಯಲ್ಲಿ ತುಂಬ ಹೆಚ್ಚಳವಾಗಿದ್ದು ತತ್ಪರಿಣಾಮವಾಗಿ ಶಾಲೆಗೆ ಹೋಗುವವರ ಸಂಖ್ಯೆ ಕೂಡ ಹೆಚ್ಚಿದೆ ಆದರೆ ಅದಕ್ಕೆ ತಕ್ಕಂತೆ ಶಾಲೆಗಳು ಹೆಚ್ಚಿಲ್ಲ; ಶಿಕ್ಷಕರ ಸಂಖ್ಯೆ ಬೆಳೆದಿಲ್ಲ; ವಾಚನಾಲಯಗಳು, ಪ್ರಯೋಗಮಂದಿರಗಳು ಹೆಚ್ಚಾಗಿರುವದಿಲ್ಲ. ಹೀಗಾಗಿ ಪ್ರತಿಯೊಂದು ವರ್ಗದಲ್ಲಿಯ ವಿದ್ಯಾರ್ಥಿಗಳ ಸಂಖ್ಯೆಯು ಪರಮಾವಧಿ ಮಿತಿಯನ್ನು ಮೀರಿ ಬೆಳೆದಿರುವುದು.

ಈಗ ಶಿಕ್ಷಣವು ಮಂತ್ರಿಗಳ ನಿಯಂತ್ರಣದಲ್ಲಿರುವುದು. ಕೆಲವೊಂದು ಅಪೂರ್ವ ಅಪವಾದಗಳ ಹೊರತಾಗಿ ಇವರು ಜಾತೀಯ ರಾಜಕಾರಣಿಗಳಾಗಿರುವರಲ್ಲದೆ ಶಿಕ್ಷಣತಜ್ಞರಿರುವದಿಲ್ಲ. ಅವರು ತಮ್ಮ ಮತದಾರರನ್ನು ತಣಿಸಿ ತಮಗೆ ಮತ್ತು ತಮ್ಮ ಪಕ್ಷಕ್ಕೆ ಮತಗಳನ್ನು ದೊರಕಿಸಲು ಹೆಚ್ಚು ಉತ್ಸುಕರಿರುವರು. ಇದು ಸಹ ಶಿಕ್ಷಣಮಟ್ಟವನ್ನು ಬಹುಮಟ್ಟಿಗೆ ತಗ್ಗಿಸಲು ಕಾರಣವಾಗಿದೆ. ಅನೇಕ ಶಿಕ್ಷಣಮಂತ್ರಿಗಳಿಗೆ ಸಧ್ಯದ ಪದ್ಧತಿಯನ್ನು ರೂಪಿಸಿ ತಮ್ಮ ಇಚ್ಛೆಗನುಸಾರ ಅದರಲ್ಲಿ ಕ್ರಾಂತಿ ಮಾಡಬೇಕೆಂಬ ಆಕಾಂಕ್ಷೆ ಇರುವುದು. ಸಧ್ಯದ ಪದ್ಧತಿಯಲ್ಲಿಯ ದಕ್ಷತೆಯನ್ನು ಸುಧಾರಿಸುವ ಬದಲು, ಅತ್ಯಾಶ್ಚರ್ಯಕರವಾದ ಹೊಸ ಹೊಸ ಪದ್ಧತಿಗಳನ್ನು ಅನುಷ್ಠಾನದಲ್ಲಿ ತರಲು ಅವರು ಬಯಸುತ್ತಿರುವರು.

ಬೋಧಕ ಭಾಷೆಯಾಗಿರುವ ಇಂಗ್ಲಿಷಿನ ಮಟ್ಟ ತಗ್ಗಿರುವುದು, ಪ್ರಾದೇಶಿಕ ಭಾಷೆಗಳ ಶೀಘ್ರಗತಿಯ ಅಭಿವೃದ್ಧಿ ಸಾಧಿಸುವ ಇಚ್ಛೆ, ಇದಕ್ಕೂ ಹೆಚ್ಚಾಗಿ ದಿಲ್ಲಿಯಲ್ಲಿಯ ತಮ್ಮ ಹಿಂದಿ ಪ್ರಭುಗಳನ್ನು ರಾಜಕೀಯ ಹಾಗೂ ಆರ್ಥಿಕ ಕಾರಣಗಳಿಗಾಗಿ ಸಂತೋಷಪಡಿಸಲು ಹಿಂದಿಯನ್ನು ಹೇರುವ ಆತುರ, ಇವು ಶಿಕ್ಷಣಮಟ್ಟ ಕಡಿಮೆಯಾಗಲು ಬಹುಮಟ್ಟಿಗೆ ಕಾರಣಗಳಾಗಿವೆ. ಪ್ರತಿಯೊಂದು ವಿಷಯದ ಬಗೆಗೆ ಈಗ ಇಂಗ್ಲೀಷಿನಲ್ಲಿ ಮಾತ್ರ ಲಭ್ಯವಿರುವ ವಿಶಾಲ ಸಾಹಿತ್ಯವನ್ನು ತುಂಬಾ ಓದಿಕೊಳ್ಳುವ ಪ್ರವೃತ್ತಿ ಇಂದಿನ ವಿದ್ಯಾರ್ಥಿ ಮತ್ತು ಶಿಕ್ಷಕರಲ್ಲಿ ಕಡಿಮೆಯಾಗುತ್ತಿರುವುದು. ಶಿಕ್ಷಕರು ಮತ್ತು ವಿದ್ಯಾರ್ಥಿಗಳು, ಅದೇ ರೀತಿ ಮಂತ್ರಿಗಳು ಕೂಪಮಂಡೂಕದಂತಿರುವರು. ಈ ವಿಶಾಲ ಆಗಸದ ಅತಿ ಸ್ವಲ್ಪವನ್ನು ಮಾತ್ರ ಅವರು ಕಾಣುವರು.

ಪ್ರಜಾಪ್ರಭುತ್ವದಲ್ಲಿ ಜನಪ್ರಿಯ ಮಂತ್ರಿಗಳು ಉಚ್ಚಶಿಕ್ಷಣದ ಬಗೆಗೆ ವಿದ್ಯಾರ್ಥಿಗಳ ಒತ್ತಾಯವನ್ನು ನಿರೋಧಿಸಲಾರರು; ಹೆಚ್ಚಿನ ಸಂಖ್ಯೆಯ ವಿದ್ಯಾರ್ಥಿಗಳಿಗೆ ಶಿಕ್ಷಣದ ಮಟ್ಟ ಕಡಿಮೆ ಮಾಡದೆ ಶಿಕ್ಷಣವೀಯುವಂತೆ ಹಣ ದೊರಕಿಸುವುದು ಕಠಿಣವಿದೆ ಎಂದು ಹೇಳಲಾಗುತ್ತಿದೆ. ಪ್ರಜಾಪ್ರಭುತ್ವದ ದೃಷ್ಟಿಯಿಂದಲೂ ಹದಿನಾಲ್ಕು ವರುಷಗಳ ವರೆಗೆ ಪ್ರಾಥಮಿಕ ಶಿಕ್ಷಣವು ವ್ಯಾಪಕವಾಗಿದ್ದು ಕಡ್ಡಾಯದ್ದಾಗಿರುವುದು, ಪುಕ್ಕಟೆಯಾಗಿರುವುದು ಇಷ್ಟವಾಗಿರುವದಾದರೂ ಎಲ್ಲ ಬಗೆಯ ಉಚ್ಚ ಶಿಕ್ಷಣವು ಸಮರ್ಥರು ಮತ್ತು ದಕ್ಷರಿಗೆ ಮಾತ್ರ ಸೀಮಿತಗೊಳ್ಳುವುದು ಇಷ್ಟವಾಗಿದೆ. ವಿದ್ಯಾರ್ಥಿಗಳು ಅತಿ ದೊಡ್ಡ ಪ್ರಮಾಣದಲ್ಲಿ ನಪಾಸಾಗುವದು ನಮ್ಮ ಶಿಕ್ಷಣ ಪದ್ಧತಿಯ ಒಂದು ದೊಡ್ಡ ದುರಂತವಾಗಿರುವದು. ಪ್ರತಿಯೊಬ್ಬ ವಿದ್ಯಾರ್ಥಿಗೆ ಪ್ರಾಥಮಿಕ ಶಿಕ್ಷಣದಿಂದ ವಿಶ್ವವಿದ್ಯಾಲಯ ಶಿಕ್ಷಣದ ವರೆಗೆ ಎಲ್ಲ ಘಟ್ಟಗಳಿಗಾಗಿ ಸರಕಾರವು ಮಾಡುವ ವೆಚ್ಚವು ಸಾಕಷ್ಟು ದೊಡ್ಡದಿರುವುದು. ಇದರಲ್ಲಿ ಬಹುಭಾಗವನ್ನು ನಮ್ಮ ಪ್ರಜಾಪ್ರಭುತ್ವದಲ್ಲಿ ದೊಡ್ಡ ಭಾಗವಾಗಿರುವ ಅತಿ ಬಡವರಿಂದ ಕರಗಳ ರೂಪದಲ್ಲಿ ಸಂಗ್ರಹಿಸಲಾಗಿರುವುದು. ಕರ ಕೊಡುವವರಲ್ಲಿ ಬಹುಸಂಖ್ಯಾಕರು ಬಡವರಿದ್ದು, ತಾವು ಕರ ಕೊಡುವ ಹಣವು ಅಧಿಕ ಸಂಖ್ಯೆಯಲ್ಲಿ ಅನುತ್ತೀರ್ಣರಾಗುವ ವಿದ್ಯಾರ್ಥಿಗಳಿಗೆ ಶಿಕ್ಷಣವೀಯುವದಕ್ಕಾಗಿ ನಿರರ್ಥಕವಾಗುತ್ತಿರುವದನ್ನು ನಿರೋಧಿಸಲು ಸಂಘಟಿತರಾಗಿರುವದಿಲ್ಲ. ಇದರ ಪ್ರಯೋಜನ ತೆಗೆದುಕೊಳ್ಳುವುದು ಕೂಡ ಪ್ರಜಾಸತ್ತಾತ್ಮಕವಾದುದಲ್ಲ. ಪ್ರತಿಯೊಬ್ಬ ವಿದ್ಯಾರ್ಥಿಯ ಸಾಮರ್ಥ್ಯ, ಶಿಕ್ಷಕರ ಸಂಖ್ಯೆ, ಉಪಕರಣಗಳು ಶಿಕ್ಷಣದ ಮಟ್ಟವನ್ನು ಏರಿಸದಿದ್ದರೂ ಇದ್ದುದನ್ನು ಕಾಪಾಡಿಕೊಳ್ಳುವ ರೀತಿಯಲ್ಲಿರುವದನ್ನುಲಕ್ಷಿಸಿ ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶ ಕೊಡಬೇಕು. ಹಲವಾರು ವರುಷಗಳ ವರೆಗೆ ಶಾಲೆಗೆ ಹೋಗಿ ಅನುತ್ತೀರ್ಣರಾಗಿ ಹಣದ ಅಪವ್ಯಯವಾಗುವುದನ್ನು ಮತ್ತು ಸ್ವತಃ ವಿದ್ಯಾರ್ಥಿಗಳಿಗೆ ಕ್ಲೇಶವಾಗುವದನ್ನು ತಪ್ಪಿಸಲು ಪ್ರಾರಂಭದಲ್ಲಿಯೇ ಇಂಥ ಕೆಲವರಿಗೆ ಪ್ರವೇಶ ನಿರಾಕರಿಸುವುದು ತುಂಬ ಸೂಕ್ತವಾದುದು. ಆದರೆ ಶಿಕ್ಷಣಮಂತ್ರಿಗಳು ಮತ್ತು ಸರಕಾರ ಕೇವಲ ಮತಗಳು ಮತ್ತು ಜಾತೀಯ ಪ್ರಾಶಸ್ತ್ಯದ ಬಗ್ಗೆ ಮಾತ್ರ ವಿಚಾರಿಸುತ್ತಿರುವವರೆಗೆ ತಮ್ಮ ಸ್ವಾರ್ಥ ಸಾಧನೆಗಾಗಿ ಶಿಕ್ಷಣದ ಬಲಿ ತೆಗೆದುಕೊಳ್ಳುವರು.

---

ನಮ್ಮ ಶಿಕ್ಷಣದ ಮಟ್ಟ ಇಂದು ಇಳಿಮುಖವಾಗಿದೆ. ಅದು ದಿನದಿನಕ್ಕೆ ಕಡಿಮೆಯಾಗುತ್ತಿದೆ ಎಂಬ ಮಾತು ಇಂದು ಸಾಮಾನ್ಯವಾಗಿ ಕೇಳಿಬರುತ್ತಿದೆ. ಶಿಕ್ಷಣವು ಜನಜೀವಾಳದ ವಿಷಯ, ನಾಳಿನ ನಾಗರಿಕನನ್ನು ಸಿದ್ಧಪಡಿಸಬೇಕಾದ ಈ ರಂಗದ ಮಟ್ಟ ನಿಜವಾಗಿಯೂ ಇಳಿಮುಖವಾಗಿದೆಯೆ? ಇದು ವಿಚಾರಣೀಯವಾದ ಅಂಶವಾಗಿದೆ. ಅದಕ್ಕಾಗಿ ಇಲ್ಲಿ ಶಿಕ್ಷಣತಜ್ಞರ, ಶಿಕ್ಷಕರ ಅಭಿಪ್ರಾಯವೊಳಗೊಂಡ ವಿಚಾರಸಂಕಿರಣವೊಂದನ್ನು ಏರ್ಪಡಿಸಿದ್ದೇವೆ. ಈ ಸಂದರ್ಭದಲ್ಲಿ ಅದು ಶಿಕ್ಷಣ, ಶಿಕ್ಷಣಮಟ್ಟದ ಹಲವಾರು ಪ್ರಶ್ನೆಗಳ ಮೇಲೆ ಬೆಳಕು ಕೆಡವುವದೆಂದು ಆಶಿಸಿದ್ದೇವೆ

---

# ಇಂದಿನ ಶಿಕ್ಷಣಮಟ್ಟ ನಿಜವಾಗಿಯೂ ಇಳಿಮುಖವಾಗುತ್ತಿಲ್ಲ

ಶಿಕ್ಷಣ ತಜ್ಞರಾಗಲಿ ಅಥವಾ ಉಳಿದವರಾಗಲಿ ನಮ್ಮ ದೇಶದ ಶೈಕ್ಷಣಿಕ ಪರಿಸ್ಥಿತಿಯನ್ನು ಕುರಿತು ಭಾಷಣ ಮಾಡುತ್ತಿರುವವರ ವರದಿಯನ್ನು ನಾವು ದಿನವೂ ಪತ್ರಿಕೆಗಳಲ್ಲಿ ನೋಡುತ್ತೇವೆ. ಸಾರ್ವಜನಿಕ ಭಾಷಣದಲ್ಲಿ 'ಶಿಕ್ಷಣ'ವನ್ನು ಕುರಿತು ಮಾತನಾಡುವದು ತೀರ ಸಾಮಾನ್ಯವಾಗಿ ಬಿಟ್ಟಿದೆ. ಯಾಕಂದರೆ ಭಾಷಣಕಾರ ತನ್ನ ಎಳೆ ವಯಸ್ಸಿನಲ್ಲಿ ಸ್ವಲ್ಪವಾದರೂ ಶಿಕ್ಷಣ ಪಡೆದೇ ಇರುತ್ತಾನೆ. ಅದೇ ಬಂಡವಾಳದ ಮೇಲೆ ಅವನು ಇಂದಿನ ಶೈಕ್ಷಣಿಕ ಸಮಸ್ಯೆಗಳ ಮೇಲೆ ಅಧಿಕಾರಯುತವಾದ ಅಭಿಪ್ರಾಯ ನೀಡಲು ಹಿಂದೆಗೆಯುವದಿಲ್ಲ. ಇಂದಿನ ಶೈಕ್ಷಣಿಕ ಮಟ್ಟದ ಬಗ್ಗೆ ಅವನ ಅಬಿಪ್ರಾಯವಾದರೂ ಎಂಥದು? ಈಗಿನಕ್ಕಿಂತ ತನ್ನ ಕಾಲದಲ್ಲಿ ಶಿಕ್ಷಣ ಮೇಲ್ತರದ್ದಾಗಿತ್ತೆಂದು ಅವನು ನಂಬುವದರಲ್ಲಿ ಸಂಶಯವೇ ಇಲ್ಲ. ದಿನದಿನವೂ ಶಿಕ್ಷಣಮಟ್ಟ ಇಳಿಮುಖವಾಗುತ್ತಿದೆ ಎಂಬ ದೃಢಾಭಿಪ್ರಾಯ ಆತನದು.

ನಾನು ಮುಂಬೈ ವಿದ್ಯಾಖಾತೆಯಲ್ಲಿ ಡಿ. ಪಿ. ಆಯ್. ಆಗಿದ್ದಾಗ ಕರ್ನಾಟಕದ ಮಹನೀಯರೊಬ್ಬರು ನನ್ನ ಕಡೆಗೆ ಬಂದು ಇದೇ ಅಭಿಪ್ರಾಯ ಮಂಡಿಸಿದರು. "ಏನು! ಶಿಕ್ಷಣ ಮಟ್ಟ ದಿನದಿನಕ್ಕೂ ಕೆಡುತ್ತಿರುವದಲ್ಲಾ!" ಎಂದು ತಳಮಳಿಸಿದರು. ಅವರು ಹಾಗೆ ಹೇಳಲು ಕಾರಣವನ್ನು ವಿಚಾರಿಸಿದೆ. 'ಈಗಿನ ಹುಡುಗರು ಎರಡು ವಾಕ್ಯಗಳನ್ನು ಸಹ ಇಂಗ್ಲೀಷಿನಲ್ಲಿ ಸರಿಯಾಗಿ ಬರೆಯಲಾರರು' ಎಂಬುದೇ ಅವರ ಉತ್ತರ. 'ಅಷ್ಟು ಬರೆಯಲು ನಿಮಗೆ ಈಗಲೂ ಕೂಡ ಬರುವದಿಲ್ಲ ಎಂದು ನಾನು ಹೇಳಿದೆ. ನೀವು ಬಿ. ಎ. ಪರೀಕ್ಷೆ ಪಾಸಾಗಿ ಸುಮಾರು ೩೦ ವರ್ಷಗಳಾದವು. ಆದರೂ ನಿಮ್ಮ ಪತ್ರದಲ್ಲಿ ವ್ಯಾಕರಣದ ಮತ್ತು ಇತರ ದೋಷಗಳನ್ನು ಕನಿಷ್ಟ ಐದಾದರೂ ಎತ್ತಿ ತೋರಿಸಬಲ್ಲೆ. ನೀವು ಉತ್ತಮ ಶಿಕ್ಷಣ ಪಡೆದಿರುವಿರಿ ಎಂಬುದಕ್ಕೆ ನಿದರ್ಶನವಾದರೂ ಏನು? ಯಾವುದೇ ಒಂದು ವಿಷಯದಲ್ಲಿ ವಿದ್ವಾನರಾಗಿರುವಿರಾ? ಒಳ್ಳೆಯ ಲೇಖಕರಾಗಿರುವಿರಾ? ವಿಚಾರಶೀಲರಾಗಿರುವಿರಾ? ವ್ಯಾಪಾರದಲ್ಲಿ ಅಥವಾ ಇನ್ನಾವ ಉದ್ಯೋಗದಲ್ಲಿಯಾದರೂ ಹೆಸರು ಗಳಿಸಿರುವಿರಾ?" ಎಂದು ಮುಂತಾಗಿ ನಾನು ಕೇಳಬೇಕಾಯ್ತು.

ವಸ್ತುಸ್ಥಿತಿಯಾದರೂ ಏನು?—ಹಿಂದಿನ ತಲೆಮಾರಿನ ವಿದ್ಯಾರ್ಥಿಗಳ ಇಂಗ್ಲೀಷಭಾಷೆಯ ಪ್ರಭುತ್ವ ಈಗಿನವರಿಗಿಂತಲೂ ಹೆಚ್ಚಿಗಿದ್ದಿರಬಹುದು. ಆದರೆ ಅಷ್ಟರಮೇಲಿಂದ ಅವರು ಈಗಿನವರಿಗಿಂತ ಒಳ್ಳೆಯ ಶಿಕ್ಷಣ ಪಡೆದಿದ್ದರು ಎಂದೆನ್ನಲು ಬರುವದೇ? ಸಾಧ್ಯವಿಲ್ಲ.

ತಿರುಳಿನ ದೃಷ್ಟಿಯಿಂದ ಇಂದಿನ ಪ್ರಾಥಮಿಕ ಶಿಕ್ಷಣವು ಮೊದಲಿಗಿಂತಲೂ ಬಹಳ ವಿಸ್ತಾರವಾಗಿದೆ ಆಧುನಿಕ ಶಿಕ್ಷಣಶಾಸ್ತ್ರದ ತತ್ತ್ವಗಳ ಪ್ರಕಾರ ಮಕ್ಕಳ ಶಿಕ್ಷಣ ಅವರ ವಿವಿಧ ಚಟುವಟಿಕೆಗಳ ಮೇಲೆ ಅವಲಂಬಿಸಿರಬೇಕೇ ಹೊರತು ಗಿಳಿಪಾಠದ ಮೇಲಲ್ಲ. ಮೂವತ್ತು ವರ್ಷಗಳ ಹಿಂದೆ, ಅಂಕಿಮಗ್ಗಿಗಳನ್ನು ೩೦ ರ ವರೆಗೆ ಬಾಯಿಪಾಠ ಮಾಡಿಸುವದು, ಕಾಲು (೧/೪), ಅರ್ಧ (೧/೨), ಮುಕ್ಕಾಲು (೩/೪) ಗಳ ಕೋಷ್ಟಕಗಳನ್ನು ಕಲಿಸುವದು ನಿತ್ಯದ ವಿಷಯವಾಗಿತ್ತು. ದೈನಂದಿನ ಉಪಯೋಗದಲ್ಲಿ ಅಥವಾ ಗಣಿತಾಭ್ಯಾಸದಲ್ಲಿಇವುಗಳ ಪ್ರಯೋಜನವೇನು? ಇವುಗಳ ರಚನಾಕ್ರಮ ಗೊತ್ತಾದರೆ ಸಾಕು. ಅಂಕಿ-ಮಗ್ಗಿಗಳು ೧೦ ರ ವರೆಗೆ ಬಂದರೆ ಸಾಕು. ಇಷ್ಟಿದ್ದರೂ ಇವುಗಳನ್ನು ಕಂಠಪಾಠ ಮಾಡದ ವಿದ್ಯಾರ್ಥಿ ಬೆತ್ತದ ಏಟು ತಿನ್ನಬೇಕಾಗುತ್ತಿತ್ತು. ದಡ್ಡನೆಂಬ ಬಿರುದು ಬೇರೆ ಪಡೆಯಬೇಕಾಗುತ್ತಿತ್ತು. ಈಗಿನ ಹುಡುಗ ೨೦ ಕ್ಕಿಂತ ಹೆಚ್ಚು ಅಂಕಿ ಮಗ್ಗಿ ಕಲಿಯಬೇಕಾಗಿಲ್ಲ.

ಶಾಲೆಗಳಲ್ಲಿ ಕಲಿಸುವ ಪಾಠಗಳಲ್ಲಿ ಆಸ್ಥೆ ಹುಟ್ಟಿಸಲು ಮತ್ತು ನಿರೀಕ್ಷಣಶಕ್ತಿಯನ್ನು ಬೆಳೆಸಲು-ಮಾತ್ರ ಆಧುನಿಕ ಶಿಕ್ಷಣಶಾಸ್ತ್ರ ಕಲಿಸುತ್ತದೆ. ಇದು ಕಂಠಪಾಠಕ್ಕಿಂತ ಸಂಪೂರ್ಣ ಭಿನ್ನ. ಆದ್ದರಿಂದಲೇ ಈಗ ವಿವಿಧ ಚಟುವಟಿಕೆಗಳು ಶಾಲೆಯಲ್ಲಿ ಇಷ್ಟು ಮಹತ್ವಪೂರ್ಣವಾಗಿ ಪರಿಣಮಿಸಿರುವದು. ಮೊದಲಿಗಿಂತ ಈಗ ಕೈ ಮತ್ತು ಕಣ್ಣುಗಳ ತರಬೇತಿಗೆ ಹೆಚ್ಚು ಲಕ್ಷ್ಯ ಪೂರೈಸಲಾಗುತ್ತಿದೆ. ಶಾಲಾ ಅಭ್ಯಾಸ ಪತ್ರಿಕೆಯನ್ನು ಬಹಳ ಸುಲಭಗೊಳಿಸುವದರ ಜೊತೆಯಲ್ಲಿಯೇ ಅದರ ಸತ್ವ ಹೆಚ್ಚುವದರ ಕಡೆಗೆ ಪೂರ್ಣ ಗಮನಕೊಡಲಾಗಿದೆ. ಹಾಗೆ ನೋಡಿದರೆ ಆಗಿನದಕ್ಕಿಂತಲೂ ಈಗ ಹೆಚ್ಚು ವಿಷಯಗಳನ್ನು ಕಲಿಸಲಾಗುತ್ತಿದೆ. ಉದಾಹರಣೆಗೆ ಹಿಂದೆ ಭೂಗೋಲ, ಇತಿಹಾಸ, ಸಾಮಾನ್ಯ ವಿಜ್ಞಾನಗಳನ್ನು ಕಲಿಸುವುದೇ ಕಡಿಮೆ; ಕಲಿಸಿದರೂ ಅದರ ರೀತಿ ಭಯಾನಕವಾಗಿತ್ತು. ಮಾತೃಭಾಷೆಯನ್ನು ಕಲಿಸುವದರ ಕಡೆಗೆ ಯಾರ ಲಕ್ಷ್ಯವೂ ಹರಿದಿರಲಿಲ್ಲ. ಅದೇ ಈಗ, ಅದನ್ನು ಮಾಧ್ಯಮಿಕ ಶಾಲೆಗಳ ವರೆಗಾದರೂ ಕಲಿಸಲಾಗುತ್ತಿದೆ. ಭಾರತವನ್ನೊಳಗೊಂಡ ಜಗತ್ತಿನ ಎಲ್ಲ ಭಾಗಗಳಲ್ಲಿಯೂ ಇಂಥ ಮೂಲಭೂತ ಬದಲಾವಣೆಗಳು ತಲೆದೋರಿವೆ. ಬದಲಾವಣೆ ಸಾಮಾನ್ಯ ಮನುಷ್ಯನಿಗೆ ಶಿಕ್ಷಣದ ಅವನತಿಯಂತೆ ತೋರುತ್ತದೆ. ಗಿಳಿಪಾಠಕ್ಕಿಂತ ವಿಚಾರಶಕ್ತಿಯ ಬೆಳವಣಿಗೆಗೆ ಈಗ ಪ್ರಾಶಸ್ತ್ಯ ಹೆಚ್ಚು. ಉದಾಹರಣೆಗೆ ಹಿಂದಿನ ಆ ದಿನಗಳಲ್ಲಿ ಕಲಿಸುವ ಇತಿಹಾಸದ ವಿಷಯದಿಂದ ಯಾರಿಗೆ ಉಪಯೋಗವಾಗುತ್ತಿತ್ತು? ಜಗತ್ತಿನ ನಾಗರಿಕತೆಯಲ್ಲಿ ಭಾರತೀಯ ನಾಗರಿಕತೆಯ ಸ್ಥಾನ-ಮಾನವೇನು ಎಂಬುದು ನಮ್ಮ ಅಂದಿನ ವಿದ್ಯಾರ್ಥಿಗೆ ತಿಳಿದೇ ಇರಲಿಲ್ಲ. ಭಾರತೀಯ ಸಂಸ್ಕೃತಿ ಎಂಬುದೊಂದು ಇದೆ ಎನ್ನುವದನ್ನೇ ಆತ ಅರಿತಿರಲಿಲ್ಲ. ಈಗಿನ ಅಭ್ಯಾಸಕ್ರಮವೋ, ವಿದ್ಯಾರ್ಥಿಯು ಭಾರತದ ಹೆಮ್ಮೆಯ ನಾಗರಿಕನಾಗಿ ಬೆಳೆಯಲು ಸಹಾಯ ಮಾಡುತ್ತದೆ; ನಮ್ಮ ಗತವೈಭವದ ಕಲ್ಪನೆ ಮಾಡಿಕೊಡುತ್ತದೆ.

ಲೇಖಕರು :

**ಶ್ರೀ ಡಾ. ಚಿಂ. ಪಾವಟೆ**

ಉಪಕುಲಗುರುಗಳು
ಕರ್ನಾಟಕ ವಿಶ್ವವಿದ್ಯಾನಿಲಯ ಧಾರವಾಡ

ವಿಜ್ಞಾನದಲ್ಲೂ ಇದೇ ಕ್ರಮ. ೨೦ ವರ್ಷಗಳ ಹಿಂದಿನ ವಿದ್ಯಾರ್ಥಿಗಿಂತ ಇಂದಿನ ವಿಜ್ಞಾನ ವಿದ್ಯಾರ್ಥಿ ಹೆಚ್ಚು ವಿಷಯವನ್ನು ತಿಳಿದವನಾಗಿದ್ದಾನೆ. ಹಿಂದಿನ ಎಷ್ಟೋ ವಿದ್ಯಾರ್ಥಿಗಳಿಗೆ ಜೀವನ ವಿಜ್ಞಾನದ ಬಗ್ಗೆ ಎಳ್ಳಷ್ಟೂ ಜ್ಞಾನವಿರಲಿಲ್ಲ. ಪ್ರಕೃತಿ ನಿರೀಕ್ಷಣೆ, ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರ ಮೊದಲಾದ ವಿಷಯಗಳು ಅಂದಿನ ಅಭ್ಯಾಸಕ್ರಮದಲ್ಲಿ ಮಾಧ್ಯಮಿಕ ಶಿಕ್ಷಣದಲ್ಲಿಯೂ ಕೂಡ ಸೇರ್ಪಡೆಯಾಗಿರಲೇ ಇಲ್ಲ. ಈಗ ಪ್ರತಿ ವಿದ್ಯಾರ್ಥಿಯೂ ಸಾಮಾನ್ಯ ವಿಜ್ಞಾನವನ್ನು ಅಭ್ಯಸಿಸಲೇಬೇಕು. ಇದರಿಂದ ಅವನಿಗೆ ಪ್ರಕೃತಿಯನ್ನು ಮತ್ತು ವಿಶ್ವವನ್ನು ಅರಿಯುವ ಕುತೂಹಲವುಂಟಾಗುತ್ತದೆ; ಮತ್ತು ಅವನ ಸಾಮಾನ್ಯಜ್ಞಾನದ ಮಟ್ಟ ಹೆಚ್ಚುತ್ತಿದೆ. ಸುಮಾರು ೩೦ ವರ್ಷಗಳ ಮೊದಲು ಶಾಲೆಗಳಲ್ಲಿ ಇಂಗ್ಲೀಷ ಭಾಷೆ ಕಲಿಸುವದರ ಕಡೆಗೆ ವಿಶೇಷ ಗಮನವೀಯಲಾಗುತ್ತಿತ್ತು. ಇಂಗ್ಲೀಷ ಭಾಷೆ ಅಭ್ಯಾಸಕ್ರಮದಲ್ಲಿ ಬಹು ಮಹತ್ವದ ಸ್ಥಾನ ಪಡೆದಿತ್ತು. ಅದೇ ಮಾತೃಭಾಷೆಗಳ ಕಡೆಗೆ ಲಕ್ಷ್ಯವೇ ಇರಲಿಲ್ಲ.

ಈಗ ಉಚ್ಚಶಿಕ್ಷಣದ ಸ್ಥಿತಿಯನ್ನೇ ಗಮನಿಸಿದರೆ ನಾವು ವಿಶ್ವವಿದ್ಯಾನಿಲಯಗಳ ಶಿಕ್ಷಣಮಟ್ಟ ಕುರಿತು ಬಹಳ ಮಾತಾಡುತ್ತೇವೆ. ಆಗ ನಮ್ಮ ಲಕ್ಷ್ಯವೆಲ್ಲ ಶಿಕ್ಷಣಮಟ್ಟ ಮತ್ತು ಪರೀಕ್ಷಾವಿಧಾನಗಳ ಕಡೆಗಿರುತ್ತದೆ.

ಈಗಿನ ಕಾಲೇಜುಗಳಲ್ಲಿ— ಅವು ಸರಕಾರೀ ಆಡಳಿತದಲ್ಲಿರಲಿ ಅಥವಾ ಖಾಸಗೀ ಆಡಳಿತದಲ್ಲಿರಲಿ— ಮೊದಲಿಗಿಂತ ಶಿಕ್ಷಕರ ಸಂಖ್ಯೆ ಹೆಚ್ಚಿಗಿದೆ. ಆಗಿನ ಕಾಲದಲ್ಲಿ ಸ್ನಾತಕೋತ್ತರ ಶಿಕ್ಷಣಕ್ಕೆ ಆಸ್ಪದವೇ ಇರಲಿಲ್ಲ. ಕಾಲೇಜುಗಳಲ್ಲಿ ಪ್ರಾಧ್ಯಾಪಕರಾಗಬಯಸುವವರೆಲ್ಲ ತಮ್ಮಷ್ಟಕ್ಕೆ ತಾವೇ ಬಹು ಪ್ರಯಾಸಪಡಬೇಕಾಗುತ್ತಿತ್ತು. ಮಾರ್ಗದರ್ಶನದ ಕೊರತೆ ಅತಿಯಾಗಿತ್ತು. ಇದರ ಪರಿಣಾಮವಾಗಿ ಕಾಲೇಜುಗಳಿಗೆ ಎಂ. ಏ., ಎಂ. ಎಸ್ಸಿ. ಯಲ್ಲಿ ದ್ವಿತೀಯವರ್ಗದಲ್ಲಿ ಪಾಸಾದವರು ಕೂಡ ದೊರಕುವದು ಕಠಿಣವಾಗಿತ್ತು. ಈಗ ಎಲ್ಲ ವಿಶ್ವವಿದ್ಯಾನಿಲಯಗಳಲ್ಲಿ ಉಚ್ಚಶಿಕ್ಷಣ ಪ್ರಾಪ್ತಿಯ ಸದವಕಾಶವಿರುವದರಿಂದ ಪ್ರಾಧ್ಯಾಪಕರಾಗಲು ಕನಿಷ್ಠ ಅರ್ಹತೆ ಎಂ. ಏ., ಎಂ. ಎಸ್ಸಿ. ಗಳಲ್ಲಿ ದ್ವಿತೀಯ ವರ್ಗವಾದರೂ ಇರಲೇಬೇಕೆಂದು ಕಡ್ಡಾಯವಾಗಿದೆ; ಅಂದಿಗಿಂತ ಇಂದಿನ ಕಾಲೇಜುಗಳಲ್ಲಿ ಒಳ್ಳೆ

ಯ ಶಿಕ್ಷಕರಿದ್ದಾರೆಂದು ಹೇಳಲು ಯಾವ ಅಭ್ಯಂತರವೂ ಇಲ್ಲ.

ಶಿಕ್ಷಣ ಪರಿಣಾಮಕಾರಿಯಾಗಲು ಕೇವಲ ಶಿಕ್ಷಕರಷ್ಟೇ ಹೊಣೆಯಲ್ಲ. ವಿದ್ಯಾರ್ಥಿಗಳ ಪಾತ್ರವೂ ಹಿರಿದಾಗಿದೆ. ಅದರಲ್ಲಿ ಹಿಂದಿನ ದಿನಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಾಗಿರಲಿಲ್ಲ. ಅದೇ ಇಂದು ಎಷ್ಟು ಹೊಸ ಕಾಲೇಜುಗಳಾದರೂ ಬೆಳೆಯುತ್ತಿರುವ ವಿದ್ಯಾರ್ಥಿಸಂಖ್ಯೆಗೆ ಅವು ಸಾಲದಾಗಿವೆ. ಇಂದಿನ ಪ್ರಜಾಪ್ರಭುತ್ವ ರಾಜ್ಯಪದ್ಧತಿಯಲ್ಲಿ ಸರಕಾರವೂ ವಿದ್ಯಾರ್ಥಿವೇತನಗಳನ್ನು ಕೊಡುವದರ ಮೂಲಕ ಸಕಲಜಾತಿ ಮತಗಳಿಗೂ ಉಚ್ಚಶಿಕ್ಷಣದ ಬಾಗಿಲನ್ನು ತೆರೆದಿದೆ. ಇದು ನಿಜವಾಗಿಯೂ ಪ್ರಶಂಸನೀಯ. ಆದರೆ ಅವಕಾಶಸಿಕ್ಕ ಸಕಲರಿಗೂ ಉಚ್ಚಶಿಕ್ಷಣದ ಪ್ರಯೋಜನವುಂಟಾಗುವದಿಲ್ಲ. ಪಾಶ್ಚಾತ್ಯರಾಷ್ಟ್ರಗಳಲ್ಲಿಯಾದರೊ ಪ್ರತಿಯೊಂದು ವಿಶ್ವವಿದ್ಯಾನಿಲಯಕ್ಕೆ ತನ್ನದೇ ಆದ ಪ್ರವೇಶಾರ್ಹತೆಗಳಿವೆ. ವಿಶ್ವವಿದ್ಯಾನಿಲಯದಲ್ಲಿ ಪ್ರವೇಶಾರ್ಹತೆ ಪಡೆಯಲು ಅಲ್ಲಿನ ವಿದ್ಯಾರ್ಥಿ ಸಾಮಾನ್ಯ ಮಟ್ಟದ ಮಾಧ್ಯಮಿಕ ಶಾಲಾ ಪರೀಕ್ಷೆಯನ್ನು ಪಾಸಾಗಿರಬೇಕು. ಮತ್ತು ಉಚ್ಚತರಗತಿಯ ಎರಡು ವಿಷಯಗಳಲ್ಲಿ ಪಾಸಾಗಬೇಕು. ಕಾಲೇಜುಗಳಲ್ಲಿ ಪ್ರವೇಶಿಸಲು ಕೇವಲ ಎಸ್. ಎಸ್. ಎಲ್. ಸಿ ಪಾಸಾದರೆ ಮಾತ್ರ ಸಾಲದು. ಪಾಶ್ಚಾತ್ಯ ದೇಶಗಳಲ್ಲಿ ಇಂಥ ಪರೀಕ್ಷೆಗಳ ಮಟ್ಟ ಉನ್ನತವಾಗಿದ್ದು ವಿಶ್ವವಿದ್ಯಾನಿಲಯುಗಳು ಪ್ರತಿಭಾವಂತ ವಿದ್ಯಾರ್ಥಿಗಳನ್ನು ಆರಿಸಲು ಸಹಾಯಕವಾಗುತ್ತವೆ. ಅದೇ ಅಮೇರಿಕೆಯಲ್ಲಿ ಹೀಗಿಲ್ಲ. ನಮ್ಮ ದೇಶದಲ್ಲಿಯಂತೆ ಅಲ್ಲಿಯೂ ಮಾಧ್ಯಮಿಕ ಶಿಕ್ಷಣದಲ್ಲಿ ತೇರ್ಗಡೆ ಹೊಂದಿದ ವಿದ್ಯಾರ್ಥಿ ಕಾಲೇಜು ಪ್ರವೇಶಿಸಲು ಅರ್ಹನಾಗುತ್ತಾನೆ. ಆದರೆ ಒಂದು ಅಂತರ. ಕಾಲೇಜಿನ ಪ್ರಥಮ ವರ್ಷದ ಪರೀಕ್ಷೆಯಲ್ಲಿ ಅನುತ್ತೀರ್ಣನಾದರೆ ಆತ ಕಾಲೇಜನ್ನು ಬಿಡಬೇಕಾಗುತ್ತದೆ. ಈ ಎಲ್ಲ ಕ್ರಮಗಳಿಂದ ಶಿಕ್ಷಣದ ಉಚ್ಚ ಮಟ್ಟವನ್ನು ಕಾಯ್ದುಕೊಳ್ಳಲಿಕ್ಕೆ ಅಲ್ಲಿರುವ ವಿಶ್ವವಿದ್ಯಾನಿಲಯಗಳಿಗೆ ಸಾಧ್ಯವಾಗುತ್ತದೆ. ಅದೆ ನಮ್ಮ ದೇಶದಲ್ಲಿ, ಪರೀಕ್ಷೆಯಲ್ಲಿ ಅನುತ್ತೀರ್ಣನಾದರೆ ಪ್ರವೇಶಾರ್ಹತೆಗೆ ಭಂಗ ಬರುವದಿಲ್ಲ, ಹೀಗಾಗಿ ವರ್ಷಾನುಗಟ್ಟಲೆ ವಿದ್ಯಾರ್ಥಿಗಳು ಕಾಲೇಜುಗಳಲ್ಲಿ ಉಳಿಯುತ್ತಾರೆ. ಉತ್ತರ ಭಾರತದ ಕೆಲವು ವಿಶ್ವವಿದ್ಯಾನಿಲಯಗಳಲ್ಲಿ ಎಷ್ಟೋ ವಿದ್ಯಾರ್ಥಿಗಳು ೧೫ ವರ್ಷಗಳಿಗಿಂತ ಹೆಚ್ಚು ಕಾಲ ವಿಶ್ವವಿದ್ಯಾನಿಲಯಗಳಲ್ಲಿ ಇದ್ದ ಉದಾಹರಣೆಗಳಿವೆ. ಇಂಗ್ಲಂಡಿನಲ್ಲಿ ಹಲವು ವಿಶ್ವವಿದ್ಯಾನಿಲಯಗಳು ಒಂದೇ ವರ್ಷ ನಾಪಾಸಾದರೆ ಕ್ರಮ ಕೈಕೊಳ್ಳುತ್ತಿವೆ, ಕೆಲವು ಒಂದಕ್ಕಿಂತ ಹೆಚ್ಚು ಸಲ ಆದರೆ ಮಾತ್ರ ಕ್ರಮ ಕೈಕೊಳ್ಳುತ್ತವೆ. ವಿದ್ಯಾರ್ಥಿಗಳ ಸಂಖ್ಯೆ ಬೆಳೆದಂತೆಲ್ಲ—ಎಲ್ಲರೂ ಬೇಕಾದಷ್ಟು ಅರ್ಹತೆಯುವರಿಲ್ಲದಿರುವದರಿಂದ ಶಿಕ್ಷಣಮಟ್ಟ ಕೆಳಗಿಳಿಯುವ ಸಂಭವವಿದೆ. ನಮ್ಮ ಕಾಲೇಜುಗಳಲ್ಲಿ ಈ ಹಿಂದೆ ಶಿಕ್ಷಕ-ವಿದ್ಯಾರ್ಥಿಗಳಲ್ಲಿ ನಿಕಟ ಸಂಪರ್ಕವಿರುತ್ತಿತ್ತು. ಆದರೆ ಈಗ ವಿದ್ಯಾರ್ಥಿಗಳ ಸಂಖ್ಯೆ ಬೆಳೆದ ಪರಿಣಾಮವಾಗಿ ವೈಯಕ್ತಿಕ ಸಂಪರ್ಕಸಾಧ್ಯತೆ ಕಡಿಮೆಯಾಗಿದೆ. ಆದರೂ ಅನೇಕ ವಿಶ್ವವಿದ್ಯಾನಿಲಯುಗಳು ಟ್ಯುಟೋರಿಯಲ್ ಪದ್ಧತಿಯನ್ನು ಪ್ರಾರಂಭಿಸಿರುವದರಿಂದ ನಿಯಮಿತವಾಗಿ ಪ್ರಾಧ್ಯಾಪಕರು ತಮ್ಮ ವಿದ್ಯಾರ್ಥಿಗಳೊಡನೆ ಸಂಪರ್ಕ ಸಾಧಿಸಲು ಅನುವಾಗಿದೆ. ಇದು ಶಿಕ್ಷಣ ಮಟ್ಟವನ್ನು ಕಾಯ್ದುಕೊಳ್ಳಲು ಸ್ವಲ್ಪವಾದರೂ ಸಹಾಯಕವಾಗುತ್ತದೆ.

ನಮ್ಮ ಶಿಕ್ಷಣಮಟ್ಟದ ಮೇಲೆ ಪರಿಣಾಮ ಮಾಡುವ ಮತ್ತೊಂದು ಸಂಗತಿಯೆಂದರೆ ಶಿಕ್ಷಣ ಮಾಧ್ಯಮ. ಕ್ಲಾಸಿನಲ್ಲಿ ಇಂಗ್ಲೀಷಿನಲ್ಲಿ ಕೊಡುವ ಲೆಕ್ಚರುಗಳು ಬಹಳ ವಿದ್ಯಾರ್ಥಿಗಳಿಗೆ ತಿಳಿಯುವದೇ ಇಲ್ಲ. ಹಿಂದೆ, ಶಾಲೆಗಳಲ್ಲಿ ಕಲಿಯಲು ಯೋಗ್ಯವಾದ ವಿಷಯ ಇಂಗ್ಲಿಷೊಂದೇ ಎನ್ನುವಂತೆ ಅದನ್ನು ಮಾತ್ರ ಅತಿ ತತ್ಪರತೆಯಿಂದ ಕಲಿಸುತ್ತಿದ್ದರು. ಆದರೆ ಇಂದು ಅನೇಕ ವಿಷಯಗಳಲ್ಲಿ ಅದೂ ಒಂದು, ಶಾಲೆ ಮತ್ತು ಕಾಲೇಜುಗಳಲ್ಲಿ ಕಲಿಸುವ ಪದ್ಧತಿಗಳು ಮೂಲಭೂತವಾಗಿ ಬೇರೆ ಬೇರೆಯಾಗಿವೆ. ಶಾಲೆಗಳಲ್ಲಿ ಶಿಕ್ಷಕನು ವಿದ್ಯಾರ್ಥಿಗಳಿಗೆ ಮೇಲಿಂದ ಮೇಲೆ ಪ್ರಶ್ನೆ ಕೇಳುತ್ತ ಪಾಠ ತಿಳಿಯುತ್ತದೆಯೋ ಇಲ್ಲವೋ ಎಂಬುದರ ಕಡೆಗೆ ಸದಾ ಲಕ್ಷವಿಟ್ಟಿರುತ್ತಾನೆ. ಇದೂ ಅಲ್ಲದೆ, ಶಾಲೆಗಳಲ್ಲಿ ಪ್ರತಿಯೊಂದರ ವಿವರಣೆಯೂ ಮಾತೃಭಾಷೆ, (ಕನ್ನಡ)ಯಲ್ಲಿರುತ್ತದೆ, ಅದೆ ಕಾಲೇಜುಗಳಲ್ಲಿ, ವಿದ್ಯಾರ್ಥಿಗಳಿಗೆ ತಿಳಿಯುತ್ತಿದೆಯೋ ಇಲ್ಲವೋ ಎನ್ನುವದರ ಕಡೆಗೆ ಲಕ್ಷ್ಯವೀಯದೆ ಪ್ರಾಧ್ಯಾಪಕ ಲೆಕ್ಚರ್ ಕೊಡುತ್ತಾನೆ. ನಿಜವಾದ ಅಂತರವಿರುವದು ಇಲ್ಲಿಯೇ. ಪ್ರಿ-ಯುನಿವ್ಹರ್ಸಿಟಿ ಕೋರ್ಸಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾರ್ಥಿಗಳು ನಪಾಸಾಗುವದು ಇದೇ ಕಾರಣಕ್ಕಾಗಿಯೇ. ಕಾಲೇಜಿನ ಮೊದಲ ವರ್ಷದಲ್ಲಿಯಾದರೂ ಪ್ರಾಧ್ಯಾಪಕರು ಅವಶ್ಯವಿದ್ದಲ್ಲಿ ಕನ್ನಡದಲ್ಲಿ ವಿವರಿಸುವ ಪ್ರಯತ್ನ ಮಾಡಬೇಕು. ಮತ್ತು ಸಾಧ್ಯವಿದ್ದಮಟ್ಟಿಗಾದರೂ ವೈಯಕ್ತಿಕ ಲಕ್ಷ್ಯ ಪೂರೈಸಬೇಕು.

ಕೊನೆಯದಾಗಿ, ಬಹುಸಂಖ್ಯಾಕ ವಿದ್ಯಾರ್ಥಿಗಳಿಂದಲೂ ಪರೀಕ್ಷಾಮಟ್ಟದ ಮೇಲೆ ಪರಿಣಾಮವಾಗುತ್ತದೆ. ತೀರ ಕೆಳಮಟ್ಟದ ಉತ್ತರ ಪತ್ರಿಕೆಗಳು ಕೈಯಲ್ಲಿ ಬಂದರೆ, ಪರೀಕ್ಷಕನು ಅವುಗಳಿಗೆ ಗುಣಕೊಡುವ ರೀತಿಯೂ ಅವುಗಳಿಗನುಸಾರವಾಗಿ ಕೆಳಗಿಳಿಯುತ್ತದೆ. ಇದು ಸರ್ವವಿದಿತವಾದ ಮಾನಸಶಾಸ್ತ್ರದ ಸಾಮಾನ್ಯ ಸಂಗತಿ! ಯಾಕಂದರೆ ಬಹಳ ವಿದ್ಯಾರ್ಥಿಗಳನ್ನು ನಪಾಸ ಮಾಡಲು ಅವನ ಮನಸ್ಸುಒಪ್ಪುವದಿಲ್ಲ. ಪರೀಕ್ಷಾಮಟ್ಟದ ಮೇಲೆ ಇದರಿಂದ ಸ್ವಲ್ಪಮಟ್ಟಿಗಾದರೂ ಪರಿಣಾಮವಾಗುತ್ತದೆ.

ಮೇಲಿನ ಈ ಎಲ್ಲ ಸಂಗತಿಗಳಿಂದ ಶಿಕ್ಷಣಮಟ್ಟವನ್ನು ಎತ್ತರಿಸುವ ಸಕಲ ಪ್ರಯತ್ನಗಳು ನಡೆದುವಾದರೂ ಶಿಕ್ಷಣ ಅವನತಿಯ ಹಾದಿಯನ್ನು ಹಿಡಿದಿದೆ ಎಂದು ಅನಿಸಬಹುದು. ಆದರೆ ಒಟ್ಟಾಗಿ ನೋಡಿದರೆ, ಅದು ಹಾಗಿಲ್ಲ. ಈ ಹಿಂದೆ ನಪಾಸಾದವರ ಪ್ರಮಾಣ ನೂರಕ್ಕೆ ೩೦ ರಷ್ಟಿದ್ದರೆ ೫೦೦ ವಿದ್ಯಾರ್ಥಿಗಳಲ್ಲಿ ಅವರ ಸಂಖ್ಯೆ ೧೫೦ ರಷ್ಟಾಗುತ್ತಿತ್ತು. ಅದೇ ಈಗ ೫೦೦೦ ವಿದ್ಯಾರ್ಥಿಗಳಲ್ಲಿ ೩೦% ರಂತೆ ೧೫೦೦ ಕ್ಕೆ ಬರುತ್ತದೆ. ಇದು ನೋಡುವದಕ್ಕೆ ಬಹಳ ದೊಡ್ಡ ಸಂಖ್ಯೆಯಾಗಿ ತೋರಬಹುದಾಗಿದೆ. ಅಯೋಗ್ಯ ವಿದ್ಯಾರ್ಥಿಗಳ ಸಂಖ್ಯೆಯೂ ಕೂಡ ಮಿತಿಮೀರಿ ಬೆಳೆದಿದೆ. ಇವಕ್ಕೆಲ್ಲ ಏಕಮೇವ ಪರಿಹಾರೋಪಾಯವೆಂದರೆ, ಮೊದಲಿನ ಎರಡು ವರ್ಷಗಳಮಟ್ಟಿಗಾದರೂ ಕನ್ನಡಭಾಷಾ ಮಾಧ್ಯಮವನ್ನು ಅನೌಪಚಾರಿಕವಾಗಿಯಾದರೂ ಸಾಕಷ್ಟು ಬಳಸಬೇಕು. ಮತ್ತು ಟ್ಯುಟೋರಿಯಲ್ ಪದ್ಧತಿಯನ್ನು ಜಾರಿಯಲ್ಲಿ ತರಬೇಕು.

# ನಮ್ಮ ಶಿಕ್ಷಣದ ಮಟ್ಟ ಇಂದು ಕಡಿಮೆಯಾಗುತ್ತಿಲ್ಲ

ಲೇಖಕರು :
ಶ್ರೀ ರಾ. ಯ. ಧಾರವಾಡಕರ
ಪ್ರಿನ್ಸಿಪಾಲ
ಜನತಾಕಾಲೇಜ ಧಾರವಾಡ

"ಏನು, ಇಂದಿನ ವಿದ್ಯಾರ್ಥಿಗಳ ಮಟ್ಟ? ಏನು ವಿಚಾರ? ಏನು Spelling ? ಏನು ಹುಡುಗಾಟ, ಜಗತ್ತೆಲ್ಲಾ ಕೆಟ್ಟು ಹೋಯಿತು. ನಮ್ಮ ಕಾಲದಲ್ಲಿ ಛೆ! ನಮ್ಮಕಾಲದಲ್ಲಿ ಮ್ಯಾಟ್ರಿಕ್ಕಿನವರು ಬರೆದಷ್ಟನ್ನು ಇಂದಿನ ಗ್ರ್ಯಾಜುಯೇಟರು ಬರೆಯುವದಿಲ್ಲ... ಜಗತ್ತೆಲ್ಲಾ ಹಾಳಾಗಿ ಹೋಯಿತು-ಮೊನ್ನೆ ಆ ಗ್ರ್ಯಾಜುಯೇಟ್ ಬರೆದ ಅರ್ಜಿ..."ಬಸ್ಸುಗಳಲ್ಲಿ ರೈಲುಗಳಲ್ಲಿ ಹಾಟೆಲ್ಲುಗಳಲ್ಲಿ, ಆಫೀಸುಗಳಲ್ಲಿ- ಎಲ್ಲಿ ಹೋದಲ್ಲಿ ಜನ ಸುಖವಾಗಿ ಮೆಲುಕಾಡಿಸುವ ವಿಚಾರ ಇದು. ಅಂತೂ ನಮ್ಮ ದಿವಸ ಬಹಳ ಒಳ್ಳೆಯದು. ಇಂದಿನ ಜನಾಂಗ ಕುಬ್ಜಲೋಕಕ್ಕೆ ಸೇರಿದ್ದು; ನಾವು ಎರಡು ಕಣ್ಣುಳ್ಳವರು, ಇಂದಿನವರು ಏಕಾಕ್ಷಿಗಳು—ಪ್ರಳಯದ ದಾರಿಯನ್ನು ಹಿಡಿದವರು— ಎಂದು ಅಭಿಪ್ರಾಯ ಸೂಚಿಸಿ, ತೇಗಿ, ಆ ಶಿಕ್ಷಣದ ಮಟ್ಟದ ಕಡಿಮೆತನವನ್ನು ವಿದ್ಯಾರ್ಥಿಗಳ ತಲೆಗೋ, ಅಧ್ಯಾಪಕರ ತಲೆಗೋ, ವಿಶ್ವವಿದ್ಯಾಲಯದ ತಲೆಗೋ, ಕೊನೆಗೆ ಯಾರೂ ಸಿಗದಿದ್ದರೆ, ಸರಕಾರದ ತಲೆಗೋ ಕಟ್ಟಿಬಿಟ್ಟರೆ ನಮ್ಮ ಪಾಲಿನ ಕರ್ತವ್ಯವನ್ನು ನಾವು ನೆರವೇರಿಸಿದಂತಾಯಿತು ಎಂಬಟೊಳ್ಳು ಆತ್ಮಸಂತೃಪ್ತಿ ಭಾವ ನಮ್ಮಲ್ಲೆಲ್ಲ ಸೇರಿಬಿಟ್ಟದೆ.

ಅಂತಲೇ, "ಇಂದಿನ ಶಿಕ್ಷಣದ ಮಟ್ಟ ಕಡಿಮೆಯಾಗುತ್ತಿದೆಯೇ ?" —ಎಂಬುದನ್ನು ನಾವು ನಿಧಾನವಾಗಿ— ನಿರ್ವಿಕಾರವಾಗಿ— ಶಾಸ್ತ್ರೀಯವಾಗಿ ವಿಚಾರಮಾಡಬೇಕಾಗಿದೆ. ಇಲ್ಲವಾದರೆ, ಪ್ರತಿಯೊಬ್ಬ ಅಜ್ಜ ತನ್ನ ಮೊಮ್ಮಗನ ಬಗ್ಗೆ ಹೇಳಿರಬಹುದಾದ ಈ ಮಾತು ನಿಜವಾದ ಸತ್ಯ ಎಂಬ ಭಾವನೆಯಾದೀತು.

ಶಿಕ್ಷಣಮಟ್ಟ ಕಡಿಮೆಯಾಗುತ್ತಿದೆಯೇ? — ಪ್ರಶ್ನೆಗೆ ನೇರವಾದ ಉತ್ತರ ಹೇಳುವುದು ಕಠಿಣ. ಈ ಪ್ರಶ್ನೆಯ ಸೂಚ್ಯಾರ್ಥ ಪುಸ್ತಕೀಯ ಅಭ್ಯಾಸ ಇಲ್ಲವೆ ಅಭ್ಯಾಸದ ಏಕಮುಖತೆ ಕಡಿಮೆಯಾಗುತ್ತಲೆಂದಿದ್ದರೆ, ಕೆಲಮಟ್ಟಿಗೆ ಸತ್ಯವೆಂದು ಹೇಳಬಹುದು. ಆದರೆ, ಇದರರ್ಥ ವಿದ್ಯಾರ್ಥಿಗಳ ಬೌದ್ಧಿಕ ಇಲ್ಲವೆ ಉತ್ಸಾಹಶಕ್ತಿಗಳು ಕಡಿಮೆಯಾಗುತ್ತವೆ ಎಂಬರ್ಥದಲ್ಲಿ ನಾವು ಈ ಮಾತನ್ನಾಡುತ್ತಿದ್ದರೆ, ಇದು ಸರ್ವಥಾ ತಪ್ಪು.

ಇಂದಿನ ವಿದ್ಯಾರ್ಥಿ ಹಿಂದಿನ ವಿದ್ಯಾರ್ಥಿಯ ವಾಮನಾವತಾರನಲ್ಲ; ಅಂದಿನವರು ವಿದ್ಯಾಬುದ್ಧಿ ದೈತ್ಯರು, ಇಂದಿನವರು ಅಣುಗಳು ಎಂಬ over simplification ಎಂದಿಗೂ ಸರಿಹೋಗದು. 'ಶಿಕ್ಷಣಮಟ್ಟ ಕಡಿಮೆಯಾಗುತ್ತದೆ' ಎಂದು ನಾವೆಂದಾಗ ಬದಲಾಗುತ್ತಿರುವ ಪರಿಸರದಲ್ಲಿ, ಶಿಕ್ಷಣದ ಕಲ್ಪನೆಯೂ ದಿನದಿನಕ್ಕೆ ಬದಲಾಗುತ್ತಿದೆಯೆಂಬ ಮಾತನ್ನು ನಾವು ಲಕ್ಷದಲ್ಲಿಡಬೇಕು.

ಹಿಂದಿನ ವಿದ್ಯಾರ್ಥಿ ಓದುತ್ತಿದ್ದ; ಬೆಳಗಾಗುವವರೆಗೆ ಓದುತ್ತಿದ್ದ. ಅನೇಕ ವಿಷಯಗಳನ್ನು ಉರುವು ಹಾಕಿ ಥುಟಾಪಟಾ ಒಪ್ಪಿಸುತ್ತಿದ್ದ. ಅಂತಲೇ, ಅವನ Spelling ತಪ್ಪುತ್ತಿರಲಿಲ್ಲ; ಅಂಕೆಮೊಗ್ಗೆ ನೆನವು ಹಾರುತ್ತಿರಲಿಲ್ಲ. ಬಾಯಿಲೆಖ್ಖಗಳನ್ನು ಸಲೀಲವಾಗಿ ಅವನು ಒಪ್ಪಿಸುತ್ತಿದ್ದ.

ಅದೇ ಶಿಕ್ಷಣ ಎಂದು ತಿಳಿದುಕೊಂಡ ಕಾಲವದು; ಅದಕ್ಕೆ ಅನುಗುಣವಾದ ವಾತಾವರಣವೂ ಇದ್ದ ಕಾಲವದು. ಅಂದಿನ ವಿದ್ಯಾರ್ಥಿಗೆ ಮನೆ, ಶಾಲೆ, ಕಾಲೇಜು, ಕಾಲೇಜಿನ ಪರೀಕ್ಷೆ ಪಾಸಾದೊಡನೆ ನೇರವಾದ ಒಂದು ಉದ್ಯೋಗ—ಈ ರೀತಿ ಸರಾಗವಾಗಿ ಜೀವನಚಕ್ರ ನಡೆದ ಕಾಲವದು. ತಾನು ಪರೀಕ್ಷೆಗಳಲ್ಲಿ ಮೇಲೆ ಬಂದರೇ, ತನಗೆ ಒಳ್ಳೆಯ ಉದ್ಯೋಗಾವಕಾಶಗಳು ದೊರಕುತ್ತವೆ ಎಂದು ಜನ ನಂಬಿದ ಕಾಲವದು. ಹಾಗೆ, ಆಗ ನಡೆದೂ ಇತ್ತು. ಆದರೆ, ಈಗ—?

ಈಗ, ಶಿಕ್ಷಣ ಎಂದರೇನೆಂಬ ಕಲ್ಪನೆ ದಿನದಿನಕ್ಕೆ ಬದಲಾಗುತ್ತಿದೆ. ಸಮಾಜದ ಕಟ್ಟು ಕ್ಷಣಕ್ಷಣಕ್ಕೆ ಬದಲಾಗುತ್ತಿದೆ. ದೇಶದ ವಿಚಾರ ಕಾಲಕಾಲಕ್ಕೆ ಬದಲಾಗುತ್ತದೆ. ಅಂತೆಯೇ ವ್ಯಕ್ತಿ ಮತ್ತು ಶಿಕ್ಷಣ ಈ ಹೊಸ ಪರಿಸರಕ್ಕೆ ಹೊಂದಬೇಕಾಗಿದೆ.

'ವಿಶ್ವವಿದ್ಯಾಲಯದ ಕಲ್ಪನೆ' ಎಂಬ ತನ್ನ ಪುಸ್ತಕದಲ್ಲಿ ನ್ಯೂಮನ್ ಮಹಾಶಯನು ಶಿಕ್ಷಣವೆಂದರೇನೆಂದು ಉಲ್ಲೇಖ ಮಾಡಿದ್ದಾನೆ—

"If a practical end must be assigned to a University course, then I say it is training good members of Society" (ವಿಶ್ವವಿದ್ಯಾಲಯ ವ್ಯಾಸಂಗಕ್ಕೆ ವ್ಯವಹಾರ್ಯ ಗುರಿಯೊಂದಿರಬೇಕೆಂದಾದರೆ ಸಮಾಜದ ಒಳ್ಳೇ ಸದಸ್ಯರಾಗುವ ತರಬೇತಿಯದಾಗಿರಬೇಕೆಂದು ನಾನು ಹೇಳುವೆ)

ಶಿಕ್ಷಣದ ಬಗ್ಗೆ ಉಲ್ಲೇಖ ಮಾಡುವಾಗ ವಿಶ್ವವಿದ್ಯಾನಿಲಯ ಶಿಕ್ಷಣ ಆಯೋಗದ ವರದಿಯಲ್ಲಿ "We are building a civilisation, not a factory or a workshop, The quality of a civilisation depends not on the material equipment or the political machinery, but on the character of men. The major task of education is the improvement of character."—ಎಂದು ಉಲ್ಲೇಖಿಸಲಾಗಿದೆ.

(ನಾವು ನಾಗರಿಕತೆಯನ್ನು ರೂಪಿಸುತ್ತಿದ್ದೇವೆ; ಕಾರಖಾನೆ ಇಲ್ಲವೆ ವರ್ಕಶಾಪನ್ನಲ್ಲ, ಒಳ್ಳೆ ನಾಗರಿಕತೆ ಭೌತಿಕ ಉಪಕರಣ ಇಲ್ಲವೆ ರಾಜಕೀಯ ಸ್ವರೂಪವನ್ನವಲಂಬಿಸಿಲ್ಲ. ಮಾನವನ ಸಚ್ಚೀಲತೆಯನ್ನು ಅದು ಅವಲಂಬಿಸಿದೆ. ಸಚ್ಚೀಲವನ್ನು ಬೆಳೆಸುವುದೇ ಶಿಕ್ಷಣದ ಮಹಾಕಾರ್ಯವಾಗಿದೆ.)

ಶಿಕ್ಷಣದ ಬಗ್ಗೆ ಹೇಳುವಾಗ, ಡಾ. ರಾಧಾಕೃಷ್ಣನ್ ಅವರು—

"No University can regard itself as a true University unless it sends out young men and women, **who are not only learned but whose hearts are full of compassion for suffering humanity.**" ಎಂದು ಹೇಳಿದ್ದಾರೆ.

(ಕೇವಲ ವಿದ್ವಾಂಸರನ್ನಷ್ಟೇ ಅಲ್ಲದೆ ಮಾನವೀಯ ಸಂಕಷ್ಟಗಳ ಬಗ್ಗೆ ಪೂರ್ಣ ದಯಾರ್ದ್ರಹೃದಯದ ಯುವಕ-ಯುವತಿಯರನ್ನು ರೂಪಿಸದ ಯಾವ ವಿಶ್ವವಿದ್ಯಾಲಯವೂ ನಿಜವಾದ ವಿಶ್ವವಿದ್ಯಾಲಯವೆಂದು ಬಗೆಯಲಾಗದು.)

ಶಿಕ್ಷಣವೆಂದರೆ ಪುಸ್ತಕಪಾಂಡಿತ್ಯ ಎಂಬ ಕಾಲವೊಂದಿತ್ತು. ಆದರೆ ಇಂದಿನ ಶಿಕ್ಷಣ, ಇಂದಿನ ಪಠ್ಯಕ್ರಮ, ಇಂದಿನ ವಿದ್ಯಾರ್ಥಿಜೀವನ, ಮೇಲೆ ಉಕ್ತವಾದ ಸಾಮಾಜಿಕ—ರಾಷ್ಟ್ರೀಯ—ಮಾನವೀಯ ಪ್ರಜ್ಞೆಯನ್ನುಳ್ಳದ್ದಾಗಿದೆ.

ಅಂತಲೇ ಇಂದಿನ ವಿದ್ಯಾರ್ಥಿ ಬರಿಯ Spelling ಉರು ಹಾಕಿದರೆ ಸಾಲದು; ಬಾಯಿಲೆಖ್ಖ ಬಿಡಿಸಿದರೆ ಮುಗಿಯದು. ಅವನು ಸಮಾಜದ ಪ್ರಜ್ಞಾವಂತ ಘಟಕವಾಗಬೇಕಾಗಿದೆ.

ಹಿಂದಿನ ಶಿಕ್ಷಣ ರೈಲು ಮಾರ್ಗ—ಹಳಿ ಬಿಟ್ಟು ಸರಿಯಬೇಕಾಗಿಲ್ಲ—ಸರಿದರೆ, ಅಪಘಾತ. ಇಂದಿನದು ಸಮಾಜ ವಿಕಾಸ: ಮೋಟಾರ ಮಾರ್ಗ ಇದ್ದ ಹಾಗೆ. ಹತ್ತೆಂಟು ಕಡೆ ಬಳಸಬೇಕಾಗಿದೆ. ಅಂತಲೇ, ಎದ್ದ ಆ ಮೋಟರ್ ಧೂಳಿಯಲ್ಲಿ ವಿದ್ಯಾರ್ಥಿಯ ಪರಿಶ್ರಮದ ಚಿತ್ರ ಸ್ವಲ್ಪ ಮ್ಲಾನವಾಗಿ ಕಾಣುತ್ತದೆ.

ಇಂದು ಭಾರತ ಸ್ವತಂತ್ರ ರಾಷ್ಟ್ರವಾಗಿದೆ, ಅಂತಾರಾಷ್ಟ್ರೀಯ ನಕಾಶದಲ್ಲಿ ತನ್ನದೇ ಆದ ಸ್ಥಾನವನ್ನು ಹೊಂದಿದೆ. ಹೊಸ ಆದರ್ಶಗಳಿಗನುಗುಣವಾಗಿ ಹೊಸ ಸಮಾಜವನ್ನು ಕಟ್ಟಲು ಬದ್ಧಕಂಕಣವಾಗಿದೆ. ಇದೆಲ್ಲಕ್ಕೂ ಹೊಂದಿಕೆಯಾದ ಶಿಕ್ಷಣ ಇಂದು ನಿರ್ಮಾಣವಾಗುತ್ತಿದೆ.

ನಾವು ವಿದ್ಯಾರ್ಥಿಗಳಾಗಿದ್ದಾಗ ರಶಿಯದ ರಾಜಧಾನಿ ನಮಗೆ ಗೊತ್ತಿತ್ತೊ ಇಲ್ಲವೊ? ಚೀನ ಬರಿಯ ರೇಶಿಮೆ ಮಾರುವ ದೇಶವಾಗಿತ್ತು. ಇರಾಣ, ತುರ್ಕಸ್ತಾನ-ಎಷ್ಟು ಜನರಿಗೆ ಗೊತ್ತಿತ್ತು. ಇಂದಿನ ವಿದ್ಯಾರ್ಥಿ ಇವನ್ನೆಲ್ಲ ಬಲ್ಲ, ಇಂದಿನ ವಿದ್ಯಾರ್ಥಿಯ ಅಭ್ಯಾಸದಲ್ಲಿ ಆಳ ಕಡಿಮೆ ಎಂದು ಕಂಡರೂ ಹರವು ಬಹಳ ವಿಸ್ತಾರವಾದುದು.

ಇಂದಿನ ವಿದ್ಯಾರ್ಥಿ ರಾಷ್ಟ್ರದ ಸೈನಿಕ, ಎನ್. ಸಿ. ಸಿ. ಕೆಡೆಟ, ಶ್ರಮದಾನದ ಸ್ವಯಂಸೇವಕ, ಆಟಗಾರ, ನಟ, ಸಾಮಾಜಿಕ ಪ್ರಜ್ಞೆಯುಳ್ಳವ. ಅವನು ಎನ್. ಸಿ. ಸಿ. ಯಲ್ಲಿ ಭಾಗವಹಿಸಬೇಕು, ತನ್ನ ತನ್ನ ಶಾಲೆ ಕಾಲೇಜುಗಳ ಬಗ್ಗೆ ಅಭಿಮಾನ ತಾಳಬೇಕು, ಅಂತರ್‌ಶಾಲಾ ಇಲ್ಲವೆ ಕಾಲೇಜ್ ಆಟಗಳಲ್ಲಿ ಭಾಗ ವಹಿಸಬೇಕು; ಕಾಲೇಜಿನ ಸ್ನೇಹ ಸಮ್ಮೇಲನಗಳಲ್ಲಿ ಸಂಚಾಲಕನಾಗಿಯೋ, ನಟನಾಗಿಯೋ ಭಾಗವಹಿಸಬೇಕು; ಆಟಪಾಟಗಳಲ್ಲಿ ಭಾಗವಹಿಸಿಯೋ ಕೂಗಿಕೊಂಡೋ ತನ್ನ ಮಿತ್ರರನ್ನು ಹುರಿದುಂಬಿಸಬೇಕು; ಯುವಜನೋತ್ಸವಗಳಲ್ಲಿ ಭಾಗವಹಿಸಬೇಕು; ದೇಶದಲ್ಲಿ ಏನು ನಡೆದಿದೆ—ಚೀನಾ ಏನು ಮಾಡಿತು ? ಪಾಕಿಸ್ತಾನದ ಮುಂದಿನ ಕುತಂತ್ರವೇನು ? ಸಿಂಹಳದ ಒಳಧ್ವನಿಯೇನು ? ನೆಹರೂ ಏನು ಹೇಳಿದರು-ಇವನ್ನೆಲ್ಲ ಅರಿತಿರಬೇಕು. ಇಷ್ಟೆಲ್ಲ ಮಾಡಿ, ತನ್ನ ಪೂರ್ವಸೂರಿಯಾದ ವಿದ್ಯಾರ್ಥಿ ಯಾವ ಪರೀಕ್ಷೆಗೆ ಯಾವ ರೀತಿ ಕಟ್ಟುತ್ತಿದ್ದನೋ ಅದೇ ರೀತಿ ತಾನೂ ಕಟ್ಟಬೇಕು ಇದನ್ನೆಲ್ಲ ನೋಡಿದಾಗ, ಇಂದಿನ ವಿದ್ಯಾರ್ಥಿಯ ಜೀವನ ಹೂವಿನ ಹಾಸುಗೆಯಲ್ಲ; ಮುಳ್ಳಿನ ಮಾರ್ಗ ಎಂಬುದು ಸ್ಪಷ್ಟವಾಗಿ ಕಂಡುಬರುತ್ತದೆ. ವಿದ್ಯಾರ್ಥಿಗಳಿಗೆ ಅನ್ವಯಿಸುವ ಈ ಮಾತು ಅಧ್ಯಾಪಕರಿಗೂ ವಿಶ್ವವಿದ್ಯಾಲಯಗಳಿಗೂ ಅನ್ವಯಿಸುತ್ತದೆ. ಅವರೆಲ್ಲ ಬೀಸುವ ಈ ಗಾಳಿಯ ದಿಕ್ಕನ್ನು ಸೂಚಿಸುವ ಗಾಳಿಚಕ್ರಗಳಾಗಬೇಕಾಗಿದೆ.

ಅದೂ ಹೋಗಲಿ, ಇಷ್ಟೆಲ್ಲ ಕಷ್ಟಪಟ್ಟರೂ ಇಂದಿನ ಸಾಮಾನ್ಯ ವಿದ್ಯಾರ್ಥಿಗೆ ಸಿಗುವ ಪ್ರತಿಫಲವಾದರೂ ಏನು ? "ಶಿಕ್ಷಣಮಟ್ಟ ಕೆಳಗಿಳಿದಿದೆ" ಎಂಬ ಬಿಲ್ಲತ್ತು; 'ನಾಸ್ತಿ' ನೌಕರಿ.

ಇಷ್ಟು ಪರಿಶ್ರಮಪಟ್ಟು ತಾನು ಮೇಲು ಬಂದಿರುವಾಗ ಸಮಾಜ ತನಗೆ ಕೊಡದಿದ್ದ ಅವಕಾಶವನ್ನು ಅಷ್ಟು ದುಡಿಯದಿದ್ದವನಿಗೆ ಕೊಟ್ಟಾಗ ಆದರ್ಶಜೀವಿಯಾದ ವಿದ್ಯಾರ್ಥಿಯ ಮನಸ್ಸು ಮುದುಡುತ್ತದೆ, ಕಹಿಯಾಗುತ್ತದೆ, ಮಾನವ ದ್ವೇಷಿಯಾಗುತ್ತದೆ, ಜೊತೆಗೆ ಶಿಕ್ಷಣ ಮಟ್ಟದ ಮಾತು ಬಂದಾಗಲಂತೂ ರೋಷಪೂರಿತವಾಗುತ್ತದೆ.

ಆದ್ದರಿಂದ "ಶಿಕ್ಷಣಮಟ್ಟ"ದ ಬಗ್ಗೆ ನಾವು ಮಾತಾಡುವಾಗ ಕೇವಲ spelling ಬಾಯಿಲೆಖ್ಖ

ಗಳ ಚವಲಿ ಚಾವಲಿಯಿಂದ ಶಿಕ್ಷಣಮಟ್ಟವನ್ನು ನಿಷ್ಕರ್ಷಿಸುವ ಹವ್ಯಾಸವನ್ನು ಬಿಟ್ಟುಬಿಡಬೇಕು.

ಇಂದಿನ ವಿದ್ಯಾರ್ಥಿಯಲ್ಲಿ ಏಕಮುಖತೆ ಕಡಿಮೆಯಾಗಿ ಕಂಡು ಬರುತ್ತಿದ್ದರೆ, ಸುತ್ತಲಿನ ರಾಜಕೀಯ, ಸಾಮಾಜಿಕ ಜೀವನವೇ ಕಾರಣವೆಂಬುದನ್ನು ಗಮನದಲ್ಲಿಡಬೇಕು. ಎಲ್ಲಕ್ಕೂ ಹೆಚ್ಚು ಪೆಟ್ರಿಕ ಪದ್ಧತಿಯ ಇಂದಿನ ಯುಗದಲ್ಲಿ ಹಳೆಯ ಸೇರು ಅಚ್ಚೇರುಗಳ ಅಳತೆಯ ಮಾನದಂಡವನ್ನು ಬಿಡಬೇಕು. ಇಂದಿನ ಪರೀಕ್ಷಾ ಪದ್ಧತಿ, ಎಂದೊ ಹೊಲಸಿಟ್ಟ ಅಂಗಿ, ಬೆಳೆದು ದೊಡ್ಡದಾದ ಕೂಸಿಗೂ ಅದನ್ನೇ ಹಾಕದಿರೋಣ, ಶಿಕ್ಷಣದ ಕಲ್ಪನೆ, ಮತ್ತು ಆಂತರ್ಯ ಇಂದು ಬದಲಾದಾಗ, ಪರೀಕ್ಷಾ-ಕ್ರಮವನ್ನು ಅವಶ್ಯವಾಗಿ ಬದಲಿಸೋಣ, ಅಂದರೆ ಹೊಗೆಗೊಂಡ ಚಿತ್ರಲತೆ, 'ಧೂಳಿಗೊಂಡ ಛತ್ತಗೆ, ಮಂಜುಗೊಂಡ ಅಬ್ಬನಿಯಂತೆ ಮುದುಡಿದ ನಮ್ಮ ವಿದ್ಯಾರ್ಥಿಗಳ ಚಿತ್ರ ಎದ್ದು ಕಂಡೀತು. ಶಿಕ್ಷಣಮಟ್ಟ ಕಡಿಮೆಯಾಗಿದೆಯೆಂಬ ಆತ್ಮತೃಪ್ತಿಯ ಹಕ್ಕಳಿಕೆಯ ಮಾತು ನಿಂತೀತು.

# ನಮ್ಮ ಶಿಕ್ಷಣದ ಮಟ್ಟ ಇಂದು ಕಡಿಮೆಯಾಗುತ್ತಿಲ್ಲ

ಲೇಖಕರು :
ಶ್ರೀ ಸ. ಸ. ಮಾಳವಾಡ
ಪ್ರಿನ್ಸಿಪಾಲ
ಕರ್ನಾಟಕ ಆರ್ಟ್ಸ ಕಾಲೇಜ, ಧಾರವಾಡ

'ನಮ್ಮ ಶಿಕ್ಷಣದ ಮಟ್ಟ ಇಂದು ಕಡಿಮೆಯಾ-ಗುತ್ತಿದೆ' ಎಂಬುದು ಇಂದಿನ ಸಾಮಾನ್ಯ ನಂಬುಗೆಯಾದಂತಿದೆ.

ಕರ್ನಾಟಕ ವಿದ್ಯಾಪೀಠದ ವಿಶಾಲ, ಪ್ರಶಾಂತ ವಾಚನಮಂದಿರದಲ್ಲಿ ವ್ಯಾಸಂಗನಿಷ್ಠೆಯಿಂದ ಓದುವುದರಲ್ಲಿ ಮಗ್ನರಾದ ವಿದ್ಯಾರ್ಥಿಗಳನ್ನು ಕಂಡಾಗಲೆಲ್ಲ ನನಗೆ ಮೇಲ್ಕಂಡ ನಂಬುಗೆಯ ಬಗೆಗೆ ಸಂದೇಹ ತಲೆದೋರಿದೆ. ಸೀಮಿತ ಸೌಲಭ್ಯಗಳಿರುವ ಕರ್ನಾಟಕ ಕಾಲೇಜಿನ ವಾಚನಮಂದಿರದಲ್ಲಿಯೂ ಎಂದಿಗಿಂತ ಈಗ ಹೆಚ್ಚು ಜನ ವಿದ್ಯಾರ್ಥಿಗಳು ಮೌನವ್ಯಾಸಂಗದಲ್ಲಿ ತೊಡಗಿರುವುದನ್ನು ನಾನು ನಿತ್ಯವೂ ನೋಡುತ್ತೇನೆ. ಈ ಮಾತು ಅನೇಕ ವಿದ್ಯಾಲಯಗಳಿಗೆ ಅನ್ವಯಿಸುತ್ತಿದೆ. ಪರೀಕ್ಷೆಗಳ ಅಭ್ಯಾಸಕ್ರಮ ಈಗ ಹೆಚ್ಚು ವ್ಯಾಪಕವಾಗಿ ಪರಿಣಮಿಸಿದೆ. ವಿವಿಧ ಪರೀಕ್ಷೆಗಳಲ್ಲಿ ತೇರ್ಗಡೆಯಾಗುವವರ, ಮೇಲಿನವರ್ಗ ಪಡೆಯುವವರ ಸಂಖ್ಯೆಯೂ ಹೆಚ್ಚಾಗಿದೆ. ಉಚ್ಚ ವಿದ್ಯಾರ್ಜನೆಗೆಂದು ವಿದೇಶಗಳಿಗೆ ಪಯಣ ಕೈಕೊಳ್ಳುವವರ ಸಂಖ್ಯೆಯೂ ಏರುತ್ತಿದೆ. ವಿದ್ಯಾಪೀಠದ ಅಧ್ಯಾಪಕರ ವಿದ್ಯಾಪ್ರಶಸ್ತಿಗಳು ಉಚ್ಚ ಮಟ್ಟದವೇ ಆಗಿವೆ. ವಿದ್ಯಾಲಯಗಳಲ್ಲಿ ಪ್ರವೇಶಪಡೆಯುವ ಹಲವು ವಿದ್ಯಾರ್ಥಿಗಳ ಇಂದಿನ ಪರೀಕ್ಷೆಯ ಫಲಿತಾಂಶ ತೃಪ್ತಿಕರವೇ ಇರುತ್ತಿದೆ. ಈ ಎಲ್ಲ ಅಂಶಗಳನ್ನು ಗಮನಿಸಿದಾಗ ನಮ್ಮ ಶಿಕ್ಷ-ಣದ ಮಟ್ಟವು ಇಂದು ಕಡಮೆಯಾಗುತ್ತಿದೆಯೆಂದು ತಿಳಿಯಲು ಬರುವಂತಿಲ್ಲ.

ಹಾಗಿದ್ದರೆ ನಮ್ಮ ಈಗಿನ ಪರೀಕ್ಷೆಗಳ ಮಟ್ಟವೇ ಕಡಮೆಯಾಗುತ್ತಿದೆಯೆಂದು ಹೇಳಬೇಕೇ? ಈ ಪ್ರಶ್ನೆಯು ವಿಚಾರಣೀಯವೆಂದು ತೋರುತ್ತಿದೆ. ಅಲ್ಲದೆ ನಮ್ಮ ಸಾರ್ವಜನಿಕ, ನೈತಿಕ ಮೌಲ್ಯಗಳ ಮಟ್ಟದ ಮಾತೂ ಇಲ್ಲಿ ಪ್ರಸ್ತುತವಾಗುತ್ತದೆ.

ವಿದ್ಯಾಲಯಗಳಲ್ಲಿಯ ಪ್ರವೇಶದ ವಿಷಯವನ್ನು ತೆಗೆದುಕೊಳ್ಳಬಹುದು. ವಿದ್ಯಾಸಂಸ್ಥೆಗಳಿಗೆ ದೊರೆಯುವ ಸಹಾಯಧನದ ಮೊತ್ತ, ವೈಯಕ್ತಿಕ, ಸಾಮಾಜಿಕ, ರಾಜಕೀಯ ಒತ್ತಡಗಳ ಪ್ರಭಾವ, ಸರ್ವರಿಗೂ ಶಿಕ್ಷಣದ ಸೌಲಭ್ಯ ದೊರೆಯಬೇಕೆಂಬ ದೃಷ್ಟಿ - ಇವುಗಳ ಪರಿಣಾಮ ಇಂದಿನ ಪ್ರವೇಶಗಳಲ್ಲಿ ಕಂಡುಬರುತ್ತಿದೆ. ನ್ಯಾಯಮಂದಿರಗಳಲ್ಲಿ 'ರಿಟ್' ಹಾಕುವ ಹೆದರಿಕೆಯಿಂದಾಗಿ ಇಂದಿನ ವಿದ್ಯಾರ್ಥಿಗಳಲ್ಲಿ ಶಿಕ್ಷಣಕ್ರಮದ ಶಿಸ್ತನ್ನು ಕಾಯ್ದುಕೊಳ್ಳುವುದು ಕಠಿಣವಾಗಿದೆಯೆಂಬ ಮಾತೂ ಇದೆ. ಪರೀಕ್ಷೆಗಳಲ್ಲಿ ಒಮ್ಮೆ ಅಯಶಸ್ವಿಯಾದವರಿಗೂ ಶಿಷ್ಯವೇತನವನ್ನು ಮುಂದುವರಿಸುವ ಕೆಲವೊಂದು ಅನುಕೂಲತೆ ಇದ್ದಂತಿದೆ. ಈ ಬಗೆಯ ಸಂಗತಿಗ-ಳಿಂದಾಗಿ ಶಿಕ್ಷಣದ ಮಟ್ಟವು ಕಡಮೆಯಾಗುವುದು ಸಹಜವೂ ಆಗಿದೆ.

ತಮ್ಮ ಮಕ್ಕಳಿಗೆ ಪ್ರವೇಶ ದೊರಕಿಸುವಲ್ಲಿ, ಪರೀಕ್ಷೆಯಲ್ಲಿ ಯಶ ದೊರೆಯುವಂತೆ ಪ್ರಯತ್ನಿಸುವ ದಿಸೆಯಲ್ಲಿ ಪಾಲಕರು ತೋರುವ ಆಸ್ಥೆ ಪರಿಶ್ರಮಗಳನ್ನು ವಿದ್ಯಾರ್ಥಿಗಳ ಅಭ್ಯಾಸದ ಬಗೆಗೆ ತೋರುವುದಿಲ್ಲವೆಂಬ ಕಟು ಅನುಭವವೂ ಇದೆ.

ಅಧ್ಯಾಪಕರಲ್ಲಿ ವಿದ್ಯಾನಿಷ್ಠೆಗೆ ವ್ಯತಿರಿಕ್ತವಾದ ಆಸ್ಥೆಗಳು, ನಿಷ್ಠೆಗಳು ಬೆಳೆದುಬಂದ ಮಾತಿಗೂ ಉದಾಹರಣೆಗಳು ದೊರೆಯುತ್ತಿವೆ.

ಪರೀಕ್ಷೆಗಳಲ್ಲಿಯ ಅಕ್ರಮದ ಮಾತೂ ಆಗಾಗ ಕೇಳಬರುತ್ತಿದೆ.

ಇಂದಿನ ವಿದ್ಯಾರ್ಥಿಗಳಲ್ಲಿ ಅಭಿವ್ಯಕ್ತಿಯ ಸಾಮರ್ಥ್ಯದ ಅಭಾವವಿದೆ. ಇಂಗ್ಲಿಷ ಮಾಧ್ಯಮವಿರುವಾಗಲೂ ಇಂಗ್ಲಿಷದ ಮಟ್ಟವು ನಿಕೃಷ್ಟವೇ ಆಗಿದೆ.

ಪರೀಕ್ಷೆಗೆ ಕಟ್ಟುವವರ, ತೇರ್ಗಡೆಯಾಗುವವರ ಸಂಖ್ಯಾಮಾನದಿಂದ ನಮ್ಮ ಶಿಕ್ಷಣದ ಅಪವ್ಯಯವು ಸ್ಪಷ್ಟವಾಗುವಂತಿದೆ. ವಿದ್ಯಾರ್ಥಿಗಳ ಅಭ್ಯಾಸಕ್ರಮದಲ್ಲಿ ವಿಪುಲತೆ, ಲಂಬಾಯಮಾನವಾಗುತ್ತಿರುವ ಪಠ್ಯೇತರ ಚಟುವಟಿಕೆಗಳು, ಸಾಮಾಜಿಕ ಹೊಣೆಗಳು ಅವರ ವ್ಯಾಸಂಗಸಾಮರ್ಥ್ಯಕ್ಕೆ ತೊಡಕಾಗುವ ಸಂದರ್ಭವಿದೆ.

ಆದರೆ ಇಂದಿನ ವಿದ್ಯಾರ್ಥಿಗಳ ಬೌದ್ಧಿಕಸಾಮರ್ಥ್ಯ ಕಡಮೆಯೆಂದು ಹೇಳುವುದು ಸರಿಯಾಗಲಾರದು. ಹಲವರಲ್ಲಿ ಮಹತ್ವಾಕಾಂಕ್ಷೆ, ಪರಿಶ್ರಮ, ವ್ಯಾಸಂಗನಿಷ್ಠೆ ಹೆಚ್ಚಾದುದು ಕಂಡುಬರುತ್ತಿದೆ. ಜ್ಞಾನಾರ್ಜನೆಯ ಸಾಧನಗಳೂ ಈಗ ಎಂದಿಗಿಂತ ಹೆಚ್ಚಾಗಿವೆ.

ಶಿಕ್ಷಣಕ್ಕಿಂತ ನಮ್ಮ ಸಾಮಾಜಿಕ, ನೈತಿಕ ಮೌಲ್ಯಗಳ ಮಟ್ಟ ಕಡಮೆಯೆಂದು ಹೇಳುವುದೇ ಉಚಿತವೆಂದು ನನಗೆ ತೋರುತ್ತದೆ.

# ಇಂದಿನ ಶಿಕ್ಷಣ ಇಳಿಮುಖವಾಗಿಲ್ಲ; 'ವೈವಿಧ್ಯ ಹೆಚ್ಚಿದೆ'

ಲೇಖಕರು :
ಶ್ರೀ ನಾಡಿಗೇರ ಶಿವರಾಯರು
ಮುಖ್ಯಾಧ್ಯಾಪಕರು
ಕೆ. ಇ. ಬೋರ್ಡ ಹಾಯಸ್ಕೂಲ, ಧಾರವಾಡ

ಇಂದಿನ ಶಿಕ್ಷಣವು ಇಳಿಮುಖವಾಗಿದೆಯೆ ? ಎಂಬ ಸಂಶಯವು ಕೆಲವರನ್ನು ಬಾಧಿಸುತ್ತಿದ್ದರೆ, ಕೆಲವರು ಇಂದಿನ ಶಿಕ್ಷಣವು ಇಳಿಮುಖವಾಗಿದೆ ಎಂದು ಸ್ಪಷ್ಟವಾಗಿ ವಾದಿಸುತ್ತಾರೆ. ಇಂದಿನ ಶಿಕ್ಷಣವನ್ನು ಹೀಯಾಳಿಸುವದು ಈಗೀಗ ಒಂದು Fashion ಆಗಿಬಿಟ್ಟಿದೆ. 'ಬಳ್ಳಿಗುರುಡರು ಕೂಡಿ ಹಳ್ಳವನು ಬಿದ್ದಂತೆ' ಇವರ ಲಬ್ಬವಾಗಿದೆ. ಇಂತಹ ಮಾತುಗಳ ಹಿನ್ನೆಲೆಯಲ್ಲಿ ತಾವೇ ಜಾಣರೆಂಬ ಅಹಂ ಭಾವನೆಯೂ ಹಳೆಯದು ಮಾತ್ರ ಹೊನ್ನು ಎಂಬ ಮಡಿವಂತಿಕೆಯೂ ವೈಜ್ಞಾನಿಕ ದೃಷ್ಟಿಕೋನದ ಅಭಾವವೂ ಎದ್ದು ಕಾಣುತ್ತವೆ. ವೈಜ್ಞಾನಿಕ ಯುಗದಲ್ಲಿ ಬಾಳಿ ಬದುಕುತ್ತಿರುವ ನಾವು ವೈಜ್ಞಾನಿಕ ದೃಷ್ಟಿಯಿಂದಲೇ ಈ ವಿಷಯವನ್ನು ಸಮಾಲೋಚಿಸುವದು ಉಚಿತ.

ಜನಪ್ರಿಯ ಪಂಡಿತ ಜವಾಹರಲಾಲಜಿಯವರು ಹೇಳಿದಂತೆ "ಜಗತ್ತು ದಿನೇ ದಿನೇ ಬದಲಾಗುತ್ತಿದೆ.

ಈ ಬದಲಾವಣೆಯೊಂದಿಗೆ ಹೊಂದಿ ನಡೆಯುವವರು ಮಾತ್ರ ಪ್ರಗತಿ ಸಾಧಿಸುತ್ತಾರೆ," ಆದಕಾರಣ ಜಗತ್ತು ಬದಲಾದಂತೆ ಶಿಕ್ಷಣದ ಸಾಧನೆಗಳೂ ಬದಲಾಗಲೇಬೇಕು. ದೇವರೂ ಸಹ ಭಿನ್ನ ಭಿನ್ನ ಪರಿಸರದಲ್ಲಿ ಭಿನ್ನ ಭಿನ್ನ ರೂಪಗಳನ್ನು ತಾಳಿ ಅವತರಿಸಲಿಲ್ಲವೆ? ಪರಮಾತ್ಮನು ಎಲ್ಲ ಪರಿಸ್ಥಿತಿಯಲ್ಲಿಯೂ ವರಾಹಾವತಾರ ಒಂದನ್ನೇ ತಾಳಲಿಲ್ಲ. ಅವತಾರದ ಮೂಲೋದ್ದೇಶವು ದುಷ್ಟಶಕ್ತಿಗಳಿಂದ ಜಗತ್ತನ್ನು ರಕ್ಷಿಸುವುದೇ ಆಗಿತ್ತು. ಈ ಮೂಲೋದ್ದೇಶದಲ್ಲಿ ಬದಲಾವಣೆಯಾಗದೆ ಧರಿಸುವ ರೂಪದಲ್ಲಿ ಬದಲಾವಣೆಯಾದಂತೆ, ಶಿಕ್ಷಣದ ಮೂಲೋದ್ದೇಶದಲ್ಲಿ ಬದಲಾವಣೆಯಾಗದೆ ಶಿಕ್ಷಣವನ್ನು ಕೊಡುವ ಸಾಧನಗಳಲ್ಲಿ, ತಂತ್ರಗಳಲ್ಲಿ ಮಾತ್ರ ಬದಲಾವಣೆಯಾಗಿದೆ.

ಈಗಿನ ಮಹನೀಯರು ಯಾವ ದೃಷ್ಟಿಯಲ್ಲಿ ಶಿಕ್ಷಣವು ಇಳಿಮುಖವಾಗಿದೆ ಎನ್ನುತ್ತಾರೆ ಮತ್ತು ಅದರಲ್ಲಿ ಎಷ್ಟು ಸತ್ಯಾಂಶವಿದೆ ಎಂಬುದನ್ನು ಮಾಧ್ಯಮಿಕ ಶಿಕ್ಷಣದ ಮಟ್ಟಿಗೆ ವಿವೇಚಿಸೋಣ.

**೧. ದೈಹಿಕ—** "ಏನು ಈಗಿನ ಎಸ್. ಎಸ್. ಎಲ್. ಸಿ. ವಿದ್ಯಾರ್ಥಿಗಳ ಬೆಳವಣಿಗೆ? ಎಲ್ಲರೂ ಚೋಟು, ಚೋಟು. ಗಾಳಿಬಿಟ್ಟರೆ ಸಾಕು ಹಾರಿಹೋಗುತ್ತಾರೆ." ಇದೊಂದು ಹೆಚ್ಚಾಗಿ ಕೇಳಿಬರುವ ಮಾತು.

ಹೌದು! ಹಿಂದಿನ ಮ್ಯಾಟ್ರಿಕ್ ವಿದ್ಯಾರ್ಥಿಗಳು ಮೀಸೆ ಹೊತ್ತುಕೊಂಡು ವರ್ಗಕ್ಕೆ ಬರುತ್ತಿದ್ದರು. ಅವರಿಗೆ ತಕ್ಕಂತೆ ಶಿಕ್ಷಕರೂ ಗಟ್ಟಿಗರಾಗಿಯೇ ಇರಬೇಕಾಗಿತ್ತು. ಆಗ ಶಿಕ್ಷಣವು ತಡವಾಗಿ ಪ್ರಾರಂಭವಾಗುತ್ತಿತ್ತು. ಅವರು ಆ ವರ್ಗಕ್ಕೆ ಬರುವ ಹೊತ್ತಿಗೆ ೧೮ ವರ್ಷಕ್ಕೂ (ವಿದ್ಯಾರ್ಥಿಗಳು) ಮಿಕ್ಕಿರುತ್ತಿತ್ತು. ಈಗ? ಈಗ ಶಿಕ್ಷಣವು ಬೇಗನೇ ಪ್ರಾರಂಭವಾಗುವದರಿಂದ ಮಾಧ್ಯಮಿಕ ಶಿಕ್ಷಣದ ಕೊನೆಯ ವರ್ಗಕ್ಕೆ ಬರುವ ಹೊತ್ತಿಗೆ ಬಹಳವೆಂದರೆ ಹದಿನಾರು ವರುಷವೆನ್ನಬಹುದು. ಆದ್ದರಿಂದ ಆ ಕಾಲದ ವಿದ್ಯಾರ್ಥಿಗಳು ಬಲಿತವರಾಗಿರುತ್ತಿದ್ದರು. ಈಗಿನ ವಿದ್ಯಾರ್ಥಿಗಳು ಆ ಮಾನದಿಂದ ನೋಡಿದರೆ ತೀರ ಎಳಸು.

ಹಾಗಾದರೆ ಅವರ ದೈಹಿಕ ಪುಷ್ಟಿ ಆಗದಿರಲು ಈಗಿನ ಶಿಕ್ಷಣವೇ ಕಾರಣವೇ?

ಅಲ್ಲವೆಂದೇ ಹೇಳಬಹುದು. ದೈಹಿಕ ಪುಷ್ಟಿ ಈಗಿನ ವಿದ್ಯಾರ್ಥಿಗಳಿಗೆ ಇಲ್ಲದಿರಲು ಕಾರಣ ಶಿಕ್ಷಣ ಕ್ರಮವಲ್ಲ, ಆದರೆ ಅವರ ಮನೆತನದ ಆರ್ಥಿಕ ಪರಿಸ್ಥಿತಿ. ಹಿಂದಿನ ಕಾಲ ಬಹುಶಃ ಶಾಂತಿ ಹಾಗೂ ಸಮೃದ್ಧತೆಯದು. ಆಗ ಅಲ್ಪ ಬೆಲೆಯಲ್ಲಿ ಪುಷ್ಟಿಕರ ಆಹಾರ ದೊರೆತಂತೆ ಈಗೆಲ್ಲಿ ದೊರೆಯುವದು? ಆದರೂ ಕೆಲವೆಡೆ ಈ ಪರಿಸ್ಥಿತಿಯನ್ನು ಹೋಗಲಾಡಿಸಲು ಅರ್ಧಾವಧಿ ಉಪಾಹಾರ (Midday meals) ಎಂಬ ಸ್ತುತ್ಯವಾದ ಉಪಕ್ರಮವನ್ನು ಪ್ರಾರಂಭಿಸಲಾಗಿದೆ. ಇದರಿಂದ ವಿದ್ಯಾರ್ಥಿಗಳ ಆಹಾರದಲ್ಲಿಯ ಎಷ್ಟೋ ಪುಷ್ಟಿಕರ ಅಂಶಗಳ ಕೊರತೆಯನ್ನು ನೀಗಿಸಬಹುದೆಂದು ತಜ್ಞರು ಅಂದಾಜು ಮಾಡಿದ್ದಾರೆ, ಇದಿಷ್ಟು ವಿದ್ಯಾರ್ಥಿಗಳ ದೈಹಿಕ ರಂಗದ್ದು. ಇನ್ನು ಅವರ ಬೌದ್ಧಿಕ ರಂಗವೆಂತಿದೆ? ನೋಡೋಣ.

ಮೊದಲನೆಯದಾಗಿ ಈಗ ಹೆಚ್ಚಾಗಿ ಚರ್ವಿತ ಚರ್ವಣವಾಗುತ್ತಿರುವ ಇಂಗ್ಲಿಷು ಭಾಷೆಯ ಶಿಕ್ಷಣದ (ಅ) ವಿಷಯು "ಈಗಿನ ವಿದ್ಯಾರ್ಥಿಗಳಿಗೆ ಆಂಗ್ಲ ಭಾಷೆಯ ಪರಿಜ್ಞಾನವೇ ಇಲ್ಲ. ಒಂದು ರಜೆಯ ಚೀಟಿ ಬರೆಯಲೂ ಬಾರದು, ಕೊನೆಗೆ ನಾಲ್ಕು ವಾಕ್ಯಗಳನ್ನು ಕೂಡ ಸರಿಯಾಗಿ ಬರೆಯಲು ಬರುವದಿಲ್ಲ" ಎಂಬ ಮಾತು ಬಹಳವಾಗಿ ಕೇಳಿ ಬರುತ್ತದೆ. ಸರಿ. ಇದೇನು ನಿಜವಿರಬಹುದು. ಆದರೆ— ಇಂದಿನದು ವಿಜ್ಞಾನ-ತಂತ್ರಜ್ಞಾನಗಳ ಯುಗ. "Physics is life" ಎಂಬ ಮಾತಿನ ಅನುಷ್ಠಾನ ನಡೆದಿದೆ. ನಿಜ. ತಂತ್ರಜ್ಞಾನ, ವಿಜ್ಞಾನಗಳಿಲ್ಲದೆ ಪ್ರಗತಿ ಈಗಿನ ಕಾಲದಲ್ಲಿ ಸಾಧ್ಯವಿಲ್ಲ. ಆದ್ದರಿಂದಲೇ ಆಧುನಿಕ ಶಿಕ್ಷಣದಲ್ಲಿ ವಿಜ್ಞಾನದ ಕಡೆಗೆ ಒಲವು ಕಂಡುಬರುತ್ತದೆ. ಭಾಷೆಗಿದ್ದ ಮಹತ್ವವು ಕಡಿಮೆಯಾಗಿ ವಿಜ್ಞಾನಕ್ಕೆ ಹೆಚ್ಚಿನ ಪ್ರಾಶಸ್ತ್ಯ ಬಂದಿದೆ. ಶಿಕ್ಷಣದ ತಕ್ಕಡಿ ವಿಜ್ಞಾನದ ಕಡೆಗೆ ವಾಲಿದೆ.

ಎರಡನೆಯದಾಗಿ, ಶಿಕ್ಷಣದ ಮಾಧ್ಯಮವು ಆಂಗ್ಲ ಭಾಷೆಯ ಬದಲು ಮಾತೃಭಾಷೆಯಾದ ಕಾರಣ ವಿವಿಧ ವಿಷಯಗಳನ್ನು ಕಲಿಯುವಾಗ ಕೇಳಿ ಕಲಿಯಬಹುದಾದ ಆಂಗ್ಲಭಾಷೆಯ ಪದಸಂಯೋಜನೆ, ವೈವಿಧ್ಯಪೂರ್ಣವಾಕ್ಯರಚನೆ ಇವುಗಳ ಲಾಭ ಈಗಿನ ವಿದ್ಯಾರ್ಥಿಗಳಿಗೆ ಆಗುವ ಹಾಗಿಲ್ಲ. ಆಗ ಆಗುತ್ತಿದ್ದ ಆ ಭಾಷೆಯ ಪ್ರೌಢತ್ವದ ಕಲ್ಪನೆಯು ಈಗಿನ ವಿದ್ಯಾರ್ಥಿಗಳಿಗೆ ಬರುವದಿಲ್ಲ.

ಸರಕಾರದವರು ಆಂಗ್ಲಭಾಷೆಯ ಬಗ್ಗೆ ನಿರ್ದಿಷ್ಟ ಧೋರಣೆಯನ್ನು ಅನುಸರಿಸದಿರುವದೂ ಮೂರನೆಯದೊಂದು ಕಾರಣವೇ ಆಗಿದೆ ಎನ್ನಬಹುದು. ಒಮ್ಮೆಯಂತೂ ಆಂಗ್ಲಭಾಷೆಯ ಅಧ್ಯಯನವನ್ನು ೮ ನೆಯ ಇಯತ್ತೆಯಿಂದ ಪ್ರಾರಂಭಿಸಬೇಕೆಂದು ನಿಯಮಮಾಡಿದರು. ಈ ಕಾರಣಕ್ಕಾಗಿ ಆ ಭಾಷೆಯ ಅಭ್ಯಾಸದ ಅವಧಿಯೂ ಕಡಿಮೆಯಾಗಿ ವಿದ್ಯಾರ್ಥಿಗಳ ಪ್ರಗತಿಯು ಈ ವಿಷಯದಲ್ಲಿ ಕುಂಠಿತವಾಯಿತು. ಆದರೆ ಹೀಗೆ ಮಾಡಲು ಬೆಂಬಲಕೊಟ್ಟ ಅಧಿಕಾರಿಗಳು, ಯೋಜನೆಯನ್ನು ರೂಪಿಸಿದವರು ತಮ್ಮ ಮಕ್ಕಳನ್ನು ಮಾತ್ರ ಆಂಗ್ಲಭಾಷೆಯ ಮೂಲಕ ಅಭ್ಯಾಸ ನಡೆಯುವ ಶಾಲೆಗಳಿಗೆ ಕಳುಹಿಸಿದುದು ಕುತೂಹಲಕಾರೀ ವಿಷಯವಾಗಿದೆ.

ನಾಲ್ಕನೆಯದಾಗಿ, ಬೇರೆ ಬೇರೆ ಹುದ್ದೆಗಳಿಗೆ ಅಭ್ಯರ್ಥಿಗಳ ಆಯ್ಕೆಯನ್ನು ಮಾಡುವಾಗ ಯೋಗ್ಯ ಉಮೇದುವಾರರನ್ನು ಆರಿಸುವ ಕ್ರಮವನ್ನು ಅನುಸರಿಸದೆ ಅಕ್ರಮ ವ್ಯಾಪಾರವನ್ನನುಸರಿಸಿ ಅಯೋಗ್ಯರನ್ನು ಆರಿಸಿ ಅವರಿಗೆ ಒಂದು ಶುದ್ಧ ವಾಕ್ಯವನ್ನೂ ಬರೆಯಲು ಬರುವದಿಲ್ಲೆಂದು ಆಪಾದಿಸಿದರೆ ಅದರ ಹೊಣೆ ಯಾರದು? ಅದಕ್ಕೆ ಹೊಣೆ ಆಯ್ಕೆ ಮಾಡುವವರದೇ ಅಲ್ಲವೆ?

ಇನ್ನು ವೈಜ್ಞಾನಿಕ ರಂಗವನ್ನಷ್ಟು ಹಿಂಜೋಣ.

**(ಬ) ವೈಜ್ಞಾನಿಕ ಶಿಕ್ಷಣ—** ಮೇಲೆ ಹೇಳಿದಂತೆ ಭಾಷೆಯ ಮೇಲಿನ ಮಹತ್ವವು ಕಡಿಮೆಯಾಗಿ ವಿಜ್ಞಾನ ಮತ್ತು ಗಣಿತ ವಿಷಯಗಳ ಮೇಲಿನ ಮಹತ್ವವು ಹೆಚ್ಚಾಗಿದೆ. ಅದಕ್ಕೆ ತಕ್ಕಂತೆ ಮೊದಲಿನ ವಿದ್ಯಾರ್ಥಿಗಿಂತ ಈಗಿನ ವಿದ್ಯಾರ್ಥಿಗೆ ಸಾಮಾನ್ಯ ವಿಜ್ಞಾನದ ಬಗೆಗೆ ಇರುವ ವಿಷಯಸಂಗ್ರಹವು ಹೆಚ್ಚಾಗಿದೆ. ಮೊದಲಿನಂತೆ ಈಗಿನ ಅಭ್ಯಾಸಕ್ರಮ ಬರೀ ರಸಾಯನಶಾಸ್ತ್ರ ಹಾಗು ಭೌತಶಾಸ್ತ್ರಗಳಿಗೆ ಪರಿಮಿತವಾಗಿರದೆ ಅದು ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರ, ಭೂಗರ್ಭಶಾಸ್ತ್ರ ಹಾಗೂ ಖಗೋಲಶಾಸ್ತ್ರಗಳನ್ನೂ ಒಳಗೊಂಡಿದೆ. ವಿಶಾಲವಾಗಿದೆ.

ಇದಲ್ಲದೆ ಮೊದಲಿಗಿಂತ ಈಗ ಕಲಿಸಲು ವೈಜ್ಞಾನಿಕ ಶಿಕ್ಷಣ ಸಾಧನಸಾಮುಗ್ರಿಗಳೂ ಸಾಕಷ್ಟು ಹೆಚ್ಚಾಗಿವೆ. ಕಲಿಸುವ ಪದ್ಧತಿಯಲ್ಲಿಯೂ ಬಹಳಷ್ಟು ಸುಧಾರಣೆಯಾಗಿದೆ. ಮಾತೃಭಾಷೆಯಲ್ಲಿಯೇ ಶಿಕ್ಷಣವನ್ನು ಕೊಡುತ್ತಿದ್ದ ಕಾರಣ ವಿದ್ಯಾರ್ಥಿಗಳಿಗೆ ವಿಷಯಗ್ರಹಣ ಮಾಡಲು ಮತ್ತು ಗ್ರಹಿಸಿದುದನ್ನು ಅಭಿವ್ಯಕ್ತಗೊಳಿಸಲು ಸುಲಭವಾಗುತ್ತದೆ. ರೇಡಿಯೋ, ರಾಡಾರ್, ಟೆಲಿವಿಜನ್ ಮೊದಲಾದವುಗಳ ರಚನೆಗೆ ತಳಹದಿಯಾದ ತತ್ತ್ವಗಳನ್ನು ತಿಳಿದುಕೊಂಡು ಅವುಗಳನ್ನು ಸ್ಪಷ್ಟವಾಗಿ ತಿಳಿಸಿಹೇಳುವ ಶಕ್ತಿಯುಳ್ಳವರಾಗಿದ್ದಾರೆ ಈಗಿನ ವಿದ್ಯಾರ್ಥಿಗಳು.

**(ಕ) ಸಾಮಾಜಿಕ ಅಭ್ಯಾಸ—** ಮೇಲಿನದು ವಿಜ್ಞಾನ ವಿಷಯವಾಯಿತು. ಈಗ ಸಾಮಾಜಿಕ ಅಭ್ಯಾಸದ ಕಡೆಗೆ ಹೊರಳೋಣ—

ಅಖಂಡ ಭೂಮಂಡಲವು ಒಂದು ರಂಗಭೂಮಿ, ಮತ್ತು ರಂಗಭೂಮಿಗೆ ಅನುಗುಣವಾಗಿ ಆಯಾ ಪಾತ್ರಗಳು ನಾಟ್ಯವಾಡುತ್ತವೆ. ಅದಕ್ಕಾಗಿ ಆಧುನಿಕ ಸಾಮಾಜಿಕ ಅಭ್ಯಾಸಕ್ರಮದಲ್ಲಿ ಈ ಪ್ರಪಂಚ ರಂಗಭೂಮಿಯ ವಿವರಣೆಯನ್ನು ಕೊಡುವ ಭೂಗೋಲ, ನಾಟ್ಯದ ವಿವರಣೆಯನ್ನು ಕೊಡುವ ಇತಿಹಾಸ ಇವುಗಳು ಭಿನ್ನವಾಗಿರದೆ ಒಂದಕ್ಕೊಂದು ಹಾಸುಹೊಕ್ಕಾಗಿ ನೆಯ್ದುಕೊಂಡಿವೆ.

ಜಗತ್ತಿನಲ್ಲಿ ನಡೆದ ಎಲ್ಲ ಪ್ರಮುಖ ಕ್ರಾಂತಿಗಳ ಕಲ್ಪನೆಯನ್ನಲ್ಲದೆ ಆಧುನಿಕ ರಾಜಕೀಯ ಸಂಗತಿಗಳ ಪರಿಚಯವನ್ನು ಈಗಿನ ಅಭ್ಯಾಸಕ್ರಮವು ಮಾಡಿಕೊಡುತ್ತದೆ.

**ಡ) ಕೈಕೆಲಸ—** ಓದಿ ಕಲಿಯುವದಕ್ಕಿಂತ ಮಾಡಿ ಕಲಿಯುವದು ಹೆಚ್ಚು ಉಪಯುಕ್ತವಾದುದು, ಎಂಬ ತತ್ತ್ವವನ್ನನುಸರಿಸಿ ಈಗಿನ ಅಭ್ಯಾಸಕ್ರಮದಲ್ಲಿ ಕೈ ಕೆಲಸವನ್ನು ಸೇರಿಸಲಾಗಿದೆ.

**ಇ) ಚಿತ್ರಕಲೆ ಹಾಗೂ ಸಂಗೀತ—** ಆಧುನಿಕ ಅಭ್ಯಾಸಕ್ರಮದಲ್ಲಿ ಚಿತ್ರಕಲೆಗೂ ಮಹತ್ವವಿದೆ. ವರಕವಿ ಟಾಗೋರರು ಹೇಳಿದಂತೆ "Music and fine arts are among the highest means of national expression, without them the people remain inarticulate" ಸಂಗೀತ ಚಿತ್ರಕಲೆಗಳು ಜೀವನದಲ್ಲಿ ಆವಶ್ಯಕ ವಿಷಯಗಳು ತಾಂತ್ರಿಕ ಅಭ್ಯಾಸಕ್ರಮದಲ್ಲಿಯೂ ಚಿತ್ರಕಲೆಯ ಅವಶ್ಯಕತೆ ಇರುವದರಿಂದ ಅದಕ್ಕೆ ಹೆಚ್ಚಿನ ಪ್ರಾಶಸ್ತ್ಯ ಬಂದಿದೆ. "ಚಿಕ್ಕ ಮಕ್ಕಳ ಚಿತ್ರಕಲೆ" (Child Art) ವಿಷಯ ಎಂದು ವಿಶೇಷ ಪ್ರಾಶಸ್ತ್ಯ ಪಡೆದು ಹೆಚ್ಚು ಹೆಚ್ಚಾಗಿ ಪ್ರಗತಿಹೊಂದಹತ್ತಿದೆ. ಇಂದಿನ ವಿದ್ಯಾರ್ಥಿ ತನ್ನ ಮನಸ್ಸಿನ ಕಲ್ಪನೆಗಳನ್ನು ತನಗೆನಿಸಿದಂತೆ ಸ್ವತಂತ್ರವಾಗಿ ಚಿತ್ರಿಸಲು ಬಯಸುತ್ತಿದ್ದಾನೆ. ಶಿಕ್ಷಣ ಕ್ರಮ ಅದಕ್ಕೆ ಪ್ರಾಧಾನ್ಯವನ್ನೂ ಕೊಡತೊಡಗಿದೆ.

ಒಟ್ಟಿನಲ್ಲಿ ಹೇಳುವದಾದರೆ ಶಿಕ್ಷಣದಲ್ಲಿ ಆದ ಸ್ಥಿತ್ಯಂತರಗಳು ಪ್ರಗತಿಪರವಾಗಿವೆ. ಶಿಕ್ಷಣವಿಂದು ಏಕ ಮುಖವಾಗಿರದೆ ಬಹುಮುಖವಾಗಿದೆ. ವೈವಿಧ್ಯ ಪೂರ್ಣವಾಗಿದೆ. ಹಿಂದೆ ಶಿಕ್ಷಣವು ಕಾರಕೂನರನ್ನು ತಯಾರಿಸುವ ಕ್ರಮ ಎಂದು ಅಭಿಧಾನ ಪಡೆದಿತ್ತು. ಈಗ ಔದ್ಯೋಗಿಕ ಬೆಳವಣಿಗೆಯ ಮೂಲಕ ಜೀವನವು ಬಹುಮುಖವಾಗಿದೆ. ಅದಕ್ಕನುಗುಣವಾಗಿ ಶಿಕ್ಷಣವು ತಕ್ಕಮಟ್ಟಿಗಾದರೂ ಬಹುಮುಖ ತರಬೇತಿಯನ್ನು ಕೊಡಲು ಪ್ರಯತ್ನಿಸುತ್ತಿದೆ. ನಾಟಕ ಹಾಗೂ ಚರ್ಚಾಕೂಟಗಳು, ಎನ್. ಸಿ. ಸಿ., ಎ.ಸಿ.ಸಿ. ಸ್ಕಾಟ ತಂಡಗಳು, ವಿಜ್ಞಾನ ಸಂಘಗಳು, ಸಂಗೀತ ಕಲಾ ಗುಂಪುಗಳು -ಇವೆಲ್ಲವು ಶಿಕ್ಷಣದ ವೈವಿಧ್ಯದ ಲಕ್ಷಣಗಳಲ್ಲದೆ ಮತ್ತೇನು?

ಎರಡನೆಯದಾಗಿ ಪಂಚವಾರ್ಷಿಕ ಯೋಜನೆಗಳಿಂದ ದೇಶದಲ್ಲಿ ಔದ್ಯೋಗಿಕ ಹಾಗೂ ವೈಜ್ಞಾನಿಕ ಪ್ರಗತಿಯುಂಟಾಗಿದೆ. ಈ ಪ್ರಗತಿಗಾಗಿ ನಾವು ಕೆಲವು ಪರರಾಷ್ಟ್ರಗಳಿಂದ ಪ್ರಮುಖ ತಂತ್ರಜ್ಞರ ಸಹಾಯವನ್ನು ಕೆಲವು ವಿಶಿಷ್ಟ ಯೋಜನೆಗಳಲ್ಲಿ ಪಡೆದಿರಬಹುದು. ಆದರೆ ಕಾರ್ಯದ ಬಹುಭಾಗದ ಹೊಣೆ ಹೊತ್ತವರೆಲ್ಲರೂ ಭಾರತೀಯರೇ ಎಂಬದನ್ನು ನಾವು ಗಮನಿಸಬೇಕು. ತಮ್ಮ ಕಾರ್ಯವನ್ನು, ಸುಗಮವಾಗಿ ಸಾಗಿಸಿಕೊಂಡು ಹೋಗುವಷ್ಟು ಶಕ್ತಿಯನ್ನು ದೊರಕಿಸಲು ಅವರಿಗೆ ದೊರೆತ ಶಿಕ್ಷಣವೇ ಕಾರಣವಾಗಿದೆ.

ಒಟ್ಟಿನಲ್ಲಿ ಇಂದಿನ ಶಿಕ್ಷಣಕ್ರಮದಲ್ಲಿ ವೈವಿಧ್ಯ ಹೆಚ್ಚಿದೆಯೇ ಹೊರತು ಸಂಪೂರ್ಣ ಶಿಕ್ಷಣ ಮಟ್ಟವೇನೂ ಇಳಿಮುಖವಾಗಿಲ್ಲ, ಆ ವೈವಿಧ್ಯವು ಕೂಡ ಪ್ರಗತಿಯನ್ನೇ ಗುರಿಯಾಗಿ ಇಟ್ಟುಕೊಂಡು, ನಡೆದಿರುವಾಗ ಅದರಲ್ಲಿಯ ಹಲಕೆಲವು ಕುಂದು ಕೊರತೆಗಳನ್ನೇ ಹೆಕ್ಕಿಕೊಂಡು ಇಂದಿನ ಶಿಕ್ಷಣ ಇಳಿಮುಖವಾಗಿದೆ ಎಂದು ಕೊರಗುವದು ಸಮಂಜಸವಲ್ಲವೆನ್ನಬಹುದು.

# ಶಿಕ್ಷಣದ ಮಟ್ಟ ಕಡಿಮೆಯಾಗಿಲ್ಲ; ಬದಲಾಗಿದೆ.

ಶಿಕ್ಷಣದ ಮಟ್ಟವು ಕಡಿಮೆಯಾಗಿದೆಯೇ ಎಂಬ ಪ್ರಶ್ನೆಯನ್ನು ಮೇಲಿಂದ ಮೇಲೆ ಚರ್ಚಿಸಲಾಗುತ್ತಿದೆ. ಶಿಕ್ಷಣದ ಮಟ್ಟವು ಕಡಿಮೆಯಾಗಿದೆ ಮತ್ತು ಇಂದಿನ ವಿದ್ಯಾರ್ಥಿ ಈಗ ಕಾಲು ಶತಮಾನದ ಹಿಂದಿನ ವಿದ್ಯಾರ್ಥಿಗೆ ಅಷ್ಟೇಕೆ ಸ್ವಾತಂತ್ರ್ಯಪೂರ್ವದ ವಿದ್ಯಾರ್ಥಿಗೆ ಸರಿಸಮನಿಲ್ಲವೆಂಬುದನ್ನು ಬಿಂಬಿಸಲು ದೊರೆತ ಎಲ್ಲ ಅವಕಾಶಗಳನ್ನು ಉಪಯೋಗಿಸಿಕೊಳ್ಳಲಾಗುತ್ತಿದೆ. ಈ ವಿಷಯದಲ್ಲಿ ಉಗ್ರವಾಗಿರುವುದು ಮತ್ತು ಶಿಕ್ಷಣದಂಥ ಮಹಾಕಾರ್ಯದಲ್ಲಿ ತೊಡಗಿದ ಎಲ್ಲರನ್ನು ಟೀಕಿಸುವುದು ಪ್ರತಿಯೊಬ್ಬ ಟೀಕಾಕಾರನಿಗೆ ಒಂದು ಪರಿಪಾಠವೇ ಆಗಿದೆ. ಶೈಕ್ಷಣಿಕ ವಿಷಯಗಳಲ್ಲಿ ಸಾಮಾನ್ಯ ಹಿತಾಸಕ್ತಿಯುಳ್ಳ ಜನಸಾಮಾನ್ಯರು ಮಾತ್ರ ಈ ರೀತಿ ಟೀಕಿಸುವರೆಂದಲ್ಲ. ಅನೇಕ ಸಲ ಶಿಕ್ಷಣಜ್ಞರಿಂದಲೂ ಈ ಟೀಕೆ ಬರುವದುಂಟು. ಈ ಬಗೆಯ ಹೊಣೆಗೇಡಿತನದ ಮತ್ತು ಉದ್ರೇಕಗೊಳಿಸುವ ಟೀಕೆಗಳಿಂದ ಶಿಕ್ಷಣದ ವಿಷಯದಲ್ಲಿ ಬೇರೇನಾದರೂ ಆಗುವದಕ್ಕಿಂತ ಹಾನಿಯೇ ಹೆಚ್ಚು. ಶಿಕ್ಷಣದ ವಿಷಯದಲ್ಲಿ ಅಭಿಪ್ರಾಯ ವ್ಯಕ್ತಪಡಿಸುವವರು ತಾವು ಹೇಳುವುದರ ಬಗೆಗೆ ನಿಷ್ಪಕ್ಷಪಾತವಾಗಿ ವಿಚಾರಿಸಬೇಕಲ್ಲದೆ ತಾವು ಹೇಳುತ್ತಿರುವುದು ನ್ಯಾಯ್ಯವೇ ಎಂಬುದನ್ನು ಪರಾಮರ್ಶಿಸಬೇಕು.

'ಮಟ್ಟ' ಈ ಶಬ್ದವೇ ಸಂಬಂಧವಾಚಕವಾಗಿರುವದೆಂಬುದನ್ನು ಮೊದಲಿಗೆ ಲಕ್ಷಿಸಬೇಕು. 'ಮಟ್ಟ' ಈ ಶಬ್ದದ ಬಗೆಗೆ ಕೊನೆಯೆಂಬುದೇ ಇಲ್ಲ. ಅದು ಯಾವುದಕ್ಕೂ ಹೊಂದಿಕೊಳ್ಳುವ ಶಬ್ದವಾಗಿದ್ದು ಯಾವದೊಂದು ಕಾಲದ ವಿಶಿಷ್ಟ ಅಗತ್ಯ ಅವಶ್ಯಕತೆಗಳಿಗನುಸರಿಸಿ ಅದಕ್ಕೆ ಅನುಗುಣವಾಗಿ ಹೊಂದಿಸಿಕೊಳ್ಳಲು ಬರುವುದು. ಪ್ರಾಚೀನಕಾಲದಲ್ಲಿಯ ಸಂಗತಿಯನ್ನು ತೆಗೆದುಕೊಂಡು ಸದ್ಯದ ಪರಿಸ್ಥಿತಿಗೆ ಹೋಲಿಸಿ ಅದನ್ನು ಸಂಪೂರ್ಣವಾಗಿ ಒಳ್ಳೆ ಟೀಕಾಕಾರನಾದವನು ಖಂಡಿಸುವದಿಲ್ಲ. ಮಟ್ಟವು ಕಡಿಮೆಯಾಗಿದೆಯೆಂದು ಟೀಕಿಸುವಾಗ ಬಹುಶಃ ಟೀಕಾಕಾರರು ಯಾವದೊಂದು ಕಾಲದಲ್ಲಿಯ ಮಟ್ಟವನ್ನು ಲಕ್ಷ್ಯದಲ್ಲಿರಿಸಿಕೊಂಡಿರುವರು. ಇದು ಸಂಪೂರ್ಣ ಅನ್ಯಾಯದ್ದೂ ಪಕ್ಷಪಾತದ್ದೂ ಆಗಿರುವುದು. ಇದು ನ್ಯಾಯ್ಯಮಾರ್ಗವೆಂದೆನಿಸಲಾರದು.

ಮಟ್ಟ ಈ ಶಬ್ದವನ್ನು ವಿದ್ಯಾರ್ಥಿಯ ಮಾನಸಿಕ ಆಧ್ಯಾತ್ಮಿಕ ಹಾಗೂ ದೈಹಿಕ ಸಾಧನೆಗಳ ದೃಷ್ಟಿಯಲ್ಲಿ ಅರ್ಥವಿಸುತ್ತೇವೆ. ಎರಡು ದಶಕಗಳ ರೂಢಿಯಲ್ಲಿದ್ದ ಅಂಶಗಳನ್ನು ನಾವು ವಿಚಾರಿಸಿದರೆ ಆಗಿನ ಪರಿಸ್ಥಿತಿಯ ಸ್ಪಷ್ಟಚಿತ್ರವು ಗೋಚರಿಸುವುದು. ಆಗ ಶಿಕ್ಷಣವು ಕೆಲವೊಂದು ವರ್ಗದವರಿಗಾಗಿತ್ತು. ಅದು ಆರಿಸಿದ ಕೆಲವೇ ಜನರಿಗಾಗಿತ್ತು. ಅಲ್ಲದೆ ವಿಶಿಷ್ಟ ಉದ್ದೇಶಕ್ಕಾಗಿಯೇ ಇವರಿಗೆ ಶಿಕ್ಷಣ ಕೊಡಲಾಗುತ್ತಿತ್ತು. ಹೀಗಾಗಿ ಕೆಲವೊಂದು ಸಂಗತಿಗಳಲ್ಲಿ ಮಟ್ಟವನ್ನು ಕಾಪಾಡಿಕೊಳ್ಳಲಾಗುತ್ತಿತ್ತು. ಅಲ್ಲದೆ ಈ ಮಟ್ಟವನ್ನು ಸುಲಭವಾಗಿ ಸಾಧಿಸಬಹುದಾಗಿತ್ತು ಕೂಡ. ಕೆಲವರ ಹೊರತಾಗಿ ವಿದ್ಯಾರ್ಥಿಗಳಲ್ಲಿ ಪ್ರಜಾಸತ್ತಾತ್ಮಕ ವಿಚಾರಸರಣಿ ಇರಲಿಲ್ಲ. ಸಾಮಾನ್ಯ ವಿದ್ಯಾರ್ಥಿ ಶಿಕ್ಷಣಜ್ಞರು ಹಾಕಿಕೊಟ್ಟ ಮಾರ್ಗದಲ್ಲಿ ಸಾಗುತ್ತಿದ್ದನು. ಅವನ ಮನಸ್ಸನ್ನು ಸೆಳೆವ ಬೇರಾವುದೂ ಇದ್ದಿರಲಿಲ್ಲ. ಕೇವಲ ಪರೀಕ್ಷೆ ಪಾಸಾಗುವುದು, ನೌಕರಿ ಹಿಡಿಯುವುದು ಅವನ ಕಣ್ಮುಂದೆ ಇರುತ್ತಿತ್ತು. ಶಿಕ್ಷಣಖಾತೆಯು ಈ ಗುರಿ ಇರಿಸಿಕೊಂಡು ಅವನ್ನು ಸಾಧಿಸಲು ಹವಣಿಸುತ್ತಿದ್ದ ವಿದ್ಯಾರ್ಥಿಯಲ್ಲಿ ವ್ಯಾಸಂಗಿಕ ಸಾಧನೆಯನ್ನು ಕಾಣಬಹುದಾಗಿದ್ದರೂ ಲಕ್ಷ್ಯಪೂರ್ವಕವಾಗಿ ವಿಚಾರಿಸಿದರೆ ಅವನಿಗೆ ದೊರೆತ ಶಿಕ್ಷಣವು ಯಾಂತ್ರಿಕವು, ರೂಢಿಬದ್ಧವಾದುದು ಎಂಬುದು ಕಂಡುಬರುವುದು. ಆದರೆ ವೃತ್ತಿವಿಕಾಸವನ್ನು ಇದು ತಡೆಯುತ್ತಿತ್ತು. ಈ ವ್ಯಾಸಂಗಿಕಮಟ್ಟವನ್ನು ಕಾಪಾಡಿಕೊಂಡುಬರುವಲ್ಲಿ ಇನ್ನಿತರ ಹಲವಾರು ಸಂಗತಿಗಳು ಸಹಾಯಕವಾಗಿದ್ದವು.


ಲೇಖಕರು:

**ಶ್ರೀ ಎಸ್. ಎಸ್. ಹಾಲಪ್ಪನವರ**

ಪ್ರಿನ್ಸಿಪಾಲ

ಲ್ಯಾಮಿಂಗ್ಟನ್ ಹಾಯಸ್ಕೂಲ, ಹುಬ್ಬಳ್ಳಿ


ಶಿಕ್ಷಕ ವಿದ್ಯಾರ್ಥಿ ಪ್ರಮಾಣವು ಒಳ್ಳೇ ಸಹಾಯಕವಾಗಿತ್ತು. ಶಿಕ್ಷಕನು ತನ್ನ ಅಧೀನದಲ್ಲಿರುವ ವಿದ್ಯಾರ್ಥಿಗಳನ್ನು ವೈಯಕ್ತಿಕವಾಗಿ ಕಂಡು ಅವರ ಮೇಲ್ವಿಚಾರಣೆ ಮಾಡಬಹುದಾಗಿತ್ತು. ಶಿಕ್ಷಕರಿಗೆ ಸಂಬಳವೂ ಚೆನ್ನಾಗಿತ್ತು. ತಮ್ಮ ಕೆಲಸದ ಹೊರತು ಬೇರಾವ ಚಿಂತೆಯನ್ನು ಅವರು ಮಾಡಬೇಕಿರಲಿಲ್ಲ. ಅಲ್ಲದೆ ಶಿಕ್ಷಕನಿಗೆ ಸಮಾಜದಲ್ಲಿ ಗೌರವದ ಸ್ಥಾನಮಾನಗಳೂ ಇದ್ದವು. ಅವನು ಅಭ್ಯಾಸವೃತ್ತಿಯಿಂದ ತನ್ನ ವೃತ್ತಿಯಲ್ಲಿ ವಿಶೇಷ ಆಸ್ಥೆ ಕಾಯ್ದುಕೊಂಡು ಹೋಗುತ್ತಿದ್ದನು. ಹಳ್ಳಿಯ ಪ್ರಾಥಮಿಕ ಶಾಲೆಯ ಶಿಕ್ಷಕನು ಆ ಕಾಲಕ್ಕೆ ಸರ್ವತಂತ್ರ ಸ್ವತಂತ್ರನಾಗಿದ್ದನು. ಹಳ್ಳಿಗರು ಅನೇಕ ವಿಷಯಗಳ ಬಗ್ಗೆ ಅವರನ್ನು ವಿಚಾರಿಸಲು ಹೋಗುತ್ತಿದ್ದರು. ಶಿಕ್ಷಕರಾದವರೂ ಯೋಗ್ಯ ಸಲಹೆ ನೀಡಿ ಎಲ್ಲರ ಗೌರವಾದರಕ್ಕೆ ಪಾತ್ರರಾಗಿರುತ್ತಿದ್ದರು. ಆಗ ಶಿಕ್ಷಣಪದ್ಧತಿಯ ಬಗೆಗೆ ಯಾರೂ ಏನೂ ಮಾತಾಡುವಂತಿರಲಿಲ್ಲ.

ಆದರೆ ಸ್ವಾತಂತ್ರ್ಯವು ತನ್ನೊಂದಿಗೆ ಸುಲಭವಾಗಿ ಪರಿಹರಿಸಲಾರದ ತನ್ನವೇ ಆದ ಕೆಲ ಸಮಸ್ಯೆಗಳನ್ನು ತಂದೊಡ್ಡಿದೆ. ಇವುಗಳಲ್ಲಿ ಮೊದಲನೆಯ ಮತ್ತು ಅತಿ ಮುಖ್ಯ ಪ್ರಶ್ನೆವೆಂದರೆ ಸಾಮೂಹಿಕ ಶಿಕ್ಷಣದ್ದು. ಜನರಲ್ಲಿಯ ಅಜ್ಞಾನವನ್ನು ನಿವಾರಿಸಬೇಕಾಗಿತ್ತು. ಕೆಲವೇ ವರ್ಗಗಳಿಗೆ ಮೀಸಲಾಗಿದ್ದ ಶಿಕ್ಷಣ ಈಗ ಸಾಮೂಹಿಕವಾಗಿ ಕೊಡಬೇಕೆಂದಾಗಿತ್ತು. ಈ ಸಾಮೂಹಿಕಶಿಕ್ಷಣವು ಇನ್ನೂ ಹಲವಾರು ವರುಷಗಳ ವರೆಗೆ ಸಾಗತಕ್ಕದ್ದು. ಈ ಬದಲಾವಣೆಯು ಮತ್ತು ಸಂಕ್ರಮಣ ಕಾಲವು ಇನ್ನೂ ಮುಂದರಿಯುವುದು. ಸ್ಥಿರತೆಯುಂಟಾಗಲು ಇನ್ನೂ ಹಲವಾರು ವರುಷಗಳು ಬೇಕು. ಈಗ ವಿದ್ಯಾರ್ಥಿಗಳು ಸ್ವತಂತ್ರವಾಗಿ ವಿಚಾರಿಸುವ ಪ್ರವೃತ್ತಿಯವರಾಗಿದ್ದಾರೆ. ದೇಶದ ಅಗತ್ಯಗಳಿಗೆ ಹೊಂದಿಕೊಳ್ಳಬಲ್ಲವರಾಗಿದ್ದಾರೆ. ಶಿಕ್ಷಣರಂಗದಲ್ಲಿ ಹೊಸ ಹೊಸ ಪ್ರಯೋಗಗಳನ್ನು ಮಾಡಲಾಗುತ್ತಿದೆ, ರಾಷ್ಟ್ರೀಯ ಶಿಕ್ಷಣ ಪದ್ಧತಿಯೊಂದನ್ನು ರೂಪಿಸಲಾಗುತ್ತಿದೆ. ಕಾಲ ಕಾಲಕ್ಕೆ ಬದಲಾವಣೆಗಳನ್ನು ಮಾಡಲಾಗು

ತ್ತಿದೆ. ಸಾಮೂಹಿಕ ಶಿಕ್ಷಣದ ಇಂಥ ಅಪೂರ್ವ ಪ್ರಯೋಗದಲ್ಲಿ ಕೆಲಮಟ್ಟಿಗೆ ಗುಣಕ್ಕೆ ಕಡಿಮೆ ಮಹತ್ವವನ್ನು ಕೆಲಕಾಲ ಕೊಡಬೇಕಾಗುವುದು.

ಕಾಲೇಜು ಶಾಲೆಗಳಿಗೆ ಹೋಗುವವಿದ್ಯಾರ್ಥಿಗಳ ಸಂಖ್ಯೆ ಈಗ ತುಂಬ ಹೆಚ್ಚಿದ್ದು ವರುವರುಷವೂ ಹೆಚ್ಚುತ್ತಲೇ ಇದೆ. ಐವತ್ತು ವಿದ್ಯಾರ್ಥಿಗಳು ಹೋಗುತ್ತಿದ್ದ ಸ್ಥಳಕ್ಕೆ ಈಗ ಐದುನೂರು ವಿದ್ಯಾರ್ಥಿಗಳು ಹೋಗುತ್ತಿದ್ದಾರೆ. ಆಗ ಬರುತ್ತಿದ್ದ ಐವತ್ತು ಹುಡುಗರು ಶ್ರೀಮಂತ ವರ್ಗದವರು. ಉತ್ತಮ ಹಿನ್ನೆಲೆ ಮತ್ತು ಪರಂಪರೆಯುವರಾಗಿರುತ್ತಿದ್ದರು. ಈಗ ಈ ಐವತ್ತುಜನರೊಂದಿಗೆ ಬರುವ ಇತರ ೪೫೦ ವಿದ್ಯಾರ್ಥಿಗಳಿಗೆ ಪರಂಪರೆ ಇಲ್ಲವೆ ಶೈಕ್ಷಣಿಕ ಹಿನ್ನೆಲೆ ಇರುವದಿಲ್ಲ. ಈಗ ಮಟ್ಟವನ್ನು ನಿರ್ಣಯಿಸುವಾಗ ಈ ಮೊದಲಿನ ಮಾದರಿಯ ೫೦ ವಿದ್ಯಾರ್ಥಿಗಳ ಮಟ್ಟವನ್ನು ಆಧುನಿಕ ಮಾದರಿಯ ೫೦೦ ವಿದ್ಯಾರ್ಥಿಗಳ ಮಟ್ಟಕ್ಕೆ ಹೋಲಿಸುತ್ತೇವೆ. ಹೀಗಿದ್ದರೂ ಈಗ ವಿದ್ಯಾರ್ಥಿಗಳಲ್ಲಿ ವಿಶಾಲವಾದ ದೃಷ್ಟಿಕೋನ ಉತ್ತಮ ಸಾಮಾನ್ಯಜ್ಞಾನವಿರುತ್ತದೆ: ಆಧುನಿಕ ವಿದ್ಯಾರ್ಥಿ ಅರಗಿಸಿಕೊಳ್ಳುವ ಜ್ಞಾನವು ಕಾಲುಶತಮಾನದ ಹಿಂದೆ ವಿದ್ಯಾರ್ಥಿ ಅರಗಿಸಿಕೊಳ್ಳುತ್ತಿದ್ದ ಜ್ಞಾನದಂತೆಯೆ ಇರುವುದಿಲ್ಲ. ಆದರೆ ಶಿಕ್ಷಣಪದ್ಧತಿಯಲ್ಲಿಯ ಅನೇಕ ಬದಲಾವಣೆಗಳು ಪ್ರಯೋಗಗಳು ವಿದ್ಯಾರ್ಥಿಯಲ್ಲಿ ಅನಿಶ್ಚಿತತೆಯ ಮತ್ತು ಗೊಂದಲದ ಭಾವನೆಯನ್ನುಂಟುಮಾಡಿರುವವು. ಹೀಗಾಗಿ ಅವನು ಕೆಲಮಟ್ಟಿಗೆ ತನ್ನ ವ್ಯಾಸಂಗಿಕ ಭಾಗವನ್ನು ಅಲಕ್ಷಿಸಿದ್ದಾನೆ. ಆದರೆ ಇದರಲ್ಲಿ ಅವನ ದೋಷವೇನೂ ಇಲ್ಲ. ಇದಕ್ಕೆ ಸಮಾಜವೇ ಹೊಣೆಯಾಗಿದೆ. ಸಾರ್ವಜನಿಕರೇ ಇದರ ಜವಾಬುದಾರರು. ನಾವಿಲ್ಲಿ ಒಂದೇ ಉದಾಹರಣೆಯನ್ನು ಅಂದರೆ ಇಂಗ್ಲೀಷ ಅಭ್ಯಾಸದ ಸ್ಥಾನದ ಸಂಬಂಧದಲ್ಲಿ ವಿಚಾರಿಸಿದರೆ ವಿದ್ಯಾರ್ಥಿಗೆ ಇಂಥದರಿಂದ ಎಷ್ಟುಮಟ್ಟಿಗೆ ಹಾನಿಯಾಗುವದೆಂಬುದು ಮನವರಿಕೆಯಾಗುವುದು. ಸ್ವಾತಂತ್ರ್ಯ ಬಂದ ಹೊಸದರಲ್ಲಿ ಇಂಗ್ಲೀಷಿನ ವಿರುದ್ಧ ಟೀಕೆಯ ಸುರಿಮಳೆಯೇ ನಡೆಯಿತು. ಯಾರೇ ಇಂಗ್ಲಿಷಿನ ವಿರುದ್ಧ ಮಾತಾಡಿ ಚಪ್ಪಾಳೆ ತಟ್ಟಿಸಿಕೊಳ್ಳಬಹುದಾಗಿತ್ತು. ಇಂಥ ಜನರು ನಿರಾಸೆಯ ಬೀಜಗಳನ್ನು ಬಿತ್ತಿದರು. ವಿದ್ಯಾರ್ಥಿಗೊಂದಲದ ವಾತಾವರಣದಲ್ಲಿ ಸಿಲುಕಿದನು. ಈ ಪರಿಸ್ಥಿತಿಯನ್ನು ಸರಿಪಡಿಸಲು ಹದಿನೈದು ವರುಷಗಳು ಬೇಕಾದವು. ಈಗ ಈ ಜನರೇ ಇಂಗ್ಲೀಷ ಅಭ್ಯಾಸದ ಪುರಸ್ಕರ್ತರಾಗಿದ್ದಾರೆ. ಕೆಲವೊಂದು ಶೈಕ್ಷಣಿಕ ಧೋರಣೆಗಳನ್ನು ಕುರಿತು ಈ ಬಗೆಯ ಅವಸರದ ಮತ್ತು ವಿಚಾರಹೀನ ಟೀಕೆಗಳಿಂದ ವಿದ್ಯಾರ್ಥಿಯ ವಿಕಾಸವಾಗುವ ಮನಸ್ಸಿನ ಮೇಲೆ ತುಂಬ ದುಷ್ಪರಿಣಾಮಗಳಾದವು. ಈ ಅಂಶವನ್ನು ಲಕ್ಷಪೂರ್ವಕವಾಗಿ ಪರಿಶೀಲಿಸದಿದ್ದರೆ ವಿದ್ಯಾರ್ಥಿ ಗೊಂದಲದಲ್ಲಿ ಉಳಿದು ಅವನ ಪ್ರಗತಿ ಕುಂಠಿತವಾಗುವುದು.

ಶಿಕ್ಷಣದ ಎಲ್ಲ ಹಂತಗಳಲ್ಲಿ ತೀವ್ರ ವಿಸ್ತರಣೆ ಮಾಡುವುದರಿಂದ ಅದರಲ್ಲಿಯೂ ಪಂಚವಾರ್ಷಿಕ ಯೋಜನೆಗಳಲ್ಲಿ ಈ ಸಂಬಂಧದಲ್ಲಿ ಯೋಗ್ಯ ಏರ್ಪಾಡು ಮಾಡದ್ದರಿಂದ ಪರಿಸ್ಥಿತಿ ಕಠಿಣವಾಗುವುದು. ಶಾಲೆ-ಕಾಲೇಜುಗಳ ನೂರಾರು-ಸಾವಿರಾರು ವಿದ್ಯಾರ್ಥಿಗಳು ಪ್ರತಿವರುಷ ಹೆಚ್ಚುತ್ತಿರುವದರಿಂದ ಅವರಿಗೆ ತಕ್ಕ ಕಟ್ಟಡಗಳು, ಉಪಕರಣಗಳ ಪೂರೈಕೆ ಇಲ್ಲದ್ದರಿಂದ ತೊಂದರೆಯಾಗಿದೆ. ತರಬೇತಿಹೊಂದಿದ ಶಿಕ್ಷಕರಿರಲಿ, ತರಬೇತಿಹೊಂದದ ಶಿಕ್ಷಕರೂ ಲಭ್ಯವಾಗುವದಿಲ್ಲ. ವಿದ್ಯಾರ್ಥಿ-ಶಿಕ್ಷಕಪ್ರಮಾಣವು ಇಂದು ಸ್ವಾತಂತ್ರ್ಯಪೂರ್ವ ಕಾಲಕ್ಕಿಂತ ವ್ಯಸ್ತವಾಗಿದ್ದು ಅದು ಸುಮಾರು ಮೂರು ನಾಲ್ಕುಪಟ್ಟು ಇರುವುದು. ಈ ರಾಷ್ಟ್ರ ನಿರ್ಮಾಣ ಚಟುವಟಿಕೆಯಲ್ಲಿ ಸಮಾಜ ಮತ್ತು ಜನಾಂಗಗಳುತೋರುವ ಅಲಕ್ಷ್ಯದಿಂದಾಗಿ ಶೈಕ್ಷಣಿಕ ಪ್ರಗತಿ ಕಾಲಮಾನಕ್ಕನುಸರಿಸಿ ಸಾಗಲಾರದು. ಆಧುನಿಕ ಶಿಕ್ಷಕನ ಆರ್ಥಿಕಪರಿಸ್ಥಿತಿಯೂ ಚೆನ್ನಾಗಿರುವದಿಲ್ಲ; ಹೀಗಾಗಿ ಅವನಿಗೆ ಒಂದೊಮ್ಮೆ ಇದ್ದ ಗೌರವಾದರಗಳು ಈಗ ಇಲ್ಲವಾಗಿವೆ. ಕಡಿಮೆ ಸಂಬಳದಿಂದಾಗಿ ಈ ವೃತ್ತಿ ಯೋಗ್ಯರನ್ನು ಆಕರ್ಷಿಸುತ್ತಿಲ್ಲ. ಇನ್ನಿತರ ವೃತ್ತಿಗಳಲ್ಲಿ ನೀಗಲಾರದವರು ಈ ಉದಾತ್ತ ವೃತ್ತಿಗೆ ಶರಣುಬರುವರು. ಇಂಥವರು ಬೆಳೆವ ಮಕ್ಕಳ ಮನಸ್ಸನ್ನು ಉತ್ಸಾಹಿತಗೊಳಿಸಲಾರರು.

ಹೀಗೆ ಮಟ್ಟವು ಕಡಿಮೆಯಾಗಿದೆಯೆಂದು ಹೇಳುವುದು ಸರಿಯಾಗಲಾರದು. ಆದರೆ ಬದಲಾದ ಪರಿಸ್ಥಿತಿ ಮತ್ತು ಕಾಲಮಾನಕ್ಕನುಸರಿಸಿ ಮಟ್ಟವೂ ಬದಲಾಗಿದೆಯೆಂದು ಹೇಳುವುದು ಸೂಕ್ತವಾದೀತು. ಆದರೆ ಇನ್ನೂ ಬಹಳ ಅಂತರವಿರುವುದು. ಇದನ್ನು ತುಂಬದೇ ಹೋದಲ್ಲಿ ನಮ್ಮ ಸಾಧನೆಯ ಬಗೆಗೆ ಅಭಿಮಾನವೆನಿಸಲಾರದು. ಭಾರತದ ಅಭಿವೃದ್ಧಿಯ ಈ ಸಂಕ್ರಾಂತಿಕಾಲದಲ್ಲಿ ಶಿಕ್ಷಣದ ಅಗತ್ಯಗಳಿಗೆ ಹೆಚ್ಚಿನ ಪ್ರಾಶಸ್ತ್ಯಕೊಡಬೇಕು. ಲಭ್ಯವಿದ್ದ ಸಂಪತ್ತನ್ನೆಲ್ಲ ಒಂದುಗೂಡಿಸಬೇಕು. ವಿದ್ಯಾರ್ಥಿಗಳಿಗೆ ಯೋಗ್ಯವಸತಿ ಉಪಕರಣಗಳು, ಹಾಗೂ ಒಳ್ಳೇ ವಾತಾವರಣವೊದಗಿಸಬೇಕು. ನಮ್ಮ ಇತ್ತೀಚಿನ ಪ್ರತಿಭೆ ಹಾಗೂ ಆದರ್ಶಗಳಿಗೆ ಅನುಗುಣವಾದ ಯೋಗ್ಯ ಶಿಕ್ಷಣಪದ್ಧತಿಯೊಂದನ್ನು ರೂಪಿಸಬೇಕು. ಪ್ರತಿಭಾಶಾಲಿಗಳಲ್ಲಿ ಉತ್ತಮರನ್ನು ಈ ವೃತ್ತಿಗೆ ಆಕರ್ಷಿಸಬೇಕು. ಅದರಿಂದ ವಿದ್ಯಾರ್ಥಿಗಳ ಬೆಳೆವ ಮನದ ಮೇಲೆ ಸುಪರಿಣಾಮವಾದೀತು. ಶಿಕ್ಷಕನ ಸ್ಥಾನಮಾನಗಳನ್ನು ಸುಧಾರಿಸಬೇಕು. ಅದೇ ರೀತಿ ಜನಾಂಗಕ್ಕೆ ಶಿಕ್ಷಣದ ವಿವಿಧ ಹಂತಗಳ ಹೊಣೆಗಾರಿಕೆಯೆನಿಸುವಂತೆ ಮಾಡಬೇಕು. ಜನತೆ ಮತ್ತು ಶಿಕ್ಷಣಸಂಸ್ಥೆಗಳಲ್ಲಿ ನಿಕಟಸಹಕಾರವಿರಬೇಕು. ಶಿಕ್ಷಣದ ಹಿತದ ದೃಷ್ಟಿಯಿಂದಲೇ ಈ ಸಂಬಂಧದಲ್ಲಿ ಹಗುರವಾಗಿ ಮಾತನಾಡುವುದು ನಿಲ್ಲಬೇಕು. ವಿದ್ಯಾರ್ಥಿಗಳಿಗೆ ತಮ್ಮ ಅಭ್ಯಾಸವನ್ನು ಸಾಗಿಸಿಕೊಂಡು ಹೋಗಲು ಯೋಗ್ಯ ಉತ್ತೇಜನ ಕೊಡಬೇಕು. ಶಿಕ್ಷಣರಂಗದಲ್ಲಿ ರಾಜಕಾರಣ ಪ್ರವೇಶಿಸದಂತೆ ನೋಡಿಕೊಳ್ಳುವುದು ಅತಿಮಹತ್ವದ ಸಂಗತಿಯಾಗಿದೆ. ದೇಶದ ಶಿಕ್ಷಣವು ಶಿಕ್ಷಣತಜ್ಞರ ನಿಯಂತ್ರಣದಲ್ಲಿರಬೇಕು. ನುರಿತ ಶಿಕ್ಷಣ ತಜ್ಞರೇ ಶೈಕ್ಷಣಿಕ ಧೋರಣೆಗಳನ್ನು ರೂಪಿಸಬೇಕು. ರಾಷ್ಟ್ರೀಯ ವ್ಯವಹಾರ ಮಾತ್ರದಲ್ಲಿ ಇನ್ನಿತರರು ಅವರಿಗೆ ಸಲಹೆನೀಡಬಹುದು.

ನನ್ನ ಅಭಿಪ್ರಾಯದ ಮೇರೆಗೆ ಟೀಕಾಕಾರರು ಹೇಳುವಂತೆ ಆಧುನಿಕ ವಿದ್ಯಾರ್ಥಿಯ ಶಿಕ್ಷಣ ಮಟ್ಟವು ಕಡಿಮೆಯಾಗಿಲ್ಲ; ಆದರೆ ಸಾಧನೆಯಲ್ಲಿ ವಿವಿಧತೆಯಿದೆ. ಅದು ಒಂದೇ ರಂಗಕ್ಕೆ ಮೀಸಲಾಗಿಲ್ಲ. ಆಧುನಿಕ ವಿದ್ಯಾರ್ಥಿ ಕಾಲುಶತಮಾನದ ಹಿಂದಿನ ವಿದ್ಯಾರ್ಥಿಗಿಂತ ಹೆಚ್ಚು ತಿಳಿದವನಾಗಿರುವನು. ಜಗತ್ತಿನಲ್ಲಿಯ ಬದಲಾವಣೆಗಳ ಅರಿವು ಅವನಿಗಿರುವುದು. ಇತ್ತೀಚಿನ ಹೊಸ ಸಂಶೋಧನಗಳು ಜಗತ್ತಿನಲ್ಲಿ ಕಂಡುಬಂದ ಹೊಸ ಸಂಗತಿಗಳು ಅವನಿಗೆ ಗೊತ್ತಿರುವವು. ಈ ಜ್ಞಾನಸಂಪಾದನೆಯಲ್ಲಿ ಒಂದು ಪದ್ಧತಿಯಾಗಲಿ, ನಿಸ್ಸೀಮತೆಯಾಗಲಿ ಇರಲಿಕ್ಕಿಲ್ಲ. ಆದರೆ ಅವನಲ್ಲಿ ವಿವಿಧ ವಿಷಯಗಳ ಬಗೆಗೆ ಜ್ಞಾನವಿರುವುದು. ಈ ಹಿಂದಿನವನಂತೆ ಇಂದಿನ ವಿದ್ಯಾರ್ಥಿ ಏಕಾಕಿಎಂದು ಭಾವಿಸುವದಿಲ್ಲ. ವಿಶಾಲ ಜಗತ್ತಿನಲ್ಲಿ ತಾನೊಬ್ಬನೆಂದು ಅಂದುಕೊಳ್ಳುವ. ಜ್ಞಾನ ಸಂಪಾದನೆಯ ಅವನ ಶಕ್ತಿ ಸಾಮರ್ಥ್ಯಗಳು ಜಗತ್ತಿನ ಇನ್ನಿತರ ಯಾವದೇ ವಿದ್ಯಾರ್ಥಿಗಿಂತ ಕಡಿಮೆ ಇರುವದಿಲ್ಲ. ಅದಕ್ಕೆ ಯೋಗ್ಯ ಮಾರ್ಗದರ್ಶನ ಮಾತ್ರ ಬೇಕು. ಈ ಸಂಕ್ರಾಂತಿ ಕಾಲ ಪ್ರಯೋಗಗಳ ಸಮಯ ಮುಗಿದು ಸ್ಥಿರತೆಯುಂಟಾದಾಗ ಈ ಆಹ್ವಾನವನ್ನು ಅವನು ಅಂಗೀಕರಿಸಿ ತನ್ನ ಹಿಂದಿನ ವಿದ್ಯಾರ್ಥಿಗಿಂತ ತಾನು ಶ್ರೇಷ್ಠನೆಂಬುದಾಗಿ ಮೆರೆಯದಿರನು. ಹೀಗಾಗಿ ಮಟ್ಟ ಕಡಿಮೆಯಾಗಿದೆ ಎಂದು ಅಂದುಕೊಳ್ಳುವಕಾರಣವಿಲ್ಲ. ಮಟ್ಟ ಈ ಶಬ್ದವು ವ್ಯಾಪಕವಾಗಿದ್ದು ಯಾವದಾದರೊಂದು ಅಂಶಕ್ಕೆ ಸೀಮಿತವಾದುದಲ್ಲವಾದ್ದರಿಂದ ಮಟ್ಟ ಕಡಿಮೆಯೆಂದು ನಾನಂತೂ ಹೇಳಲಾರೆನು.

---

ಕೋರ್ಟಿನಲ್ಲಿ ಖಟ್ಲೆ ನಡೆದಿತ್ತು. ಒಬ್ಬ ವಕೀಲ ಇನ್ನೊಬ್ಬ ವಕೀಲನಿಗೆ ಹೇಳಿದ.
"ನಿನ್ನಂತಹ ಕತ್ತೆಯನ್ನು ನಾನು ಈ ವರೆಗೆ ನೋಡಿದ್ದಿಲ್ಲ."
ಆತ ಹೇಳಿದ "ನಿನ್ನಂತಹ ಮೂರ್ಖನನ್ನು ಈ ವರೆಗೆ ನೋಡಿದ್ದಿಲ್ಲ."
ಸರಿ ಈ ವರೆಗೆ ಸುಮ್ಮನೆ ಕುಳಿತಿದ್ದ ನ್ಯಾಯಾಧೀಶರು ಹೇಳಿದರು
"ಅಂತೂ ನಿಮ್ಮಿಬ್ಬರ ಗುರುತು ಹತ್ತಿತಲ್ಲ! ನಿಮ್ಮ ಮುಂದಿನ ಕೆಲಸ ಪ್ರಾರಂಭಿಸಿರಿ." —ವೆಂಕಟೇಶ ಪ್ಯಾಟಿ

# ವಿದ್ಯಾರ್ಥಿಗಳ ಜ್ಞಾನಾರ್ಜನೆಯಲ್ಲಿ ಪ್ರಗತಿಸಾಧನೆ

ಶಿಕ್ಷಣ ಕ್ಷೇತ್ರದಲ್ಲಿ ನಡೆಯುತ್ತಿರುವ ಪ್ರಯೋಗಗಳಿಂದ ವಿದ್ಯಾರ್ಥಿಗಳ ಪ್ರಗತಿ ಸಾಧನೆಯಾಗಿದೆಯೋ ಇಲ್ಲವೋ ಎಂಬುದು ಈಚೆಗೆ ಚರ್ಚೆಯಾಗುತ್ತಿರುವ ಪ್ರಮುಖ ವಿಷಯಗಳಲ್ಲೊಂದಾಗಿದೆ. ಶಿಕ್ಷಣ ಸಂಸ್ಥೆಗಳ ಮಾರ್ಗದರ್ಶಕರೂ ಅಧಿಕಾರಿಗಳೂ ವಿದ್ಯಾಸಚಿವರುಗಳೂ ಇತರ ಸಂಬಂಧಪಟ್ಟವರು, ಸಂಬಂಧವೇ ಇಲ್ಲದ ಕೆಲವರು ಮುಂದಾಳುಗಳೂ ಈ ವಿಚಾರದಲ್ಲಿ ಅವಕಾಶ ಸಿಕ್ಕಿದಾಗಲೆಲ್ಲ ಹೇಳಿಕೆಗಳನ್ನು ಕೊಡುತ್ತ ಬಂದಿದ್ದಾರೆ. ಇವರಲ್ಲಿ ಎಲ್ಲೂ ಒಮ್ಮತವುಂಟಾಗಿಲ್ಲ. ಈ ಪರಿಸ್ಥಿತಿಯನ್ನೂ ಅಧ್ಯಾಪಕರ ದೃಷ್ಟಿಯಿಂದ ಪರಿಶೀಲನೆ ಮಾಡುವುದು ಈ ಲೇಖನದ ಉದ್ದೇಶ.

ದೇಶಕ್ಕೆ ಸ್ವಾತಂತ್ರ್ಯವು ಲಭಿಸಿ ಅದರ ಸರಕಾರವು ಪ್ರಜಾಭಿಪ್ರಾಯದಿಂದ ನಡೆಯುವುದು ಮೊದಲಾದ ಮೇಲೆ ಎಲ್ಲ ಕ್ಷೇತ್ರಗಳಲ್ಲಿಯೂ ಒಂದು ಶಿಥಿಲತೆ ತೋರಿಬಂದಿದೆ. ಅಧಿಕಾರದಲ್ಲಿರುವವರು ಈ ಶಿಥಿಲತೆಯು ಅಗತ್ಯವಾದುದೆಂದೂ ಅದಕ್ಕಾಗಿ ಯಾರೂ ವ್ಯಥೆಪಡಬೇಕಾಗಿಲ್ಲವೆಂದೂ 'ರಾಜಾರೋಷ'ವಾಗಿ ಸಾರುತ್ತಿದ್ದಾರೆ. ದೇಶದಲ್ಲಿ ಲೂಟಿ ನಡೆಯುತ್ತಿದೆಯೆಂದು ಆರೋಪಣೆ ಮಾಡಿದ ಹಿರಿಯರೊಬ್ಬರಿಗೆ ಒಬ್ಬರು ಹಿಂದೆ ಹೀಗೆ ಉತ್ತರವಿತ್ತಿದ್ದರು. "ರಾಮನು ರಾವಣನನ್ನು ನಾಶ ಮಾಡಿರುವಾಗ ರಾಮನ ಸೈನ್ಯವು ಲಂಕೆಯಲ್ಲಿ ಕೊಳ್ಳೆ ಹೊಡೆದರೆ ತಪ್ಪೇನು ? ಇದೂ ಕೆಲವು ಕಾಲ ನಡೆಯಲಿ. ಆ ಬಳಿಕ ಎಲ್ಲವೂ ಶಾಂತ ಪರಿಸ್ಥಿತಿಗೆ ಬರುತ್ತದೆ." 'ರಾಮರಾಜ್ಯ' ಸ್ಥಾಪನೆಯ ಉದ್ದೇಶವಿದ್ದ ಗಾಂಧಿಯವರಿಗೆ ಈ ಮಾತುಗಳು ಕೇಳಿಸಿದ್ದರೆ ಅವರ ಆತ್ಮಕ್ಕೆ ತೃಪ್ತಿಯುಂಟಾಗುತ್ತಿತ್ತು ! ಪಾಪ, ಅವರಿಗೆ ಈ ಅಮೃತ ವಾಕ್ಯಗಳನ್ನು ಕೇಳುವ ಸುಯೋಗ ಒದಗಲಿಲ್ಲ.

ಸಾಮಾನ್ಯ ವ್ಯವಹಾರಗಳಿಗೆ ಸಂಬಂಧಿಸಿದವರ ಮೇಲಿನ ವಿವರಣೆಯು ಶಿಕ್ಷಣಕ್ಷೇತ್ರಕ್ಕೂ ಚೆನ್ನಾಗಿ ಅನ್ವಯಿಸುತ್ತವೆ. ಹಾಲಿಗೆ ನೀರು ಬೆರಕೆ ಹಾಕುವುದಕ್ಕೆ ಕಾವಾಡಿಗನು ಒಂದು ಮಿತಿಯನ್ನು ಇಟ್ಟುಕೊಂಡಿದ್ದಾನೆ. ಆದರೆ ನಮ್ಮ ದೇಶದಲ್ಲಿ ಶಿಕ್ಷಣವನ್ನು ತೆಳುಮಾಡಿದ ವಿಧಾನದಲ್ಲಿ ನೀರು ಬೆರಕೆಗೆ ಮಿತಿಯೆಂಬುದಿಲ್ಲ. ಅವರವರಿಗೆ ಸಿಕ್ಕಿದಷ್ಟು ನೀರು ಬೆರಕೆಯನ್ನು ಅವರವರ ಅಧಿಕಾರಾವಧಿಯಲ್ಲಿ ಅನೇಕರು ನೆರವೇರಿಸಿದ್ದಾರೆ. ಈಗ ಈ "ವಿಚಿತ್ರ ವಸ್ತು"ವನ್ನೇ ಶಿಕ್ಷಣವೆಂಬ ಹೆಸರಿನಲ್ಲಿ ಹಂಚಲಾಗುತ್ತಿದೆ. ಇದರಲ್ಲಿ ಕೂಡ 'ಸಿಕ್ಕಿದವರಿಗೆ ಸೀರುಂಡೆ' ಯೆಂಬ ಗಾದೆಮಾತು ಸತ್ಯವಾಗುತ್ತಿದೆ.

ಶಿಕ್ಷಣವು ಬೇಕೆನ್ನುವವರ ಸಂಖ್ಯೆಯು ಹೆಚ್ಚಾದಂತೆ ತಕ್ಕಷ್ಟು ವಿದ್ಯಾಶಾಲೆಗಳೂ, ಅಧ್ಯಾಪಕರೂ ನಮ್ಮ ದೇಶದಲ್ಲಿ ಇಂದು ಇಲ್ಲ. ಶಾಲೆಗಳೂ ಕಾಲೇಜುಗಳೂ ಜಾತ್ರೆಯ ಕೂಟವಾಗಿವೆ, ಪರಿಷೆಯ ಪ್ರತೀಕವಾಗಿವೆ. ಹಿಂದೆ ವಿದ್ಯಾರ್ಥಿಗಳು, ಅಧ್ಯಾಪಕರ ಸಂಪರ್ಕವು ನಿಕಟವಾಗಿದ್ದು ವಿದ್ಯಾರ್ಥಿಗಳು ಅಧ್ಯಾಪಕರನ್ನು ಜೀವಂತ ಧ್ಯೇಯಗಳೆಂದು ಸ್ವೀಕರಿಸಿ, ಅನುಸರಿಸುತ್ತಿದ್ದರು. ಇಂದು ಇದು ಯಾವ ವಿದ್ಯಾಸಂಸ್ಥೆಯಲ್ಲಿಯೂ ಸಾಧ್ಯವಿಲ್ಲ. ವಿದ್ಯಾರ್ಥಿಗಳಿಗೆ ತಮ್ಮ ಅಧ್ಯಾಪಕರ ಹೆಸರುಗಳು ಕೂಡ ಗೊತ್ತಿಲ್ಲದ ಸ್ಥಿತಿ ಉಂಟಾಗಿದೆ. ಮಾಧ್ಯಮಿಕ ಶಾಲೆಗಳು ನಡೆಯಲು ಕೂಡ ಅವಕಾಶ ಸಾಲದೆ ವ್ಯವಸ್ಥೆಯಲ್ಲಿ ಉನ್ನತ ಮಟ್ಟದ ಕಾಲೇಜುಗಳು ನಡೆಯುತ್ತಾ ಇವೆ. ತಕ್ಕ ಅಧ್ಯಾಪಕರು ಎಲ್ಲ ಕಡೆಗೂ ಸಿಕ್ಕುತ್ತಿಲ್ಲ. ಆದುದರಿಂದ ಸಿಕ್ಕಿದವರನ್ನೇ ಅಧ್ಯಾಪಕರನ್ನಾಗಿ ಆರಿಸಲಾಗುತ್ತಿದೆ. ಈ ಕಾರಣಗಳಿಂದ ವಿದ್ಯಾಭ್ಯಾಸದ ಹೊರಮೈ ಆಭಾಸಪೂರ್ಣವಾಗಿದೆ.

ಇನ್ನು ಶಿಕ್ಷಣದ ಒಳಮೈ. ಈ ಹಿಂದೆ ಯಾವುದೋ ಒಂದು ವ್ಯವಸ್ಥೆ ನಡೆದುಬಂದು ಕಾಲೇಜು ಶಿಕ್ಷಣವು ಒಂದು ಹದಕ್ಕೆ ಬಂದಿದ್ದಿತು. ಎರಡು ವರ್ಷದ 'ಇಂಟರ್‌ಮೀಡಿಯಟ್', ಬಳಿಕ ಮೂರು ವರ್ಷದ 'ಆನರ್ಸ್', ಆ ಬಳಿಕ ಒಂದು ವರ್ಷದ ಎಂ. ಎ. ಅಥವಾ ಎಂ. ಎಸ್‌ಸಿ. ಪರೀಕ್ಷೆಗಳು, ಇಲ್ಲದಿದ್ದರೆ ವೈದ್ಯವೋ, ಇಂಜನೀಯರಿಂಗೋ ಆರಿಸಿಕೊಂಡ ವಿದ್ಯಾರ್ಥಿಗಳಿಗೆ, ಆಯಾ ಪರೀಕ್ಷೆಗಳು ಸರಿಹೊಂದುತ್ತಾ ಇತ್ತು. ಈಗ ಈ ವ್ಯವಸ್ಥೆಯನ್ನು ತಲೆಕೆಳಗು ಮಾಡಿ, ಹೈಸ್ಕೂಲು ಪರೀಕ್ಷೆಯಾದ ಮೇಲೆ ಒಂದು ವರ್ಷದ 'ಪ್ರಿಯೂನಿವರ್ಸಿಟಿ' ಪರೀಕ್ಷೆ ಆ ಬಳಿಕ ಮೂರು ವರ್ಷದ ಬಿ. ಎಸ್.ಸಿ. ಅಥವಾ ಬಿ. ಎ. ಮುಂತಾಗಿ ಶಿಕ್ಷಣವು ನಡೆಯುತ್ತಾ ಇದೆ. ಹೀಗೆ ವ್ಯತ್ಯಾಸ ಮಾಡಿದುದರ ಉದ್ದೇಶವೇನೋ ಸರಿಯಾಗಿತ್ತು. ಸಾಮರ್ಥ್ಯವಿಲ್ಲದ ವಿದ್ಯಾರ್ಥಿಗಳು ಈ ವಿಶ್ವವಿದ್ಯಾನಿಲಯದ ಪದವಿಗಳಿಗೆ ಬರದಂತೆ ತಡೆಯುವ ಈ ಉದ್ದೇಶ ಫಲಕಾರಿಯಾಗಲಿಲ್ಲ. ಬೇರೆ ಮಾರ್ಗಗಳನ್ನು ಕಾಣದ ವಿದ್ಯಾರ್ಥಿಗಳು ಯಾವ ಪೂರ್ವ ಯೋಜನೆಯೂ ಇಲ್ಲದೆ ನೇರವಾಗಿ ವಿಶ್ವವಿದ್ಯಾನಿಲಯಕ್ಕೆ ನುಗ್ಗಿದರು. ಇಲ್ಲಿಯ ಪಠ್ಯಕ್ರಮದಲ್ಲಿ ವಿಷಯ ಬಾಹುಳ್ಯವಿದ್ದು ಅವರು ಕಂಗೆಟ್ಟು ಹೋದರು. ಪರೀಕ್ಷೆಗಳಲ್ಲಿ ಪಾಸಾದವರ ಸಂಖ್ಯೆ ಬಹುಕಡಮೆಯಾಯಿತು. ಈಗ ಫಲಿತಾಂಶಗಳನ್ನು ಸಡಿಲು ಮಾಡುವ ಪ್ರಯತ್ನಗಳು ನಡೆಯುತ್ತಾ ಇವೆ.

ನ್ಯಾಯ್ಯವಾಗಿ ನೋಡಿದರೆ ಈ ಹೊಸ ವ್ಯವಸ್ಥೆಯು ಅಷ್ಟೇನೂ ಹೊಸದಲ್ಲ. ಹಿಂದಿನ ವ್ಯವಸ್ಥೆಗೆ ಹೊಸ ಹೆಸರು ಕೊಟ್ಟು ಅದನ್ನೇ ಇನ್ನಷ್ಟು ಕಠಿಣವಾಗಿ ಮಾಡಿದ್ದಾಗಿದೆ. ಪ್ರಥಮ ಪದವಿಗಳಿಗೆ ಒಂದು ವಿಷಯವನ್ನು ಓದುವುದರ ಪ್ರತಿಯಾಗಿ ಎರಡು ವಿಷಯಗಳನ್ನು ಅಭ್ಯಾಸ ಮಾಡಬೇಕಾಗಿದೆ "ಇಲ್ಲೂ ಬಂದೆಯಾ ಜಡೆ ಶಂಕರ" ಎಂಬ ಸ್ಥಿತಿ ಉಂಟಾಗಿದೆ. ಮುಂಬಾಗಿಲಿಂದ ಹೊರದೂಡಿಸಿದ 'ಆನರ್ಸ್' ಹಿಂಬಾಗಿಲಿನಿಂದ ಒಳಗೆ ಬಂದು ಕೂತಿದೆ.

ಲೇಖಕರು :
ಶ್ರೀ ಜಿ. ವೆಂಕಟಸುಬ್ಬಯ್ಯ
ಪ್ರಾಧ್ಯಾಪಕರು
ಬೆಂಗಳೂರು

ಇನ್ನು 'ಟೆಕ್ನಿಕಲ್' ಪದವಿಗಳ ಮಾತು. ಹಿಂದೆ ವಿದ್ಯಾರ್ಥಿಗಳು ಇವುಗಳನ್ನು ಆರಿಸಿಕೊಳ್ಳಬೇಕಾಗಿತ್ತು. ಈಗ ವಿದ್ಯಾರ್ಥಿಗಳನ್ನು ಆರಿಸಿಕೊಳ್ಳುತ್ತಾರೆ, ಅದೂ ಅನೇಕ ವಿಚಿತ್ರ ಕಟ್ಟಳೆಗಳನ್ನು ದಾಟಿದರೆ, ಅಥವಾ ದಾಟಿಸಿದರೆ ಮಾತ್ರ. ಓದುವ ಅಪೇಕ್ಷೆ ಸಾಮರ್ಥ್ಯಗಳು ಇದ್ದವರಿಗೆ ಅವಕಾಶ ಕೊಡದೆ, ಸಾಮರ್ಥ್ಯವಿಲ್ಲದ, ಅಪೇಕ್ಷೆಯಿಲ್ಲದ ವಿದ್ಯಾರ್ಥಿಗಳನ್ನು ಆರಿಸುತ್ತಾರೆ. ಸಾಮರ್ಥ್ಯವಿಲ್ಲದವರನ್ನು ಸರಕಾರವು ಆರಿಸಿದರೆ, ಅಪೇಕ್ಷೆಯಿಲ್ಲದವರನ್ನು ತಂದೆ ತಾಯಿಗಳು ನೂಕುತ್ತಾರೆ. ಈ ಎಲ್ಲ ಅವ್ಯವಸ್ಥೆಯನ್ನು ಮುಚ್ಚಿಸಲು 'ಶಿಕ್ಷಣವು ವಿಸ್ತಾರಗೊಂಡಿದೆ'ಯೆಂಬ ಕೂಗು ಹಚುತ್ತಿದೆ.

'ರೆಡ್‌ಟೇಪ್' ಎಂಬ ಈ ಹಂತವನ್ನು ದಾಟುವ ಹೊತ್ತಿಗೆ ಕಾಲೇಜುಗಳು ತೆರೆದು ಎರಡು ತಿಂಗಳುಗಳಾಗಿರುತ್ತವೆ. ಆ ಬಳಿಕ ಅಡ್ಮಿಶನ್, ಟೈಂಟೇಬಲ್, ಪ್ರಾಕ್ಟಿಕಲ್ ವರ್ಕ್ಸ್ ಹಂಚಿಕೆ ಮುಂತಾಗಿ ಪಾಠ ಪ್ರವಚನ ಪ್ರಾರಂಭವಾಗಬೇಕಾದರೆ ಸೆಪ್ಟೆಂಬರ ತಿಂಗಳು ಮುಗಿಯುತ್ತ ಬರುತ್ತದೆ. ಮತ್ತೆ 'ರಿಟ್ ಪಿಟಿಷನ್'ಗಳು ನಿರ್ಧಾರವಾಗಿ ಅವರಿಗೆ ಸೀಟು ಕೊಡಬೇಕಾದರೆ ಮತ್ತಷ್ಟು ನಿಧಾನ. ಉಳಿದ ೪ ತಿಂಗಳುಗಳಲ್ಲಿ ವರ್ಷದ ಪಾಠ ಪ್ರವಚನ ನಡೆದು ಪರೀಕ್ಷೆಯೆಂಬ ರಾಕ್ಷಸನನ್ನು ವಿದ್ಯಾರ್ಥಿಗಳು ಎದುರಿಸಬೇಕು. ವಿದ್ಯಾರ್ಥಿಗಳು ಏನನ್ನು ತಾನೆ ಗ್ರಹಿಸಿರಬಹುದು ಈ ಅವ್ಯವಸ್ಥೆಯಲ್ಲಿ ?

ಇನ್ನು ಪರೀಕ್ಷೆಗಳು ? ನಮ್ಮ ದೇಶದಲ್ಲಿ ಏನಾದರೂ ಸುಧಾರಣೆ ಹೊಂದಬೇಕಾದರೆ ಮೊದಲು ಈ ಪರೀಕ್ಷೆಗಳು ಅದಕ್ಕೆ ಒಳಗಾಗಬೇಕು. ಎಲ್ಲರಿಗೂ ತಿಳಿದಿರುವ ಈ ವಿದ್ಯಾರ್ಥಿವಿಪತ್ತನ್ನು ಪರಿಹಾರ ಮಾಡಲು ನಮ್ಮ ದೇಶದ ಯಾವ ಚೈತನ್ಯವೂ ಸಹಾಯಕವಾಗಿಲ್ಲ. ಇಂದಿನ ಪರೀಕ್ಷೆಗಳು ವಿದ್ಯಾರ್ಥಿಗಳ ಸ್ಮರಣಶಕ್ತಿಯನ್ನು ಬೆಲೆ ಕಟ್ಟುತ್ತವೆಯೆ ಹೊರತು ಅವರ ಜ್ಞಾನಾರ್ಜನೆಯನ್ನಲ್ಲ. ಇಷ್ಟೊಂದು ವ್ಯಕ್ತಿನಿಷ್ಠವಾದ, ವಿವಿಧ ಪ್ರಭಾವಗಳಿಂದ ಕೂಡಿದ ಪರೀಕ್ಷೆಯ ಕ್ರಮ ಬಹು ಕೆಡಕನ್ನುಂಟು ಮಾಡಿದೆ. ಪ್ರಬಂಧರೂಪದ ಉತ್ತರಗಳನ್ನು ನಿರೀಕ್ಷಿಸುವ ಪ್ರಶ್ನೆಗಳೇ ಈ ಪರೀಕ್ಷೆಯಲ್ಲಿ ಮುಖ್ಯವಾಗಿರುವದರಿಂದ, ವಿದ್ಯಾರ್ಥಿಗಳು ಆ ರೀತಿಯ ಉತ್ತರಗಳನ್ನು ಸಿದ್ಧಮಾಡಿಕೊಂಡಿರುತ್ತಾರೆ. ಆಗ ವಿಷಯಗ್ರಹಣ ಮಾತ್ರ ಸಾಧನೆಯಾಗಿರುವದಿಲ್ಲ. ಅಮೇರಿಕಾ ದೇಶದಲ್ಲಿರುವಂತೆ ಹೆಚ್ಚು ವಿಷಯನಿಷ್ಠವಾದ ಪರೀ

ಕ್ಷೆಯನ್ನು ನಡೆಸಲು ನಮ್ಮಲ್ಲಿ ಸಾಕಷ್ಟು ಸಲಕರಣೆಗಳೂ ವ್ಯವಧಾನವೂ ಇಲ್ಲ, ಅಥವಾ ಇಂಗ್ಲೆಂಡಿನ ಆಕ್ಸ್‌ಫರ್ಡ್, ಕೆಂಬ್ರಿಡ್ಜ ವಿಶ್ವವಿದ್ಯಾನಿಲಯಗಳಲ್ಲಿರುವಂತೆ ಒಬ್ಬ ಅಧ್ಯಾಪಕನಿಗೆ ೮-೧೦ ಜನ ವಿದ್ಯಾರ್ಥಿಗಳನ್ನು ಹಂಚಿ ಆ ವಿದ್ಯಾರ್ಥಿಗಳ ಸರ್ವತೋ-ಮುಖವಾದ ಅಭಿವೃದ್ಧಿಗೂ ಅಧ್ಯಾಪಕ-ವಿದ್ಯಾರ್ಥಿಗಳ ನಿಕಟ ಸಂಬಂಧವನ್ನು ಏರ್ಪಾಟು ಮಾಡಲು ಬೇಕಾದ, ಅಧ್ಯಾಪಕ ಸಂಪತ್ತಾಗಲಿ ಧನ ಸಹಾಯವಾಗಲಿ ನಮ್ಮ ವಿಶ್ವವಿದ್ಯಾನಿಲಯಗಳಿಗಿಲ್ಲ.

ಇದೂ ಅಲ್ಲದೆ ಯಾವುದೊ ವರ್ಷಾಂತ್ಯದಲ್ಲಿ ನಡೆಯುವ ಒಂದು ಪರೀಕ್ಷೆಯ ಫಲಿತಾಂಶದಿಂದಲೇ ವಿದ್ಯಾರ್ಥಿಯ ಅಂತಸ್ತನ್ನು ಅಳೆಯುವುದು ತಪ್ಪು. ವರ್ಷದ ಉದ್ದಕ್ಕೂ ವಿದ್ಯಾರ್ಥಿಯ ಶ್ರಮದ ಪ್ರಾಮಾಣಿಕತೆಯನ್ನು ಅರಿತ ಉಪಾಧ್ಯಾಯನ ನಿರ್ಧಾರಕ್ಕೆ ಬೆಲೆ ಕೊಡುವುದು ಹೆಚ್ಚು ಸರಿ. ಆದರೆ ಇದೆಲ್ಲ ಕನಸಿನ ಪ್ರಪಂಚಕ್ಕೆ ಸೇರಿದಂತೆ ಕಾಣುತ್ತದೆ ನಮ್ಮ ದೇಶದಲ್ಲಿ.

ಕಾಲೇಜಿನ ಪ್ರವೇಶ, ಪಾಠ ಪ್ರವಚನಗಳ ರೀತಿ, ಪರೀಕ್ಷೆಯ ಮಾರ್ಗ ಇವೆಲ್ಲದರ ಪರಿಣಾಮವಾಗಿ ವಿದ್ಯಾರ್ಥಿಗಳ ಜ್ಞಾನಾರ್ಜನೆಯ ಪ್ರಗತಿ ಆಶಾದಾಯಕವಾಗಿಲ್ಲವೆಂದರೆ ಏನು ಆಶ್ಚರ್ಯ. ಕನ್ನಡ, ಇಂಗ್ಲೀಷ್ ಭಾಷೆಗಳ ಜ್ಞಾನವನ್ನು ಪರಿಶೀಲಿಸಿದರೇ ಇದು ಸ್ಪಷ್ಟವಾಗುತ್ತದೆ. ಪ್ರಿ ಯೂನಿವರ್ಸಿಟಿಯ ತರಗತಿಯಲ್ಲಿರುವ ವಿದ್ಯಾರ್ಥಿಗಳಲ್ಲಿ ಕನ್ನಡದ ಮಹಾಪ್ರಾಣಗಳನ್ನು ಬರೆಯುವುದಕ್ಕೂ ಉಚ್ಚರಿಸುವುದಕ್ಕೂ ಬರುವ ವಿದ್ಯಾರ್ಥಿಗಳು ಸುಮಾರು ಶೇಕಡಾ ೧೦; ಕೇವಲ ಕಾಗುಣಿತದ ಮೇಲೆ ಗಮನವಿಟ್ಟು ಅಂಕೆಗಳನ್ನು ಕೊಟ್ಟರೆ ಆ ಪರೀಕ್ಷೆಯಲ್ಲಿ ೧೦% ಕ್ಕಿಂತ ಹೆಚ್ಚು ಜನ ಖಂಡಿತ ತೇರ್ಗಡೆ ಹೊಂದುವುದಿಲ್ಲ. ಇಂಗ್ಲೀಷಿನಲ್ಲಿ often ಎಂಬ ಪದವನ್ನು ophan ಎಂದೂ Soldier ಎಂಬುದನ್ನು Solzer ಎಂದೂ ಬರೆಯುವವರು ಅನೇಕ ಮಂದಿ. ಒಂದೇ ವಾಕ್ಯವನ್ನು ವ್ಯಾಕರಣಬದ್ಧವಾಗಿ ತಪ್ಪಿಲ್ಲದೆ ಬರೆಯಬಲ್ಲ ವಿದ್ಯಾರ್ಥಿಗಳು ಆ ತರಗತಿಯಲ್ಲಿ ದೊರೆಯುವುದು ದುರ್ಲಭ. ಪರೀಕ್ಷೆಗಳಲ್ಲಿಯಂತೂ ಒಂದು ಪಾಠದ ವಿಚಾರವಾಗಿ ಏನು ಪ್ರಶ್ನೆ ಕೊಟ್ಟರೂ ಅವರು ಬರೆಯುವುದು ಒಂದೇ ಉತ್ತರ!

ಭಾಷೆಗಳನ್ನು ಬಿಟ್ಟು ಇತರ ವಿಷಯಗಳನ್ನು-ಪರಿಶೀಲಿಸಿದರೆ ವಿಷಯಗ್ರಹಣದಲ್ಲಿರುವ ಅಭಾಸ ನಮ್ಮನ್ನು ಮೂಕರನ್ನಾಗಿ ಮಾಡುತ್ತದೆ.

ಈ ಸ್ಥಿತಿಗೆ ವಿಶ್ವವಿದ್ಯಾನಿಲಯದ ಸ್ಥಿತಿಗತಿಗಳು ಎಷ್ಟು ಕಾರಣವೋ ಪ್ರಾಥಮಿಕ, ಮಾಧ್ಯಮಿಕ, ಮತ್ತು ಪ್ರೌಢಶಾಲೆಗಳ ವ್ಯವಸ್ಥೆಯೂ ಅಷ್ಟೇ ಕಾರಣ. ಆ ಶಾಲೆಗಳಲ್ಲಿಯೂ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚು. ಅಧ್ಯಾಪಕರು ಕಡಮೆ. ಗ್ರಾಮಾಂತರ ಪ್ರದೇಶಗಳಾದರಂತೂ ದೇವರೇ ಗತಿ! "ಅಂಧೇನೈವ ನೀಯಮಾನಾ ಯಥಾಂಧಾಃ"

ಈ ಸ್ಥಿತಿಯ ವಿವರಣೆ ಸಾಕು. ಇದನ್ನೂ ಪ್ರಾಮಾಣಿಕವಾಗಿ ಸರಿಪಡಿಸುವ ಮನೋಭಾವ ನಮ್ಮ ಮುಂದಾಳುಗಳಲ್ಲಿ ಬೆಳೆಯಬೇಕು. ಪ್ರಾಥಮಿಕ ಶಾಲೆಯಿಂದ ಇದರ ಸ್ವರೂಪ ವ್ಯತ್ಯಾಸಗೊಳ್ಳಬೇಕು, ಇದಕ್ಕಾಗಿ ಎಷ್ಟು ಸಹಸ್ರಕೋಟಿಗಳ ಹಣ ಖರ್ಚಾದರೂ ಅದರ ಫಲ ನಮಗೆ ಮಿಗಿಲಾಗಿ ಕಾಣಬಂದೀತು.

ಮೊದಲನೆಯದಾಗಿ ಅಧ್ಯಾಪಕನ ಸ್ಥಾನ ಮಾನದಲ್ಲಿ ತೀವ್ರವಾಗಿ ಅಭಿವೃದ್ಧಿಯುಂಟಾಗಬೇಕು. ಆರ್ಥಿಕವಾಗಿ ಸ್ವಾವಲಂಬನೆ ಆತನಿಗಿದ್ದು ಯಾವ ರಾಜಕೀಯ ಪುಢಾರಿಗಳ ಅಧಿಕಾರಕ್ಕೆ ಒಳಪಡದ ಸ್ಥಿತಿ ಆತನಿಗೆ ಒದಗಬೇಕು ಅಧ್ಯಾಪಕನ ಸ್ಥಳಕ್ಕೆ ನಿಜವಾಗಿ ಯೋಗ್ಯತೆಯುಳ್ಳವನನ್ನೆ ಆರಿಸಬೇಕು. ಕೋಮುವಾರ ಭಾವನೆಗೆ ಇಲ್ಲಿ ಅವಕಾಶವಿರಬಾರದು. ಸಮಾಜದಲ್ಲಿ ಆತನು ಯಜಮಾನನಾಗಿರಬೇಕೆ ಹೊರತು ಪರಿಚಾರಕನಾಗಿರಬಾರದು. ಈ ಸ್ಥಿತಿಯು ಸರಿಪಡುವತನಕ ಪ್ರಾಥಮಿಕ ವಿದ್ಯಾಭ್ಯಾಸದ ಪ್ರಯೋಜನ ಅಷ್ಟಕ್ಕಷ್ಟೇ!

ಮುಂದೆ ಆರ್ಥಿಕವಾಗಿ ಆಕರ್ಷಕವಾದ ವ್ಯಕ್ತಿಯಾದರೆ, ಅಧ್ಯಾಪಕರಾಗಿ ಕೆಲಸಮಾಡಲು ಸೇವಾ ಮನೋಭಾವವುಳ್ಳ, ವಿದ್ವತ್ತಿನಲ್ಲಿ ಅಭಿಲಾಷೆಯುಳ್ಳ ಅನೇಕರು ಮುಂದೆ ಬರುತ್ತಾರೆ. ಅಂಥ ಒಂದು ಪಡೆಯನ್ನೇ ನಮ್ಮ ದೇಶ ಕಟ್ಟಬೇಕಾದೀತು. ದೇಶದ ಎಲ್ಲ ಆಗುಹೋಗುಗಳನ್ನು ಸಮದೃಷ್ಟಿಯಿಂದ ನೋಡುವ ನೂತನ ಸಮಾಜವನ್ನು ನಾವು ಕಟ್ಟಲು ಸಾಧ್ಯ.

ಎರಡನೆಯದಾಗಿ ಶಾಲೆಯ ಆವರಣ. ಕಟ್ಟಡ, ಅದಕ್ಕೆ ಅಗತ್ಯವಾದ ಸಲಕರಣೆ ಮುಂತಾದವುಗಳಿಗೆ ಬಿಡುಗೈಯಿಂದ ಹಣಸುರಿಯಬೇಕು. ಯಾವುದಾದರೂ ಸಂಸ್ಥೆಯು ಸ್ವತಂತ್ರವಾಗಿ ಪಾಠಪ್ರವಚನಗಳನ್ನೇ ನಡೆಸುವ ಸಾಹಸ ಮಾಡಿದರೆ, ಅದಕ್ಕೆ ಶಿಕ್ಷಣ ಶಾಖೆಯು ಸಹಕಾರವನ್ನು ಕೊಡಬೇಕು. ಅಧಿಕಾರದ ಮುಟ್ಟುಗೋಲು ಕೆಲಸಮಾಡುವುದನ್ನು ತಪ್ಪಿಸಬೇಕು. ಅಲ್ಲಲ್ಲಿ ಮಾದರಿಯ ಶಾಲೆಗಳನ್ನು ನಡೆಸುವಂತೆ ಸಾರ್ವಜನಿಕ ಸಂಸ್ಥೆಗಳಿಗೆ ಸಹಾಯ ಮಾಡಬೇಕು.

ಮೂರನೆಯದಾಗಿ ವಿಶ್ವವಿದ್ಯಾನಿಲಯದಲ್ಲಿ ಯಾರು ಯಾರು ಏನೇನನ್ನೊ ಓದಲು ಆಶೆ ಪಡುತ್ತಾರೋ ಅವರೆಲ್ಲರಿಗೂ ಅವಕಾಶವನ್ನು ಕೊಡಬೇಕು. ಮೊದಲನೆಯ ವರ್ಷದ ಕೊನೆಯಲ್ಲಿ ಅಸಮರ್ಥರಾದವರನ್ನು ಬೇರೆಮಾಡಿ ಅವರಿಗೆ ಇತರ ಅಭ್ಯಾಸಗಳಿಗೆ ಅವಕಾಶಮಾಡಿಕೊಡಬೇಕು. ಇದರಿಂದ ದೇಶದ ಹಣ ದುರ್ವ್ಯಯವಾಗುವುದು ನಿಂತು ಹೋಗುತ್ತದೆ.

ನಾಲ್ಕನೆಯದಾಗಿ, ಸರಕಾರದಲ್ಲಿನ ಸಣ್ಣ ಸಣ್ಣ ಕೆಲಸಗಳಿಗೆ ವಿಶ್ವವಿದ್ಯಾನಿಲಯದ ಪದವಿಯೇ ಇರಬೇಕೆನ್ನುವ ಸೂತ್ರವನ್ನು ನಿರ್ನಾಮಮಾಡಬೇಕು. ಆಗ ವಿಶ್ವವಿದ್ಯಾನಿಲಯಕ್ಕನುಸಾರ ವಿದ್ಯಾರ್ಥಿಗಳು ಕಡಿಮೆಯಾಗುತ್ತಾರೆ.

ಇದೆಲ್ಲ ಆಗಬೇಕಾದರೆ ಕೊನೆಯ ಪಕ್ಷ ಕಾಲು-ಶತಮಾನವಾದರೂ ಬೇಕು. ಅಲ್ಲಿಯತನಕ ನಮ್ಮ ವಿದ್ಯಾರ್ಥಿಗಳ ಗತಿಯೇನು! ಅವರ ವಿದ್ಯಾರ್ಜನೆಯಲ್ಲಿ ಪ್ರಗತಿ ಸಾಧಿಸುವುದೆಂತು ? ಇದೊಂದು ಪ್ರಶ್ನೆಯಾಗಿನಿಂತಿದೆ !" ???

# ಎಣ್ಣೆ ಹೊಯ್ಯಮ್ಮ ದೀಪಕ್ಕೆ

ಎಣ್ಣೆ ಹೊಯ್ಯಮ್ಮ ದೀಪಕ್ಕೆ || ಪಲ್ಲವಿ ||

ಬತ್ತಿಯೊಣಗುತಿದೆ ಬೆಳಕು ಬಾಡುತ್ತಿದೆ
ಕತ್ತಲೆ ಮುಂದೆ ಮುಂದೊತ್ತುತ್ತಿದೆ
ಅತ್ತಲಿಂದಿತ್ತಲು ಕಂಡಿಯೊಳಗೆ ನುಗ್ಗಿ
ಒತ್ತರದಲಿ ಗಾಳಿ ಬೀಸುತ್ತಿದೆ
ಎಣ್ಣೆ ಹೊಯ್ಯಮ್ಮ ದೀಪಕ್ಕೆ— || ೧ ||

ಹಸಿದ ಮಕ್ಕಳು ಬಟ್ಟಲೆನ್ನದು ತನ್ನದೆಂ-
ದೆಳೆದಾಡಿಕೊಂಡು ಗುದ್ದಾಡುತ್ತಿವೆ
ಹಿರಿಯರ ಸಂಧ್ಯಾವಂದನೆಯು ಸಾಹಿತ್ಯವ
ಕಡೆಗಾಲೊಳೆಡವಿ ಚೆಲ್ಲಾಡುತ್ತಿವೆ
ಎಣ್ಣೆ ಹೊಯ್ಯಮ್ಮ ದೀಪಕ್ಕೆ— || ೨ ||

ಗಿಡಮರ ಹುಚ್ಚೆದ್ದು ಕೊಂಬೆರೆಂಬೆಗಳಲಿ
ಬಡಿದಾಡಿಕೊಂಡು ಭೋರಿಡುತಲಿವೆ
ಪಡುಬಾನ ಕರ್ಮುಗಿಲ್ ಅರಿಲೊಂದೊಂದನೆ ನುಂಗಿ
ಕಡುಮಿಂಚಿನಲಿ ಗಹಗಹಿಸುತಿದೆ
ಎಣ್ಣೆ ಹೊಯ್ಯಮ್ಮ ದೀಪಕ್ಕೆ— || ೩ ||

ಗೋಡೆಯ ಬಳಿಯಿಂದ ಹಸುರುಗಣ್ಣಿನ ಭೂತ
ಹಾಲಳಗೆಯ ಬಳಿ ಸಾರುತಿದೆ
ಗೂಡಿನ ಗಿಳಿ ಹೆಸರೆತ್ತಿ ಕರೆದು ಕೂಗಿ
ಕಾಣದೆ ನಿನ್ನ ಕಂಗೆಡುತಲಿದೆ
ಎಣ್ಣೆ ಹೊಯ್ಯಮ್ಮ ದೀಪಕ್ಕೆ— || ೪ ||

—ಸೇಡಿಯಾಪು ಕೃಷ್ಣಭಟ್ಟ.

# ಕಾಲಪುರುಷನಲ್ಲಿ ಕವಿಗಳ ಕೋರಿಕೆ

ಏನಯ್ಯ, ಕಾಲಪುರುಷ
ನಿನ್ನ ಮುಖದರುಶನವನೊಮ್ಮೆ ದಯಪಾಲಿಸಯ್ಯ
ಕಣ್ತುಂಬ ನೋಡಿ, ನಿನ್ನ ರೂಪವನೊಮ್ಮೆ ಅಚ್ಚೊತ್ತಿಕೊಳ್ಳುವೆವು
ಹಣೆಯ ಪಾದಕೆ ಹಚ್ಚಿ ನಮಿಸುವೆವು
ಸಾಷ್ಟಾಂಗವೆರಗುವೆವು, ಆಯಿತೋ?

ಈ ಸೃಷ್ಟಿ ಜೊತೆಗೇ ನಿನ್ನ ರಥವೂ ಹೊರಟು ಬಂದಿಹುದು—
( ಉರುಳುತಿವೆ ಕುರುಡು ಚಕ್ರ )
ನಮ್ಮಜ್ಜ ಮುತ್ತಜ್ಜರ ಕೈಗೆ ಕೋಲು ಕೊಟ್ಟು
ಕಣ್ಗೆ ಕನ್ನಡಕ ಹಚ್ಚಿ,
ಬೆನ್ನಿನಲಿ ಹೆಣಭಾರವಿಟ್ಟು
ಈಗ ನಮ್ಮ ಹೆಗಲಿಗೇ ಕೈಹಾಕಿ ನಡೆದಿರುವೆಯಲ್ಲ,
ಏನಯ್ಯ ಸಮಾಚಾರ?
ಇನ್ನೂ ಎಷ್ಟು ದೂರವಿದೆಯೋ ನಿನ್ನ ಪಾದಗಟ್ಟಿ?

ನೀನೇನು ತುಳಿದೆಯೋ, ಏನೇನು ಬೆಳೆದೆಯೋ
ಏನೆಲ್ಲ ಕೂಡಿಸಿ ಕಳೆದೆಯೊ
ಯಾರು ಎಲ್ಲ ಲೆಕ್ಕವ ಬರೆದು ಇಟ್ಟವರು

ಹೊಳೆವ ನಕ್ಷತ್ರಗಳ ಕಣ್‌ಬೆಳಕಿನಲ್ಲಿ
ನೀನಿಟ್ಟ ಖಾತೆ-ಕಿರ್ದಿಯನೊಮ್ಮೆ ತೆರೆಯಬೇಕು:
ಎಷ್ಟೊ ತಾರಗೆ ಇದ್ದಕ್ಕಿದ್ದಂತೆ ಆರಿದವು
ಇನ್ನೆಷ್ಟೊ ತಮ್ಮ ಬೆಳಕನು ಇಳೆಗೆ ಮುಟ್ಟಿಸಲು ಪಣತೊಟ್ಟವು.
ಆಕಾಶಗಂಗೆಯಲಿ ಕಿಕ್ಕಿರಿದು ತಿಕ್ಕಿ ಮುಕ್ಕಿದವು ಕೆಲವು.

ಇಂಥವರಲ್ಲಿ—
ನಮ್ಮ ಕೃತಿಗಳು ನಿನ್ನ ಒರೆಗಲ್ಲಿನಲಿ ನಿಂತು ಬದುಕಬೇಕಂತೆ
ಎಲ್ಲಾ ವಿಮರ್ಶಕರ ತಲೆ ಮೇಲೆ ಹತ್ತಿ
'ಅತ್ಯತಿಷ್ಠದ್ದಶಾಂಗುಲಂ' ಆಗಿರುವೆಯಂತೆ

ಬೇಡ ಮಹರಾಯಾ
ನಿನ್ನ ಒರೆಗಲ್ಲನ್ನು ಹೊರಗೆ ತೆಗೆಯಬೇಡ
' ಕಾಲಪುರುಷಂಗೆ ಗುಣಮಣಮಿಲ್ಲಂಗಡ!'
ಎಂದು ನಮ್ಮಜ್ಜ ಮೊದಲೇ ಹೆದರಿಸಿದ್ದಾನೆ.
ಅದ ಕೇಳಿ ನಮ್ಮೊಡಲೊಳೂ 'ಗುಡುಗುಟ್ಟುಗುಂ ಗಡ'!

ಚೊಕ್ಕ ಬಂಗಾರವೇ ಬೇಕೆಂಬ ಹಟವೇಕೆ ನಿನಗೆ
ಈ ಲೋಕದಲಿ ನಾನಾ ನಮೂನೆ ಲೋಹವಿರುವಾಗ?
ಗಟ್ಟಿಕಾಳುಗಳನ್ನೆ ಮುಟ್ಟಿಗೆಯಲ್ಲಿ ಹಿಡಿಯಬೇಕೆಂದೇಕೆ ಚಪಲ
ಎಲ್ಲವೂ ಹೊಟ್ಟೆಗೇ ಹೋಗುವಾಗ?

ಇಗೋ
ನಮ್ಮ ಮನದಂಗಳದಿ ಬೆಳೆದಷ್ಟು ಕವಿತೆಗಳ
'ನಿನ್ನ ಮಡಿಲೊಳಗಿಡಲು ತಂದಿರುವೆವು'
ತುಂಬಿ ಹರಿಯುವ ಹೊಳೆಯ ನೀರಿನಲಿ
ಇವುಗಳನು ಹಾಯಾಗಿ ತೇಲಿಸಪ್ಪ
ಸ್ವಾಮಿ ನಮ್ಮಪ್ಪ
ನಮ್ಮ ಕಣ್ಮರೆಯಲ್ಲಿ ಬೇಕಾದ್ದು ಮಾಡಿಕೊ
ನಾವಂತು ಪಾರಾದೆವು

ಸರಿ, ನೀನಿಷ್ಟು ಮಾಡಿದರೆ, ನಿನ್ನ ಮೇಲೊಂದು
ಪದ್ಯವ ಬರೆದು, ಕನ್ನಡಿ ಕಟ್ಟು ಹಾಕಿ
ತುಂಬು ಸಭೆಯೊಳು ಮಾನಪತ್ರ ಸಲಿಸುವೆವು

ಇಲ್ಲದಿದ್ದರೆ ವೃಥಾ ತಲೆದಂಡ
ಅಲ್ಲವೆ? ಅದಕಾಗಿ ಆಯುಷ್ಯದುದ್ದಕ್ಕೂ ಚಿಂತೆ ಬೇಡ.
ಕಾಲಾಯ ತುಭ್ಯಂ ನಮಃ

—ಚೆನ್ನವೀರ ಕಣವಿ

---

## ಅಮರಸಿಂಹನ ಮೇಲ್ಮೆ

( ಭಾಮಿನಿ ಷಟ್ಪದಿ )

ಅಮರರಾಡುವ ಮಾತು ಸಂಸ್ಕೃತ |
ವಮರ ಗಂಗೆಯ ತೆರದಿ ಭಾರತ |
ದಮಲ ನುಡಿಗಳ ಬೆಳಸಿ ಪಾವನಗೊಳಿಸಿ ಮೆರೆಯುವುದು ||
ಅಮರಭಾಷೆಯಿ ಬೆಡಗನರಿಯಲು |
ಅಮರಕೋಶವು ಕಣ್ಣಿನಂತಿರೆ |
ಅಮರಸಿಂಹನ ಸಿಂಹಸದೃಶನ ನೆನೆವುದನುದಿನವು ||

—ರಾ. ನ. ಮುಳಗಿ

ಲೇಖಕರು
ಶ್ರೀರಂಗ
ಬೆಂಗಳೂರು

# ಸ್ಮೃತಿಕಾರ ಮನು ಈಗ ಬದುಕಿದ್ದರೆ—?

ಸಮಾಜದ ಕಲ್ಯಾಣವಾಗಬೇಕೆಂದು ಎಂದು ಮನು ಹಾಕಿಕೊಟ್ಟ ನಿಯಮಗಳನ್ನು ಇಂದಿನ ಮರಿಮನುಗಳು ಜಾರಿಯಲ್ಲಿ ತರುತ್ತಿರುವರು. ಹೀಗಾಗಿ ಸ್ಮೃತಿಕಾರ ಮನು ಈಗ ಮತ್ತೆ ಹುಟ್ಟಿಬರಬೇಕಾಗಿಲ್ಲ. ಮೇಲಾಗಿ ನಮ್ಮಲ್ಲೀಗ ಅಧಿಕ ಮುಂದಾಳುಗಳಿರುವರೆಂದು ಅವರು ಬೇರೆ ಮಾರ್ಗ ಅನುಸರಿಸುವಂತೆ ಮನವೊಲಿಸುತ್ತಿರುವಾಗ ಮನು ಅವತರಿಸಿ ಮೇಲಿನ ಸ್ಥಾನ ತನ್ನದೆಂದುಕೊಂಡರೆ ಅನವಸ್ಥೆಯೇ ಆದೀತು. ಅವನು ಯಾವದೇ ವಾಸನೆ ಇಲ್ಲದೆ ತೀರಿಕೊಂಡಿರುವುದರಿಂದ ಮತ್ತೆ ಹುಟ್ಟಿ ಬರುವ ಸಂಭವವೂ ಇಲ್ಲ. ಆದರೂ ಜನಿಸುವದಾದರೆ ಅವನ ಸೇವೆಗೆ ತಕ್ಕ ಮನ್ನಣೆ ನೀಡುವ ಸ್ಥಾನವೊಂದನ್ನು ಶ್ರೀರಂಗರು ಇಲ್ಲಿ ಕಲ್ಪಿಸಿದ್ದಾರೆ.

ಮಾನ್ಯ ಸಂಪಾದಕರು ಆಶಾವಾದಿಗಳಾಗಿದ್ದಾರೇನೋ! ಇಲ್ಲವಾದರೆ ಇಂತಹ ಸಂಶಯವೆ ಅವರಿಗೆ ಬರುತ್ತಿರಲಿಲ್ಲ. ಮನುಮಹರ್ಷಿಯು ಸಮಾಜಕಲ್ಯಾಣಕ್ಕಾಗಿ ಹಾಕಿಕೊಟ್ಟ ನಿಯಮಗಳನ್ನು ನೋಡಿದವರಿಗೆ ಇಂದಿನ ಪರಿಸ್ಥಿತಿಯಲ್ಲಿ ಆ ಮುದಿಬ್ರಾಹ್ಮಣನು ಜೀವದಿಂದುಳಿಯಬಹುದಾಗಿತ್ತು ಎಂಬ ಸಂಶಯವೆ ಬರುತ್ತಿರಲಿಲ್ಲ. ಆದರೆ ನಾನು ಆಶಾವಾದಿಯಾಗಿದ್ದೇನೆ; ಅರ್ಥಾತ್, ಲೇಖನಕ್ಕಾಗಿ 'ವಾಡಿಕೆಯಾದ ಗೌರವ ಧನವನ್ನು' ದೊರಕಿಸಿಕೊಳ್ಳುವ ಆಶೆ ನನ್ನದು. ಅದಕ್ಕಾಗಿ ಸ್ಮೃತಿಕಾರ ಮನು ಇಂದು ಬದುಕಿದ್ದರೆ ಖಂಡಿತವಾಗಿ ಆತ್ಮಹತ್ಯೆಯನ್ನು ಮಾಡಿಕೊಳ್ಳುತ್ತಿದ್ದ ಎಂದು ಒಂದೇ ಮಾತಿನಲ್ಲಿ ಲೇಖನವನ್ನು ಮುಗಿಸದೆ ಸಂಪಾದಕರ ಕಲ್ಪನಾಶಕ್ತಿಯನ್ನು ಮೆಚ್ಚಿ ನನ್ನ ಲೇಖನ ಚಾತುರ್ಯಕ್ಕಾಗಿ ಅವರಿಗಿರಲೇಬೇಕೆಂಬ ವಿಶ್ವಾಸಕ್ಕಾಗಿ ಉಬ್ಬಿ ಗಂಭೀರವಾದ ನನ್ನ ಲೇಖನಿಯನ್ನು ಸುರಸವಾದ ನನ್ನ ವಿಚಾರಗಳ— ಕ್ಷಮಿಸಿ— ಸುರಸವಾದ ನನ್ನ ಲೇಖನಿಯನ್ನು ಗಂಭೀರವಾದ ನನ್ನ ವಿಚಾರಗಳ ಪ್ರವಾಹದಾರಿಯನ್ನು ಅಗಿಯುವುದರಲ್ಲಿ ತೊಡಗಿಸುವೆ.

ಮನುವು ಆತ್ಮಹತ್ಯೆಯನ್ನು ಮಾಡಿಕೊಳ್ಳುತ್ತಿದ್ದ ಎಂಬುದು ಅತಿಶಯೋಕ್ತಿಯೆನ್ನಿಸದಿದ್ದರೂ ಅಶಕ್ಯ ಎಂಬುದನ್ನು ಅನಿವಾರ್ಯವಾಗಿ ಮೊದಲು ಒಪ್ಪಬೇಕು. ಯಾಕಂದರೆ ' ಸ್ವಯಂಭುವ'ನ ರಕ್ತ ಮೈಯಲ್ಲಿ ಹರಿಯುತ್ತಿದ್ದ ಆ ಬಡಬ್ರಾಹ್ಮಣನಿಗೆ ಆತ್ಮಹತ್ಯೆ ಶಕ್ಯವಿದ್ದಿರಲಿಲ್ಲ ಎಂದು ನನ್ನ ದೃಢವಾದ ಸಂದೇಹ. ಹುಟ್ಟಿಬರುವ ನಮ್ಮಂತಹ ಮರ್ತ್ಯರಿಗೆ ಮಾತ್ರ ಶಕ್ಯವಿದ್ದ ಈ ಆತ್ಮಹತ್ಯೆಯ ವಿದ್ಯೆ ದೇವ-ದೇವತೆಗಳಿಗೂ ಸಪ್ತಮನ್ವಾದಿಗಳಿಗೂ ಶಕ್ಯವಿದ್ದಿರಲಿಲ್ಲ ಎಂದು ನಾವು ಹೆಮ್ಮೆಯಿಂದ ಹೇಳಬಹುದು. ಆದರೆ ತನ್ನ ಮಾತಿನಂತೆ ತಾನು ನಡೆಯುವ ಪೂರ್ವಕಾಲದ ಅಭ್ಯಾಸವನ್ನು ಇಂದಿನ ಕಾಲದಲ್ಲಿಯೂ ಮನುವು ಉಳಿಸಿಕೊಂಡಿದ್ದರೆ ಅವನು ಖಂಡಿತವಾಗಿ ದೇಶತ್ಯಾಗವನ್ನು ಮಾಡುತ್ತಿದ್ದ. ಯಾಕೆನ್ನುವಿರಾ? ' ನ ಶೂದ್ರ ರಾಜ್ಯೇ ನಿವಸೇತ್ ನಾಧಾರ್ಮಿಕಜನಾವೃತೇ ' ಎಂದು ತನ್ನ ಸ್ಮೃತಿಯಲ್ಲಿ ಸ್ಪಷ್ಟವಾಗಿ ಹೇಳಿದ್ದಾನೆ (ಅ. ೪ ಶ್ಲೋ-೬೧). ಅವನ ದೃಷ್ಟಿಯಿಂದ ಇಂದಿನ ನಮ್ಮ ರಾಜ್ಯ ಶೂದ್ರರಾಜ್ಯ; ಅವನಿಗೆ ಉಸಿರುಗಟ್ಟುವಂತೆ ಸುತ್ತಲೂ ಅಧಾರ್ಮಿಕ ಜನರ ಲಕ್ಷಾವಧಿ ಗುಂಪು; ಆ ಗುಂಪಿನಲ್ಲಿ ಹೊರಬೀಳಲು ದಾರಿ ಸಿಕ್ಕಿದ್ದರೆ ಖಂಡಿತ ರಾಜ್ಯತ್ಯಾಗವನ್ನು ಮಾಡುತ್ತಿದ್ದ.

ಆದರೇನು? ಸುತ್ತುಗಟ್ಟಿದ ಅಧಾರ್ಮಿಕ ಜನಸಂದಣಿಯೊಳಗಿಂದ ದಾರಿ ಸಿಕ್ಕಬೇಕಲ್ಲ? ದಾರಿ ಸಿಕ್ಕದು ಎಂದು ಅರಿತಾಕ್ಷಣ ಆ ಬುದ್ಧಿವಂತ ' ಯುಗ ಬದಲಾಗಿದೆ ' ಎಂಬ ನಿರ್ಣಯಕ್ಕೆ ಬಂದುಬಿಡುತ್ತಿದ್ದ. ಯಾವ ಯುಗ ಪ್ರಾರಂಭವಾಗುವ ಮುಂಚೆ ದಾರಿಗಾಣದ ಕತ್ತಲೆ ( ಆಸೀದಿದಂ ತಮೋಭೂತಂ ) ಸರ್ವವ್ಯಾಪಿಯಾಗಿರುವುದು ಎಂದು ಅವನೇ ತನ್ನ ಶಾಸ್ತ್ರದಲ್ಲಿ ಹೇಳಿದ್ದಾನೆ. ಇಷ್ಟೇ ಅಲ್ಲ, ಆ ಬಗ್ಗೆ ವ್ಯವಸ್ಥೆಯನ್ನೂ ಮಾಡಿಕೊಂಡಿದ್ದಾನೆ. ಯುಗ ಬದಲಾದರೆ ಮನುವಿಗೇನು ಹೆದರಿಕೆ?

**ಅನ್ಯೇ ಕೃತಯುಗೇ ಧರ್ಮಾಸ್ತ್ರೇ-**
**ತಾಯಾಂ ದ್ವಾಪರೇಽಪರೇ ।**
**ಅನ್ಯೇ ಕಲಿಯುಗೇ ನೃಣಾಂ**
**ಯುಗಹ್ರಾಸಾನುರೂಪತಃ ॥**

ಯುಗ ಬದಲಾದಂತೆ ಧರ್ಮ ಬದಲಾಯಿಸುವುದು; ಸರಿ, ಬದಲಾಯಿಸಿದರೂ ಧರ್ಮ ಎಂಬುದೊಂದು ಇದ್ದೇ ಇರುವುದಲ್ಲ? ಆದ್ದರಿಂದ ಮನುವಿಗೆ ಶಾಸ್ತ್ರ ಬರೆಯುವ ಅವಕಾಶ ಉಳಿದೇ ಉಳಿಯುವದಲ್ಲ! ಎಂದರೆ, ಅಂದಾಗಲಿ ಇಂದಾಗಲಿ ಮುಂದಾಗಲಿ, ನಮಗಾಗಿ ಧರ್ಮ ಎಂಬ ನಿಯಮಬಂಧಗಳನ್ನು ಹಾಕಿಕೊಡುವ ಅಧಿಕಾರ ಮನುವಿಗೆ ಶಾಶ್ವತ ಎಂದಂತಾಯಿತು. ಮನುವು ನಿಜವಾಗಿಯೂ ಶ್ರೇಷ್ಠ ಮಹರ್ಷಿ ಎಂಬುದರ ಮರ್ಮ ಇಲ್ಲಿದೆ. ಬ್ರಾಹ್ಮಣರದಾಗಲಿ ಕ್ಷತ್ರಿಯರದಾಗಲಿ ವೈಶ್ಯರದಾಗಲಿ, ಶೂದ್ರರದಾಗಲಿ— ಯಾರ ಬಹುಮತದ ರಾಜ್ಯವಿದ್ದರೂ ಎಲ್ಲರ ಮೇಲೆ ಅಧಿಕಾರವನ್ನು ನಡೆಸುವ ಹಕ್ಕು ಮತ್ತು ಅವಕಾಶ ಮನುಮಹರ್ಷಿಗೆ ತಪ್ಪುವಂತಿಲ್ಲ.

ಅಂತೂ ಮನುರಾಯ ಎಲ್ಲಿದ್ದರೂ ತನ್ನ ಮನ್ವಂತರವನ್ನು ಪ್ರಸ್ಥಾಪಿಸುವ ಯೋಗ್ಯತೆಯವನು. ಅದಕ್ಕೆಂದೇ ಅವನು ಮುಂದಾಳುಗಳ ಮುಂದಾಳು, ಸೃಷ್ಟಿಗೆ ಮೊದಲ ಮುಂದಾಳು ಎನ್ನಿಸಿಕೊಂಡಿದ್ದಾನೆ. ಯಾಕೆನ್ನಿಸಿಕೊಳ್ಳಬಾರದು? ಜಗತ್ತಿನ ಯಚ್ಚ-ಯಾವತ್ತೂ ವಿಷಯಗಳ ಬಗ್ಗೆ ಅಧಿಕಾರವಾಣಿಯಿಂದ ಅಭಿಪ್ರಾಯವನ್ನು ಕೊಡುವ, ಎಂತಹ ಸಂದರ್ಭದಲ್ಲಿಯೂ ಭಾಷಣವನ್ನು ಮಾಡುವ, ಹೇಳಿದ್ದನ್ನೇ ಹೇಳುವ, ಅಗತ್ಯಬಿದ್ದಲ್ಲಿ ಪರಸ್ಪರ ವಿರುದ್ಧ ಅಭಿಪ್ರಾಯಗಳನ್ನು ಕೊಡುವ ಮುಂದಾಳುತನದ ಎಲ್ಲ ಗುಣಗಳೂ ಮನುವಿನ ಮೂಲಸ್ವಭಾವವಾಗಿವೆ; ಅವನಿಂದ ಆನುವಂಶಿಕವಾಗಿ ಇಂದಿನವರೆಗೂ ಮುಂದಾಳುಗಳೆನ್ನಿಸಿಕೊಳ್ಳುವವರಲ್ಲಿ ಕಂಡುಬರುತ್ತಿವೆ. ಈ ಮೂಲ ಮುಂದಾಳು ಇಂದು ಬದುಕಿದ್ದರೆ ನಮ್ಮ ವ್ಯವಹಾರವನ್ನೆಲ್ಲ ನೋಡಿ ' ಸರಿ, ಎಲ್ಲವೂ ನಾನು ಹಾಕಿಕೊಟ್ಟಂತೆಯೆ ನಡೆದಿದೆ, ಇದಕ್ಕೆನ್ನಬೇಕು ತಿಸ್ತು, ವಿಧೇಯತೆ, ಧರ್ಮದ ರಾಜ್ಯ ' ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದ.

ಈ ಮಾತನ್ನು ಕೇಳಿ ಅನೇಕರಿಗೆ ಆಶ್ಚರ್ಯವಾಗಬಹುದಾಗಿದೆ. ಮನುಮಹರ್ಷಿಯು, ಧರ್ಮದ ಕಲ್ಪನೆ ಎಲ್ಲಿ? ಧರ್ಮದ ಮೇಲೆ ಆಸಾಧರಿತವಾದ

ಇಂದಿನ ನಮ್ಮ ವ್ಯವಹಾರವೆಲ್ಲಿ? ಹೀಗೆ ಕೇಳುವವರಿಗೆ ಮನುವಿನ ಧರ್ಮದ ಕಲ್ಪನೆಯೆ ಇಲ್ಲ ಎಂದು ವಿಷಾದದಿಂದ ಹೇಳಬೇಕಾಗುವುದು. ಧರ್ಮವೆಂದರೇನು? ಅದರ ಮೂಲ ಎಲ್ಲಿದೆ? ಈ ಪ್ರಶ್ನೆಗಳಿಗೆ ಮನುವು ಕೊಟ್ಟ ಉತ್ತರ (ಅ. ೨; ಶ್ಲೋ. ೬) ಹೀಗೆ :— (೧) ಅಖಿಲ ವೇದಗಳು, (೨) ಅವುಗಳನ್ನು ಬಲ್ಲವರ ಸ್ಮೃತಿ ಶೀಲಗಳು, (೩) ಸಾಧು ಪುರುಷರ ಆಚಾರ ಮತ್ತು (೪) ಆತ್ಮಸಂತುಷ್ಟಿ, ಈ ನಾಲ್ಕರಲ್ಲಿ ಧರ್ಮದ ಉಗಮವಿದೆ ಎಂದು ಮನುವಿನ ಅಭಿಪ್ರಾಯ. ಯುಗಗಳು ನಾಲ್ಕು. ಒಂದೊಂದು ಯುಗಕ್ಕೆ ಒಂದೊಂದು ಧರ್ಮ ಎಂಬುದನ್ನು ನೆನೆದರೆ ಕೊನೆಯದಾದ ಕಲಿಯುಗದ ಧರ್ಮಕ್ಕೆ ಅನುಕ್ರಮವಾಗಿ ಕೊನೆಯದಾದ ಆತ್ಮಸಂತುಷ್ಟಿಯೆ ಮೂಲ ಎಂದು ತರ್ಕಬದ್ಧವಾಗಿ ಹೇಳಬಹುದಲ್ಲವೆ! ಮನುವಿನ ಅಭಿಪ್ರಾಯಕ್ಕೆ ಅನುಗುಣವಾದ ಧರ್ಮವನ್ನೆ ಇಂದು ನಾವು ಪಾಲಿಸುತ್ತಿಲ್ಲವೆ? ಆತ್ಮಸಂತುಷ್ಟಿ! ನಮ್ಮ ಸಂತೋಷಕ್ಕಾಗಿಯೆ ನಮ್ಮ ಇಂದಿನ ವ್ಯವಹಾರ ನಡೆದಿದೆ. ಚುನಾವಣೆ, ಅಧಿಕಾರಪದ, ಲಂಚಗಾರಿಕೆ, ಕಳ್ಳಪೇಟೆ, ವಶೀಲಿ ಮುಂತಾದುವೆಲ್ಲ ಇಂದು ಹೆಚ್ಚು ಹೆಚ್ಚಾಗಿ ಪ್ರಚಾರದಲ್ಲಿ ಬರುತ್ತಿರುವುದು ಯಾಕೆ? ಶೇಕ್ಸ್‌ಪೀಅರನು ಬಣ್ಣಿಸುವ ದಯಾಗುಣದಂತೆ ಕೊಡುವವನಿಗೂ ಕೊಳ್ಳುವವನಿಗೂ ಉಭಯಸಂತೋಷದಾಯಕವಾದ ಲಂಚದಂತಹ ಈ ಆತ್ಮಸಂತುಷ್ಟಿಪ್ರೇರಿತ ಧರ್ಮದ ಮೇಲೆಯೆ ಇಂದಿನ ನಮ್ಮ ಇಡಿಯ ವ್ಯವಹಾರ ನಿಂತಿದೆಯಲ್ಲವೆ?

ಇದೇ ಸಂದರ್ಭದಲ್ಲಿ ಇನ್ನೂ ಒಂದು ತಪ್ಪುಕಲ್ಪನೆಯನ್ನು ಹೊಡೆದು ಹಾಕಬೇಕಾಗಿದೆ. ಅದೇಂದರೆ ಹಿಂದಿನ ಕಾಲದಲ್ಲಿ ಮನುಮಹರ್ಷಿ ವರ್ಣಾಶ್ರಮ ಧರ್ಮವನ್ನು ಎತ್ತಿಹಿಡಿದದ್ದು. ಈಗ ಆ ಮನು ಬದುಕಿದ್ದರೆ ಅವನ ಅವಸ್ಥೆ ಏನಾಗುತ್ತಿದ್ದಿತು? ಹಿರಿಹಿರಿ ಹಿಗ್ಗುತ್ತಿದ್ದ. ವಾಚಕರೆ, ಬಿದ್ದು ಬಿದ್ದು ನಗುತ್ತಿದ್ದ. ವರ್ಣಾಶ್ರಮ ಪದ್ಧತಿ? ಅದೇಂದರೆ ಏನೆಂದು ತಿಳಿದಿರುವಿರಿ? ಸಮಾಜದಲ್ಲಿ ನಾಲ್ಕು ವರ್ಣಗಳು: ವಿದ್ಯೆ ಕಲಿತವರು, ಕೈಯಲ್ಲಿ ಕಸುವಿದ್ದವರು, ಕಾಸಿನ ವ್ಯವಹಾರದವರು, ಕೂಲಿ ಕೆಲಸದವರು, ಹೆಸರು ಏನೇ ಇರಲಿ, ವರ್ಣಗಳನ್ನು ವಿಂಗಡಿಸುವ ಮೂಲತತ್ತ್ವವಿದೆಯಲ್ಲ? ಇಂದಿನ ಸಮಾಜದಲ್ಲಿ ಆ ತತ್ತ್ವಕ್ಕನುಸಾರವಾಗಿಯೆ ನಾಲ್ಕು ವರ್ಣಗಳಿಲ್ಲ ಎಂದು ಯಾರಾದರೂ ಹೃದಯ ತಟ್ಟಿ ಹೇಳಬಹುದೆ? (ಹುಂ ಎಂದು ಹಟತೊಟ್ಟರೆ ಹೃದಯಕ್ರಿಯೆಯೆ ನಿಂತು ತಟ್ಟಲು ಹೃದಯವೇ ಇಲ್ಲದಾಗುವುದು). 'ಇಲ್ಲ, ಈ ಮಾತು ವಿಪರೀತವಾಗಿದೆ, ಹೆಸರಿಗೆ ಮಹತ್ತ್ವವಿದೆ, ಬ್ರಾಹ್ಮಣ ವರ್ಣಕ್ಕೆ ಅತ್ಯಂತ ಮಾನ--ಸೌಕರ್ಯಗಳಿದ್ದವು" ಎಂದು ಮುಂತಾಗಿ ಯಾರಾದರೂ ವಾದಿಸಬಹುದು. ಅಂತಹರು ಕೂಡ ಈ ಬಗ್ಗೆಯೂ ಮೂಲತತ್ತ್ವವನ್ನೇ ನೋಡಬೇಕೆಂದು ನಮ್ಮ ನಮ್ರ ಸೂಚನೆ. ಮಾನ ಸಲ್ಲಬೇಕಾದುದು ಯಾವ ಮೂಲತತ್ತ್ವದ ಮೇಲೆ? ೧. ವಿತ್ತ (ಐಶ್ವರ್ಯ) ೨. ಬಂಧು (ನಂಟಸ್ತಿಕೆ), ೩. ವಯಸ್ಸು, ೪. ಕರ್ಮ (ಕೆಲಸ) ಮತ್ತು ೫. ವಿದ್ಯಾ (ಶಿಕ್ಷಣ). ಇವು "ಮಾನ್ಯಸ್ಥಾನ"—ಎಂದರೆ ಮಾನ ಕೊಡುವುದಕ್ಕೆ ಅಯ್ದು ಕಾರಣಗಳು, ಇವುಗಳಲ್ಲಿ ಮುಂಚಿನದಕ್ಕಿಂತ ತರುವಾಯದ್ದು ಹೆಚ್ಚೆಚ್ಚು ಶ್ರೇಷ್ಠ ಎಂದು ಮನುವು ತನ್ನ ಸ್ಮೃತಿಯಲ್ಲಿ ಹೇಳಿದ್ದಾನೆ. (ಅ. ೨; ಶ್ಲೋ. ೧೩೬.) ಇದು ಕೃತಯುಗಕ್ಕೆ ಅನ್ವಯಿಸುವ ಮಾತು. ಯುಗಧರ್ಮ ಬದಲಾದ ಇಂದಿನ ಕಾಲದಲ್ಲಿ ಇದನ್ನು ಅನ್ವಯಿಸುವುದು ಹೇಗೆ? ಕಲಿಯುಗೇ ವಿಪರೀತವೃತ್ತಿಃ ಎಂಬ ನ್ಯಾಯದಂತೆ "ಮುಂಚಿನದು ತರುವಾಯದಕ್ಕಿಂತ ಶ್ರೇಷ್ಠ" ಎಂದು ನಿರ್ಣಯಿಸಬೇಕಾಗುವುದು. ಎಂದರೆ ಮಾನವಶ್ರೇಷ್ಠವಾದ ಅಳತೆಗೋಲು ವಿತ್ತ. ಧನ; ದುಡ್ಡು ಇದ್ದವನೆ ಮೊದಲ ಮಾನಕ್ಕೆ ಅರ್ಹ ಎಂಬುದು ತಾತ್ಪರ್ಯ. ಕಲಿಯುಗದ ಈ ನಿಜವಾದ ಧರ್ಮದ ಅರಿವು ನಮಗೆ ಮ್ಲೇಂಛರ ಆಳಿಕೆಯಲ್ಲಿಗಿಂತ ಸ್ವಾತಂತ್ರ್ಯದ ತರುವಾಯದಲ್ಲಿಯೆ ಹೆಚ್ಚಾಗಿ ಬಂದಿತು ಎಂದು ಹೆಮ್ಮೆಯಿಂದ ಹೇಳಬಹುದು. ವಿತ್ತದ ತರುವಾಯ 'ಬಂಧು' ಎಂದರೆ ನಂಟಸ್ತಿಕೆಯು ಮಾನದಶ್ರೇಷ್ಠ ಕಾರಣ. ತಮ್ಮವರಿಗೆಯೆ ಸ್ಥಾನಮಾನಗಳನ್ನು ಒದಗಿಸಿಕೊಡಬೇಕು ಎಂಬುದು ನಮ್ಮ ವ್ಯವಹಾರದ ಅಡಿಗಲ್ಲಾಗಿದೆ. ಹೀಗೆಯೆ ವಿಚಾರಮಾಡುತ್ತ ಕನಿಷ್ಠ ಕಾರಣವು ವಿದ್ಯಾ ಎಂದು ಹೇಳಬಹುದು. ಈ ರೀತಿ ಇಂದಿನ ನಮ್ಮ ವ್ಯವಹಾರದಲ್ಲಿ ಸ್ಮೃತಿಕಾರ ಮನು ಸಾಕ್ಷಾತ್ತಾಗಿ ಬದುಕಿಬಂದಿರುವನೇನೊ ಎನ್ನುವ ಮಟ್ಟಿಗೆ ಅವನು ಹಾಕಿಕೊಟ್ಟ ನಿಯಮಗಳನ್ನು ನಾವು ಪಾಲಿಸುತ್ತಿದ್ದೇವೆ.

ನಮ್ಮ ದೇಶವು ಸ್ವತಂತ್ರವಾದ ಮೇಲೆ ಯಾರೊ ಕೆಲವರು ತಮಗೆ ಹೊಸತಾಗಿ ದೊರೆತ ಸ್ವಾತಂತ್ರ್ಯದ ಉಪಭೋಗವೆಂದು ಮನುಸ್ಮೃತಿಯ ಪ್ರತಿಗಳನ್ನು ಸುಟ್ಟುಹಾಕಿದರಂತೆ. ಪಾಪ! ಸುಡಲ್ಪಟ್ಟವರು ಮತ್ತೆ ಹುಟ್ಟಿಬರುವ ರೂಢಿಯಿದ್ದ (ಉದಾ: ಕಾಮ) ನಮ್ಮ ಸಂಸ್ಕೃತಿಯಲ್ಲಿ ಇದರ ಪ್ರಯೋಜನವಿಲ್ಲ ಎಂದು ಇವರಿಗೆ ತಿಳಿಯಲಿಲ್ಲವೇನೊ! ಇದಲ್ಲದೆ ಪ್ರತಿಯೊಂದನ್ನು ಸುಟ್ಟಲ್ಲಿ ಮನುವಿಗೂ ಬಾಧೆ ಬರಲಿಲ್ಲ, ಸ್ಮೃತಿಗೂ ಧಕ್ಕೆ ತಗಲಲಿಲ್ಲ ಎಂಬುದನ್ನು ಇವರು ಅರಿಯದೆ ಹೋಗಿರಬೇಕು. ತಾನು ಸರ್ವಜ್ಞ, ತಾನು ಸರ್ವಾಧಿಕಾರಿ ಎಂದು ಪ್ರಪಂಚಕ್ಕೆ ನಿಯಮಗಳನ್ನು ಹಾಕಿಕೊಡುವ ಮನುವು ಸೃಷ್ಟಿಯ ಮಾನಸಪುತ್ರ, ಅರ್ಥಾತ್ ಮನುಷ್ಯನ ಮನಸ್ಸಿನಲ್ಲಿಯೆ ಇದ್ದಾನೆ; ಅದಕ್ಕಾಗಿಯೆ ಅವನು ಸ್ಮೃತಿರೂಪದಲ್ಲಿ ಉಳಿದುಕೊಳ್ಳುತ್ತಾನೆ. ತಾನು ಮಹರ್ಷಿ, ತಾನು ಬ್ರಾಹ್ಮಣ, ಅದಕ್ಕಾಗಿ ಬ್ರಾಹ್ಮಣನು ಶ್ರೇಷ್ಠ, ಎಲ್ಲರಿಗೂ ವಂದ್ಯ ಎಂದು ಸಾರಿದ್ದಕ್ಕಾಗಿ ಈ ನಮ್ಮ ಅಜ್ಞಾನಿಮಿತ್ರರಿಗೆ ಮನುಸ್ಮೃತಿಯ ಮೇಲೆ ಸಿಟ್ಟು! ಬ್ರಾಹ್ಮಣ ಮೊದಲಾಗಿ ಜಾತಿಭೇದದ ಎಣಿಕೆ ಅನಿಷ್ಟವಾಗಿದೆ, ದುಷ್ಟವಾಗಿದೆ; ಹಾಗೆ ಹೇಳುವ ಮನುವಿನಂತಹವರಿಗೆ ಇಂದಿನ ಸಮಾಜದಲ್ಲಿ ಸ್ಥಾನವಿಲ್ಲ; ಒಂದು ವೇಳೆ ಇಂದು ಮನು ಬದುಕಿದ್ದರೆ ಹೆಚ್ಚೆಂದರೆ ಪ್ರತಿಗಾಮಿ ಜನಸಂಘದ (= ಜನಸಮುದಾಯ, ಆ ಹೆಸರಿನ ಪಕ್ಷವಲ್ಲ) ಮುಂದಾಳಾಗುತ್ತಿದ್ದ—ಎಂದೂ ಈ ಮಿತ್ರರು ತಿರಸ್ಕಾರದಿಂದ ಹೇಳಬಹುದು. ಆದರೆ ಮುಂದಾಳಾದವನಿಗೆ ಪಕ್ಷವೆಂಬುದಿಲ್ಲ, 'ಮುಂದಾಳು' ಎಂಬುದೆ ಒಂದು ವಿಶಿಷ್ಟ ಜಾತಿಯಾಗಿದೆ ಎಂಬುದನ್ನು ಇವರು ಅರಿತಿದ್ದರೆ ಮನುವಿನಂತಹ ಪ್ರತಿಭೆಯ ಕಲ್ಪನೆ ಇವರಿಗೆ ಆಗಬಹುದಿತ್ತು. ಆ ಪ್ರತಿಭೆಯಿಂದ—ಎಂತೆಂತಹ ಮಾತುಗಳನ್ನು ಹೇಳಿದ್ದರೂ— ಮನುವು ಇಂದು ಮುಂದಾಳಾಗುತ್ತಿದ್ದ ಮತ್ತೆ ಹುಟ್ಟಿ ಬಂದಲ್ಲಿ.

ಹೋಗಲಿ. ಬ್ರಾಹ್ಮಣರ ಬಗ್ಗೆ ಅವನು ಹೇಳಿದ್ದಾದರೂ ಏನು ? ಬ್ರಾಹ್ಮಣರು ಶ್ರೇಷ್ಠರು; ನಿಜ. ಆದರೆ, ಯಾಕೆ ಕೇಳಿರಿ.

**ಯಾತ್ರಾಮಾತ್ರಪ್ರಸಿದ್ಧ್ಯರ್ಥಂ ಸ್ವೈಃ**
**ಕರ್ಮಭಿರಗರ್ಹಿತೈಃ ।**
**ಅಕ್ಲೇಶೇನ ಶರೀರಸ್ಯ ಕುರ್ವೀತ ಧನ-**
**ಸಂಚಯಂ ॥**

ಇದು ಬ್ರಾಹ್ಮಣನ ಕರ್ತವ್ಯ (ಅ. ೪; ಶ್ಲೋ. ೩) ಬ್ರಾಹ್ಮಣನು ಧನಸಂಚಯವನ್ನು ಮಾಡಬೇಕು. ಹೇಗೆ ? ಎಷ್ಟರ ಮಟ್ಟಿಗೆ ? "ಹುಟ್ಟಿದ ಮೇಲೆ ಸಾಯುವವರೆಗೂ ಜೀವವನ್ನು ಹಿಡಿಯುವಮಟ್ಟಿಗೆ (ಯಾತ್ರಾಮಾತ್ರ) ಅದೂ ಅಂತಹ ಇಂತಹ ಕಾಯಕ್ಲೇಶವಿಲ್ಲದೆ." ಸ್ಮೃತಿಶಾಸ್ತ್ರದ ತಾಂತ್ರಿಕ ಭಾಷೆಯನ್ನು ಬಿಟ್ಟು ವ್ಯವಹಾರದ ಮಾತಿನಲ್ಲಿ ಹೇಳುವುದಾದರೆ "ಬ್ರಾಹ್ಮಣನು ಕೆಲಸವಿಲ್ಲದೆ ಉಪವಾಸದಿಂದ ಮರಣದ ದಾರಿಯನ್ನು ಕಾಯುತ್ತಿರಬೇಕು" ಎಂದು. ಒಂದು ಮಾತೇನೊ ನಿಜ. ಸಂಕ್ರಾಂತಿಕಾಲವಾದ ಮ್ಲೇಂಚ್ಛಯುಗದಲ್ಲಿ ಮನುವಿನ ಆದೇಶವನ್ನು ಮರೆತು ಬ್ರಾಹ್ಮಣರು ಅಧಾರ್ಮಿಕವಾಗಿ ನಡೆದುಕೊಂಡಿದ್ದರು. ಆದರೆ ಅದಕ್ಕೆ ಹೊಣೆಗಾರ ಮನುವಲ್ಲ. ಇನ್ನೇಕೆ ಆ ಮಾತು ? ಕಲಿಯುಗ ಪ್ರಾರಂಭವಾದ ಈ ಹದಿನಾರು ವರ್ಷಗಳಲ್ಲಿ ಬ್ರಾಹ್ಮಣನನ್ನು ಮತ್ತೆ ಸರಿಯಾದ ದಾರಿಗೆ ತರಲಾಗಿದೆಯಲ್ಲ. ಆಯಾ ವರ್ಣವನ್ನು ಅದರ ಕರ್ತವ್ಯದಲ್ಲಿಯೇ ಇರಿಸುವುದು ರಾಜನ ಹೊಣೆ ಎಂದು ಮನು ಹೇಳಿದ್ದನ್ನೇ ಇಂದಿನ ರಾಜಶಾಸನ ನಡೆಸುತ್ತಿದೆಯಲ್ಲ ? ಸ್ಮೃತಿಯನ್ನೇ ಸುಟ್ಟರೂ ಕೃತಿಯಲ್ಲಿ ಉಳಿಸಿಕೊಂಡಿದ್ದೇವೆ ಎಂಬುದು ಸುದೈವ.

ಇದುವರೆಗೆ ಹೇಳುತ್ತಿದ್ದುದರಲ್ಲಿ ಅಡಕವಾದ ಧ್ವನಿ ಎಷ್ಟು ಜನ ವಾಚಕರ ಲಕ್ಷ್ಯಕ್ಕೆ ಬಂದಿದೆಯೊ ! ಸ್ಮೃತಿಕಾರ ಮನು ಬದುಕಿದ್ದರೆ— ಎಂಬ ಪ್ರಶ್ನೆಕ್ಕೆ ಉತ್ತರವಾಗಿ ಇಂದು ಕೂಡ ಮನುವಿನ ಇಚ್ಛೆಯಂತೆಯೆ ವ್ಯವಹಾರ ನಡೆಯುತ್ತಿದೆ ಎಂದು ಹೇಳುತ್ತಿದ್ದೇನೆ. ಯಾಕೆ ? ಸ್ಮೃತಿಕಾರ ಮನು ಬದುಕಿ ಬರುವ ಅಗತ್ಯವೆ ಇಲ್ಲ. ಬಾರದಿದ್ದರೇನೆ ಒಳಿತು ಎಂದು ಸೂಚಿಸುತ್ತಿದ್ದೇನೆ. ಯಾಕೆಂದರೆ, ಮನು ಮತ್ತೊಮ್ಮೆ ಹುಟ್ಟಿ ಬಂದನೆಂದರೆ ಇಂದಿನ ಪ್ರಪಂಚದಲ್ಲಿ ಅನವಸ್ಥೆಯೇ ತಲೆಎತ್ತುವುದು. ಒಂದು, ಯಾವ ಯುಗದಲ್ಲಿ ಹುಟ್ಟಿ ಬಂದರೂ ಮನುವು ಮುಂದಾಳಾಗುವುದು ಖಂಡಿತ. ಅಂತಹನು ಈಗ ಹುಟ್ಟಿಬಂದರೆ ಹೇಗೆ ? ಈಗಾಗಲೆ ನಮಗೆ ಅಸಂಖ್ಯ ಮುಂದಾಳುಗಳಿದ್ದಾರೆ. ಹಾಗೂ ಹೀಗೂ ಏನೇನನ್ನೊ ಮಾಡಿ ಅದರಲ್ಲಿಯೆ ಕೆಲವರನ್ನು ವಾನಪ್ರಸ್ಥಕ್ಕೆ, ಕೆಲವರನ್ನು ಸಂನ್ಯಾಸಕ್ಕೆ ಒಲಿಸಬೇಕೆಂದು ನಿಶ್ಚಯಿಸಿದ್ದೇವೆ. ಇಂತಹ ಸಂದರ್ಭದಲ್ಲಿ ಈ ಮಹರ್ಷಿಮಹಾರಾಯನೊಬ್ಬ ಹುಟ್ಟಿಬಂದರೆ ಮುಂದೆ ಗತಿ ? ನಮ್ಮ ನಿರ್ಣಯದ ದಾರಿಯನ್ನು ಕಾಯದೆ ಎಲ್ಲರಿಗಿಂತ ಮೇಲಿನ ಸ್ಥಾನ ತನ್ನದೆಂದು ಆಕ್ರಮಿಸಿಕೊಂಡುಬಿಡುವನು. ನಮ್ಮ ನಿರ್ಣಯವನ್ನು ಕಡೆಗಣಿಸಿ ತನ್ನ ಯೋಗ್ಯತೆಗಾಗಿಯೇ ಆ ಸ್ಥಾನ ತನ್ನದು ಎನ್ನುವುದು ಇಂದಿನ ಪ್ರಜಾಪ್ರಭುತ್ವಪದ್ಧತಿಗೆ ವಿರುದ್ಧವಾಗುವುದು. ಇದಲ್ಲದೆ ತಾನು ಹಾಕಿಕೊಟ್ಟ ತತ್ತ್ವಕ್ಕೆಯೇ ವಿರುದ್ಧವೆನ್ನಿಸುವುದು. ರಾಜನಾದವನಿಗೆ ವೈಯ್ಯಕ್ತಿಕವಾದ ಯೋಗ್ಯತೆ ಅಗತ್ಯವಿಲ್ಲ, ನಮ್ಮನ್ನು ಮೀರಿದ ಒಂದು ಶಕ್ತಿ ಅವನನ್ನು ಆ ಅಧಿಕಾರದಲ್ಲಿ ಕೂಡ್ರಿಸುವುದು (ರಾಜಾನಮಸೃಜತ್ ಪ್ರಭುಃ), ಅವನು ಹುಡುಗಬುದ್ಧಿಯವನಾದರೂ ಮಾನ್ಯನೆ (ಬಾಲೋऽಪಿ ನಾವಮಂತವ್ಯಃ) ಎಂದು ಮುಂತಾಗಿ ಸಾರಿದ (ಅ. ೭ ; ಶ್ಲೋ. ೩, ೮). ಮನುವು ಈಗ ತಾನಾಗಿಯೆ ಆ ಅಭಿಪ್ರಾಯಗಳನ್ನು ಧಿಕ್ಕರಿಸಬಹುದೆ ? ಛೆ, ಮನುವಿನಲ್ಲಿ ನಮಗೆ ಪೂರ್ತಿ ವಿಶ್ವಾಸವಿದೆ, ಅಂತಹ ಕೆಲಸವನ್ನು ಅವನು ಮಾಡುವುದಿಲ್ಲ, ಮತ್ತೊಮ್ಮೆ ಬದುಕಿಬರುವುದಿಲ್ಲ, ಯಾರಿಗೂ ಹೆದರಿಕೆಬೇಡ.

ಇದಲ್ಲದೆ ಇನ್ನೂ ಒಂದು ವಿಷಯ. ಮನು ಮಹರ್ಷಿಯು ಬ್ರಾಹ್ಮಣನಾಗಿದ್ದಾನೆ ; ಬ್ರಾಹ್ಮಣನು ರಾಜ್ಯವನ್ನು ನಡೆಸಕೂಡದು ಎಂದು ಅವನೇ ಸಾರಿದ್ದಾನೆ. ರಾಜ್ಯವನ್ನಾಳುವುದು ಕ್ಷತ್ರಿಯರ ಕರ್ತವ್ಯ. ಸ್ವಾತಂತ್ರ್ಯಯುದ್ಧವನ್ನು ಗೆದ್ದ ಕ್ಷತ್ರಿಯರೆ ಸ್ವತಂತ್ರಭಾರತವನ್ನು ಆಳುವ ಅಧಿಕಾರ ಪಡೆದಿದ್ದಾರೆ. ಅಥವಾ ಇಷ್ಟೆಲ್ಲ ಸಮರ್ಥನೆ ಯಾಕೆ? ವಾಸನೆಗಳು ಅತೃಪ್ತವಾಗಿ ಉಳಿದಲ್ಲಿ ಸತ್ತವರು ಮತ್ತೆ ಮತ್ತೆ ಹುಟ್ಟಿಬರುವರಂತೆ. ಮನುವಿನಂತಹ ಸ್ವಯಂಭೂತಿಗಳಿಗೆ ಸಾಯುವ ಪ್ರಶ್ನವಿಲ್ಲದಿದ್ದರೂ ಮತ್ತೆ ಭೂಲೋಕದಲ್ಲಿ ಬದುಕಿಬರಲು ಪ್ರೇರಣೆ ಬೇಕಲ್ಲ ? ಎಲ್ಲವೂ ಅವನ ಇಚ್ಛೆಯಂತೆಯೆ ನಡೆದಾಗ, ಯಾವ ವಾಸನೆಯೂ ಅತೃಪ್ತವಾಗಿ ಉಳಿಯದಿದ್ದಾಗ ಮತ್ತೆ ಈ ಭೂಲೋಕದ ಜಂಜಾಟದಲ್ಲಿ ಸಿಕ್ಕಿಬೀಳುವ ಅಗತ್ಯವೇನು ? ಇಂದು ರಾಜರೆನ್ನಿಸುವವರು, ಆಳುವವರು ಚಾಚೂ ತಪ್ಪದೆ ಮನುವಿನ ಮುಖ್ಯ ಆದೇಶಗಳನ್ನು ಪಾಲಿಸುತ್ತಿದ್ದಾರೆ. ರಾಜ್ಯವನ್ನು ನಡೆಸುವವನ ಕರ್ತವ್ಯಗಳನ್ನು ವಿವರಿಸುವಾಗ ಮನುಮಹರ್ಷಿಯು ಹೇಳುವ ಈ ಮಾತುಗಳನ್ನು ಕೇಳಿರಿ :—

**ಅಲಬ್ಧಂ ಚೈವ ಲಿಪ್ಸೇತ ಲಬ್ಧಂ ರಕ್ಷೇತ್**
**ಪ್ರಯತ್ನತಃ ।**
**ರಕ್ಷಿತಂ ವರ್ಧಯೇಚ್ಚೈವ ವೃದ್ಧಂ**
**ಪಾತ್ರೇಷು ನಿಕ್ಷಿಪೇತ್ ॥**



“(ಅದುವರೆಗೆ) ದೊರಕದಿದ್ದುದನ್ನುಪಡೆಯಲು ಇಚ್ಛಿಸಬೇಕು ; ಪಡೆದುದನ್ನು ಯತ್ನದಿಂದ ರಕ್ಷಿಸಬೇಕು ; ರಕ್ಷಿಸಿದ್ದನ್ನು ಬೆಳೆಯಿಸಿಕೊಳ್ಳಬೇಕು, ಬೆಳೆದುದನ್ನು ಯೋಗ್ಯವಾದಲ್ಲಿ ಇಡಬೇಕು.” (ಅ. ೭ ; ಶ್ಲೋ. ೯೯). ಈ ಮಾತನ್ನು ನಮ್ಮ ದೊರೆಗಳು ಪಾಲಿಸುತ್ತಿದ್ದಾರೆ ಎಂದು ಬೇರೆಯಾಗಿ ಹೇಳಬೇಕೆ ? ಅಧಿಕಾರಕ್ಕೆ ಬಂದೊಡನೆ ಅಂದಿನವರೆಗೆ ಇಲ್ಲದ ಸಂಗ್ರಹವನ್ನು ಪ್ರಾರಂಭಿಸುವರು ; ಆ ಸಂಗ್ರಹವನ್ನು ಎಂತೆಂತಹ ಯತ್ನಮಾಡಿ ಕರ-ವಸೂಲಿ ಅಧಿಕಾರಿಗಳಿಂದ ಲೆಕ್ಕತಪಾಸಿಗರಿಂದ ರಕ್ಷಿಸಿಕೊಳ್ಳುವರು ; ಅಧಿಕಾರದ ಸದುಪಯೋಗ-ದಿಂದ ಅದನ್ನು ಬೆಳೆಯಿಸಿಕೊಳ್ಳುವರು ; ಕೊನೆಗೆ ಯೋಗ್ಯವೆನ್ನಿಸಿದ ರಹಸ್ಯಸ್ಥಾನದಲ್ಲಿ ಅದನ್ನಿಡುವರು. ಸಂಪ್ರದಾಯದ ಶಾಸ್ತ್ರಕ್ಕೆ ಇನ್ನೆಂತಹ ವಿಧೇಯತೆ ಬೇಕು ? ರಾಜ್ಯ ನಡೆಸುವ ಹೊಣೆಯನ್ನು ಕೂಡ ಸಾವಿರಾರು ವರ್ಷಗಳ ಮುಂಚಿನ ಮನುಮಹಾನುಭಾವನು ಹೇಳಿದಂತೆಯೆ ನಿರ್ವಹಿಸುತ್ತಾರೆ ಎಂಬುದು ಸಾಮಾನ್ಯರಿಗೆ ಆಶ್ಚರ್ಯವೆನ್ನಿಸಬಹುದು, ಅರಿತವರಿಗೆ ಹೊಸತಲ್ಲ. ರಾಜ್ಯ ನಡೆಸುವವ ಹೇಗೆ ವರ್ತಿಸಬೇಕು ?

**ಬಕವಚ್ಚಿಂತಯೇದರ್ಥಾನ್ ಸಿಂಹವಚ್ಚ ಪರಾಕ್ರಮೇತ್ ।**
**ವೃಕವಚ್ಚಾವಲುಂಪೇತ ಶಶವಚ್ಚ ವಿನಿಷ್ಪತೇತ್ ॥**

ಅರ್ಥ (ಧನಸಂಗ್ರಹ)ದ ಬಗ್ಗೆ ಬಕಧ್ಯಾನದಿಂದಿರಬೇಕು (ಎಂದರೆ ಇನ್ನೊಬ್ಬರಿಗೆ ತಿಳಿದಿರಬಾರದು); (ತನ್ನಅಧಿಕಾರವನ್ನು ಇನ್ನೊಬ್ಬನು ಕಸಿದುಕೊಳ್ಳಲು ಬಂದರೆ) ಸಿಂಹದಂತೆ ಹೋರಾಡಬೇಕು; ಇನ್ನೊಬ್ಬರನ್ನು ತೋಳಗಳಂತೆ ಹೊಂಚು ಹಾಕಿ ಧ್ವಂಸಮಾಡಬೇಕು; ( ಮೈಮೇಲೆ ಏನಾದರೂ ಬರುವಂತಿದ್ದರೆ) ಮೊಲದಂತೆ ಓಡಿಹೋಗಬೇಕು (ಅ. ೭; ಶ್ಲೋ. ೧೦೬)ದೇಶದ ಅನೇಕ ರಾಜ್ಯಗಳಲ್ಲಿ ಸರದಿ ಸರದಿಯಾಗಿ ಬೆಳೆಯುತ್ತಿರುವ ಬಕ-ಸಿಂಹ-ತೋಳ-ಮೊಲಗಳ ಸಂಖ್ಯೆಯನ್ನು ನೋಡಿದರೆ ಮನುವಿನ ಉಪದೇಶದ ಬಗ್ಗೆ ಎನ್ನಿಸುವಷ್ಟೆ ಆದರವು ಅದನ್ನು ತಪ್ಪದೆ ನಡೆಸುವ ನಮ್ಮ ಮುಂದಾಳುಗಳಿಗಾಗಿ ಮೂಡುವುದು.

ಕೊನೆಯದಾಗಿ, ಒಂದು ಮಾತನ್ನು ಹೇಳಬಹುದು. ಮಾತು ಸಾಕು, ಕೃತಿ ಬೇಕು ಎಂದು ನಮ್ಮ ಮುಂದಾಳುಗಳು ಹೇಳುವರಲ್ಲವೆ? “ದಡ್ಡರಿಗಿಂತ ಓದಿದವರು, ಓದಿದವರಿಗಿಂತ ಓದಿದ್ದನ್ನು ಸ್ಮೃತಿಯಲ್ಲಿಟ್ಟುಕೊಂಡವರು, ಅವರಿಗಿಂತ ಅದನ್ನು ತಿಳಿದುಕೊಂಡವರು, ಇವರೆಲ್ಲರಿಗಿಂತ ಅದನ್ನು ಆಚರಣೆಯಲ್ಲಿ ತರುವವರು ಶ್ರೇಷ್ಠರು” (ಅ. ೧೨; ಶ್ಲೋ. ೧೦೩) ಎಂಬ ಮನುಸ್ಮೃತಿ-ಯಲ್ಲಿಯ ಮಾತಿಗೆಯೆ ನಮ್ಮ ಮುಂದಾಳುಗಳು ಮನ್ನಣೆಕೊಟ್ಟಿದ್ದಾರೆ.

ಇವೆಲ್ಲ ಕಾರಣಗಳಿಗಾಗಿ ‘ಸ್ಮೃತಿಕಾರ ಮನು ಈಗ ಬದುಕಿದ್ದರೆ?’ ಎಂಬ ಪ್ರಶ್ನವೇ ಏಳುವುದಿಲ್ಲ, ಏಳಬಾರದು. ಸಮಾಜಕ್ಕೆ ಸ್ಥಿರತೆಬೇಕು, ಸಮಾಜದ ಕಲ್ಯಾಣವಾಗಬೇಕು ಎಂದೇ ಮನುವು ನಿಯಮಗಳನ್ನು ಹಾಕಿ ಒಂದು ವ್ಯವಸ್ಥೆಯನ್ನು ಮಾಡಿಕೊಟ್ಟನು. ಈಗ ಆ ನಿಯಮಗಳನ್ನು ಜಾರಿಯಲ್ಲಿ ತರುವ ಅಧಿಕಾರವಿದ್ದ ಮರಿ-ಮನುಗಳು ನಮ್ಮ ದೇಶದಲ್ಲಿವೆ. ಹೀಗಿರುವಾಗ ಅಡವಿಯಲ್ಲಿಯೊ ಆರಾಮಕುರ್ಚಿಯಲ್ಲಿಯೊ ಕುಳಿತು ಶಾಸ್ತ್ರಬರೆಯುವ ಈ ಮುದಿಮಹಾರಾಯನೇಕೆ ? ಇನ್ನು ಇಷ್ಟಾಗಿಯೂ ತಾನು ಬದುಕಿಬರಲೇಬೇಕೆಂಬ ಹಟ ಅವನಿಗಿದ್ದರೆ ಮಾಡುವುದೇನು ? ನಮ್ಮದು ಇಂದು ಧರ್ಮಾತೀತ ರಾಜ್ಯ; ಎಂದರೆ, ಇಲ್ಲಿ ಎಲ್ಲ ಧರ್ಮಗಳಿಗೂ ಸ್ಥಾನವಿದೆ; ಆದುದರಿಂದ ಅವನ ವಯೋ-ಧರ್ಮಕ್ಕೂ ಮನ್ನಣೆಯನ್ನು ಕೊಟ್ಟು, ಅವನ ಹಿಂದಿನ ಸೇವೆಯನ್ನು ನೆನೆದು, ನಮಗಾಗಿ ಅವನಿಗೆ ಮತ್ತು ಅವನಿಂದ ನಮಗೆ ತೊಂದರೆ ಬೇಡ ಎಂದು ಒಂದು ರಾಜ್ಯದ ಗವರ್ನರನನ್ನಾಗಿ ನೇಮಿಸಬಹುದಲ್ಲ? ಎಂದರೆ, ಒಂದೆಡೆ ದೇಶದ ಸ್ವಾತಂತ್ರ್ಯಕ್ಕಾಗಿ ಬೆವರನ್ನು ಸುರಿಸಿದ ಸ್ವಾಯಂಭುವ ಗವರ್ನರ್, ಇನ್ನೊಂದೆಡೆ ಸ್ವಾತಂತ್ರ್ಯದಿನದ ಸಂಚಿಕೆಗಾಗಿ ಬೆವರನ್ನು ಸುರಿಸಿ ಭಾಷ್ಯ ಬರೆದ ಶ್ರೀರಂಗ ಆಪ್ತಕಾರ್ಯದರ್ಶಿ ! ಒಂದೇಟಿಗೆ ಎರಡು ಹಕ್ಕಿಗಳು !

ಸರ್ವಾಧಿಕಾರಿ ರಾಷ್ಟ್ರ ಸರ್ಕಾರಗಳು ಪಾಶವೀ ವೃತ್ತಿಯನ್ನು ಅನುಸರಿಸುತ್ತವೆ. ಆದರೆ ಜನತೆ ಮಾನವೀಯತೆಯನ್ನು ಮರೆಯುವುದಿಲ್ಲ.

*

# ಭಾರತದ ಯೋಧನಿಗೆ ಹತ್ತು ಜೀವ

ಗೋರೂರು ರಾಮಸ್ವಾಮಯ್ಯಂಗಾರ್

ಬೆಂಗಳೂರು

ಏಕಾಕಿಯಾಗಿ ಚೀನೀಯರ ಕೈಗೆ ಸಿಕ್ಕುಬಿದ್ದ ಭಾರತೀಯ ಯೋಧ ದಾರುಣ ಯಾತನೆಯನ್ನು ಅನುಭವಿಸಿದ. ಅವನನ್ನು ಬಂದಿಯಾಗಿ ಚೀನಕ್ಕೆ ಕಳುಹಿಸಲಿಷ್ಟ ಪಡದೆ ಚೀನೀಯರು ತಮ್ಮ ಗಡಿಯಲ್ಲಿ ಅವನನ್ನು ಮುಗಿಸಿಬಿಡಲು ಏರ್ಪಡಿಸಿದರು. ಆದರೆ ದೈವ ಬೇರೆಯೆ ಬಗೆದಿತ್ತು. ಹೊಡೆದು ಬಡೆದರೂ ಸಾಯದ ಅವನನ್ನು ಗುಂಡಿಕ್ಕಿ ಆಳಪ್ರಪಾತಕ್ಕೆ ತಳ್ಳಿಹೋದರು. ಆದರೆ ಸಮೀಪದ ನಾಲ್ವರು ಹೆಣ್ಣು ಮಕ್ಕಳು ಅವನನ್ನು ಕಾಪಾಡಿದರು. ಈ ಕತೆ ತುಂಬ ರೋಮಾಂಚಕವಾಗಿದೆ. ಲೇಖಕರು ಅದನ್ನಿಲ್ಲಿ ಹೃದಯಂಗಮವಾಗಿ ಚಿತ್ರಿಸಿದ್ದಾರೆ,

೧೯೬೨ ನೆಯ ಇಸವಿ ನವಂಬರ್ ತಿಂಗಳಿನಲ್ಲಿ ಹಿಮಾಲಯದ ಗಡಿಯಲ್ಲಿ ಬಾಂಡಿಲ ನಗರದ ಸ್ವಾಧೀನಕ್ಕಾಗಿ, ಭಾರತೀಯ ಯೋಧರೊಂದಿಗೆ ಚೀಣಿ ಸೈನಿಕರು ಅತ್ಯಂತ ಭೀಕರ ಕದನ ನಡಸಿದರು. ಚೀಣರು ಮಿಡಿತೆಗಳಂತೆ ಅಸಂಖ್ಯಾತ ಸಂಖ್ಯೆಯಲ್ಲಿ ಮುನ್ನುಗ್ಗಿದರು. ಬಾಂಡಿಲಕ್ಕೆ ಬರುವ ದಾರಿಗಳನ್ನು :ಎಲ್ಲೆಡೆಗಳಿಂದಲೂ ಕತ್ತರಿಸಿ, ಸುತ್ತಲಿನ ತುಕ್ಕಡಿಗಳಲ್ಲಿದ್ದ ಭಾರತೀಯ ಸೈನ್ಯ, ಬಾಂಡಿಲಕ್ಕೆ ಮುಟ್ಟದಂತೆ ತಡೆಗಟ್ಟಿದರು. ಎಲ್ಲೆಲ್ಲಿದ್ದ ಭಾರತೀಯ ಸೈನಿಕರು ಅಲ್ಲಲ್ಲಿಯೇ ಕಾದಿ ಮಡಿದರು. ಮದ್ದುಗುಂಡು ಮುಗಿದು ಹೋದುದರಿಂದ ಅನೇಕರು ನಿರುಪಾಯರಾಗಿ ಬಂದಿಗಳಾದರು. ಭಾರತೀಯ ಬಂದಿಗಳನ್ನೆಲ್ಲ ಚೀಣರು ಒಂದೆಡೆ ಜಮಾಯಿಸಿ, ಅವರನ್ನು ತಂಡ ತಂಡವಾಗಿ ತಮ್ಮ ದೇಶಕ್ಕೆ ಸಾಗಿಸುತ್ತಿದ್ದರು.

ಅವರ ಪೈಕಿ ಒಬ್ಬ ಭಾರತೀಯ ಸಿಪಾಯಿ ತಪ್ಪಿಸಿಕೊಂಡು ಚುಶೂಲ್‌ಗೆ ಸುದ್ದಿಯನ್ನು ಮುಟ್ಟಿಸಲು ಹೊರಟನು. ಅವನು ಆರಿಸಿಕೊಂಡ ಕಾರ್ಯ, ಬಹಳ ಕಠಿಣವೂ ಪ್ರಾಣಾಪಾಯಕರವೂ ಆಗಿದ್ದಿತು. ಹಿಮಾಲಯ ಗಡಿಯಲ್ಲೆಲ್ಲ, ಎಲ್ಲೆಡೆಯೂ ಚೀಣಿ ದೈತ್ಯರ ಪದಘಾತ ನಡೆದೇ ಇತ್ತು. ಸಿಪಾಯಿಯ ಹೆಸರು ಹನುಮಾನ್. ಅವನು ಕನ್ನಡನಾಡಿನವನೇ. ತಾನು ಎದುರಿಸುತ್ತಿರುವ ಅಪಾಯ ಅವನಿಗೆ ಚೆನ್ನಾಗಿ ಗೊತ್ತಾಗಿದ್ದಿತು. ಶತ್ರುಗಳ ಭಯದಿಂದ ಅವನು, ಹಗಲು ಹೊತ್ತು ಪ್ರಯಾಣ ಮಾಡುವಂತೆ ಇರಲಿಲ್ಲ. ಸಂಧ್ಯಾಕಾಲ ಅಥವಾ ರಾತ್ರಿಯಲ್ಲಿ ಪ್ರಯಾಣ ಮಾಡೋಣವೆಂದರೆ, ನಾಲ್ಕು ಗಂಟೆಗೇ ಕತ್ತಲೆಯಾಗುತ್ತಿದ್ದಿತು; ಮಂಜಿನಲ್ಲಿ ಕೈಕಾಲು ಚಲಿಸುವುದೇ ನಿಂತು, ಕೊರಡಾಗುತ್ತಿದ್ದವು.

ಹನುಮಾನ್. ವಿದ್ಯಾವಂತನಲ್ಲ. ಆದರೆ ಅವನು ರಾಮಾಯಣದ ಕಥೆಯನ್ನು ಚೆನ್ನಾಗಿ ಓದಿದ್ದನು. "ನಾನು ಯಾವ ಕೆಲಸವನ್ನೂ ಸಾಧಿಸಬಲ್ಲೆ" ಎಂಬ ಆತ್ಮಪ್ರತ್ಯಯ:, ಅವನಿಗೆ ದೃಢವಾಗಿತ್ತು. "ನನ್ನಲ್ಲಿ ರಾಮಾಯಣದ ಹನುಮಂತನ ಯಾವುದೋ ಗುಣವನ್ನು ಕಂಡೇ, ನನಗೆ ಆ ಹೆಸರನ್ನು ನನ್ನ ತಂದೆ ತಾಯಿಗಳು ಇಟ್ಟಿದ್ದಾರೆ. ನನ್ನ ಕೈಲಾದ ಮಟ್ಟಿಗೆ ಆ ಹನುಮನನ್ನು ಅನುಸರಿಸಬೇಕು" ಎಂಬುದು ಅವನ ನಿಶ್ಚಯವಾಗಿತ್ತು. "ಹನುಮಂತ ಲಂಕೆಗೆ ಹೋಗಿ ಕೆಲಸವನ್ನು ಸಾಧಿಸಿದಂತೆ ತಾನು ಚುಶೂಲನ್ನು ಮುಟ್ಟಿ ಕೆಲಸವನ್ನು ಸಾಧಿಸಿಯೇ ಸಾಧಿಸುತ್ತೇನೆ" ಎಂದು ಅವನು ದೃಢವಾಗಿ ನಂಬಿದ್ದನು.

ಬಾಂಡಿಲದಿಂದ ಚುಶೂಲಿಗೆ ಸರಿಯಾದ ದಾರಿಯಲ್ಲಿ ಬರಲು ಎರಡು ದಿನ ಮಾತ್ರ ಹಿಡಿಯುತ್ತಿದ್ದಿತು. ಆದರೆ ಈಗ ದಾರಿಗಳನ್ನೆಲ್ಲ ಚೀಣರು ಹಿಡಿದುಕೊಂಡುದರಿಂದ, ಹನುಮಾನ್ ಬೆಟ್ಟದ ಮೇಲೆ ದಾರಿಯಿಲ್ಲದೆ ಕಾಡಿನಲ್ಲಿಯೇ ನಡೆಯಬೇಕಾಯಿತು. ಹೀಗೆ ಹನುಮಾನ್ ಮೂರು ದಿನ ನಡೆದು, ಒಂದು ತಿರುವಿನಲ್ಲಿ ಬರುತ್ತಿರುವಾಗ, ಇದ್ದಕ್ಕಿದ್ದಂತೆ ಚೀಣಿಸೈನಿಕರ ಒಂದು ದಳ ಅವನಿಗೆ ಇದಿರಾಯಿತು. ಚೀಣರು ಅವನನ್ನು ಕೂಡಲೇ ಕೈಸೆರೆ ಹಿಡಿದರು. ಹಿಂದೆ ಸೆರೆ ಹಿಡಿದಿದ್ದ ಭಾರತೀಯ ಯೋಧರನ್ನೆಲ್ಲ ಆಗಲೇ ಚೀಣಕ್ಕೆ ಕಳುಹಿಸಿಯಾಗಿದ್ದಿತು. ಇನ್ನು ಹನುಮಾನ್ ಒಬ್ಬನನ್ನು ಕಳುಹಿಸುವುದಕ್ಕೆ ಅವನ ಕಾವಲಿಗೆ ಹತ್ತಾರು ಚೀಣಿ ಸಿಪಾಯಿಗಳನ್ನು ಕಳುಹಿಸಬೇಕಾಗಿದ್ದಿತು. "ಹಿಂದೆ ಸೆರೆ ಹಿಡಿದ ಭಾರತ ಸೈನಿಕರ ಜತೆಯಲ್ಲಿ ಇವನೂ ಸಿಕ್ಕಿದ್ದರೆ, ಅವರ ಜತೆಯಲ್ಲಿಯೇ ಇವನನ್ನೂ ಕಳುಹಿಸಿಬಿಡಬಹುದಾಗಿದ್ದಿತು. ಈಗ ಇದಕ್ಕೆ ಬೇರೆ ಏರ್ಪಾಡು ಮಾಡಬೇಕಾಗಿದೆ. ಇದಾವ ಪ್ರಾರಬ್ಧ" ಎಂದು ಚೀಣರು ಯೋಚಿಸಿದರು. "ಇವತ್ತು ನಾಳೆ, ನಮ್ಮ ಜತೆಯಲ್ಲಿಯೇ ಇರಲಿ. ನಮಗೂ ಯುದ್ಧಕಾರ್ಯಾಚರಣೆ, ಬಹಳ ಜೋರಾಗಿದೆಯಲ್ಲ. ಅನಂತರ ನಮ್ಮ ಮೇಲಧಿಕಾರಿಯನ್ನು ಕೇಳಿ ಏನು ಮಾಡಬೇಕೋ ನಿರ್ಣಯಿಸೋಣ" ಎಂದು ತೀರ್ಮಾನಿಸಿಕೊಂಡು ಚೀಣರು ಹನುಮಾನನನ್ನು ತಮ್ಮ "ಕ್ಯಾಂಪ್"ನಲ್ಲಿಯೇ ಇಟ್ಟುಕೊಂಡರು. ಕ್ಯಾಂಪಿನ ಒಂದು ಗುಡಿಸಲಿನಲ್ಲಿ ಅವರು ಹನುಮಾನ್‌ನನ್ನು ಇರಿಸಿ ಬೀಗ ಹಾಕಿದರು. ಬಾಂಡಿಲ ಕದನ ನಾಲ್ಕಾರು ದಿನಗಳಂತೂ ಅತ್ಯುಗ್ರವಾಗಿ ನಡೆಯಿತು. ಆ ಕಾಲದಲ್ಲಿ ಯಾರೊಬ್ಬರೂ ಹನುಮಾನ್‌ನನ್ನು ಕುರಿತು ಯೋಚಿಸಲೇ ಇಲ್ಲ. ಮರುದಿನ ಒಬ್ಬ ಚೀಣಿ ಸಿಪಾಯಿ, ಹನುಮಾನ್‌ಗೆ ತಾನು ತಿನ್ನುತ್ತಿದ್ದ ಆಹಾರದಲ್ಲಿ ಸ್ವಲ್ಪವನ್ನು ಕೊಟ್ಟನು. ಹನುಮಾನ್‌ಗೆ ಆ ಆಹಾರವನ್ನು ತಿನ್ನಲು ಏನು ಮಾಡಿದರೂ ಸಾಧ್ಯವಾಗಲಿಲ್ಲ. ಅಲ್ಲಿಂದ ಮುಂದೆ ಚೀಣರು "ಇವನು ನಾಲ್ಕಾರು ದಿನಗಳಲ್ಲಿ ಹಸಿವಿನಿಂದ ಸಾಯುತ್ತಾನೆ. ಇವನನ್ನು ಚೀಣಕ್ಕೆಸಾಗಿಸುವುದೇ ತಪ್ಪುತ್ತದೆ" ಎಂದು ಸುಮ್ಮನಾದರು.

ಆ ಸ್ಥಳದಿಂದ ಚೀಣರು ತಮ್ಮ ಠಾಣ್ಯವನ್ನು ಕೀಳಲು, ಇನ್ನೂ ಒಂದು ವಾರ ಹಿಡಿಯಿತು. ಚುಶೂಲ್ ಕಡೆಗೆ ನುಗ್ಗಬೇಕೆಂದು ಅವರಿಗೆ ಆಜ್ಞೆಯಾಗಿತ್ತು. "ಈಗ ಈ ಭಾರತದ ಸೆರೆಯಾಳನ್ನು ಏನು ಮಾಡೋಣ" ಎಂದು ಯೋಚಿಸಿಕೊಂಡು, ಹನುಮಾನನನ್ನು ಸೆರೆಯಿಟ್ಟಿದ್ದ ಗುಡಿಸಲಿನ ಬಳಿ ಅವರು

ಬಂದರು. ಬಾಗಿಲಿನಲ್ಲಿ ಬಂದೂಕಹಸ್ತನಾಗಿ ಚೀಣಿ ಸಿಪಾಯಿ ಕಾವಲಿದ್ದನು. ಹನ್ನೆರಡು ದಿನಗಳಿಂದ ಭಾರತದ ಸಿಪಾಯಿ ಹನುಮಾನ್, ಆಹಾರವನ್ನೇ ತೆಗೆದುಕೊಂಡಿಲ್ಲ ಎಂಬುದನ್ನು ಕೇಳಿ, ಅವರಿಗೆ ಆಶ್ಚರ್ಯವೂ ಸ್ವಲ್ಪಭಯವೂ ಉಂಟಾಯಿತು. ಕಾವಲಿದ್ದ ಸಿಪಾಯಿಯು "ಈ ವೇಳೆಗೆ ಹನುಮಾನ್ ಪಾತಾಳಲೋಕವನ್ನು (ಸಾವು) ಸೇರಿದ್ದಾನೆ" ಎಂದು ಹೇಳಿದನು. ಪುಷ್ಟವಾದ ಮರದ ದಿಮ್ಮಿ ಮತ್ತು ಕಬ್ಬಿಣದ ಸಲಾಕೆ ಮೇಣಗಮಟಗಳಿಂದ ನಿರ್ಮಿಸಿದ್ದ ಗುಡಿಸಲಿನೊಳಗೆ, ಕಿಂಡಿಯಿಂದ ಸಿಪಾಯಿಗಳು ನೋಡಿದರು. ಹನುಮಾನ್ ತರಗೆಲೆಗಳ ಹಾಸಿಗೆಯ ಮೇಲೆ ಅಲುಗಾಡದೆ ಮಲಗಿದ್ದನು. ಅವನು ಉಸಿರಾಡುತ್ತಿರುವಂತೆಯೇ ಅವರಿಗೆ ತೋರಲಿಲ್ಲ. "ಇವನ ಕೆಲಸ ಮುಗಿದುಹೋಗಿದೆ" ಎಂದು ಅವರು ಒಬ್ಬರಿಗೊಬ್ಬರು ಸಂಜ್ಞೆ ಮಾಡುತ್ತಾ ಗುಡಿಸಲಿನ ಬಾಗಿಲನ್ನು, ಹೆದರುತ್ತಾ ಹೆದರುತ್ತಲೇ ತೆರೆದರು. ಸದ್ದನ್ನು ಕೇಳಿ, ಹನುಮಾನ್ ಕಣ್ಣು ಬಿಟ್ಟು ನೋಡಿದನು. ಚೀಣಿ ಸಿಪಾಯಿಗಳು ಆಶ್ಚರ್ಯದಿಂದಲೂ ಗಾಬರಿಯಿಂದಲೂ "ಎಲಾ ಪಿಶಾಚಿ" ಎಂದು ಕೂಗಿ ಹತ್ತು ಹೆಜ್ಜೆ ಹಿಂದಕ್ಕೆ ಹಾರಿದರು. "ಹದಿನೈದು ದಿನಗಳಿಂದ ಆಹಾರವಿಲ್ಲ. ಆದರೂ ಬದುಕಿದ್ದಾನೆ. ಭಾರತದ ಸಿಪಾಯಿ ಸಾಯುವುದಿಲ್ಲ ಎಂದು ನಮ್ಮ ದೇಶದಲ್ಲಿ ಪ್ರಚಾರದಲ್ಲಿರುವ ಕಥೆ ನಿಶ್ಚಯ" ಎಂದು ಅವರು ಒಬ್ಬರೊಂದಿಗೊಬ್ಬರು ಮಾತನಾಡಿಕೊಂಡರು.

ಹನುಮಾನ್, ನಿಶ್ಶಕ್ತನಾಗಿದ್ದರೂ ಎದ್ದು ಕುಳಿತನು. ಸಿಪಾಯಿಗಳು "ನೀನು ಏನು ತಿಂದು ಜೀವಿಸಿದ್ದಿ?" ಎಂದು ಕೇಳಿದರು. ಹನುಮಾನ್, ಮೂಲೆಯಲ್ಲಿ ನಿಂತಿದ್ದ ಒಂದು ದೊಡ್ಡ "ಡ್ರಮ್" ನ್ನು ತೋರಿಸಿದನು. ಅದರಲ್ಲಿ ಅರ್ಧದವರೆಗೆ ನೀರು ಇದ್ದಿತು. "ಈ ನೀರನ್ನು ಇವನಿಗೆ ಸಿಕ್ಕುವಂತೆ ಇಲ್ಲಿ ಯಾಕೆ ಇಟ್ಟಿರಿ? ಯಾರು ಇಟ್ಟದ್ದು? ಸೆರೆಯಾಳನ್ನು ಇಲ್ಲಿಡುವಾಗ, ಈ ಡ್ರಮಿನ ನೀರನ್ನು ಯಾಕೆ ಸುರಿದು ಇಡಲಿಲ್ಲ. ಸೆರೆಯಾಳಿಗೆ ಕುಡಿಯುವಷ್ಟು ನೀರು ಸಿಕ್ಕುವಂತೆ ಇಲ್ಲಿ ಹೇಗೆ ಇಡುವುದೆ?" ಎಂದು ಚೀಣಿ ಸಿಪಾಯಿಗಳೊಳಗೆ ದೊಡ್ಡ ವಾಗ್ಯುದ್ಧವೇ ಪ್ರಾರಂಭವಾಯಿತು. ಅವರೆಲ್ಲರೂ ಕೋಪದಿಂದ ಗುಡಿಸಲಿನ ಕಾವಲುಗಾರ ಸಿಪಾಯಿಯನ್ನೇ ನುಂಗುವಂತೆ ನೋಡಿದರು. ತಾನು ಮಾಡಿದ ದೊಡ್ಡ ಅಪರಾಧ, ಅಜಾಗರೂಕತೆ ಆ ಕಾವಲುಗಾರನಿಗೂ ಗೊತ್ತಾಗಿದ್ದಿತು. ಅವನು ತೊದಲುತ್ತಾ 'ನಾನು ಕೊಟ್ಟ ಆಹಾರವನ್ನು ಇವನು ತಿನ್ನಲಿಲ್ಲ. ಆದುದರಿಂದ ಇವನು ಏನನ್ನೂ ತಿನ್ನದೆ ಹಸಿವಿನಿಂದಲೇ ಸಾಯಲು ನಿರ್ಧರಿಸಿಕೊಂಡಿರಬಹುದೆಂದು ಭಾವಿಸಿದೆ. ಆ ಪರಿಸ್ಥಿತಿಯಲ್ಲಿ ನನಗೆ ನೀರಿನ ಡ್ರಮ್ ಪ್ರಾಮುಖ್ಯವಾಗಿ ತೋರಲಿಲ್ಲ. ಮರುದಿವಸ ಅಥವ ಮತ್ತೊಂದು ಸಲ ಗುಡಿಸಲಿನ ಒಳಕ್ಕೆ ಹೋಗಿದ್ದರೆ, ಡ್ರಮ್‌ನ್ನು ನೋಡಿದಾಗ ನೀರನ್ನೆಲ್ಲ ಹೊರಕ್ಕೆ ಸುರಿಯಬೇಕೆಂದು ಗೊತ್ತಾಗುತ್ತಿದ್ದಿತು. ಆದರೆ "ಮತ್ತೆ ಬಂದು ಹೇಳುವವರೆಗೆ ಇನ್ನು ಗುಡಿಸಲಿನ ಬೀಗವನ್ನು ತೆರೆಯಬೇಡ" ಎಂದು ಮೇಲಧಿಕಾರಿ ಆಜ್ಞೆ ಮಾಡಿ ಹೊರಟು ಹೋದರು. ಆದುದರಿಂದ ಅನಂತರ ನನಗೆ ಡ್ರಮ್‌ನ ಜ್ಞಾಪಕ ಬರಲಿಲ್ಲ ಆದರೂ ನಾನು ಮಾಡಿದುದು ಸರ್ವಾಪರಾಧವಾಯಿತು. ಮನ್ನಿಸಿ" ಎಂದು ಗೋಗರೆದನು. ಅವನು ಕೊಟ್ಟ ವಿವರಣೆಯಿಂದ ಸಿಪಾಯಿ ನಾಯಕನಿಗೆ ಸಮಾಧಾನವಾಗಲಿಲ್ಲ. ಇದು ತನ್ನ ಅಂತ್ಯವೆಂದು ಕಾವಲುಗಾರ ಸಿಪಾಯಿ ಗಡಗಡನೆ ನಡುಗಿದನು. ಸಿಪಾಯಿಗಳ ನಾಯಕನು "ನಿನ್ನದು ತಪ್ಪು. ನಿನ್ನ ವಿವರಣೆಯಿಂದ ಸಮಾಧಾನವಾಗಿಲ್ಲ. ಒಂದೇ ತಪ್ಪು ಮಾಡಿದರೂ ನಿಮ್ಮ ಜೀವವನ್ನು ತೆಗೆಯುತ್ತೇವೆ" ಎಂದು ನಿಮಗೆ ಎಷ್ಟು ಸಲ ಹೇಳಿಲ್ಲ. "ನಿನ್ನ ಜೀವವನ್ನು ನೀನು ತೆತ್ತೆ. ಇದರ ವಿಚಾರ ಮುಂದೆ ತೆಗೆದುಕೊಳ್ಳೋಣ. ಈಗ ಸಾವಿನೊಂದಿಗೆ ಸೆಣಸುತ್ತಿರುವ ಈ ಭಾರತದ ಪಿಶಾಚಿಯ ಪ್ರಶ್ನೆ. ನಮ್ಮ ತಲೆತಿನ್ನುತ್ತಿದೆ". ಎಂದು ಹೇಳಿ ಹನುಮಾನ್ ಕಡೆಗೆ ತಿರುಗಿ "ನೀನು ಬರಿಯ ನೀರಿನಿಂದಲೇ ಇಷ್ಟು ದಿನವೂ ಬದುಕಿದೆಯಾ?" ಎಂದು ಕೇಳಿದನು. ಹನುಮಾನ್ ಆಕಾಶಕ್ಕೆ ಕೈ ತೋರಿಸಿ "ಗಾಳಿಯನ್ನು ಕುಡಿದು ಬದುಕಿದೆ" ಎಂದನು. ಅನಂತರ ಇದ್ದಕ್ಕಿದ್ದಂತೆ ತನ್ನ ಬಾಯಿಂದ ಹೊರಟ ಮಾತನ್ನು ನೆನೆದು ಅವನಿಗೇ ಆಶ್ಚರ್ಯವಾಯಿತು. ಅವನು ಮುಗುಳುನಗೆ ನಗುತ್ತಾ "ಹೌದು, ನಾನು ಹನುಮಾನ್, ನಮ್ಮ ತಂದೆ ವಾಯು, ನಮ್ಮ ತಂದೆ ವಾಯುವೇ ನನ್ನನ್ನು ಕಾಪಾಡಿದ" ಎಂದನು. ಚೀಣರಿಗೆ ಅವನ ಮಾತು ಅರ್ಥವಾಗಲಿಲ್ಲ.

ಅನಂತರ ಈ ಭಾರತೀಯ ಬಂದಿಯನ್ನು ಏನು ಮಾಡಬೇಕೆಂಬ ಚರ್ಚೆ, ಚೀಣಿಯೋಧರಲ್ಲಿ ಪ್ರಾರಂಭವಾಯಿತು. ಹಿಂದೆ ಹೇಳಿದ ಕಾರಣಗಳಿಗಾಗಿ ಹನುಮಾನ್‌ನನ್ನು ಭಾರತೀಯ ಇತರ ಬಂದಿಗಳೊಂದಿಗೆ ಸೇರಿಸುವುದು ಸಾಧ್ಯವಿರಲಿಲ್ಲ. ಆ ಬಂದಿಗಳನ್ನೆಲ್ಲ ಆಗಲೇ ಚೀಣಕ್ಕೆ ಕಳುಹಿಸಿಯಾಗಿದ್ದಿತು. ಹನುಮಾನ್‌ನ ಕೆಲಸವನ್ನು ಮುಗಿಸಬೇಕಾದರೂ ಅವನನ್ನು ಭಾರತದ ಗಡಿಯಿಂದ ಆಚೆಗೆ ಸಾಗಿಸಿ ಚೀಣದ ನೆಲದಲ್ಲಿ, ಎಲ್ಲಿಂದ ಯಾವ ಸುದ್ದಿಯೂ ಹೊರಕ್ಕೆ ತಲುಪುವುದಿಲ್ಲವೋ ಅಲ್ಲಿ ಮುಗಿಸಬೇಕಾಗಿದ್ದಿತು ಆದುದರಿಂದ ಚೀಣಿ ದಳದ ನಾಯಕ, ಆರು ಸಿಪಾಯಿಗಳನ್ನು ಆರಿಸಿ ಅವರ ಕಾವಲಿನಲ್ಲಿ ಹನುಮಾನ್‌ನನ್ನು ಕೊಟ್ಟು "ಚೀಣದ ಗಡಿಯಲ್ಲಿ" ಎಂದು ಹೇಳಿ ಕಳುಹಿಸಿದನು. ಹನುಮಾನ್‌ನನ್ನು ಕರೆದುಕೊಂಡು ಚೀಣಿ ಸಿಪಾಯಿಗಳು, ಭಾರತದಿಂದ ಚೀಣದ ಕಡೆಗೆ ಹೊರಟರು.

ಒಬ್ಬನೇ ಸೆರೆಸಿಕ್ಕಿದ ಮೇಲೆ, ಕ್ರೂರಿಗಳೂ ಸರ್ವಾಧಿಕಾರಿಗಳೂ ಆದ ಚೀಣಿ ಸೈನಿಕರು ತನ್ನನ್ನು ಏನುಮಾಡುವರೆಂಬುದು ಹನುಮಾನ್‌ಗೆ ಸ್ಪಷ್ಟವಾಗಿದ್ದಿತು. ನೂರಾರು ಯೋಧರ ಜತೆಯಲ್ಲಿ ತಾನೂ ಸಿಕ್ಕಿದ್ದರೆ ಜಗತ್ತಿನ ಎದುರಿಗೆ ತಾವು ಯೋಗ್ಯರೂ ಸಂಭಾವಿತರೂ ಎಂದು ಪ್ರದರ್ಶಿಸಿಕೊಳ್ಳುತ್ತಿದ್ದ ಪ್ರಚಾರನಿಪುಣರಾದ ಚೀಣರು ತನ್ನೊಬ್ಬನನ್ನು ಕೊಲ್ಲುತ್ತಿರಲಿಲ್ಲವೆಂದೂ ಅವನಿಗೆ ಗೊತ್ತಿದ್ದಿತು. ಆದರೂ ಅವನಿಗೆ ಅದಾವುದೋ ಒಂದು ಬಗೆಯ ಮೊಂಡಧೈರ್ಯದ ಆಶ್ರಯವುಂಟಾಗಿದ್ದಿತು. ಮುಂದಲ ಗಳಿಗೆಯಲ್ಲಿಯೇ ಪ್ರಾಣ ಉಳಿಯುವ ನಂಬಿಕೆಯಿಲ್ಲದಿದ್ದರೂ ಅವನು, ಶುನಶ್ಶೇಫನು ವಿಶ್ವಾಮಿತ್ರಋಷಿಯ ಸಹಾಯದಿಂದ ಪ್ರಾಣವನ್ನು ಉಳಿಸಿಕೊಂಡಂತೆ, ತನಗೂ ಹನುಮಂತನ ಸಹಾಯ ಒದಗುವದೆಂದೇ ನಂಬಿದನು. ಭಾರತದಿಂದ ಹೊರಟ ಐದನೆಯ ದಿನ ಅವರು ಚೀಣದ ಗಡಿಯನ್ನು ಸೇರಿದರು.

ಕಾವಲಿನ ಚೀಣಿ ಸಿಪಾಯಿಗಳು, ನಾಲ್ಕನೆಯ ದಿವಸದಿಂದಲೇ ಹನುಮಾನ್‌ಗೆ ಕಿರುಕುಳ ಕೊಡಲು

ಪ್ರಾರಂಭಿಸಿದ್ದರು. ಅವನಿಗೆ ಸರಿಯಾದ ಆಹಾರವನ್ನು ಕೊಟ್ಟಿರಲಿಲ್ಲ. ಬೇಕಾದಂತೆ ನೀರನ್ನು ಕುಡಿಯುವುದಕ್ಕೂ ಅವಕಾಶ ಕೊಟ್ಟಿರಲಿಲ್ಲ. ಐದನೆಯ ಬೆಳಿಗ್ಗೆ ಹನುಮಾನ್, ತೀರ ಬಳಲಿದ್ದನು. ಚೀಣದ ಗಡಿಯನ್ನು ಪ್ರವೇಶಿಸಿದ ಕೂಡಲೇ ಸಿಪಾಯಿಗಳು ಹನುಮಾನ್‌ನ ಮೇಲೆ ಬಿದ್ದು ಅವನ ಎರಡು ಕೈಗಳನ್ನೂ ಬಲವಾದ ಹಗ್ಗದಿಂದ ಹಿಂದಕ್ಕೆ ಕಟ್ಟಿದರು. ಅದು ನಿರ್ಜನ ಪ್ರದೇಶವಾಗಿದ್ದಿತು. ಅನತಿದೂರದಲ್ಲಿ ಒಂದು ಹಳ್ಳಿಯಿರುವುದನ್ನು ಆ ಗಾಬರಿಯಲ್ಲಿಯೂ ಹನುಮಾನ್ ಗಮನಿಸಿದನು. ಸಿಪಾಯಿಗಳು ಹನುಮಾನ್‌ನನ್ನು ಮತ್ತಷ್ಟು ದೂರ ಹಾಗೆಯೇ ನಡೆಸಿಕೊಂಡು ಹೋದರು. ದಾರಿಯಲ್ಲಿ ದನಗಳೂ ಕುದುರೆಗಳೂ ನೀರುಕುಡಿಯುವ ಒಂದು ತೊಟ್ಟಿಯಿದ್ದಿತು. ಸ್ವಲ್ಪ ಮುಂಚೆ ಯಾರೋ ದನಗಳಿಗೆ ನೀರನ್ನು ಕುಡಿಸಿದ್ದುದರಿಂದ ತೊಟ್ಟಿಯಲ್ಲಿ ಇನ್ನೂ ನೀರು ಇದ್ದಿತು. ಅತಿಯಾಗಿ ಬಾಯಾರಿದ್ದ ಹನುಮಾನ್, ಎಲ್ಲರಿಗಿಂತ ಮುಂಚಿತವಾಗಿ ದೂರದಿಂದಲೇ ಆ ತೊಟ್ಟಿಯನ್ನು ನೋಡಿದ್ದನು. ಅದರ ನೇರಕ್ಕೆ ಬಂದ ಕೂಡಲೇ ದೈನ್ಯತೆಯಿಲ್ಲದ ವಿನಯದಿಂದ ಸ್ವಾಭಾವಿಕವಾಗಿ "ಮಿತ್ರರೇ ಸ್ವಲ್ಪ ನೀರು ಕುಡಿಯೋಣ" ಎಂದು ಹೇಳಿದನು. ಅವನ ಮಗ್ಗುಲಿನಲ್ಲಿದ್ದ ಚೀಣಿ ಸಿಪಾಯಿಯು ಅದೇ ಧ್ವನಿಯಲ್ಲಿ "ಸಮೃದ್ಧವಾಗಿ ಕುಡಿ" ಎಂದು ಹೇಳಿ ತನ್ನ ಶಕ್ತಿಯನ್ನೆಲ್ಲ ಬಿಟ್ಟು ಅವನ ಮುಖದ ಮೇಲೆ ಬಲವಾಗಿ ಹೊಡೆದನು. ಅನಂತರ ಆರು ಜನ ಸಿಪಾಯಿಗಳೂ ಹನುಮಾನ್‌ನನ್ನು ಚೆನ್ನಾಗಿ ಬಡಿದರು. ಆ ಹೊಡೆತದ ಮಧ್ಯದಲ್ಲಿ ಸಹ ಹನುಮಾನ್ "ಚಿಂತೆಯಿಲ್ಲ ಹೊಡೆಯಿರಿ. ಕೊನೆಗೂ ಗೆಲ್ಲುವುದು ಭಾರತವೇ, ಕೊನೆಗೂ ಗೆಲ್ಲುವುದು ಸತ್ಯವೆ" ಎಂದು ಕೂಗುತ್ತಿದ್ದನು. ಅದನ್ನು ಕೇಳಿ ಸಿಪಾಯಿಗಳು ಇನ್ನೂ ಕುಪಿತರಾಗಿ ಅವನನ್ನು ಬಡಿದರು. "ಬಂದೂಕದ ಮದ್ದನ್ನು ಯಾಕೆ ವೆಚ್ಚ ಮಾಡಬೇಕು, ಇವನನ್ನು ಹೀಗೆಯೇ ಕೊಲ್ಲೋಣ" ಎಂಬುದು ಸಿಪಾಯಿಗಳ ಗುರಿಯಾಗಿದ್ದಿತು. ಹನುಮಾನ್ ನೆಲದ ಮೇಲೆ ಬೆನ್ನು ಮೇಲಾಗಿ ಬಿದ್ದಿದ್ದನು. ಹೊಡೆತದ ಆಘಾತದಿಂದ ಅವನು ಪ್ರಜ್ಞಾಹೀನನಾಗಿದ್ದನು, ಸಿಪಾಯಿಗಳು ಅವನ ತಲೆಗೆ, ಸೊಂಟಕ್ಕೆ ಬೆನ್ನಿಗೆ ಕೈಕಾಲುಗಳಿಗೆ ತಲೆಗೆ ದೊಣ್ಣೆಗಳಿಂದ ಚೆನ್ನಾಗಿ ಜಜ್ಜಿದರು. ಮಧ್ಯೆ ಮಧ್ಯೆ "ಇನ್ನೂ ಭಾರತವೇ ಗೆಲ್ಲುವುದಲ್ಲವೆ? ಕೊನೆಗೂ ಭಾರತವೇ ಗೆಲ್ಲುವುದಲ್ಲವೆ, ಸತ್ಯಕ್ಕೆ ಇದೇ ಜಯ" ಎಂದು ವಿಕಟವಾಗಿ ಕೂಗುತ್ತಿದ್ದರು. ಸ್ವಲ್ಪ ಹೊತ್ತಿನ ಮೇಲೆ ಹನುಮಾನ್ ಪೂರ್ಣ ನಿಶ್ಚೇಷ್ಟಿತನಾಗಿ ಬಿದ್ದುದರಿಂದ, ಅವನು ಸತ್ತನೆಂದೇ ಅವರಿಗೆ ನಂಬಿಕೆಯಾಯಿತು.




ಸಿಪಾಯಿಗಳು ಇನ್ನೂ ಹನುಮಾನ್‌ನ ಸುತ್ತಲೇ ನಿಂತಿದ್ದರು. ತಣ್ಣಗಿನ ಗಾಳಿ ಬೀಸಿತು. ನಿಧಾನವಾಗಿ ಹನುಮಾನ್ ಒಂದು ಕಣ್ಣನ್ನು ತೆರೆದನು. ಅವನ ಕಣ್ಣಮುಂದೆಯೇ ಒಬ್ಬ ಸಿಪಾಯಿಯ ಬೂಟಿನ ತುದಿ ಕಂಡಿತು. "ಎಲ ರಾಕ್ಷಸ! ಇನ್ನೂ ಕಣ್ಣುಬಿಟ್ಟ" ಎಂಬ ಧ್ವನಿ ಕೇಳಿಸಿತು. ಹನುಮಾನ್‌ಗೆ ತಾನು ಯಾವುದೋ ಪಾತಾಳದಲ್ಲಿ ಬಿದ್ದಿರುವಂತೆ ತೋರಿತು. ಅಥವಾ ನನ್ನನ್ನು ಭಾವಿಗೆ ಎಸೆದಿರಬಹುದೆ? ಎಂದು ಯೋಚಿಸಿದ. ಮರುಕ್ಷಣವೇ "ಇಲ್ಲ ಇಲ್ಲ. ಭಾವಿಗೆ ಯಾಕೆ ಹಾಕುತ್ತಾರೆ. ಭಾವಿಯ ನೀರು ಕೆಟ್ಟು ಹೋಗುತ್ತೆ. ಅನಂತರವೂ ಅದನ್ನು ಶುದ್ಧಿ ಮಾಡಬೇಕಾಗುವುದಲ್ಲ" ಎಂದುಕೊಂಡನು. ಸಿಪಾಯಿಗಳ ಧ್ವನಿಯನ್ನು ಕೇಳಿ ಅವನು ಮತ್ತೆ "ಮಿತ್ರರೇ ಸ್ವಲ್ಪ ನೀರು" ಎಂದನು. ಸಿಪಾಯಿಗಳು ಬೆಚ್ಚಿಬಿದ್ದು "ನೀರು! ಇನ್ನೂ ಬದುಕಿದ್ದೀಯ? ಎಲಾ ಪಿಶಾಚಿ" ಎಂದು ಮತ್ತೆ ಅವನನ್ನು ಬಡಿಯತೊಡಗಿದರು. ಅವನ ಕಣ್ಣಿನ ಮುಂದೆ ಇದ್ದ ಬೂಟ್ಸುಕಾಲು ಅವನನ್ನು ಬಲವಾಗಿ ಒದೆಯಿತು. ಆ ಒದೆತಕ್ಕೆ ಅವನ ಎರಡು ಮುಂದಲ ಹಲ್ಲುಗಳು ಬಿದ್ದುಹೋದವು. ಸಿಪಾಯಿಗಳು ಬೂಟ್ಸುಕಾಲುಗಳೊಂದಿಗೆ ಅವನ ಬೆನ್ನಿನ ಮೇಲೆ ನೆಗೆದರು; ತಲೆಯ ಮೇಲೆ ನೆಗೆದರು. ಬೂಟ್ಸಿನ ಮೊಳೆಗಳ ಆಘಾತದಿಂದ ಅವನ ಚರ್ಮ ಅನೇಕ ಕಡೆ ಹರಿದು ಹೋಯಿತು. ಹನುಮಾನ್ ಮತ್ತೆ ಪ್ರಜ್ಞಾಹೀನನಾದನು. ಹೀಗೆ ಅವನು ಎಷ್ಟು ಹೊತ್ತು ಬಿದ್ದಿದ್ದನೋ ಅವನಿಗೇ ಗೊತ್ತಿರಲಿಲ್ಲ. ಮತ್ತೆ ಅವನು ಕಣ್ಣುಬಿಟ್ಟು ನೋಡಿದಾಗ, ಅವನನ್ನೇ ನೋಡುತ್ತಾ ನಿಂತಿದ್ದ ಸಿಪಾಯಿಯ ಮುಖ ಅವನಿಗೆ ಕಾಣಿಸಿತು. ಅವನು ಮತ್ತೆ ಕ್ಷೀಣ ಸ್ವರದಲ್ಲಿ "ನೀರು" ಎಂದು ಕೇಳಿದನು. ಸಿಪಾಯಿಗಳು "ಎಲ ದೈತ್ಯ! ಇವನು ಶಾಪಗ್ರಸ್ತ. ಇವನಿಗೆ ಸಾವು ಇಲ್ಲ" ಎಂದು ಹಂದಿಯನ್ನು ಬಡಿಯುವಂತೆ ಒಂದೇ ಸಮನೆ ಬಡಿದರು. ಅವನ ಮೈಯಿನ ಯಾವ ಭಾಗವನ್ನೂ ಬಿಡದೆ ಚೆನ್ನಾಗಿ ಬಡಿದರು. ತಲೆಯ ಮೇಲೆ ಬಿದ್ದ ಏಟಿನಿಂದ ಹನುಮಾನ್, ಪ್ರಜ್ಞಾಹೀನನಾದನು. ಸಿಪಾಯಿಗಳು ಇನ್ನೂ ಒಂದು ಎರಡು ಗಂಟೆಗಳ ಕಾಲ ಕುಳಿತು ಕಾದರು. ಅನಂತರ ಹನುಮಾನ್‌ನ ಮೇಲೆ, ತಣ್ಣೀರನ್ನು ತಂದು ಸುರಿದರು. ಆದರೂ ಅವನು ಕಣ್ಣುಬಿಡಲಿಲ್ಲ "ಇನ್ನು ಇವನು ಸತ್ತ. ಆದರೂ ಅತಿಮೊಂಡ. ಸಾವನ್ನೇ ಎದುರಿಸುವುದರಲ್ಲಿದ್ದ" ಎಂದು ಅವರು ಒಬ್ಬರೊಂ-ದಿಗೊಬ್ಬರು ಮಾತನಾಡಿಕೊಂಡರು.

"ಇನ್ನು ಈ ದೇಹವನ್ನು ಏನು ಮಾಡುವುದು?" ಎಂಬ ಯೋಚನೆ ಅವರಿಗೆ ಬಂದಿತು. ಹೆಣವನ್ನು ಹೂಳುವುದಕ್ಕಾಗಿ ಗೋರಿಯನ್ನು ಅಗೆಯುವ ಶ್ರಮವನ್ನು ವಹಿಸಲು ಅವರಾರೂ ಸಿದ್ಧರಿರಲಿಲ್ಲ. ಹಳ್ಳಿಗೆ ಹೋಗಿ, ಗೋರಿಯನ್ನು ಅಗೆಯಲು ಜನರನ್ನು ಕರೆದುಕೊಂಡು ಬಂದರೆ, ವಿಷಯ ಪ್ರಕಟವಾಗಿ ಬಿಡುವುದರಿಂದ ಅವರು ಆ ಯೋಜನೆಯನ್ನು ಬಿಡಬೇಕಾಯಿತು. ಅದೇ ಕಾರಣದಿಂದ ಹೆಣವನ್ನು ಕಾಡಿನಲ್ಲಿ ಬಿಟ್ಟುಹೋಗುವ ಯೋಚನೆ ಸಹ ತಿರಸ್ಕೃತವಾಯಿತು. ಒಬ್ಬ ಸಿಪಾಯಿ ಸ್ವಲ್ಪ

ದೂರ ಹೋಗಿ ಸುತ್ತು ನೋಡಿಕೊಂಡು ಬಂದನು. "ಅಲ್ಲಿ ನೂರಾರು ಅಡಿ ಆಳದ ಅಗಾಧವಾದ ಒಂದು ಕಂದಕವಿದೆ. ಕಣ್ಣಿಗೆ ಕಾಣುವ ವರೆಗೆ ಪಸರಿಸಿದೆ. ಇವನನ್ನು ಅದರೊಳಕ್ಕೆ ಎಸೆದುಬಿಡೋಣ" ಎಂದು ನಿಶ್ಚಯಿಸಿ, ಹನುಮಾನ್‌ನ ದೇಹವನ್ನು ಕಂದಕದ ಬಳಿಗೆ ಅವರು ಎತ್ತಿಕೊಂಡು ಹೋದರು. ನೋಡಿದ ಕೂಡಲೇ ಅವರಿಗೆ ಅದು ಸರಿಯಾದ ಸ್ಥಳ ವಾಗಿ ತೋರಿತು. ಕಂದಕದ ತಲೆಯಲ್ಲಿ ಕೊಬ್ಬಿದ ಹಂದಿಗಳಂತಹ ರಣಹದ್ದುಗಳು ಮುಸೆದು ಹೊಳಪಾಗಿರುವಂತೆ ತೋರುತ್ತಿದ್ದ ಉಕ್ಕಿನ ಕೊಕ್ಕುಗಳನ್ನು ಆಚೆ ಈಚೆ ಆಡಿಸುತ್ತಾ ಹಸಿದ ನೋಟವನ್ನು ಸುತ್ತು ಬೀರುತ್ತಿದ್ದವು. ಕಂದಕವು ಎಲ್ಲಿಂದ ಎಲ್ಲಿಯ ವರೆಗೂ ಪಸರಿಸಿದ್ದಿತು. ಸಿಪಾಯಿಗಳು ಹನುಮಾನ್‌ನ ದೇಹವನ್ನು ಎರಡು ಕಡೆಯೂ ಹಿಡಿದುಕೊಂಡು ತೂಗಿ, ಇನ್ನೇನು ಎಸೆಯುವುದರಲ್ಲಿದ್ದರು. ಆಗ ಕಾಲಿನ ಕಡೆ ಹನುಮಾನ್‌ನನ್ನು ಹಿಡಿದಿದ್ದ ಚೀಣನಿಗೆ, ಏನೊ ಅನುಮಾನ ಬಂದಿತು. ಅವನು ಸ್ವಲ್ಪ ಬೆಚ್ಚಿದವನಾಗಿ, ತಲೆಯ ಕಡೆ ಹಿಡಿದಿದ್ದ ಸಿಪಾಯಿಯನ್ನು ನೋಡಿದನು. ಆ ಸಿಪಾಯಿ "ಇವನು ಇನ್ನೂ ಬದುಕಿದ್ದಾನೆ ಎನ್ನುತ್ತೀಯಾ?" ಎಂದು ಕೇಳಿದನು. ಇದ್ದಕ್ಕಿದ್ದಂತೆ ಇಬ್ಬರೂ ದೇಹವನ್ನು ಕೈಬಿಟ್ಟು ಹಾವನ್ನು ಕಂಡಂತೆ ಹತ್ತು ಹೆಜ್ಜೆ ಹಿಂದಕ್ಕೆ ಹಾರಿದರು. ಹನುಮಾನ್, ಒಂದು ಕಣ್ಣು ಬಿಟ್ಟು ನೋಡುತ್ತಿದ್ದನು. ಒಬ್ಬ ಸಿಪಾಯಿಯು ತನ್ನ ಹೆಗಲಿನಲ್ಲಿದ್ದ ಬಂದೂಕವನ್ನು ಕೈಗೆ ತೆಗೆದುಕೊಂಡು ಅವನ ಎದೆಗೆ ಗುರಿ ಹಿಡಿದು "ಹಾಳಾದವನೇ ನಿನಗೆ ಸಾವೇ ಇಲ್ಲವೆ? ಸತ್ತರೂ ಬದುಕುತ್ತಲೇ ಇದ್ದೀಯಾ?" ಎಂದು ಹೇಳಿ, ಇನ್ನೂ ಹತ್ತು ಹೆಜ್ಜೆ ಹಿಂದಕ್ಕೆ ಸರಿದು, ಹನುಮಾನ್‌ನ ಎದೆಗೆ ಗುಂಡಿಟ್ಟುಹೊಡೆದನು. ಹನುಮಾನ್‌ನ ಎದೆಗೆ ಆಳವಾದ ಗೂಟವನ್ನು ಹೊಡೆದಂತೆ ಭಾಸವಾಯಿತು. ಅನಂತರ ಮತ್ತೊಬ್ಬ ಸಿಪಾಯಿಯೂ ಹನುಮಾನ್‌ನ ಎದೆಗೆ ಒಂದು ಗುಂಡನ್ನು ಹೊಡೆದನು. ಸಿಪಾಯಿಗಳು ಕಂದಕದ ಬಳಿ ಹನುಮಾನ್‌ನ ದೇಹವನ್ನು ಇಟ್ಟುಕೊಂಡು ಇನ್ನೂ ಅರ್ಧ ಗಂಟೆ ಕುಳಿತಿದ್ದರು. ಹನುಮಾನ್ ಕಣ್ಣುಬಿಡಲಿಲ್ಲ. ಬಂದೂಕದಿಂದ ಎದೆಗೆ ಎರಡು ಗುಂಡು ಬಿದ್ದ ಮೇಲೆ ಅವನು ಸತ್ತಿರುವದು ಖಂಡಿತವೆಂದು ಅವರಿಗೆ ಖಾತರಿಯಾಯಿತು. ವಿಷಯವನ್ನು ಇನ್ನೂ ಹೆಚ್ಚು ದೃಢಪಡಿಸಿಕೊಳ್ಳಲು, ಅವರು ಹನುಮಾನ್‌ನ ಶರಟನ್ನು ಹರಿದು ನೋಡಿದರು. ಅವನ ದೇಹ ಆಗಲೇ ನೀಲಿಗಟ್ಟುತ್ತಾ ಇದ್ದಿತು. ಒಬ್ಬ ಸಿಪಾಯಿಯು "ಗುಂಡನ್ನು ವ್ಯರ್ಥ ಮಾಡಬಾರದೆಂದು ಯೋಚಿಸಿದ್ದೆವು. ಆದರೆ ಕೊನೆಗೂ ಗುಂಡಿನಿಂದಲೇ ಕೊಲ್ಲಬೇಕಾಯಿತು" ಎಂದನು. ಸಿಪಾಯಿಗಳು ಒಂದು ರಾಜ್ಯವನ್ನು ಗೆದ್ದಷ್ಟು ಸಂತೋಷದಿಂದ ಹನುಮಾನ್‌ನ ದೇಹವನ್ನು ಕಂದಕದೊಳಗೆ ತೂರಿ ಎಸೆದುಬಿಟ್ಟರು. ಅದು ಲಾಗಹಾಕುತ್ತಾ ಉರುಳುತ್ತಾ ಕೆಳಕ್ಕೆ ಹೋಗುತ್ತಿದ್ದುದನ್ನು ನೋಡಿ ಒಬ್ಬ ಸಿಪಾಯಿ "ಕೊನೆಗೂ ಭಾರತವೇ ಗೆಲ್ಲುವುದು, ಕೊನೆಗೂ ಸತ್ಯವೇ ಗೆಲ್ಲುವುದು" ಎಂದು ಹಾಸ್ಯಮಾಡಿದನು. ಸೂರ್ಯಾಸ್ತಸಮಯವಾಗಿ ಗಾಳಿ ತಣ್ಣಗೆ ಬೀಸತೊಡಗಿದುದರಿಂದ, ಸಿಪಾಯಿಗಳು ತಾವು ಇಳಿದುಕೊಳ್ಳುವ ಸ್ಥಳಕ್ಕೆ ಹೊರಟು ಹೋದರು.

*

ಮರುದಿವಸ ಬೆಳಿಗ್ಗೆ, ಹಳ್ಳಿಯ ನಾಲ್ವರು ಮಹಿಳೆಯರು ಪುರಲೆಗಳನ್ನು ಕೂಡಿಸಿಕೊಳ್ಳಲು ಕಂದಕಕ್ಕೆ ಇಳಿದರು. ಕಂದಕದ ಇಳಿಜಾರಿನಲ್ಲಿ ಸಣ್ಣ ಸಣ್ಣ ಗುತ್ತಿಗಳೂ ಪೊದೆಗಳೂ ಬೆಳೆದಿದ್ದವು. ಅವುಗಳನ್ನು ಕತ್ತರಿಸಿದಷ್ಟೂ ಅವು ಬೆಳೆಯುತ್ತಲೇ ಇದ್ದವು. ಹಳ್ಳಿಯ ಹೆಂಗಸರು ಪ್ರತಿದಿನವೂ ಮಚ್ಚು ಹೆಗ್ಗಗಳನ್ನು ತಂದು ಸೌದೆ ಪುರಲೆಗಳನ್ನು ಕೂಡಿಸಿಕೊಂಡು ಹೋಗುತ್ತಿದ್ದರು. ಆ ದಿನ ಅವರು ಕಂದಕದಲ್ಲಿ ತಿರುಗುತ್ತಿರುವಾಗ, ಅಲ್ಲಿ ಬಿದ್ದಿದ್ದ ಹೆಣವನ್ನು ನೋಡಿ, ಹೆದರಿ ಹಿಂದಕ್ಕೆ ಓಡಿದರು. ಅನಂತರ ಮತ್ತೆ ಹಾಗೆಯೇ ಧೈರ್ಯಗೊಂಡು, ದೂರದಿಂದ ನೋಡುತ್ತಾ ನಿಂತುಕೊಂಡರು. ಒಬ್ಬಳು ಮೂಗಿಗೆ ಬಟ್ಟೆ ಹಿಡಿದುಕೊಂಡು "ಕೆಟ್ಟ ವಾಸನೆ ಬರುತ್ತಿದೆಯೆ?" ಎಂದು ಕೇಳಿದಳು. ಸ್ವಲ್ಪ ಧೈರ್ಯಶಾಲಿಯಾದವಳೊಬ್ಬಳು ಹೆಣವನ್ನು ಚೆನ್ನಾಗಿ ನೋಡಿ "ಇಲ್ಲ ವಾಸನೆ ಬರುತ್ತಿಲ್ಲ. ಈಗ ತಾನೇ ಸತ್ತಂತೆ ಕಾಣುತ್ತದೆ. ನಿನ್ನೆ ಮಧ್ಯಾಹ್ನ ನಾನು ಇಲ್ಲಿಗೆ ಬಂದಿದ್ದೆ. ಆಗ ಇದು ಇಲ್ಲಿ ಇರಲಿಲ್ಲ. ಇದು ಯಾವ ನೀಚನ ಕೃತ್ಯವೋ?" ಎಂದಳು. ಆಗ ಅವರಿಗೆ ಹೆಣ ಸ್ವಲ್ಪ ತಲೆ ಅಲ್ಲಾಡಿಸಿದಂತೆ ತೋರಿತು. ಕೂಡಲೇ ಅವರೆಲ್ಲಾ ಒಂದೇ ಸಲಕ್ಕೆ ಕಿಟ್ಟನೆ ಕಿರಚುತ್ತಾ ಸಾಧ್ಯವಾದಷ್ಟು ದೂರ ಓಡಿಬಿಟ್ಟರು. ಅಲ್ಲಿ ಸ್ವಲ್ಪ ಹೊತ್ತು ನಿಂತಿದ್ದು ಸುಧಾರಿಸಿಕೊಂಡು ಮತ್ತೆ, ಒಬ್ಬರನ್ನೊಬ್ಬರು ಮುಂದಕ್ಕೆ ತಳ್ಳುತ್ತಾ ಪುನಃ ಹನುಮಾನ್ ಬಳಿ ಬಂದರು. ಹನುಮಾನ್ ನಾಲಿಗೆಯಿಂದ ತುಟಿಯನ್ನು ಸವರುತ್ತಾ "ನೀರು ನೀರು" ಎನ್ನುತ್ತಿದ್ದನು. ಅವನಿಗೆ ಏನು ಬೇಕೆಂಬುದು ಆ ಮಹಿಳೆಯರಿಗೆ ಗೊತ್ತಾಯಿತು. ಕಂದಕದ ಕೊನೆಯಲ್ಲಿ ಒಂದು ಸಣ್ಣಝರಿ ಇದ್ದುದು ಅವರಿಗೆ ಗೊತ್ತು. ಹಳ್ಳಿಯಿಂದ ಹೋಗುತ್ತಾ ಬರುತ್ತಾ ಅವರು ಅದರಲ್ಲಿ ನೀರು ಕುಡಿಯುತ್ತಿದ್ದರು. ಹನುಮಾನ್‌ನ ಸಮೀಪದಲ್ಲಿಯೇ ಅವನ ಲೋಹದ ಹ್ಯಾಟ್ ಬಿದ್ದಿದ್ದಿತು. ಒಬ್ಬ ಮಹಿಳೆ ಅದನ್ನು ತೆಗೆದುಕೊಂಡು ಹೋಗಿ ಝರಿಯಿಂದ ನೀರು ತಂದಳು. ಹನುಮಾನ್ ನೀರನ್ನು ನಿಧಾನವಾಗಿ ಕುಡಿದನು. ಅವನ ಸಂಕಟವನ್ನು ನೋಡಿ ಆ ಸ್ತ್ರೀಯರಿಗೆ ನಿಜವಾಗಿ ಕನಿಕರವುಂಟಾಯಿತು. ಹನುಮಾನ್‌ನ ಮೈಯಲ್ಲ ಘಾಯವಾಗಿತ್ತು. ಮುಖವನ್ನು ಗುರುತಿಸುವುದೂ ಕಷ್ಟವಾಗಿತ್ತು. ಒಬ್ಬ ಮಹಿಳೆ "ಪಾಪ ಯಾವ ನೀಚ ಇವನನ್ನು ಹೀಗೆ ಹೊಡದನೋ?" ಎಂದಳು. ಹನುಮಾನ್ ಮಾತನಾಡುವುದಕ್ಕೂ ನಿಶ್ಶಕ್ತನಾಗಿದ್ದನು.

ಅವರು ಕಷ್ಟಪಟ್ಟು ಅವನನ್ನು ಕಂದಕದಿಂದ ಮೇಲಕ್ಕೆ ಸಾಗಿಸಿದರು. ಹಳ್ಳಿಯ ಕಡೆಗೆ ದಾರಿ ಹೆಚ್ಚು ಸುಗಮವಾಗಿದ್ದಿತು. ದಾರಿಯಲ್ಲಿ ಹನುಮಾನ್ ಮತ್ತೆ ಮತ್ತೆ ಪ್ರಜ್ಞಾಹೀನನಾದನು. ಮಹಿಳೆಯರಿಗೆ ಅವನನ್ನು ಸಾಗಿಸುವುದು ತುಂಬ ಕಷ್ಟವಾಯಿತು. "ನಮ್ಮ ಪಾಡಿಗೆ ನಾವು ಬರಬೇಕಾಗಿತ್ತು. ಇದೆಲ್ಲ ಬರಿಯ ಶ್ರಮ. ಇವನಂತೂ ಬದುಕುವುದಿಲ್ಲ. ನಮಗೆ ಈ ಅಧಿಕಪ್ರಸಂಗತನ ಬೇಕಿರಲಿಲ್ಲ" ಎಂದಳು ಒಬ್ಬಳು. ಮತ್ತೊಬ್ಬಳು "ಆಸ್ಪತ್ರೆಗೆ ಸೇರಿಸಿಬಿಡೋಣ. ಸಾಯುವುದಾದರೆ ಅಲ್ಲಿಯೇ ಸಾಯಲಿ. ಈ ಕಂದಕದಲ್ಲಿ ರಣಹದ್ದು ಕುಕ್ಕುವುದಕ್ಕಿಂತ ಅದು ಎಷ್ಟೋ ಮೇಲು. ಅಲ್ಲಿ ಸತ್ತರೆ, ಸರಿಯಾದ ಗೋರಿಯನ್ನಾದರೂ ಮಾಡಿ ಹೂಳು

ತ್ತಾರೆ" ಎಂದಳು. ಕಂದಕದ ಹೊರಕ್ಕೆ ಹನುಮಾನ್‌ನನ್ನು ತಂದು ಮಲಗಿಸಿ, ಇಬ್ಬರು ಮಹಿಳೆಯರು ಹಳ್ಳಿಗೆ ಹೋಗಿ, ಒಂದು ಗಾಡಿಯನ್ನು ತೆಗೆದುಕೊಂಡು ಬಂದರು. ಅದರಲ್ಲಿ ಹನುಮಾನ್‌ನನ್ನು ಏರಿಸಿ ಆಸ್ಪತ್ರೆಗೆ ಅವನನ್ನು ಸಾಗಿಸಿಕೊಂಡು ಹೋದರು. ತಮಗೆ ಇಷ್ಟಬಂದಂತೆ ಸ್ವತಂತ್ರವಾಗಿ ತಾವು ಈ ವಿಷಯದಲ್ಲಿ ವರ್ತಿಸುವುದೇ ಅವರಿಗೆ ಉತ್ಸಾಹವಾಗಿದ್ದಿತು. ಗಂಡಸರೆಲ್ಲರೂ ಚೀಣದ ಸೈನ್ಯದಲ್ಲಿ ಸಿಪಾಯಿಗಳಾಗಿ ಸೇರಿದ್ದುದರಿಂದ, ತಾವೇ ಈ ಕಾರ್ಯಗಳನ್ನೆಲ್ಲ ನಿರ್ವಹಿಸಬೇಕೆಂದು ಮಹಿಳೆಯರು ಭಾವಿಸಿದರು.

ಗಾಡಿ, ಆಸ್ಪತ್ರೆಯ ಬಾಗಿಲಿನಲ್ಲಿ ಹೋಗಿ ನಿಂತಾಗ ಹನುಮಾನ್, ಪೂರ್ಣ ಪ್ರಜ್ಞಾಹೀನನಾಗಿದ್ದನು. ಅವನನ್ನು ನೋಡಿ ವೈದ್ಯರು "ಇವನಿಗೂ ಸಾವಿಗೂ ನಡುವೆ ಒಂದು ಕೂದಲು ಎಳೆ ಸಹ ಇಲ್ಲ. ಇವನನ್ನು ಯಾಕೆ ಕರೆತಂದಿರಿ? ಇವನ್ಯಾರು? ಇವನ ಹೆಸರೇನು? ಇವನಿಗೆ ಯಾಕೆ ಹೀಗಾಯಿತು" ಎಂದೆಲ್ಲ ಕೇಳಿದರು. ಮಹಿಳೆಯರು "ಅದೆಲ್ಲ ನಮಗೇನು ಗೊತ್ತು? ಕಂದಕದಲ್ಲಿ ಬಿದ್ದಿದ್ದ. ಆಸ್ಪತ್ರೆಗೆ ತಂದೆವು" ಎಂದರು. ಡಾಕ್ಟರು ಉದಾಸೀನದಿಂದ "ಹಾಗಾದರೆ ಇವನ ಗೋರಿಯ ಮೇಲೆ ಇಡಲು ನೀವು ಇನ್ನೊಂದು ದಿನ ಬರುವಾಗ ಹೂವು ತನ್ನಿ" ಎಂದು ಹೇಳಿ ತನ್ನ ಕೆಲಸಕ್ಕೆ ಹೋದನು. ಮಹಿಳೆಯರು ಹನುಮಾನ್‌ನನ್ನು ಅಲ್ಲಿ ಬಿಟ್ಟು ತಮ್ಮ ಮನೆಗಳಿಗೆ ಹೋದರು.

*

ಹನುಮಾನ್ ಸತ್ತಿದ್ದಾನೆ ಎಂಬುದು ಮಹಿಳೆಯರಿಗೂ ಖಾತರಿಯಾಗಿದ್ದಿತು. ಕೆಲವು ದಿನಗಳ ನಂತರ ಅವರು ಮತ್ತೆ ಕಂದಕದಲ್ಲಿ ಸೌದೆ ತರಲು ಸೇರಿದಾಗ "ನಾಳೆ ಹೋಗಿ ಅವನ ಗೋರಿಯ ಮೇಲೆ, ಒಂದು ಹೂವನ್ನಿಟ್ಟು ಬರೋಣ" ಎಂದು ನಿಶ್ಚಯಿಸಿಕೊಂಡರು. ಹನುಮಾನ್‌ನನ್ನು ಆಸ್ಪತ್ರೆಗೆ ಹಾಗೆ ಸಾಗಿಸಿದ ಮೇಲೆ, ಆ ಮಹಿಳೆಯರಲ್ಲಿ ತಾವು ಒಂದು ಸಾಹಸದ ಸತ್ಕಾರ್ಯದಲ್ಲಿ ಪಾಲುದಾರರಾದೆವು ಎಂಬ ಪರಸ್ಪರ ಆತ್ಮೀಯಭಾವನೆ ಬೆಳೆದಿದ್ದಿತು. ಮರುದಿವಸ ಅವರು ಹೂವನ್ನು ತೆಗೆದುಕೊಂಡು ಆಸ್ಪತ್ರೆಗೆ ಹೋಗಿ "ಈಗ ಒಂದು ತಿಂಗಳಿನಲ್ಲಿ ಇಲ್ಲಿ ಸತ್ತು ಹೋದನಲ್ಲ, ನಾವು ಕರೆದುಕೊಂಡು ಬಂದು ಬಿಟ್ಟ ಘಾಯಾಳು; ಅವನ ಗೋರಿ ಎಲ್ಲಿ?" ಎಂದು ಕೇಳಿದರು. ಡಾಕ್ಟರರಿಗೆ ಯಾವುದೂ ನೆನಪಿರಲಿಲ್ಲ. ಅವನು "ಅವನ ಹೆಸರೇನು?" ಎಂದು ಕೇಳಿದನು. ಮಹಿಳೆಯರು "ನಮಗೆ ಗೊತ್ತಿಲ್ಲ" ಎಂದರು. ಡಾಕ್ಟರು "ಮತ್ತೊಬ್ಬರನ್ನು ವಿಚಾರಿಸಿ" ಎಂದು ಅವರಲ್ಲಿಗೆ ಕಳುಹಿಸಿದನು. ಆ ಮತ್ತೊಬ್ಬ "ರಿಜಿಸ್ಟರ್ ಬರೆಯುವವರನ್ನು ಕೇಳಿ" ಎಂದು ಹೇಳಿದನು. ಕೊನೆಗೆ ಇನ್ನೊಬ್ಬ ಅಧಿಕಾರಿ ಮಹಿಳೆಯರಲ್ಲಿ ಕನಿಕರಗೊಂಡು "ನೀವು ಇಲ್ಲಿ ಕುಳಿತಿರಿ. ನಾನು ಎಲ್ಲವನ್ನೂ ವಿಚಾರಿಸಿ, ನಿಮ್ಮನ್ನು ನಿಮ್ಮ ಮನುಷ್ಯನ ಸಮಾಧಿಯ ಬಳಿಗೆ ಕರೆದುಕೊಂಡು ಹೋಗುತ್ತೇನೆ. ನಿಮ್ಮ ಹೂವನ್ನು ನೀವು ಹಾಕುವಿರಂತೆ" ಎಂದು ಹೇಳಿ ಹೊರಟು ಹೋದನು.

ಮಹಿಳೆಯರು ಸಂಕೋಚದಿಂದಲೂ ಭಯದಿಂದಲೂ ಆಸ್ಪತ್ರೆಯ ಪ್ರತಿಕೊಠಡಿಯನ್ನೂ ನೋಡುತ್ತಾ ಹೋದರು. ಅಲ್ಲಿ ತಾವು ಕರೆತಂದ ಮನುಷ್ಯನಿರಬಹುದೆಂದು ಅವರು ನೋಡಲಿಲ್ಲ. ಅವನು ಸತ್ತಿರುವನೆಂಬುದು ಅವರಿಗೆ ನಿಸ್ಸಂದೇಹವಾಗಿತ್ತು. ಆದರೆ ಅವರು ವೈದ್ಯ ಬಂದು ಗೋರಿಯನ್ನು ತೋರಿಸುವವರೆಗೆ ಕುತೂಹಲದಿಂದ ಆಸ್ಪತ್ರೆಯಲ್ಲೆಲ್ಲ ತಿರುಗಾಡತೊಡಗಿದರು. ರೋಗಿಗಳೆಲ್ಲ ಕುರ್ಚೆಗಳ ಮೇಲೆಯೂ ಹಾಸಿಗೆಗಳ ಮೇಲೆಯೂ ಆರಾಮ ಕುರ್ಚೆಗಳ ಮೇಲೆಯೂ ಕುಳಿತಿದ್ದರು; ಮಲಗಿದ್ದರು. ಎಲ್ಲರೂ ಬಿಳಿಯ ಬಟ್ಟೆಗಳನ್ನೇ ಧರಿಸಿದ್ದರು. ಕುರ್ಚೆಯ ಮೇಲೆ ಕುಳಿತಿದ್ದ ರೋಗಿಯ ಮಗ್ಗುಲಲ್ಲಿ ಒಬ್ಬಳು ಹುಡುಗಿ ನಿಂತಿದ್ದಳು. ಒಬ್ಬನಿಗೆ ಕೈಗೆ ಬ್ಯಾಂಡೇಜು, ಒಬ್ಬನಿಗೆ ಕಾಲಿಗೆ, ಒಬ್ಬನಿಗೆ ಸೊಂಟಕ್ಕೆ; ರೋಗಿಗಳೆಲ್ಲ, ಒಬ್ಬರಂತೆ ಒಬ್ಬರು ಕಾಣುತ್ತಿದ್ದರು. ಒಂದು ಮೂಲೆಯಲ್ಲಿ ಆರಾಮ ಕುರ್ಚೆಯ ಮೇಲೆ ಒಬ್ಬರೋಗಿ ಒರಗಿಕೊಂಡು ಮಲಗಿದ್ದನು. ಅವನ ತಲೆಗೆ ಬ್ಯಾಂಡೇಜ್ ಕಟ್ಟಿತ್ತು. ಮುಖದಲ್ಲಿ ಕಣ್ಣಿಗೆ ಹೊರತು ಉಳಿದ ಭಾಗಗಳಿಗೆಲ್ಲ ಬ್ಯಾಂಡೇಜ್ ಹಾಕಿದ್ದರು. ಕೈಯನ್ನು ಮೇಲಕ್ಕೆ ಎತ್ತಿ ಕತ್ತಿಗೆ ಸೇರಿಸಿ ಬ್ಯಾಂಡೇಜ್ ಹಾಕಿದ್ದರು. ಕಾಲು ಹೊಟ್ಟೆ ಸೊಂಟ ಎಲ್ಲಕ್ಕೂ ಬ್ಯಾಂಡೇಜ್. ಅವನನ್ನು ನೋಡಿದರೆ ಬರಿಯ ಬಟ್ಟೆಯ ಬೊಂಬೆಗೆ, ಕೈಕಾಲು ಕಣ್ಣು ಮೂಗು ಸಿಕ್ಕಿಸಿದಂತೆ ತೋರುತ್ತಿದ್ದಿತು. ಅವನ ಕೈಬೆರಳುಗಳು, ತಂತಿಯಷ್ಟು ಸಣ್ಣವಾಗಿದ್ದವು. ರೋಗಿಗಳನ್ನೆಲ್ಲ ನೋಡುತ್ತಾ ಸ್ತ್ರೀಯರು ಆಸ್ಪತ್ರೆಯ ಕೊನೆಯವರೆಗೆ ಹೋದರು. ಅದೇನು ಅಂತಹ ಅತಿದೊಡ್ಡ ಆಸ್ಪತ್ರೆಯಲ್ಲ. ಸ್ವಲ್ಪಹೊತ್ತು ನಡೆಯುವದರೊಳಗೆ ಅದು ಕೊನೆಮುಟ್ಟಿತು. ಎಲ್ಲವನ್ನೂ ನೋಡಿಕೊಂಡು ಮಹಿಳೆಯರು ಮತ್ತೆ ಹೋದದಾರಿಯಲ್ಲೇ ಹಿಂದಿರುಗಿದರು. ಆರಾಮ ಕುರ್ಚೆಯ ಬಳಿಗೆ ಬಂದಾಗ ಅವರಿಗೆ "ಇದು ಬರಿಯ ಬ್ಯಾಂಡೇಜ್ ನಡುವೆ, ಇರುವ ಎರಡು ಕಣ್ಣು" ಎಂದು ತೋರಿತು. ಅವರು ಕುರ್ಚೆಯ ಹತ್ತಿರಕ್ಕೆ ಬಂದಾಗ ರೋಗಿ ನಿಧಾನವಾಗಿ ತಲೆಯೆತ್ತಿ ನೋಡಿ ಕ್ಷೀಣಸ್ವರದಲ್ಲಿ "ಓಹೋ ನೀವೆ?" ಎಂದನು. ಅದನ್ನು ಕೇಳಿ ಮಹಿಳೆಯರು ಥಟ್ಟನೆ ನಿಂತು ಅವನನ್ನು ನೋಡಿದರು. ರೋಗಿ ಮತ್ತೆ ಅತ್ಯಂತ ಆನಂದದಿಂದ, ಆದರೆ ಇನ್ನೂ ಹೆಚ್ಚು ಕ್ಷೀಣಸ್ವರದಲ್ಲಿ "ಹೌದು ಹೌದು ನೀವೇ?" ಎಂದನು. ಮಹಿಳೆಯರೆಲ್ಲ ಒಟ್ಟಾಗಿ "ಹೌದು ಹೌದು ಇವನೇ! ನಮ್ಮ ಮನುಷ್ಯನೇ! ಇನ್ನೂ ಬದುಕಿದ್ದಾನೆ! ನಾವು ನಿನ್ನ ಗೋರಿಗೆ ಹೂವನ್ನು ತಂದೆವು" ಎಂದು ಗಟ್ಟಿಯಾಗಿಯೇ ಕೂಗಿ ಹೂವನ್ನು ಅವನ ಮುಂದೆಯೇ ಸುರಿದರು.

ಅವರ ಆನಂದ, ಪೂರ್ಣವೂ ಅನಿರೀಕ್ಷಿತವೂ ಅದ್ಭುತವೂ ಆಗಿ ತುಂಬಿ ಹರಿಯಿತು. ಆ ಆನಂದದ ಭರದಲ್ಲಿ ಅವರು ಏನು ಮಾಡುವದಕ್ಕೂ ತೋರದೆ ಅಳು-ನಗುಗಳ ನಡುವೆ, ದೇವರ ಅಪಾರ ಕರುಣೆಯನ್ನು ನೆನಸಿಕೊಂಡು ಕೃತಜ್ಞರಾದರು.

*　　*　　*

ಈಚೆಗೆ ಚೀಣದಿಂದ ಭಾರತಕ್ಕೆ ಹಿಂದಿರುಗಿಸಲ್ಪಟ್ಟ ಯುದ್ಧಬಂದಿಗಳೊಡನೆ ಹನುಮಾನ್ ಸಹ ಹಿಂದಿರುಗಿದ್ದಾನೆ.*

( ಒಂದು ಸುದ್ದಿ — ರೆಡಿಯೋ ಮಾತು ಹಾಗೂ ಒಂದು ಕತೆಗಳ ಆಧಾರದಿಂದ )



ಲೇಖಕರು :
ಶ್ರೀ ಕೃಷ್ಣಮೂರ್ತಿ ಪುರಾಣಿಕ
ಗೋಕಾಕ

# ನನ್ನ ಅವಿರತ ಕೆಲಸದ ಗುಟ್ಟೇನು!

ಶ್ರೀ ಕೃಷ್ಣಮೂರ್ತಿ ಪುರಾಣಿಕರು ಕನ್ನಡದ ಒಳ್ಳೆ ಜನಪ್ರಿಯ ಸಾಹಿತಿಗಳು. ಅವರು ಕಾದಂಬರಿಕಾರರು, ಕವಿಗಳು, ನಾಟಕಕಾರರು, ಹರಟೆಗಾರರು, ವಿಮರ್ಶಕರು, ಇದೆಲ್ಲಕ್ಕಿಂತ ಹೆಚ್ಚಾಗಿ ಅವರು ಅಧ್ಯಾಪಕರು. ದೊಡ್ಡ ಸಂಸಾರವಂದಿಗರು. ಇವರಿಗೆ ಸಾಹಿತ್ಯಸೇವೆಗೆ ಪುರುಸೊತ್ತು ಸಿಗುವುದು ಹೇಗೆ? ಇಷ್ಟೊಂದು ಗ್ರಂಥಗಳನ್ನು ಕನ್ನಡಮ್ಮನ ಅಡಿದಾವರೆಯಲ್ಲಿ ಹೇಗೆ ಅರ್ಪಿಸಿದ್ದಾರೆ? ಅವರ ಈ ಅವಿರತ ಕೆಲಸದ ರಹಸ್ಯವೇನು? ಎಂದು ಓದುಗರು ಕುತೂಹಲಿಗಳಾಗಿರುವುದು ಸ್ವಾಭಾವಿಕ. ಸ್ವತಃ ಶ್ರೀ ಕೃಷ್ಣಮೂರ್ತಿ ಪುರಾಣಿಕರೇ ಅವರ ಕುತೂಹಲವನ್ನು ಇಲ್ಲಿ ತಣಿಸಿದ್ದಾರೆ.

---

ಮಣಿಪಾಲ ಸಾಹಿತ್ಯಸಮ್ಮೇಲನದ ಸಮಯದಲ್ಲಿ ನನ್ನ ಹಿರಿಯ ಸಾಹಿತ್ಯಮಿತ್ರರು ತಮ್ಮ ಮಗಳಿಗೆ ನನ್ನನ್ನು ಪರಿಚಯ ಮಾಡಿ ಕೊಡುತ್ತ ಕೇಳಿದರು.

"ಇವರು ಯಾರೆಂದು ಗೊತ್ತಾಯಿತೆ?"

"ಗೊತ್ತಾಗದೇನು ಅಣ್ಣಾ?"

"ನಿನಗೆ ಗೊತ್ತಿಲ್ಲದಿದ್ದರೂ ಹಾಗೆ ಹೇಳುತ್ತಿ. ಹೆಂಗಸರಿಗೆ ತಿಳಿಯದುದು ಯಾವುದು ಇಲ್ಲವೆಂಬುದನ್ನು ನಿನಗೆ ತೋರಿಸಬೇಕಾಗಿದೆ, ಅಲ್ಲವೆ?"

ನಗುತ್ತ ಮಗಳನ್ನು ಕೇಳಿದರು.

"ಇವರ ಕಾದಂಬರಿಗಳನ್ನು ನಾನು ದಿನಾಲು ಓದುತ್ತಿದ್ದೇನೆ. ಇವರ ಪರಿಚಯವಿಲ್ಲವೆಂದರೇನು?"

"ನಾನು ಹೇಳಿದೆನಲ್ಲ! ಇವರು ಕಾದಂಬರಿಕಾರರು ಮಾತ್ರವಲ್ಲ. ಸರಳರಗಳೆಯ ಸುಂದರ ನಾಟಕಗಳನ್ನು ಬರೆಯುತ್ತಾರೆ; ಆಗಾಗ ಕವನಗಳನ್ನು ಬರೆಯುತ್ತಾರೆ. ಸಣ್ಣ ಕಥೆಗಳನ್ನಂತೂ ನೀನು ಓದಿಯೇ ಓದುತ್ತಿ. ಅಲ್ಲದೆ ವಿಮರ್ಶಾತ್ಮಕ ಲೇಖನಗಳನ್ನು ಬರೆಯುತ್ತಾರೆ."

"ಇವರು ಭಾಷಣಕಾರರೂ ಆಗಿದ್ದಾರೆ...."

ಅಲ್ಲಿಯೇ ನಿಂತ ಬಳ್ಳಾರಿಯ ಬೀಚಿ ನುಡಿದರು.

"ಮತ್ತೆ ಶಿಕ್ಷಕರೂ ಆಗಿದ್ದಾರೆ."

ನನ್ನ ಧಾರವಾಡದ ಮಿತ್ರರು ಹೇಳಿದರು, "ಒಟ್ಟಿನ ಮೇಲೆ ಹೇಳಬೇಕೆಂದರೆ ಇವರು ಕಾದಂಬರಿಕಾರರು, ಕವಿಗಳು, ವಿಮರ್ಶಕಾರರು, ಸಣ್ಣ ಕಥೆಗಾರರು, ಭಾಷಣಕಾರರು ಮೇಲೆ ಶಿಕ್ಷಕರು. ಈ ಎಲ್ಲವೂ ಆಗಿದ್ದಾರೆ."

"ಮತ್ತೆ ಇವರು ಏಳು ಮಕ್ಕಳ ತಂದೆಯೂ ಆಗಿದ್ದಾರೆ."

"ಏನು?"

ದಕ್ಷಿಣ ಕನ್ನಡದ ನನ್ನ ಮಿತ್ರರು ಹೌಹಾರಿ ಕೇಳಿದರು.

"ದೊಡ್ಡ ಸಂಸಾರವಂದಿಗರು."

"ಅಣ್ಣಾ! ಇಂಥ ದೊಡ್ಡ ಸಂಸಾರವನ್ನು ಕಟ್ಟಿಕೊಂಡು ಇವರು ಸಾಹಿತ್ಯರಚನೆಯನ್ನು ಹೇಗೆ ಮಾಡುತ್ತಾರೆ ಅಣ್ಣಾ? ಇವರಿಗೆ ಪುರುಸೊತ್ತಾದರೂ ಹೇಗೆ ಸಿಗುತ್ತದೆ?"

"ಇವರನ್ನೇ ಕೇಳು? ಇಲ್ಲದಿದ್ದರೆ ಅವರ ಪತ್ನಿ ಇದ್ದಾರಲ್ಲ ಸೌ. ಗಂಗಾತಾಯಿ ಅವರನ್ನಾದರೂ ಕೇಳಿ ತಿಳಿದುಕೊ."

ಎಂದು ಹಿರಿಯರೆಂದಾಗ ಪಕ್ಕದಲ್ಲಿಯೇ ಇದ್ದ ಗಂಗಾ ನನ್ನ ಮುಖ ನೋಡಿದಳು.

"ಈ ಕೆಲಸವನ್ನೆಲ್ಲ ನೀವು ಹೇಗೆ ಪೂರೈಸುವಿರಿ? ನಿಮಗೆ ಸಮಯವಾದರೂ ಹೇಗೆ ಸಿಗುತ್ತದೆ?"

ಆ ಸಾಧ್ವಿ ಅಭಿಮಾನದಿಂದ ಕೇಳಿದಳು.

ನನ್ನ ಪೂಜ್ಯ ಹಿರಿಯಮಿತ್ರರಾದ ಶ್ರೀ ಮಾಸ್ತಿ ಅವರು ನನ್ನ ಬೆನ್ನು ತಟ್ಟುತ್ತ ಕಣ್ಣಲ್ಲಿ ನೀರು ತುಂಬಿಕೊಂಡು ಹೇಳಿದರು. 'ಬಹಳ ಸಂತೋಷ! ಬಹಳ ಸಂತೋಷ! ನೀನು ಬರೆಯುವದು ಗೊತ್ತಿತ್ತು, ಆದರೆ ಇಷ್ಟು ಬರೆಯುತ್ತಿರುವದು ನಿಜವಾಗಿಯೂ ಅಭಿಮಾನ ಪಡುವ ಸಂಗತಿ......" ಎನ್ನುತ್ತ ಅವರು ನನ್ನ ಹೆಂಡತಿಯ ಕಡೆಗೆ ಹೊರಳಿ ಅದೇ ವಾತ್ಸಲ್ಯದಿಂದ ಹೇಳಿದರು, 'ಈ ಯಜಮಾನ ಪತಿರಾಯನನ್ನು ಚನ್ನಾಗಿ ನೋಡಿಕೊ ತಂಗಿ!' ಎಂದರು.

ಆ ದೃಶ್ಯ ಈಗಲೂ ನನ್ನ ಕಣ್ಣು ಮುಂದೆ ಕಟ್ಟಿದೆ.

"ಈ ಕೆಲಸವನ್ನೆಲ್ಲ ಯಾವಾಗ ಮಾಡುವಿರಿ? ಈ ಅವಿರತ ದುಡಿತದಲ್ಲಿ ನಿಮ್ಮ ಆರೋಗ್ಯದ ಗತಿಯೇನು?"

ಎಂದು ಕೇಳಿದ ಆ ಸಾಧ್ವಿಯ ಮಾತುಗಳನ್ನೇ ನನ್ನ ಹಿರಿಯ ಮಿತ್ರರೂ 'ಕರ್ಮವೀರ' ಪತ್ರಿಕೆಯ ಸಮರ್ಥಸಂಪಾದಕರೂ ಆದ ಶ್ರೀ. ಹ. ರಾ. ಪುರೋಹಿತರೂ ಕೇಳಿದ್ದಾರೆ.

"ನನ್ನ ಅವಿರತ ಕೆಲಸದ ಒಳಗುಟ್ಟೇನು?"

ನನ್ನ ಮೇಲಿನ ಅಭಿಮಾನ, ಮಮತೆ, ನನ್ನ ಕೆಲಸದ ಬಗೆಗಿರುವ ಈ ಹಿರಿಯರ ಸಂತೃಪ್ತಿ ನನಗೆ ಸ್ಫೂರ್ತಿದಾಯಕವಾಗಿದೆಯಾದರೂ ನನ್ನ ಬಗೆಗೆ ನಾನೇ ಬರೆದುಕೊಳ್ಳುವದು ಅಷ್ಟು ಪ್ರಿಯವಾಗಿ ನನಗೆ ತೋರುತ್ತಿಲ್ಲ. ನನ್ನ ಕೆಲಸದ ಬಗ್ಗೆ ಜನರೇನು ತಿಳಿದುಕೊಂಡಿದ್ದಾರೆಂಬುದೇ ನನ್ನ ಬಯಕೆ. ಆ ಬಗ್ಗೆ ನಾನು ಏನು ಹೇಳಲಿ? ಆದರೆ ಏನಾದರೂ ಹೇಳುವದು ನನ್ನ ಸ್ವಭಾವವಲ್ಲ. ಅಲ್ಲದೆ ಇಂಥ ಪ್ರಶ್ನೆಗಳನ್ನು ಕೇಳಿ, ಉತ್ತರ ಸಿಗದೇ ಬೇಸತ್ತು ಸಾಗರದ ನನ್ನ ಕೆಲವು ಅಭಿಮಾನಿಗಳು ಗೋಕಾಕದವರೆಗೆ ಬಂದು ನನ್ನೊಡನೆ ಇದ್ದು ಹೋದುದೂ ಉಂಟು. ಅನೇಕ ಓದುಗರು ಆಗಾಗ ಇಂಥ ಪ್ರಶ್ನೆ ಕೇಳುತ್ತಿರುವುದೂ ಉಂಟು. ಅದುದರಿಂದ ಈ ಪ್ರಶ್ನೆಯಲ್ಲಿ ಅಡಕವಾದ ಉಪಯುಕ್ತತೆ ನನ್ನ ಗೆಳೆಯರಿಗೆ ಉಂಟಾಗಲೆಂದು ಹಾರೈಸಿ ನಾಲ್ಕು ಮಾತುಗಳನ್ನು ಬರೆಯುತ್ತಿದ್ದೇನೆ. ನನ್ನ ಬಗೆಗೆ, ನನ್ನ ಕೆಲಸದ ಬಗೆಗೆ ಅಧಿಕೃತವಾದ ಕೆಲವು ಸನ್ನಿವೇಶಗಳನ್ನೂ ದಿನಚರಿಯನ್ನೂ ಹೇಳುವ ಹೊಸ ತಂತ್ರವನ್ನೇ ನಾನು ಬಳಸಬೇಕಾಗಿದೆ?

ನಾನೆಂದರೆ ನಾನಲ್ಲವೆಂದು ತಿಳಿಯುವ ಮಹಾನುಭಾವರು ನನಗೆ ಪೂಜ್ಯರಾಗಿದ್ದಾರೆ. ನಾನು ಆ ಜಾಡಿನಲ್ಲಿಯೇ ಹೊರಡುತ್ತೇನೆ.

೨

ನನ್ನ ಐವತ್ತನೆಯ ಸಾಹಿತ್ಯಕೃತಿ ಹೊರಬಿದ್ದ ಸಮಯದಲ್ಲಿ ಮಿತ್ರರಾದ ಶ್ರೀ ನಿರಂಜನರು 'ಪ್ರಜಾವಾಣಿ'ಯಲ್ಲಿ ಈ ರೀತಿ ಬರೆದಿದ್ದಾರೆ:— (ಪ್ರಜಾವಾಣಿ, ೧೧-೨-೧೯೬೨, ಭಾನುವಾರ). "....ಈ ಸಾಧನೆ ಗಮನೀಯ ಉಲ್ಲೇಖನಾರ್ಹ. ಇವರು ಕಸಬುದಾರೀ ಲೇಖಕರಲ್ಲ. ಕಾರಣ ಅವರ ಸಾಧನೆ ಇನ್ನಷ್ಟು ಗಮನಾರ್ಹ.... ವೃತ್ತಿಯಲ್ಲಿ ಅಧ್ಯಾಪಕರು ಸಾಹಿತ್ಯಕೃಷಿ ಅವರ 'ಹಾಬಿ'. ಅದರೆ ಈ 'ಹಾಬಿ' ಬೃಹದಾಕಾರವಾಗಿ ಬೆಳೆದಿದೆ. "ಅಧ್ಯಾಪಕನೊಳಗೆ ಸಾಹಿತಿಯೋ, ಸಾಹಿತಿಯೊಳಗೆ ಅಧ್ಯಾಪಕನೊ" ಎಂಬುದು ತಿಳಿದುಬಾರದಷ್ಟು ಬಲಗೊಂಡಿದೆ. ಬಹುಶಃ ಪುರಾಣಿಕರು ಮೊದಲು ಅನುರಕ್ತರಾದುದು ಸಾಹಿತ್ಯಶಾರದೆಯಲ್ಲಿಯೇ ಇರಬೇಕು. ವಿದ್ಯಾಗಣಪತಿ ಮಗ್ಗಲುಸ್ಥಾನವೇ ಸಾಕೆಂದು ಬದಿಗೆ ಸರಿದಿದ್ದಾನೆ. ನೂರಾರು ವಿದ್ಯಾರ್ಥಿಗಳಿಗೆ ಪಾಠ ಹೇಳಬೇಕಾದ ದುಡಿಮೆಯ ಹಗಲು. ಬಿಡುವಿನ ವೇಳೆಯ ಪಾಲುಕೇಳುವ ಅಚ್ಚುಕಟ್ಟಾದ ಸಂಸಾರ. ಇಷ್ಟಿದ್ದೂ ವಿಪುಲ ಸಾಹಿತ್ಯವನ್ನು ಸೃಷ್ಟಿಸಲು ಪುರಾಣಿಕರು ಸಮರ್ಥರಾಗಿರುವುದು ಅವರ ಹೆಗ್ಗಳಿಕೆ. ...... ಅಧ್ಯಾಪಕ ಪುರಾಣಿಕರು ಇನ್ನು ಕೆಲವರ್ಷಗಳಲ್ಲಿ ನಿವೃತ್ತರಾಗಬಹುದು; ಅದರೆ ಸಾಹಿತಿ ಪುರಾಣಿಕರಿಗೆ ವಿಶ್ರಾಂತಿ ಎಲ್ಲಿಯದು?"

ಗೆಳೆಯರಾದ ನಿರಂಜನರು ಈ ಮಾತನ್ನು ಸೂಚ್ಯವಾಗಿಯೇ ಹೇಳಿದ್ದಾರೆಂದು ನನಗೆ ಅನ್ನಿಸುತ್ತದೆ.

ತರುಣ ಸಾಹಿತಿಯೊಬ್ಬರು ನನಗೆ ಇಂಥದೇ ಒಂದು ಪ್ರಶ್ನೆಯನ್ನು ಕೇಳಿದಾಗ ಅವರಿಗೆ ಕೆಲವು ಮಾತುಗಳನ್ನು ನನ್ನ 'ಇಪ್ಪತ್ತೈದನೆಯ ಕಾದಂಬರಿ, 'ಹಸಿರುನೆಲ'ದ ಅರಿಕೆಯಲ್ಲಿ ಹೇಳಿದ್ದೇನೆ. ಕೊಡಗಿನ ಇನ್ನೊಬ್ಬರು, ಮಂಗಳೂರಿನ ಮಿತ್ರರು, ಬೆಂಗಳೂರಿನ ಅಭಿಮಾನಿಗಳು, ಮುಂಬಯಿಯ ಸಾಹಿತ್ಯ ಸೇವಕರು ಕೂಡ ನನ್ನ ಸಾಹಿತ್ಯದ ವಿಪುಲಪುಷ್ಟಿಯ ಬಗ್ಗೆ ಕೇಳಿದ ಮಾತುಗಳಿಗೂ ಈ ಅರಿಕೆಯಲ್ಲಿ ಸಮಾಧಾನದ ಮಾತುಗಳಿವೆ.

"ಸಾಹಿತ್ಯಸೃಷ್ಟಿ ಭಗವಂತನ ಪ್ರೇರಣೆಯೇ ಆಗಿರುವದರಿಂದ ಇದು ನಾನು ಬರೆದ ಇಪ್ಪತ್ತೈದನೆಯ ಕೃತಿಯೆಂದು ಹೇಳುವದು ಒಂದು ನಿಮಿತ್ತ ಮಾತ್ರವಾಗಿದೆ. ಇದರಲ್ಲಿ ನನ್ನದೆನ್ನುವದೆಲ್ಲವೂ ಅವನದು. ಜನತೆಯ ಜಾಗ್ರತವಾಗಿರುವ ಜನಾರ್ದನನದು. ಅವನ ಪ್ರೇರಣೆಯೇ ನನಗೆ ಅನುಗ್ರಹ. ಅವನ ಆಶೀರ್ವಾದವೇ ನನಗೆ ವರಪ್ರಸಾದ. ಮಾಡಿಸುವವನು ಅವನು; ಆಡಿಸುವವನು ಅವನು....

ಈ ವರೆಗೆ ಮಾಡಿದ ಸೇವೆಯಿಂದ ನನಗೆ ಎಳ್ಳಷ್ಟೂ ತೃಪ್ತಿಯಿಲ್ಲ. ಇದು ಸಾಲದೆಂದು ಮನಸ್ಸು ಚುಚ್ಚಿ ಚುಚ್ಚಿ ಹೇಳುತ್ತದೆ. ಒಳ್ಳೆಯದಕ್ಕಾಗಿ ಒಳಗು ಹಂಬಲಿಸುತ್ತದೆ. ನನ್ನ ಜನತೆಯ ಸಾಂಸಾರಿಕ ಜೀವನದ ಸಾವಿರ ಸಮಸ್ಯೆಗಳು, ಸಾವಿರ ಚಿತ್ರಗಳು ಹೃದಯವನ್ನು ತುಂಬಿನಿಂತಿವೆ. ಆ ಚಿತ್ರಗಳ ವ್ಯಕ್ತಸ್ವರೂಪವು ಒಳಗಣ್ಣಿನ ಮುಂದೆ ಬಂದುನಿಂತಾಗ ಅದನ್ನು ಕಂಡ ಹೃದಯ ಒಮ್ಮೆ ಕಣ್ಣೀರಿನ ಕೋಡಿಯನ್ನು ಹರಿಸುತ್ತದೆ. ಇನ್ನೊಮ್ಮೆ ಹಿಗ್ಗಿನಿಂದ ಅರಳುತ್ತದೆ. ಸರಸ-ವಿರಸಗಳ ಬದುಕಿನ ಚಿತ್ರಗಳು ಹೃದಯಕವಾಟದಲ್ಲಿ ಜೋಕಾಲಿಯಾಡುತ್ತವೆ. ಈ ಜೋಕಾಲಿಯನ್ನು ಮನಸ್ವಿಯಾಗಿ ಜೀಕಬೇಕೆಂದು ಆತುರ ಮೈದುಂಬಿ ಮೂಡತೊಡಗಿದೆ. ವಿಶ್ವಚೈತನ್ಯದಾಯಕನ ಅನುಗ್ರಹ, ಗುರುಹಿರಿಯರ ಆಶೀರ್ವಾದಗಳು ನನಗೆ ಮಾರ್ಗದರ್ಶಕವಾಗಬೇಕು; ಅಂದಾಗ ನಾನು ಗುರಿಯ ಗರ್ಭಗುಡಿಯ ಸನಿಯಕ್ಕಾದರೂ ಹೋಗಬಹುದೆಂದು ಅನ್ನಿಸುತ್ತದೆ... ಕನ್ನಡಜನಾಂಗದ ಸಾರ್ವಜನಿಕ ಜೀವನದ ಪರಿಶೀಲನೆಯು ನನ್ನ ಸಾಹಿತ್ಯ ಉಪಾಸನೆಗೆ ಹೊಸದಾರಿಯನ್ನು ತೆರೆದು ತೋರಿಸಿತು. ಜನಜೀವನದ ಉತ್ಕರ್ಷಕ್ಕಾಗಿ ಜನತೆಯ ಹೃದಯವನ್ನು ಮಿಡಿಯುವ ಸೇವಾಸಾಧನೆಯೇ ನನ್ನ ಸಾಹಿತ್ಯರೀತಿಯಾಗಬೇಕೆಂದು ಮನಸ್ಸು ಹೇಳತೊಡಗಿತು.

ಜೀವನದ ಮಹತಿಯನ್ನು ಎತ್ತಿ ತೋರಿಸುವ ಕಾದಂಬರಿಯು ಕಾವ್ಯ; ಅಂತಹ ಕಾವ್ಯವು ಕಾದಂಬರಿಯೆ.

ಸಾಹಿತ್ಯದ ಹೂವು ಜನಜೀವನಬಳ್ಳಿ ಬಿಟ್ಟ ಗಮಗಮಿಸುವ ಹೂವಾಗಿ ತಾಯಿಗೆ ಮಾಲೆಯಾಗಬೇಕು. ಈ ಮಾಲೆಗಾಗಿ ನನ್ನಿಂದ ಪುಷ್ಪಗಳನ್ನು ಪೂರೈಸುವ ಶಕ್ತಿಯಿಲ್ಲದಿದ್ದರೂ ಒಂದು ಒಳ್ಳೆಯ ಪಕಳೆಯನ್ನು ಸಲ್ಲಿಸಬೇಕೆಂಬ ಆಶೆ ನನಗಿದೆ.



ಅಧ್ಯಕ್ಷ.—ಲೋ ಬೇಗ ಹೋಗಿ ಹೊರಗಡೆ ಗೇಟು ಮುಚ್ಚೋ.

ಕಾದಂಬರಿಯ ರೀತಿ ನನ್ನ ಜೀವ ಪ್ರಾಣವಾಗಿದೆ.

ನನ್ನ ಜೀವನವಿಕಾಸಕ್ಕೆ ಅದು ದಾರಿ ತೋರುತ್ತದೆ.

ಈ ಮಾತುಗಳಿಂದ ಕೆಲಸದ ವ್ಯಾಪ್ತಿಯ ಕಲ್ಪನೆ ಬರಬಹುದಾಗಿದೆ. ಸಾಹಿತಿಯು ಜೇನುಹುಳವಿದ್ದ ಹಾಗೆ. ಮಕರಂದವನ್ನು ತಿರಿದುತಂದು ರಸಜೇನನ್ನು ಸಿದ್ಧಗೊಳಿಸುವದೇ ಅವನ ಕೆಲಸ. ಈ ಕೆಲಸದಲ್ಲಿ ಅವನಿಗೆ ಪ್ರೀತಿ ಇದೆ. ಪ್ರೀತಿಯಿಲ್ಲದ ಕೆಲಸದಿಂದ ಏನು ಪ್ರಯೋಜನ? ಅದು ಅರ್ಥಹೀನ ಪರಿಶ್ರಮವೇ ಆದೀತು. ಪರಿಶ್ರಮದಿಂದ ಸಾಹಿತ್ಯಪರಿಚಯವಾಗಬಹುದು; ಸಾಹಿತ್ಯ ಸೃಷ್ಟಿಗೆ ಅವಿರತವಾದ ಕೆಲಸವೇಬೇಕು. ಅಲ್ಲಿ ಸಾಹಿತಿಯ ಹೃದಯಸಂಸ್ಕಾರದ ಹೊನಲು ಓತಪ್ರೋತವಾಗಿ ಹರಿಯಬೇಕು. ಇದು ಪ್ರೀತಿರಸದ ರಸಗಂಗೆಯೇ ಆಗಬೇಕು. ಸಾಹಿತಿಗೆ ಇದು "ಬರಿಯ ಬೆಳಗಲ್ಲೊ ಅಣ್ಣಾ! ಶಾಂತಿರಸವೇ ಮೈದೋರಿತಣ್ಣಾ" ಎನ್ನುವಂತೆ ಆಗಬೇಕು.

ನಿತ್ಯಜೀವನದಲ್ಲಿ ಕಂಡುಬರುವ ಕುತೂಹಲ ಸಾಹಿತ್ಯವೈವಿಧ್ಯವನ್ನು ತೋರಿಸಿ ಕಾದಂಬರಿ ಪ್ರಪಂಚಕ್ಕೆ ಹೊಸ ಸೃಷ್ಟಿಯನ್ನು ಒದಗಿಸುತ್ತಿರುತ್ತದೆ.

ಈ ಹೊಸ ಸೃಷ್ಟಿಯನ್ನು ಕಾಣಲು ದರ್ಶನದ ದೃಷ್ಟಿಬೇಕು. ಸೂಕ್ಷ್ಮದರ್ಶನವೇ ಕತೆಗಾರನ ಸ್ವರೂಪದರ್ಶನ. ಅದುದರಿಂದ ಸಮಾಜಪುರುಷನನ್ನು ಅನನ್ಯಭಕ್ತಿಯಿಂದ ಆರಾಧಿಸಬೇಕು. ನನ ಐವತ್ತನೆಯ ಕೃತಿ 'ಪಾವನಗಂಗಾ'ದ ಅರಿಕೆಯಲ್ಲಿ ಈ ಸ್ವರೂಪ ದರ್ಶನದ ಮಹತಿಯನ್ನೂ ಆರಾಧನೆಯ ಮಹತ್ವವನ್ನೂ ಅವಿರತಸಾಧನೆಯ ಅಲ್ಪ—

ಸಿದ್ಧಿಯ ಕನಸನ್ನೂ ವಿವರಿಸಿದ್ದೇನೆ. ಅದರಲ್ಲಿಯ ಕೆಲವು ಮಾತುಗಳು ಇವು. "...ನನ್ನ ಜನವೇ ನನ್ನ ಮನ; ನನ್ನ ಹೃದಯ. ಈ ಹೃದಯದಲ್ಲಿ ತುಂಬಿನಿಂತ ಜನಮನದ ವಿವಿಧ ವಿಪುಲ ಸಾಮಗ್ರಿ ರಸಬುಗ್ಗೆಯಾಗಿ ಹೊರಹೊಮ್ಮಬೇಕು. ಈ ಅನುಗ್ರಹ ಸಮಾಜಪುರುಷನಿಂದ ಬರಬೇಕು. ನನ್ನದೆನ್ನುವದೆಲ್ಲವೂ ಸಮಾಜದ್ದು. ನನ್ನ ಸ್ಫೂರ್ತಿಸೇನೆಯ ಕಾರಂಜಿಗೆ ಮೂಲರಸ ಸಮಾಜಬೇರಿನದು. ಈ ಬೇರು ಆಳವಾಗಿ ಭೂಮಿಯಲ್ಲಿ ಪಸರಿಸಿದಂತೆ ಮುಗಿಲ ತುಂಬ ಹರಡಿಕೊಂಡಿದೆ. ಈ ಹಂದರವೇ ಸಾಹಿತ್ಯತಪಸ್ಸಿಗೆ ನೆರಳು ಇದೇ ಆಸರ. ಈ ತಂಪಿನಲ್ಲಿ ಕಾದಂಬರಿಕಾರ, ಹೃದಯದ ಶಾಂತಿಯನ್ನು ಪಡೆಯುತ್ತಾನೆ.

ಈ ಶಾಂತಿಯೇ ಪ್ರೇರಣೆಯಾಗಿ ಒಮ್ಮೊಮ್ಮೆ ಹೃದಯದಲ್ಲಿ ತಳಮಳವನ್ನು ಎಬ್ಬಿಸುತ್ತದೆ. ಈ ತಳಮಳವೆ ಕೃತಿಸೃಷ್ಟಿಗೆ ಪ್ರಚೋದನೆಯನ್ನು ಕೊಡುತ್ತದೆ. ಜೀವನದ ಶಾಂತಿಯಲ್ಲಿ ಹೃದಯದ ತಳಮಳದ ತೃಪ್ತಿಗಾಗಿ ಸಾಹಿತ್ಯ ಸೃಷ್ಟಿ. ಈ ಸೃಷ್ಟಿಯಲ್ಲಿ ಮತ್ತೆ ಶಾಂತಿ.

ಲೇಖಕನು ಅನುಭವಿಸುವ ಮಹಾಬೇನೆ ಇದು. ಬೇನೆ ಹೆಚ್ಚಾದಷ್ಟು ಕೃತಿಸೃಷ್ಟಿಗೆ ರಸಪೂರ್ಣತೆ. ಲೇಖಕನ ಈ ನೋವಿನಲ್ಲಿ ಸಾಹಿತ್ಯದ ಅವನ ಕೃತಿ ಸಂತೋಷವನ್ನು ಕೊಡುತ್ತದೆ. ಓದುಗರ ಒಂದೆರಡು ತಾಸಿನ ಸಂತೋಷಕ್ಕಾಗಿ ಬರಹಗಾರನ ನೋವು ಹೃದಯದ ಕುಲುಮೆಯಾಗುತ್ತದೆ. ಈ ಅನಂತ ಸಹನೆಯ ಸಾಕಾರಮೂರ್ತಿಯಾದ ಸಾಹಿತಿ ಜೀವನದ ಕಹಿ ಕಷಾಯಗಳನ್ನೆಲ್ಲ ತಾನು ಕುಡಿದು ಅಮೃತವನ್ನು ಜನಕ್ಕೆ ನೀಡುತ್ತಾನೆ.

ಇದು ಕಾದಂಬರಿಕಾರನ ಮಹತಿ.

ಈ ಮಹತಿ ಒಂದೆರಡು ದಿನಗಳಲ್ಲಿ ಬರುವ ಆಕಸ್ಮಿಕವಲ್ಲ, ನಿರಂತರ ಧ್ಯಾನ, ಅವಿರತ ಕೆಲಸ, ಇವುಗಳಿಂದ ಪಕ್ವವಾದ ಮನಸ್ಸು ಸಂತೃಪ್ತಿಯನ್ನು ಹೊಂದದೆ 'ನಡೆ ಮುಂದೆ' ಎಂದು ಹೇಳುತ್ತಿರಬೇಕು.

ನನ್ನ ಅತೃಪ್ತಿಯೇ ನನಗೆ ಪ್ರಚೋದನೆ. ಈ ಅತೃಪ್ತಿಯ ಸಂತೃಪ್ತಿಯಲ್ಲಿ ಸಾಹಿತ್ಯ ನನಗೆ ಪೂರ್ಣಕುಂಭದ ಅವಕಾಶವನ್ನು ಕೊಡುತ್ತದೆ. ಈ ಅವಕಾಶದಲ್ಲಿ ಪ್ರೀತಿ ತುಂಬಿದೆ. ಆದುದರಿಂದ ನನಗೆ ದುಡಿತದಲ್ಲಿ ದಣಿವಿಲ್ಲ; ಸಂತೋಷವಿದೆ. ಜೀವನದ ವೈವಿಧ್ಯ ಸಮಾರಂಭದ ಸಮೀಚೀನವಾದ ಸಾಮಗ್ರಿಯಲ್ಲಿ ನನ್ನ ಜೀವ ಪಕ್ಕಗಳನ್ನು ಪಡೆಯುತ್ತಿದೆ. ಕೆಲಸದಲ್ಲಿನ ವೈವಿಧ್ಯವೇ ನನಗೆ ವಿಶ್ರಾಂತಿ. ಇದೇ ನನ್ನ ಅವಿರತ ಕೆಲಸದ ಒಳಗುಟ್ಟು ಎಂದು ಹೇಳಬೇಕು.

೩

ಅನೇಕ ಮಿತ್ರರಲ್ಲಿ ನಾನು ಬರೆಯುವ ಕಾಲ, ಸಮಯ ಮೊದಲಾದವುಗಳ ಬಗ್ಗೆ ಕುತೂಹಲವಿದೆ. ಸಾಮಾನ್ಯನಲ್ಲಿ ಅಸಾಮಾನ್ಯತೆಯನ್ನು ನಿರೀಕ್ಷಿಸುವ ಕಾರಣವಿಲ್ಲ. ಕಾದಂಬರಿಕಾರನು ಸಾಮಾನ್ಯನಾಗದಿದ್ದರೆ ಜೀವನದ ಪರಿಸರದ ವಿಜೃಂಭಣೆ ಹೇಗೆ ಗೊತ್ತಾದೀತು?

ನಾನು ರಾತ್ರಿ ಎಂದೂ ಬರೆಯುವದಿಲ್ಲ. ಬೆಳಗು ಮುಂಜಾನೆ ಮೂರುವರೆ— ಇಲ್ಲವೆ ನಾಲ್ಕು ಗಂಟೆಗೆ ಎದ್ದು ಕೆಲಸಕ್ಕೆ ತೊಡಗುತ್ತೇನೆ, ಇದು ನಾಲ್ಕು ತಾಸಾದರೂ ನಡೆಯಬೇಕು. ಅಲ್ಲಿಂದ ಸಾಲೆಗೆ ಹೋಗುವ ವರೆಗೆ ಸಂಸಾರದ ಕೆಲಸ. ಮಕ್ಕಳೊಡನೆ ಚರ್ಚೆ. ಸಾಯಂಕಾಲ ಮೂರು—ನಾಲ್ಕು ಮೈಲು ಸುತ್ತಾಟ. ರಾತ್ರಿ ಹತ್ತು ಗಂಟೆಯ ವರೆಗೆ ವಾಚನ. ರೇಡಿಯೋ ಸಂಗೀತ ಶ್ರವಣ. ನಾನು ಬರೆಯುತ್ತಿರುವಾಗಲೂ ರೇಡಿಯೋ ಮಂದವಾಗಿ ಜಿನುಗುತ್ತಿರುತ್ತದೆ. ವಾರದಲ್ಲಿ ಎರಡು ದಿನ ನಾನು ಬರೆಯುವದಿಲ್ಲ. ಒಂದು ದಿನ ಪೂರ್ಣ ವಿಶ್ರಾಂತಿ. ಮತ್ತೊಂದು ದಿನ ಓದುಗರಿಂದ ಬಂದ ಪತ್ರವಾಚನ. ಯೋಗ್ಯವಾದವುಗಳಿಗೆ ಉತ್ತರ. ಇದಲ್ಲದೆ ಬರೆಯಬೇಕೆಂದಾಗ ಮಾತ್ರ ನಾನು ಬರೆಯುತ್ತೇನೆಯೇ ಹೊರತು ಏನಾದರೂ ಬರೆಯಲೇಬೇಕೆಂಬ ಹಟದಲ್ಲಿ ನಾನು ಬರೆಯುವದಿಲ್ಲ. ಈ ಚಕ್ರವು ನನಗೆ ನೀರಸ ಪರಿಭ್ರಮಣವಾಗದೆ ರಸದೊರತೆಯನ್ನು ತೋಡುತ್ತದೆ. ಈ ಕೆಲಸ ನನಗೆ ಶ್ರಮವಾಗಿಲ್ಲ; ಅಂತೆಯೇ ನನ್ನ ಆರೋಗ್ಯ ಈ ಐವತ್ತೆರಡನೆಯ ವಯಸ್ಸಿನಲ್ಲಿಯೂ ಸರಿಯಾಗಿಯೇ ಇದೆ. ನಾನು ಸೃಷ್ಟಿಸುತ್ತಿರುವ ಪಾತ್ರಗಳಲ್ಲಿನ ತನ್ಮಯತೆಯೂ ಇದಕ್ಕೆ ಕಾರಣವಾಗಿರಬೇಕು.

ಕಾದಂಬರಿಯ ವ್ಯಾಪಕತೆಯಲ್ಲಿ ಕಾದಂಬರಿಕಾರನ 'ಅವಿರತ ಕೆಲಸ' ಅನಿವಾರ್ಯವಾಗಿರುತ್ತದೆ. ಜೀವನಾಭ್ಯಾಸವೇ ಕಾದಂಬರಿಕಾರನ ಈ ಕೆಲಸದ ಒಳಗುಟ್ಟು ಆಗಿರುವದರಿಂದ ಅವನಿಗೆ ವಿಶ್ರಾಂತಿ ಸಿಗದಿದ್ದರೂ ಜೀವನಾಭ್ಯಾಸದಲ್ಲಿ ಅಪೂರ್ವವಾದ ಶಾಂತಿ ಸಿಗುತ್ತದೆ. ಕುತೂಹಲ ತನ್ಮಯತೆಯನ್ನು ತರುತ್ತದೆ.

ಈ ಶಾಂತಿಯೇ ವಿಶ್ರಾಂತಿ.

ಈ ಮಾತುಗಳನ್ನು ತುಸು ವಿಸ್ತಾರವಾಗಿ ನನ್ನ 'ಮಾತಿನ ಮಲ್ಲಿ'ಯ ಅರಿಕೆಯಲ್ಲಿ ಹೇಳಿದ್ದೇನೆ. ಈ ಲೇಖನದ ಹಿನ್ನೆಲೆ ಇದರಿಂದ ಸಿಗಬಹುದಲ್ಲದೆ ನನ್ನ ಜೀವನದ ಕೆಲವು ಸೂತ್ರಗಳೂ ಇಲ್ಲಿ ಕಾಣಸಿಗಬಹುದಾಗಿದೆ.

"....ಕನ್ನಡ ಸಾಹಿತ್ಯಶಾರದೆ ಕನ್ನಡ ಸಾರಸ್ವತಸಂಪತ್ತಿಗೆ ನೀಡುತ್ತಿರುವ ಅಮೋಘವಾದ ಕಾಣಿಕೆ ಇದು. ಕಾದಂಬರಿ ಸರಸ್ವತಿಯ ರತ್ನಪ್ರಭೆ. ಈ ಬೆಳಕಿನ ದಾರಿಗುಂಟ ನಡೆಯುವ ಜನ, ಸಾಮಾನ್ಯರಿಂದ ಅಸಾಮಾನ್ಯರ ವರೆಗೆ ಹಿಂಡು ಹಿಂಡಾಗಿರುತ್ತಾರೆ.... ಕಾದಂಬರಿಯು ಜೀವನಪ್ರದರ್ಶನದ ಜೊತೆಗೆ ಜೀವನದರ್ಶನವನ್ನೂ ನೀಡುತ್ತದೆ... ಪ್ರಜಾಪ್ರಭುತ್ವದ ರಾಜಕೀಯದಲ್ಲಿ ಸಾಹಿತ್ಯವು ಸಾರ್ವಜನಿಕ ಸಂಪತ್ತು ಆಗಬೇಕಾಗಿರುವದು ಅನಿವಾರ್ಯವಾಗಿದೆ. ಜನಜೀವನದ ಹೃದಯಸಂಪತ್ತು ಘನತೆಯನ್ನು ಪಡೆಯಬೇಕಾಗಿದೆ. ಸಾಮಾನ್ಯರಲ್ಲಿ ಹೃದಯ ವೈಶಾಲ್ಯವು ಬೆಳೆಯಬೇಕಾಗಿದೆ. ಜನಜೀವನದಲ್ಲಿಯ ಕೊಳಚೆ ಶುದ್ಧವಾಗಿ ಅಲ್ಲಿ ಪಾವನತೆ ನೆಲಿಸಬೇಕಾಗಿದೆ.

ಈ ಕೆಲಸವನ್ನು ಈಗ ಕಾದಂಬರಿ ಮಾಡಬೇಕಾಗಿದೆ.... ಕಾದಂಬರಿ ಅನಂತಮುಖಿಯಾದ ಶಾರದೆಯಾಗಿದ್ದಾಳೆ. ಜೀವನದ ಮೆರವಣಿಗೆಯಲ್ಲಿ ಕಾದಂಬರಿ ಹೊಂಬೆಳಕನ್ನು ಚೆಲ್ಲುವ ಹೊನ್ನರಾಣಿಯಾಗಿದ್ದಾಳೆ. ಸಾಮಾನ್ಯಜೀವನದಲ್ಲಿ ಜೀವನದರುಚಿಯನ್ನು ಹೆಚ್ಚಿಸಲು, ಅದರ ಶ್ರೇಷ್ಠತೆಯನ್ನು ತಿಳಿಸಲು ಈ ಪ್ರಕಾರವು ಪರಿಣಾಮಕಾರಿಯಾಗಿದೆ. ಸಮಾಜದ ಸಾಂಘಿಕಜೀವನದ ಮಹತಿಯನ್ನು ಪ್ರತಿಭಾಪೂರ್ಣವಾಗಿ ಬಿಂಬಿಸುವ ಸಾಧನೆಗೆ ಕಾದಂಬರಿಸಾಹಿತ್ಯ ಸಿದ್ಧಿಯಾದ ಪ್ರಕಾರವಾಗಿದೆ.

ಕಾದಂಬರಿಕೂಸಿಗೆ ಸಮಾಜವೇ ತಾಯಿ, ಅದೇ ತಾಯಿಬೇರು. ಸಮಾಜದ ನಾಡಿಯನ್ನು ಮಿಡಿಯುವದೇ ಕಾದಂಬರಿಗೆ ರಸಪುಷ್ಟಿ. ಇದರ ಚಿತ್ರಣವೆ ಕಾದಂಬರಿಯ ಕೆಲಸ. ಈ ಯೋಗ್ಯ ಚಿತ್ರಣವನ್ನು ಚಿತ್ರಿಸದ ಕಾದಂಬರಿ ಕುರುಡನು ಹಿಡಿದ ತುಪಾಕಿ.... ....ಜೀವನದ ಗತಿಯೇ ಕಾದಂಬರಿಯ ಸ್ಥಿತಿ.

ನನ್ನ ದಿನಚರಿಯಂತಿರುವ ಈ ಅರಿಕೆಗಳನ್ನು ಓದಿದಾಗ ನನ್ನ ಅವಿರತ ಕೆಲಸದ ಒಳಗುಟ್ಟಿನ ಕಲ್ಪನೆ ತುಸುವಾಗಿಯಾದರೂ ಬಂದೀತೆಂದು ಭಾವಿಸುತ್ತೇನೆ.






## ಬಂತು ಬಂತು ದೀಪಾವಳಿ ಬಂತು

ಬಂತು ಬಂತು ದೀಪಾವಳಿ ಬಂತು
ನಮ್ಮೆಲ್ಲರಿಗೆ ಹರುಷವ ತಂತು
ಎಲ್ಲ ಕಡೆಗೆ ಸಂತೋಷ ಬಂತು
ಹೊಸ ಉಡುಪು ಧರಿಸಲು ತಂತು ॥ ೧ ॥
ಬಾಣ ಹಾರಿಸಲು ಬಂತು
ಮದ್ದಿನ ಶಬ್ದ ಕೇಳಿಬಂತು
ಬೆಳಗ್ಗೆ ಏಳಲು ಬಂತು
ನಮ್ಮೆಲ್ಲರಿಗೂ ಆರುತಿ ಮಾಡಲು ಬಂತು ॥ ೨ ॥
ಲಕ್ಷ್ಮೀಪೂಜೆ ಗೈಯಲು ಬಂತು
ದೇಶದ ಅಜ್ಞಾನ ಕಳೆಯಲು ಬಂತು
ಜ್ಞಾನದ ದೀಪ ಬೆಳಗುತ ಬಂತು
ವಿಜ್ಞಾನದ ಹೊಸ ಪ್ರಯೋಗ ಮಾಡುತ ಬಂತು ॥ ೩ ॥
ಹಳೆಯ ಜಗಳ ಕಳೆಯಲು ಬಂತು
ಹೊಸ ಐಕ್ಯವ ಸಾರುತ ಬಂತು
ಪಂಚಾಯತಿ ರಾಜ್ಯ ಸ್ಥಾಪಿಸುತ ಬಂತು
ರಾಮರಾಜ್ಯದ ಸಂದೇಶ ತಂತು ॥ ೪ ॥
ಪಂಚವಾರ್ಷಿಕ ಯೋಜನೆ ಕೈಗೂಡಿಸಲು ಬಂತು
ಬಾಪೂಜೀಯ ಕನಸು ನನಸಾಗುತ ಬಂತು

**ಶ್ರೀವಲ್ಲಭ ಪ್ರಲ್ಹಾದರಾವ ಧಾರವಾಡ**
ಕುಮಟಾ- ಸ. ಸಂ. ೧೫೫೬

## ಪ್ರಾರ್ಥನೆ

ಭಾವ ತುಂಬಿ ಬೆಳಗುತಿದೆ ಬೆಳಗು ಆರತಿ ।
ಎಲ್ಲೆಡೆಗು ಜಯಘೋಷ ಮೊಳಗುತಿಹುದು
ಪ್ರಶಾಂತಜ್ಯೋತಿಯು ಬೆಳಗುತಿಹುದು ॥ ೧ ॥
ಮಾತೆ ಕರುಣೆಯಿಂದ ಆರತಿಯು ಎತ್ತಿ ಹಳು ।
ಚುರುಚುರು ಕಡ್ಡಿಗಳು ನಗು ನಗುತಿವೆ
ಸುರುಬಾಣ ಪಟಾಕಿಗಳು ಹಾರುತಿವೆ ॥ ೨ ॥
ಪ್ರಾರ್ಥಿಸುವೆ ಕರಜೋಡಿಸಿ ಜಯದೇವಿಯೇ ।
ದೀಪಕಂಡು ಇರುಳು ಓಡಿತು
ಆನಂದ ಮಕರಂದವೆರಡು ಕೂಡಿತು ॥ ೩ ॥
ವಂದಿಸುವೆ ಜಗದೀಶ ಶ್ರೀರಂಗ ಕೃಷ್ಣ ।

**ಕುಮಾರ ಸುರೇಶ ವಾ. ದೇಶಪಾಂಡೆ**
ಮೈಸೂರು (ಸ. ಸಂ. ೪೩೭)



ಬರೆದವರು :

**ಶಿಶು ಸಂಗನೋಶ**

# ಪತ್ರಿಕೆ ತಕ್ಕ ಶಿಕ್ಷೆ



" ಅವ್ವಾ ! ಅವ್ವಾಽ ಒಂದು ಕೆಲಸ ಸಿಕ್ಕಿತು " ಎನ್ನುತ್ತ ಗಾರ್ದಭಕುಮಾರನು ಓಡಿಬಂದನು.

" ಎಂಥ ಕೆಲಸವಪ್ಪಾ ? " ಎಂದು ತಾಯಿ ಕೇಳಿದಳು.

" ಕರ್ನಾಟಕ ಪತ್ರಿಕೆಯನ್ನು ಹಂಚುವ ಕೆಲಸ ! ಎಜೆಂಟರು ನಾಳೆ ಬರಬೇಕೆಂದು ಹೇಳಿದ್ದಾರೆ. ಹೆಸರಿನ ಪಟ್ಟಿ ಕೊಡುತ್ತಾರಂತೆ. ಅವರವರ ಮನೆಗೆ ಹೋಗಿ ಕೊಟ್ಟುಬರಬೇಕಂತೆ. ಒಂದು ಪ್ರತಿ ಕೊಟ್ಟು ಬಂದರೆ ಒಂದು ಪೈಸೆ ಕೊಡುತ್ತಾರೆ. ಐವತ್ತು ಮನೆಗೆ ಕೊಟ್ಟರೆ ಅರ್ಧ ರೂಪಾಯಿ. ಹೆಚ್ಚಿಗೆ ಕೊಟ್ಟರೆ ಹೆಚ್ಚು ಹಣ ಸಿಗುತ್ತದೆ" ಎಂದು ಒಂದೇ ಉಸಿರಿನಲ್ಲಿ ಹೇಳಿದನು.

" ಸಾಲೆ ಬಿಡುತ್ತೀಯೇನು ?" ತಾಯಿ ಕೇಳಿದಳು.

" ಸಾಲೆ ಬಿಡುವದಿಲ್ಲವ್ಮ! ಮುಂಜಾನೆ ಸಾಲೆಗೆ ಹೋಗಿ ಬಂದ ಮೇಲೆ ಊಟಮಾಡಿ ಹೋಗುತ್ತೇನೆ. ಅಷ್ಟರಲ್ಲಿ ಬಸ್ಸು ಬಂದಿರುತ್ತದೆ. ಪತ್ರಿಕೆ ತಂದು ಹಂಚುತ್ತೇನೆ. ಮತ್ತೆ ಮಧ್ಯಾಹ್ನ ಶಾಲೆಗೆ ಹೋಗುತ್ತೇನೆ."

"ಅಷ್ಟು ಬೇಗ ಹಂಚುತ್ತೀ ಏನು ?"

" ಅವರು ಸಾಯಕಲ್ಲ ಕೊಡುತ್ತಾರವ್ಮ! ಬೇಗ ಬೇಗನೆ ಕೊಟ್ಟು ಹೋಗುತ್ತೇನೆ." ಕುಮಾರ ಹೇಳಿದನು.

"ಏನೋ ನೋಡಪ್ಪಾ, ನನಗೇನೂ ತಿಳಿಯುವದಿಲ್ಲ. ಶಾಲೆ ತಪ್ಪಿಸಬೇಡ—ತೀರಿತು." ತಾಯಿಹೇಳಿ ತನ್ನ ಕೆಲಸಕ್ಕೆ ಹೋದಳು.

ಮರುದಿನ ಮುಂಜಾನೆ ಶಾಲೆ ಬಿಡುವದೊಂದೇ ತಡ. ಗಾರ್ದಭಕುಮಾರನು ಓಡಿ ಮನೆಗೆ ಬಂದನು. ಗಬಗಬನೆ ಊಟ ಮುಗಿಸಿದನು. ಪತ್ರಿಕೆಯ ಎಜಂಟರ ಕಡೆಗೆ ಬಂದನು. ಅಷ್ಟರಲ್ಲಿ ಪತ್ರಿಕೆಗಳು ಬಂದಿದ್ದವು. ಒಂದು ಓಣಿಯಲ್ಲಿಯ ಗಿರಾಕಿಗಳ ಪಟ್ಟಿ ಕೊಟ್ಟರು. "ದಿನವೂ ಸರಿಯಾಗಿ ಯಾರ ಮನೆಯನ್ನೂಬಿಡದೆ ಹಂಚಿಬರಬೇಕು" ಎಂದು ಹೇಳಿದರು. ಕುಮಾರನು ಪತ್ರಿಕೆಯ ಚೀಲವನ್ನು ಹೆಗಲಿಗೆ ಹಾಕಿದನು. ಸಾಯಕಲ್ಲ ಏರಿದನು. ಬೇಗ ಬೇಗನೆ ಪತ್ರಿಕೆ ಕೊಡಬೇಕು. ಶಾಲೆಗೆ ಹೋಗಬೇಕು ಎಂದು ಜೋರಾಗಿ ಸಾಯಕಲ್ಲ ತುಳಿದನು.

ಮೊದಲನೆಯ ಮನೆಯೇ ಕರಡಿಕಾಕಾನದು. ಕರಡಿಕಾಕಾ ಆರಾಮ ಕುರ್ಚಿಯಲ್ಲಿ ಹೊಟ್ಟೆಯ ಮೇಲೆ ಕೈಯಾಡಿಸುತ್ತ ಕುಳಿತಿದ್ದನು. ಕುಮಾರನು ಬಾಗಿಲಲ್ಲೇ ನಿಂತು 'ಪೇಪರ್' ಎಂದು ಕೂಗಿದನು. ಪತ್ರಿಕೆ ಎಸೆದು ಮುಂದೆ ಹೋದನು.



ಪತ್ರಿಕೆ ಭರ್‍ರೆಂದು ಬಂದು ಕಾಕಾನ ಮೂಗಿಗೆ ಬಡಿಯಿತು. ಮೆತ್ತನ್ನ ಮೂಗು ಮುದ್ದೆಯಾಯಿತು. "ನಾಳೆ ಬರಲಿ ಇವನಿಗೆ ಬುದ್ಧಿ ಕಲಿಸುತ್ತೇನೆ" ಎಂದು ಗೊಣಗುತ್ತಾ ಪತ್ರಿಕೆ ಓದತೊಡಗಿದನು.

ಎರಡನೆಯ ಮನೆ ಆಲದಗಿಡದ ಅಳಿಲಮ್ಮನದು. ಅಳಿಲಮ್ಮನು ಮನೆಯ ಮುಂದೆ ಕಾಯಿಯ ರುಚಿ ನೋಡುತ್ತ ಕುಳಿತಿದ್ದಳು. ಅಷ್ಟರಲ್ಲಿ 'ಪೇಪರ್' ಎಂದು ಕೂಗುತ್ತ ಕುಮಾರನು ಬಂದನು. ಫರ್‍ರನೆ ಪತ್ರಿಕೆ ಎಸೆದನು. ಅದು ಅಳಿಲಮ್ಮನ ಕೈಯಲ್ಲಿಯ ಕಾಯಿಗೆ ಬಡೆಯಿತು. ಧೊಪ್ಪನೆ ಕಾಯಿ ಕೆಳಗೆ ಬಿತ್ತು. ಪತ್ರಿಕೆ ಟೊಂಗೆಯ ಕೊಕ್ಕೆಗೆ ಸಿಕ್ಕಿತು. " ನಾಳೆ ಬರಲಿ, ಇವನಿಗೆ ಬುದ್ಧಿ ಕಲಿಸುತ್ತೇನೆ " ಎಂದು ಗೊಣಗುತ್ತಾ ಸಾವಕಾಶ ಪತ್ರಿಕೆ ತೆಗೆದುಕೊಂಡಳು.

'ಪೇಪರ್' ಎಂದು ಕೂಗಿ ಕಿಟಕಿಯಿಂದ ಪತ್ರಿಕೆ ಒಗೆದು ಹೋದನು. ಅದು ನರಿರಾಯನ ಮನೆ. ರಾಯರು ಕಿಟಕಿಯ ಮಗ್ಗಲು ಆರಾಮವಾಗಿ ಗೊರಕೆ ಹೊಡೆಯುತ್ತ ಮಲಗಿದ್ದರು. ಪೇಪರು ಅವರ ಮೇಲೆ ಬಿತ್ತು. ಗಾಬರಿಯಾಗಿ ಎದ್ದು ನೋಡುತ್ತಾರೆ. ಪತ್ರಿಕೆ !

"ಯಾವನವನು ಪತ್ರಿಕೆ ಒಗೆದವನು ?" ಎಂದು ಕೂಗಿದರು. ಅಲ್ಲಿ ಯಾರೂ ಇರಲಿಲ್ಲ. ಪಕ್ಕದಲ್ಲಿದ್ದ ಫೋನಿಗೆ ಕೈ ಹಾಕಿದರು. ಪತ್ರಿಕೆಯ ಎಜಂಟನೊಡನೆ ಮಾತಾಡಿದರು.

"ಹಲೋ ಏಜಂಟರೇನು ? "

"ಹೌದು. ತಾವು ಯಾರು ಮಾತಾಡುವವರು ?" ಎಜಂಟ ಕೇಳಿದನು.

"ನಾನು ನರಿರಾಯ. ನಿಮ್ಮ ಪತ್ರಿಕೆ ಕೊಡುವ ಹುಡುಗನಿಗೆ ತಿಳಿಸಿರಿ. ಅವನು ಸಿಕ್ಕ ಸಿಕ್ಕ ಹಾಗೆ ಪತ್ರಿಕೆ ಒಗೆದುಹೋಗುತ್ತಾನೆ. ಮಲಗಿದಾಗ್ಗೆ ನನ್ನ ಮೇಲೆ ಬಿತ್ತು. ನನ್ನ ನಿದ್ದೆ ಹಾಳಾಯಿತು" ಎಂದು ಕೂಗಿದರು.

"ಕ್ಷಮಿಸಿರಿ. ಅವನು ಹೊಸಬನು. ಇದು ಮೊದಲನೆಯದಿನ. ತಿಳಿಸುತ್ತೇನೆ. ಕ್ಷಮಿಸಿರಿ" ಎಂದು ಎಜಂಟನು ಕೇಳಿಕೊಂಡನು.

ಕರಡಿಕಾಕಾ ಕಾಗದ ಬರೆದು ತಿಳಿಸಿದ್ದನು.

"ಮಹನೀಯರೇ.

ನಿಮ್ಮ ಪತ್ರಿಕೆ ಕೊಡುವ ಹುಡುಗನಿಗೆ ತಿಳಿಸಿರಿ, ಅವನು ಸಿಕ್ಕ ಸಿಕ್ಕ ಹಾಗೆ ಪತ್ರಿಕೆ ಬೀಸಿ ಒಗೆಯುತ್ತಾನೆ. ಇಂದು ನನ್ನ ಮೂಗಿಗೆ ಬಡಿದು ಮೂಗಿನ ಹೊಳ್ಳೆ ಹರಿಯಿತು. ಹೀಗಾದರೆ ನಿಮ್ಮಲ್ಲಿಂದ ಪತ್ರಿಕೆ ತರಿಸುವದನ್ನು ನಿಲ್ಲಿಸುತ್ತೇವೆ.

ನಿಮ್ಮ ವಿಶ್ವಾಸೀ
**ಕರಡಿಕಾಕಾ**

ಹೀಗೆ ಎಲ್ಲಕಡೆಯಿಂದ ತಕರಾರು ಬಂದಿದ್ದವು. ಪತ್ರಿಕೆಗಳನ್ನು ಕೊಟ್ಟು ಕುಮಾರನು ಅಂಗಡಿಗೆ ಹೋದನು.

" ನಿನ್ನ ಕಣ್ಣು ಕಾಣುವುದಿಲ್ಲವೇನು? ಎಚ್ಚರಿಕೆಯಿಂದ ಪತ್ರಿಕೆ ಕೊಡಬೇಕು, ಎಸೆಯಬಾರದು. ಇಲ್ಲವಾದರೆ ನಿನ್ನನ್ನು ಕೆಲಸದಿಂದ ತೆಗೆಯುತ್ತೇವೆ" ಎಂದು ಎಜಂಟನು ಬೆದರಿಕೆ ಹಾಕಿದನು.

" ಇಲ್ಲ. ನಾಳೆ ಹೀಗೆ ಎಸೆಯುವದಿಲ್ಲ" ಎಂದು ಕುಮಾರನು ಹೇಳಿದನು.

ಕುಮಾರನಿಗೆ ಥರ್ರನೆ ಪತ್ರಿಕೆ ಒಗೆಯುವದು ಮೋಜಿನದಾಗಿತ್ತು. ಮರುದಿನ ಪತ್ರಿಕೆ ಎಸೆದೇ ಬಂದನು, ಅದರ ಮರುದಿನವೂ ಎಸೆದನು.

ದಿನಾಲು ಒಂದೊಂದು ಕಡೆಯಿಂದ ಒಂದೊಂದು ತಕರಾರು ಬಂದೇ ಬಂದವು.

ಕೊನೆಗೆ ಹಣ ವಸೂಲು ಮಾಡುವ ದಿನ ಬಂದಿತು. 'ಗಾರ್ದಭ ಕುಮಾರನಿಗೆ ಚನ್ನಾಗಿ ಬುದ್ಧಿ ಕಲಿಸಬೇಕು' ಎಂದು ಎಲ್ಲರೂ ಹಂಚಿಕೆ ಹಾಕಿದರು.

ಕರಡಿಕಾಕಾನ ಮನೆಗೆ ಹೋದನು. 'ಪೇಪರ' ಎಂದು ಕೂಗಿ ಕೊಟ್ಟನು. "ಬಿಲ್ಲು ತೆಗೆದುಕೊಳ್ಳಿರಿ. ಎರಡು ರೂ. ಕೊಡುವಿರಾ" ಎಂದು ಕೇಳಿದನು.



" ಇದೋ ತಗೆದುಕೋ! ನೀನು ಎಲ್ಲಿ ಪೇಪರು ಒಗೆದಿರುವಿಯೋ ಅಲ್ಲಿದೆ ಹಣ" ಎಂದು ಕರಡಿ ಕಾಕಾ ತನ್ನ ಮೂಗಿನ ಮೇಲೆ ಎರಡು ರೂಪಾಯಿಯ ನೋಟನ್ನು ಇಟ್ಟನು.

'ಅದನ್ನು ಹೇಗೆ ತೆಗೆದುಕೊಳ್ಳಬೇಕು? ತೆಗೆದುಕೊಳ್ಳುವಾಗ ಕೈ ಕಾಕಾನ ಬಾಯಲ್ಲಿ ಹೋದರೆ?' ಎಂದು ವಿಚಾರಿಸುತ್ತ— "ತಪ್ಪಾಯಿತು. ಇನ್ನೊಮ್ಮೆ ಹೀಗೆ ಒಗೆಯುವದಿಲ್ಲ" ಎಂದು ಬೇಡಿಕೊಂಡನು.

"ಇನ್ನೊಮ್ಮೆ ನಾನೂ ಹೀಗೆ ಇಡುವದಿಲ್ಲ. ಈಗ ತೆಗೆದುಕೊ" ಎಂದು ಹೇಳಿ ಕಾಕಾನು ಓದುತ್ತ ಕುಳಿತನು.

ಕುಮಾರನು ಸರ್ರನೆ ಓಡಿಬಂದನು. ನೋಟನ್ನು ತೆಗೆದುಕೊಂಡು ಭರ್ರನೆ ಓಡಿಹೋದನು.

ಅಳಿಲಮ್ಮನು ಗಾರ್ದಭಕುಮಾರನು ಬರುವದನ್ನು ಕಂಡಳು. ಟೊಂಗೆಯ ಕೊಕ್ಕಿಗೆ ನೋಟನ್ನು ತೊಡಕಿಸಿದಳು. " ಇದೊ ಇಲ್ಲಿದೆ ನಿನ್ನ ಬಿಲ್ಲು. ನೀನು ಎಲ್ಲಿ ಪತ್ರಿಕೆ ಒಗೆದಿಯೋ ಅಲ್ಲಿದೆ" ಎಂದು ಹೇಳಿದಳು.



ಕುಮಾರನಿಗೆ ಗಿಡ ಏರಲು ಬರುತ್ತಿರಲಿಲ್ಲ. ಸಾಯಕಲ್ ಬೊಡ್ಡೆಗೆ ಆನಿಸಿದನು. ಅದರ ಮೇಲೆ ಏರಿ ಟೊಂಗೆ ಹಿಡಿದನು. ಸಾಯುಕಲ್ ಸರಕ್ಕನೆ ಸರಿಯಿತು. ಹಾಗೇ ಟೊಂಗೆ ಹಿಡಿದು ಜೋತಾಡಿದನು. ನೋಟು ತಗೆದುಕೊಂಡು ಜಿಗಿಯಬೇಕಾದರೆ ಸಾಕಾಯಿತು.



ಹುಲ್ಲಿನ ಮನೆ ಮೊಲಣ್ಣನು ನೋಟನ್ನು ಪೇಪರು ಬಿದ್ದ ಮನೆಯ ಮಗ್ಗಲಿನ ರೊಜ್ಜಿನ ಮೇಲೆ ಇಟ್ಟಿದ್ದನು. ನೋಟು ನೆನೆದು ಹೋಗಿತ್ತು. ನೋಟು ತೆಗೆದುಕೊಳ್ಳಲು ಕುಮಾರನು ಸೊಂಟಮಟ ಕೆಸರಿನಲ್ಲಿ ಮುಳಗಿದನು. ಕೈ-ಕಾಲು-ಅರಿವೆಗಳೆಲ್ಲ ಹೊಲಸಾದವು.

ನರಿರಾಯನು ಕಿಟಕಿಯ ಚೌಕಟ್ಟಿನ ಮೇಲೆ ರೂಪಾಯಿಯಿಟ್ಟು ಕುಳಿತಿದ್ದನು. ರಾಯರ ಮನೆಯಲ್ಲಿಯ ಸ್ಟೂಲು-ಪೆಟ್ಟಿಗೆಗಳನ್ನು ಒಂದರ ಮೇಲೊಂದು ಇಟ್ಟನು. ಸಾವಕಾಶವಾಗಿ ಏರಿದನು. ರೂಪಾಯಿ ತೆಗೆದುಕೊಂಡು ಇಳಿಯುವಾಗ್ಗೆ ಪೆಟ್ಟಿಗೆ ಸರಕ್ಕನೆ ಸರಿಯಿತು. ಕುಮಾರನು ದೊಪ್ಪನೆಬಿದ್ದನು. ಮೈ-ಕೈ ನೋವಾಯಿತು. ಈಗ ಬುದ್ಧಿ ಬಂತು.



ಎಲ್ಲ ಕಡೆಯಿಂದ ಹಣ ಕೂಡಿಸಿಕೊಂಡು ಬರುವಷ್ಟರಲ್ಲಿ ವೇಳೆಯಾಯಿತು. ಏಜೆಂಟನು, "ಹೀಗೆ ತಡಮಾಡಿದರೆ ಹೇಗೆ?" ಎಂದು ಗದರಿಸಿದನು. "ಇದೇನು! ನೋಟುಗಳು ನೆನೆದಿವೆ, ಹರಿದಿವೆ ಕಣ್ಣು ಕಾಣುವದಿಲ್ಲವೇ? ಇಂಥ ನೋಟು ತರಲು ತಿಳಿಯುವದಿಲ್ಲವೆ?" ಎಂದು ಬೈದನು.



ಕುಮಾರನು ನಡೆದ ಕಥೆಯನ್ನು ಹೇಳಿದನು.

'ತಪ್ಪಿಗೆ ತಕ್ಕ ಶಿಕ್ಷೆಯಾಗಿದೆ. ಇನ್ನು ಮುಂದೆ ಹೀಗೆ ಮಾಡಬೇಡ' ಎಂದು ತಿಳಿಹೇಳಿದನು ಏಜೆಂಟ.

ಅಂದಿನಿಂದ ಇಂದಿನ ವರೆಗೆ ಕುಮಾರನು ಪತ್ರಿಕೆಗಳನ್ನು ಕೈಯಲ್ಲಿ ಕೊಟ್ಟೇ ಹೋಗುತ್ತಿದ್ದಾನೆ.



ಬರೆದವರು : ಚಕ್ರಧಾರಿ

# ಮಂಡೂಕ ಕನ್ಯ

ಮಕ್ಕಳೆಲ್ಲ ನರಕಚತುರ್ದಶಿ ಫಲಾಹಾರ ಮುಗಿಸಿ ಆಟದಲ್ಲಿ ತೊಡಗಿದ್ದರು. ಆದರೆ ಅವರ ಮೂಗಿಗೆ ಪಕ್ವಾನ್ನಗಳ ಘಮ ಘಮ ವಾಸನೆ ಬಡಿಯತೊಡಗಿದಾಗ ಅವರ ಆಟವೇ ಮುಂದೆ ಸಾಗಲಿಲ್ಲ. ಒಳಗೆ ಬಂದು ತಾಯಿಯನ್ನು ಪೀಡಿಸತೊಡಗಿದರು. ಆಗ ಅವರ ಅಜ್ಜಿ ಮೊಮ್ಮಕ್ಕಳನ್ನು ತನ್ನ ಬಳಿಗೆ ಕರೆದಳು. ಸೊಸೆಗೆ ಬೇಗ ಅಡುಗೆ ಮುಗಿಸಲು ಹೇಳಿ ಆವರೆಗೆ ಅವರಿಗೆ ತಾನೊಂದು ಕಥೆ ಹೇಳುವದಾಗಿ ತಿಳಿಸಿದಳು. ಮಕ್ಕಳೆಲ್ಲ ಹೂಂಗುಟ್ಟಿದವು.

ಅಜ್ಜಿ ಹೇಳತೊಡಗಿದಳು: ದ್ವಾಪರಯುಗದ ಕೊನೆಯಲ್ಲಿ ಪೃಥ್ವಿಯನ್ನು ಪರೀಕ್ಷಿತ ರಾಜ ಆಳುತ್ತಿದ್ದ. ಅವನು ಬಹು ಧರ್ಮಿಷ್ಠನಾಗಿದ್ದ, ತುಂಬ ದಯಾಳುವಾಗಿದ್ದ, ಪ್ರಜಾಪಾಲಕನಾಗಿದ್ದ.

(ಕಿಲಾಡಿ ಕಿಟ್ಟು ಹೇಳಿದ: ಇವೆಲ್ಲ ಯಾರಿಗೆ ಬೇಕು. ಆದರೆ ಆ ಮಾತು ಅದು ಹೇಗೊ ಅಜ್ಜಿಗೆ ಕೇಳಿಸಿತು. ಕೇಳೊ ಕೇಳೊ ಒಳ್ಳೇ ಕತೆ ಇದು ಎಂದು ಹೇಳಿ ಮುಂದುವರಿಸಿದಳು.)

ಈ ಅರಸನ ರಾಜ್ಯದಲ್ಲಿ ಯಾವ ಕೊರತೆಯೂ ಇರಲಿಲ್ಲ. ಆಗ ಕಲಿಯು ಪ್ರವೇಶಿಸಬೇಕಾಗಿತ್ತು. ಅವನು ಅದಕ್ಕಾಗಿ ಸಮಯ ಕಾಯುತ್ತಿದ್ದ. ರಾಜನೊಮ್ಮೆ ಬೇಟೆಗೆ ಹೋದಾಗ ಕಲಿ ಕಾಣಿಸಿಕೊಂಡಾಗ ಅವನನ್ನು ಕೊಲ್ಲಲು ಹೆದೆಯೇರಿಸಿದ. ಆದರೆ ಕಲಿ ಅವನಿಗೆ ಶರಣು ಬಂದ. ಶರಣಾಗತರನ್ನು ಕಾಪಾಡುವುದು ಅರಸನ ಧರ್ಮ. 'ನಿನಗೇನು ಬೇಕು ?' ಎಂದು ಕೇಳಿದ. ತನಗಿರಲು ನಾಲ್ಕು ಸ್ಥಳಗಳು ಬೇಕೆಂದು ಕಲಿ ತಿಳಿಸಿದ. ಬಂಗಾರದಲ್ಲಿ, ಜೂಜುಗಾರರಲ್ಲಿ, ಮದ್ಯಪಾನ ಮಾಡುವವರಲ್ಲಿ ಹಾಗೂ ದುಷ್ಟ ಸ್ತ್ರೀಯರಲ್ಲಿ ನೀನು ವಾಸಿಸು ಎಂದು ರಾಜ ಹೇಳಿದ. ರಾಜನು ಬಂಗಾರದ ಒಡವೆ ಧರಿಸಿದ್ದ. ಅನಾಯಾಸವಾಗಿ ಕಲಿಗೆ ಅವನಲ್ಲಿ ಪ್ರವೇಶ ಸಿಕ್ಕಿತು.



ರಾಜ ಮತ್ತೊಮ್ಮೆ ಬೇಟೆಗೆಂದು ಹೋಗಿದ್ದ. ಅಲ್ಲೊಬ್ಬ ಸುರೂಪಿ ಸ್ತ್ರೀಯನ್ನು ಕಂಡನು. ಕಲಿಪ್ರಭಾವದಿಂದ ಅವನ ಬುದ್ಧಿ ಆಗಲೇ ಭ್ರಮಣಿಸಿತ್ತು. ತಾನು ರಾಜನೆಂಬುದನ್ನು ಮರೆತ. ತನ್ನನ್ನು ಮದುವೆಯಾಗಬೇಕೆಂದು, ಅವಳನ್ನು ಪ್ರಾರ್ಥಿಸಿಕೊಂಡ. ಅವಳು ಒಂದು ಕರಾರು ಹಾಕಿದಳು : ತಾನಿರುವಲ್ಲಿ ಕೆರೆ ಕಾಲುವೆಯಾಗಲಿ, ಬಾವಿಯಾಗಲಿ, ಹೊಳೆ-ಹೊಂಡಗಳಾಗಲಿ, ಜಲಾಶಯವಾಗಲಿ ಇರಕೂಡದು. ನೀರಿನ ಸಂಪರ್ಕವೇ ತನಗಾಗಬಾರದೆಂದು ಅವಳು ಹೇಳಿದಳು. ರಾಜನು ಕೂಡಲೇ ಅದಕ್ಕೆ ಒಪ್ಪಿಕೊಂಡುಬಿಟ್ಟನು. ಅವರ ಮದುವೆ ನಡೆದು ಹೋಯಿತು. ರಾಜನು ರಾಜ್ಯಭಾರ ಮರೆತು ಅವಳೊಂದಿಗೆ ಸರಸ-ಸಲ್ಲಾಪದಲ್ಲಿ ಮಗ್ನನಾದನು.

ಇದರಿಂದ ಮಂತ್ರಿಗಳು ಚಿಂತೆ ಮಾಡತೊಡಗಿದರು. ಕೊನೆಗೆ ಅವರು ಒಂದು ಉಪಾಯ ಕಂಡುಹಿಡಿದರು. ರಾಜಧಾನಿಯ ಹೊರಗೆ ಉದ್ಯಾನವೊಂದನ್ನು ನಿರ್ಮಿಸಿದರು. ಅಲ್ಲೊಂದು ಸ್ಫಟಿಕದ ಸರೋವರವನ್ನು ಅವರು ಏರ್ಪಡಿಸಿದ್ದರು. ಆದರೆ ಈ ಸಮಾಚಾರವನ್ನು ಅವರು ರಾಜನಿಗೆ ತಿಳಿಸದೆ ಉದ್ಯಾನದಲ್ಲಿ ತುಂಬ ವಿಹರಿಸಬಹುದೆಂದು ಹೇಳಿದರು. ರಾಜನಿಗೆ ಬಹಳ ಆನಂದವಾಯಿತು. ಮಂತ್ರಿಗಳ ಕಾರ್ಯವನ್ನು ಮೆಚ್ಚಿಕೊಂಡ. ಹೊಸ ರಾಣಿಯೊಂದಿಗೆ ಅಲ್ಲಿಗೆ ವಿಹರಿಸಲು ತೆರಳಿದ. ದಿನಾಲು ಅಲ್ಲಿಗೆ ಹೋಗತೊಡಗಿದರು. ಒಂದು ದಿನ ಅವರು ಕಣ್ಣುಮುಚ್ಚಾಲೆ ಆಡುವಾಗ ರಾಣಿಯ ಕಣ್ಣಿಗೆ ಬಟ್ಟೆ ಕಟ್ಟಿದ. ಅವಳು ಎಡವುತ್ತ ಮುಗ್ಗರಿಸುತ್ತ ಅಡ್ಡಾಡುತಿರಲು ತಿಳಿಯದೆ ನೀರಿಗಿಳಿದುಬಿಟ್ಟಳು. ನೀರಿಗಿಳಿದದ್ದೇ ತಡ ಕಣ್ಮರೆಯಾಗಿಬಿಟ್ಟಳು.

(ಮಕ್ಕಳಿಗೆಲ್ಲ ರಾಣಿ ನೀರಿಗಿಳಿದ ಕೂಡಲೇ ಕಣ್ಮರೆ ಏಕಾದಳು ತಿಳಿಯಲಿಲ್ಲ. ಹಾಗೇಕೆ ಆಗಬೇಕು ಎಂದುಕೊಂಡರು. ಅವರ ಮನಸ್ಸನ್ನು ಅರಿತ ಅಜ್ಜಿ ಕೇಳಿರೊ ಅವಳೇಕೆ ಕಣ್ಮರೆಯಾದಳೆಂಬುದನ್ನು ಹೇಳುತ್ತೇನೆ ಎಂದಳು.)

ಅರಸನು ಎಲ್ಲಿ ಹುಡುಕಿದರೂ ರಾಣಿಯು ಸಿಗದಾಗಲು ಸರೋವರದತ್ತ ಬಂದನು. ಅಲ್ಲೆಲ್ಲಿಯಾದರೂ ಅಡಗಿರಬೇಕು ಎಂದವನಿಗೆ ಸಂಶಯ. ಅಥವಾ ಕಾಲುಜಾರಿ ಬಿದ್ದಿದ್ದರೆ? ಕೂಡಲೇ ಆ ಸರೋವರದ ನೀರು ತೆಗೆಯಿಸಿದ. ಅದರ ಬುಡದಲ್ಲೊಂದು ಕಪ್ಪೆ ಅವನಿಗೆ ಕಂಡಿತು. ಇದೇ ತನ್ನ ರಾಣಿಯನ್ನು ನುಂಗಿರಬೇಕೆಂದು ಅವನಿಗೆ ಸಂದೇಹ. ಹೀಗಾಗಿ ರಾಜ್ಯದಲ್ಲಿಯ ಕಪ್ಪೆಗಳನ್ನೆಲ್ಲ ಸಂಹರಿಸಲು ಆಜ್ಞಾಪಿಸಿದನು.

ಕಪ್ಪೆಗಳ ರಾಜನಿಗೆ ಈ ಸುದ್ದಿ ತಿಳಿದು ಬೈರಾಗಿಯ ವೇಷದಲ್ಲಿ ರಾಜನ ಬಳಿಗೆ ಬಂತು. ಕಪ್ಪೆಗಳ ವಧೆ ನಿಲ್ಲಿಸಬೇಕೆಂದು ಕೇಳಿಕೊಂಡ ಆದರೆ ರಾಜನು ತನ್ನ ರಾಣಿ ಅಗಲಿದ ಸಿಟ್ಟಿನಲ್ಲಿಯೇ ಇದ್ದ 'ನನ್ನ ರಾಣಿಯನ್ನು ನುಂಗಿದ ಕಪ್ಪೆಗಳನ್ನು ವಧಿಸಲೇಬೇಕು' ಎಂದು ಹೇಳಿದ.



ಬೈರಾಗಿಕಪ್ಪೆ, ರಾಜನಿಗೆ, "ಮಹಾರಾಜ ಅವಳು ಕಪ್ಪೆ ರಾಜಕುಮಾರಿ ನನ್ನಮಗಳು. ಸ್ತ್ರೀವೇಷದಿಂದ ನಿನ್ನನ್ನು ಮರುಳುಮಾಡಿದ್ದಳು. ನೀರು ಕಂಡು ಮತ್ತೆ ಕಪ್ಪೆಯಾದಳು. ಅನೇಕರಿಗೆ ಈ ರೀತಿ ಮೋಸ ಮಾಡಿದ್ದರಿಂದ ಅವಳನ್ನು ನಾನು ಸಂಹರಿಸಿದೆ. ನಿನ್ನಲ್ಲಿ ಕಲಿ ಸೇರಿದ್ದೇ ಇಷ್ಟಕ್ಕೆಲ್ಲ ಕಾರಣ. ಕಲಿಕಾಲದಲ್ಲಿ ಅವನ ಮಹಿಮೆ ಇನ್ನು ಹೆಚ್ಚುವ್ಯಕ್ತವಾಗುವುದು". ಅರಸನು ಈ ವಿವರಣೆಯಿಂದ ಸಮಾಧಾನಗೊಂಡು ಕಪ್ಪೆಗಳ ವಧೆ ನಿಲ್ಲಿಸಿದನು. ಮಕ್ಕಳೇ ನೀವಾದರೂ ಸದಾಚಾರ ಸಂಪನ್ನರಾದರೆ ಕಲಿಬಾಧೆ ನಿಮಗೆ ತಟ್ಟಲಾರದು ಎಂದು ಅಜ್ಜಿ ಮಕ್ಕಳಿಗೆ ಕಥೆ ಮುಗಿಸುವಷ್ಟರಲ್ಲಿ ಊಟಕ್ಕೆ ಬರಲು ಕರೆಬಂದುದರಿಂದ ಎಲ್ಲರೂ ಅಲ್ಲಿಗೆ ಓಡಿದರು.

# ಠಕ್ಕ ಕಾಗೆಗಳು



ಬಿಡಾಲ ಒಂದು ಓಡಿ ಬಂದು
ಮರದ ಕೆಳಗೆ ಕುಳಿತುಕೊಂಡು
ತಾನು ತಂದ ಇಲಿಯನೊಂದು ತಿನ್ನಹತ್ತಿತು ॥ ೧ ॥



ಕಾಗೆ ಕುಲವು ಇದನು ಕಂಡು
ಬೆಕ್ಕು ತಂದ ಇಲಿಯ ಬಯಸಿ
ಗೂಡಿನಿಂದ ಹೊರಗೆ ಬಂದು ಕುಳಿತುಕೊಂಡವು ॥ ೨ ॥



ಕಾಗೆ ಎರಡು ಮರವ ಬಿಟ್ಟು
ಹಾರಿ ಬಂದು ಬೆಕ್ಕಿನೆಡೆಗೆ
ಮುಂಧೆ ಒಂದು ಹಿಂದೆ ಒಂದು ಕುಳಿತು ಅಂದವು ॥ ೩ ॥

ಮಾರ್ಜಾಲ ರಾಜ ನೀನು ನಮ್ಮ
ಮನೆಗೆ ಬಹಳ ದಿನಕೆ ಬಂದೆ
ನಿನ್ನ ನೋಡಿ ನಮ್ಮ ಮನಕೆ ಹರುಷವಾಯಿತು ॥ ೪ ॥

ನಿನ್ನ ಬಾಲವೆಷ್ಟು ಚಂದ
ನಿನ್ನ ಬಣ್ಣವೆಷ್ಟು ರಮ್ಯ
ನಿನ್ನ ಧ್ವನಿಯು ಎಷ್ಟು ಅಂದ ನೀನು ಧನ್ಯನು ॥ ೫ ॥

ಕಾಗೆ ಒಂದು ಹಿಂದೆ ಬಂದು
ಕುಕ್ಕೆ, ಸಿಟ್ಟಿನಿಂದ ಬೆಕ್ಕು
ಬಾಯಿ ತೆರೆಯಲಾಗ ಇಲಿಯು ಕೆಳಗೆ ಬಿದ್ದಿತು ॥ ೬ ॥

ಕಾಗೆ ಎರಡು ಅದನು ತಂದು
ಹರುಷದಿಂದ ಹಾರಿ ಬಂದು
ಎಲ್ಲರೊಡನೆ ಕುಳಿತು ಅಂದು ತಿಂದುವಿಲಿಯನು ॥ ೭ ॥

ಆಸೆದೆಗೆದು ಬೆಕ್ಕು ಆಗ
ಮೇಲೆ ನೋಡಿ ಮುಂದೆ ಸಾಗಿ
ತನ್ನ ಮಂದಬುದ್ಧಿಗಾಗಿ ಮನದಿ ಮರುಗಿತು ॥ ೮ ॥

ಆಸೆಬುರುಕ ಬೆಕ್ಕು ಅಂದು
ಹಸಿವಿನಿಂದ ಬಳಲಿಬೆಂದು
ಸಪ್ಪು ಮೊರೆ ತಾಳಿ ನಿಂದು ದಿನವ ನೂಕಿತು ! ॥ ೯ ॥

ಸೌ. ಇಂದುಮತಿ ವಿಭೂತೆ ಬಿ. ಎ.
ಜಳಗಾಂವ

## ದೀಪಾವಳಿ

ಮಕ್ಕಳೆ ನಿಮ್ಮಯ ಮನೆಬಾಗಿಲಿಗೆ
ದೀಪಾವಳಿ ಬಂದಿರುವುದಿದೋ।
ಬಲಕ್ಕೆ ತಿರುಗಿರಿ, ಎಡಕ್ಕೆ ತಿರುಗಿರಿ
ಎತ್ತ ತಿರುಗಿದರು ಕಾಣ್ವುದಿದೊ ॥ ೧ ॥

ಅಮಾವಾಸ್ಯೆಯ ಕತ್ತಲೆಯನು ಕಳೆಯುವ
ಜ್ವಲಿಸುವ ನಾನಾ ದ್ವೀಪಗಳೋಳಿ।
ಸುಡುವ ಪಟಾಕಿಯು, ಬಾರಿಪ ಜಾಗಟೆ
ಉರಿತಾಗಿಪ ಸದ್ದನು ಕೇಳು ॥ ೨ ॥

ಸುರ್–ಸುರ್ ಬಾಣವು ಬೆಳಗುತ್ತಿರುವುದು
ವಿಷ್ಣು ಚಕ್ರ ತಿರುಗುತ್ತಿಹುದು।
ಕಿವಿಯೊಡೆಯುತ್ತಿದೆ 'ಆಟಂ ಬಾಂಬ'ದು
ಆಹಾ! ತಾರಾ ಕಡ್ಡಿಯದು ॥ ೩ ॥

'ಕುದುರೆ ಬಾಲ'ವದು ಏನ್ವಂದವಿದೆ
'ಕಪ್ಪೆ' ಎಂತು ಹಾಡುತ್ತಿಹುದು।
ಅದೊ 'ವಿಮಾನ'ವು ಮೇಲಕೆ ಹೋಯಿತು
ಮಾಲೆ ಪಟಾಕಿಯ ಶಬ್ದವದು ॥ ೪ ॥

ಲೋಕದ ಜನದಲ್ಲಿಹ ತಮವನು
ಕಳೆಯಲಿಕೆಂದೇ ಬಂದಿಹುದು।
ಈ ಸಡಗರದಲಿ ದುಃಖವ ಮರೆಸುತ
ತೋಷವನುಂಟಾಗಿಸುತಿಹುದು ॥ ೫ ॥

—ಎನ್. ನಾರಾಯಣ ಬಲ್ಲಾಳ, ಉಡುಪಿ.

ಲೇಖಕರು:
ಶ್ರೀ ಆರ್. ಎಲ್. ನರಸಿಂಹಯ್ಯ
ಬೆಂಗಳೂರು

# ಸಂಪ್ರದಾಯಕ್ಕೆ ಹೊರತಾದ ಕೆಲವು ಶಕ್ತಿಮೂಲಗಳು

ಮಾನವನ ಶಕ್ತಿದಾಹ ಹೇಳತೀರದಷ್ಟು. ಪ್ರಾಣಿಗಳನ್ನು ಸಾಕಿ ಅವುಗಳನ್ನು ತನ್ನ ಕೆಲಸಗಳಿಗಾಗಿ ದುಡಿಸಿಕೊಂಡ. ಅದು ಸಾಲದೇ ಹೋದಾಗ ಬೀಸುವ ಗಾಳಿ, ಹರಿಯುವ ನೀರು, ಉರಿಯುವ ಕಲ್ಲಿದ್ದಲು, ಪೆಟ್ರೋಲೆಣ್ಣೆಗಳನ್ನು ಕ್ರಮವಾಗಿ ತನ್ನ ಸೇವೆಗೆ ಉಪಯೋಗಿಸಿಕೊಳ್ಳತೊಡಗಿದ. ಆದರೆ ಇಷ್ಟರಿಂದಲೂ ಅವನು ತೃಪ್ತನಾಗಲಿಲ್ಲ. ಮೊದಮೊದಲು ಇದ್ದ ಆಕರಗಳಿಂದಲೇ ಇನ್ನಷ್ಟು ದಕ್ಷವಾಗಿ ತೀವ್ರಶಕ್ತಿ ಪಡೆಯುವ ಹಂಬಲವಿರಿಸಿಕೊಂಡಿದ್ದಾನಾದರೂ ಈಗಲೂ ಹೊಸ ಶಕ್ತಿ ಮೂಲಗಳ ಶೋಧನೆಯಲ್ಲಿ ಬಿರುಸಿನಿಂದ ತೊಡಗಿದ್ದಾನೆ. ಆ ಸಾಹಸವನ್ನೇ ಲೇಖಕರಿಲ್ಲಿ ನಿರೂಪಿಸಿದ್ದಾರೆ.

---

ಮಾನವಕುಲದ ಚರಿತ್ರೆ, ಎಂದರೆ ನಿಜವಾಗಿಯೂ ಮಾನವನ ಶಕ್ತಿದಾಹದ ಚರಿತ್ರೆ ಮತ್ತು ಆ ದಾಹವನ್ನು ತೀರಿಸಿಕೊಳ್ಳುವುದಕ್ಕಾಗಿ ಅವನು ಹಣಗಾಡಿ ಮಾಡಿರುವ ಪ್ರಯತ್ನಗಳ ಚರಿತ್ರೆಯೇ ಸರಿ. ಎಂಟು ಹತ್ತು ಸಾವಿರ ವರ್ಷಗಳ ಹಿಂದೆಯೇ ಅವನು ಪ್ರಾಣಿಗಳನ್ನು ಸಾಕಿ ಅವುಗಳನ್ನು ತನ್ನ ಕೆಲಸಗಳಿಗಾಗಿ ದುಡಿಸಿಕೊಂಡು ಈ ಉದ್ಯಮಕ್ಕೆ ಕೈ ಹಾಕಿದನು. ಅವುಗಳ ಭುಜಬಲವಷ್ಟೇ ಅವನಿಗೆ ಸಾಕಾಗದಿದ್ದರಿಂದ ಅವನು ಎಲ್ಲ ಕಡೆ ಹುಡುಕುತ್ತ ಬೀಸುವ ಗಾಳಿ, ಹರಿಯುವ ನೀರು, ಉರಿಯುವ ಕಲ್ಲಿದ್ದಲು, ಪೆಟ್ರೋಲೆಣ್ಣೆಗಳನ್ನು ಕ್ರಮವಾಗಿ ತನ್ನ ಸೇವೆಗೆ ನಿಲ್ಲಿಸಿಕೊಳ್ಳುವ ಹಂಚಿಕೆ ಹೂಡಿದನು. ಆ ಮೇಲೆ ನೀರು ಕಲ್ಲಿದ್ದಲುಗಳ ಶಕ್ತಿಯನ್ನು ವಿದ್ಯುಚ್ಛಕ್ತಿಗೆ ಪರಿವರ್ತಿಸಿದನು. ಇನ್ನೂ ಈಚೆಗೆ ಪರಮಾಣು ಬೀಜಶಕ್ತಿಯನ್ನೂ ವಿದ್ಯುಚ್ಛಕ್ತಿಗೆ ಪರಿವರ್ತಿಸಿ ಕೆಲಸಕ್ಕಿಟ್ಟುಕೊಳ್ಳಲು ಹವಣಿಸುತ್ತಿದ್ದಾನೆ.

ಈ ಎಲ್ಲ ದಿಕ್ಕುಗಳಲ್ಲಿಯೂ ಅವನ ಪ್ರಯತ್ನಕ್ಕೆ ಸಾಕಾದಷ್ಟು ಫಲ ಸಿಕ್ಕಿರುವುದರಿಂದ ಅವನು ಈಗ ಹೊಸ ಶಕ್ತಿಮೂಲಗಳನ್ನು ಹುಡುಕಿಕೊಂಡು ಹೋಗುವ ಹಂಬಲವನ್ನು ಬಿಟ್ಟು, ಇದುವರೆಗೆ ದೊರಕಿರುವ ಆಕರಗಳಿಂದಲೇ ಇನ್ನಷ್ಟು ದಕ್ಷತೆಯಿಂದ ಇನ್ನಷ್ಟು ತೀವ್ರವಾಗಿ ಶಕ್ತಿಯನ್ನೆಳೆದುಕೊಳ್ಳುವುದರಲ್ಲಿ ಮಾತ್ರ ಮಗ್ನನಾಗಿರಬೇಕೆಂಬ ತೀರ್ಮಾನಕ್ಕೆ ನಾವು ಬರುವುದು ಸಹಜವಾಗಿ ಕಾಣುತ್ತದೆ. ಆದರೆ ಹಾಗಾಗಿಲ್ಲ. ಈಗಲೂ ಹೊಸ ಶಕ್ತಿಮೂಲಗಳ ಅವನ ಶೋಧನೆ ಅದೇ ಬಿರುಸಿನಿಂದ, ಪ್ರಾಯಶಃ ಮತ್ತಷ್ಟು ಹೆಚ್ಚು ಬಿರುಸಿನಿಂದ ಸಾಗುತ್ತಿದೆ. ಇದಕ್ಕೆ ಕಾರಣಗಳೂ ಇವೆ.

ಮೊದಲನೆಯದಾಗಿ ಈ ಶಕ್ತಿಮೂಲಗಳು ಯಾವುವೂ ಶಾಶ್ವತವಾಗಿರುವುವೆಂಬ ಭರವಸೆಯಿಲ್ಲ. ಕೆಲವನ್ನು, ಉದಾಹರಣೆಗೆ ಜಲಪಾತಗಳನ್ನು, ಮಾನವದೃಷ್ಟಿಯಿಂದ ಶಾಶ್ವತವೆಂದು ಪರಿಗಣಿಸಬಹುದಲ್ಲವೇ ಎನ್ನಬಹುದು. ಆದರೆ ಪ್ರಪಂಚದ ಎಲ್ಲ ಜಲಪಾತಗಳ ಶಕ್ತಿಸರ್ವಸ್ವವನ್ನೂ ನಾವು ಬಳಸಿಕೊಳ್ಳುವ ಏರ್ಪಾಡು ಸಿದ್ಧವಾದ ಮೇಲೂ, ಆ ಶಕ್ತಿ ನಮಗೆ ಸಾಕಾಗುವುದಿಲ್ಲ. ಎರಡನೆಯದಾಗಿ ಈಗಿನ ಶಕ್ತಿಪರಿವರ್ತನ ಸಾಧನಗಳಿಗಿಂತ ಹೆಚ್ಚು ಅಗ್ಗವಾದ, ಸಾಗಾಣಿಕೆಗೆ ಹೆಚ್ಚು ಅನುಕೂಲವಾದ ಸಾಧನಗಳನ್ನೇ ಅಲ್ಲದೆ ಉಸ್ತುವಾರಿ ನೋಡಿಕೊಳ್ಳುವ ಸಿಬ್ಬಂದಿ ಕಡಮೆಯಾಗಿ ಬೇಕಾಗುವ ಸಾಧನಗಳನ್ನು ಹುಡುಕಿಕೊಂಡು ಹೋಗುವ ಆವಶ್ಯಕತೆ ಇದೆ. ಮೂರನೆಯ ಕಾರಣವೂ ಇದೆ. ಪ್ರಾಯಶಃ ಇದು ಎಲ್ಲಕ್ಕಿಂತ ಪ್ರಧಾನವಾದ ಕಾರಣ: ತಿಳಿಯದಿರುವುದನ್ನು ತಿಳಿಯಲೇಬೇಕೆಂಬ, ಅಸಾಧ್ಯವಾಗಿ ತೋರುವುದನ್ನು ಸಾಧಿಸಲೇಬೇಕೆಂಬ ಮಾನವಸಹಜ ಸ್ವಭಾವ.

## ೧. ಕಾಂತ-ಜಲ-ಚಾಲನ ವಿದ್ಯುಜ್ಜನಕ

ಹೀಗೆ ಹೊಸದಾಗಿ ಆಚರಣೆಗೆ ತರಬೇಕೆಂದಿರುವ ವಿಲಕ್ಷಣ ಶಕ್ತಿ ಪರಿವರ್ತನ ವಿಧಾನಗಳಲ್ಲಿ Magneto- hydrodynamic Generator ಅಂದರೆ ಕಾಂತ-ಜಲ-ಚಾಲನ ವಿದ್ಯುಜ್ಜನಕವನ್ನು ನಮ್ಮ ಅವಗಾಹನೆಗೆ ಮೊದಲು ತೆಗೆದುಕೊಳ್ಳೋಣ.

ಅಯಸ್ಕಾಂತ ಬಲಕ್ಕೆ ಸಿಕ್ಕಿಬಿದ್ದ ದ್ರವಾನಿಲಗಳು ಹರಿದುಹೋಗುವ ರೀತಿಯನ್ನು ವ್ಯಾಸಂಗ ಮಾಡುವ ಶಾಸ್ತ್ರಕ್ಕಿಟ್ಟಿರುವ Magneto-hydrodynamics ಅಥವಾ ಸಂಕ್ಷೇಪವಾಗಿ MHD ಎಂಬೀ ಹೆಸರು ಹೊಸದಾದರೂ ಈ ತತ್ತ್ವದ ವಿದ್ಯುಜ್ಜನಕ ಫಾರಡೇ ಮೊದಲು ತಯಾರಿಸಿದ ವಿದ್ಯುಜ್ಜನಕದಷ್ಟೇ ಹಳೆಯದು. ಆತನ ಸಂಪ್ರದಾಯದ ವಿದ್ಯುಜ್ಜನಕದಲ್ಲಿ ಕಬ್ಬಿಣದ ತೆಳು ಹಾಳೆಗಳ ಕಂತೆಯ ಮೇಲೆ ತಾಮ್ರದ ತಂತಿಯ ಅನೇಕ ಸುತ್ತುಗಳನ್ನು ಸುತ್ತಿ ಆ ಸುತ್ತು ಕಂತೆಯನ್ನು ಅಯಸ್ಕಾಂತದ ಎರಡು ಧ್ರುವಗಳ ಮಧ್ಯದಲ್ಲಿ ತಿರುಗಿಸುತ್ತಾರೆ. ತಿರುಗಿಸಿದ್ದರಿಂದ ತಾಮ್ರದ ಸುರುಳಿಯಲ್ಲಿ ಪ್ರಚೋದಿತವಾದ ವಿದ್ಯುತ್ಪ್ರವಾಹವನ್ನು ಕುಂಚಗಳ ಮೂಲಕ ಸ್ವೀಕರಿಸಿ ಬೇಕಾದ ಕಡೆಗೆ, ಉದಾಹರಣೆಗೆ, ವಿದ್ಯುದ್ದೀಪ, ಇಲೆಕ್ಟ್ರಿಕ್ ಮೋಟಾರ್ ಇತ್ಯಾದಿಗಳಿಗೆ ಸಾಗಿಸುತ್ತಾರೆ. ತಾಮ್ರದ ತಂತಿಯ ಸುತ್ತುಗಳ ಬದಲು ಪಾದರಸ, ಉಪ್ಪು ನೀರುಗಳನ್ನು ಅಯಸ್ಕಾಂತ ಧ್ರುವಗಳ ನಡುವೆ ಹರಿಸಿ ವಿದ್ಯುತ್ತನ್ನು ಉತ್ಪಾದಿಸುವ ಪ್ರಯೋಗವನ್ನು ಫಾರಡೆಯೇ ಮಾಡಿ ನೋಡಿದನು. ಆದರೆ ಅವನ ಕಾಲದಲ್ಲಿ ಅದು ಪ್ರಯೋಜನಕಾರಿಯಾಗಲಿಲ್ಲ. ಆ ಹಳೆಯ ಪ್ರಯೋಗಕ್ಕೇ MHD generator ಎಂಬ ಹೊಸ ನಾಮಕರಣವಾಗಿ ಪುನರ್ಜನ್ಮ ಬಂದಿದೆ. ಇದು ಸಾಧ್ಯವಾಗಲು ಮುಖ್ಯ ಕಾರಣ ನಮಗೆ ಬೇಕಾದ ಭೌತ ರಾಸಾಯನಿಕ ಗುಣಗಳನ್ನು ಹೊಂದಿರುವ ಪದಾರ್ಥಗಳನ್ನು ತಯಾರಿಸಬಲ್ಲ ಕೌಶಲವನ್ನು ನಾವು ಸಂಪಾದಿಸಿಕೊಂಡಿರುವುದೇ. ಇದರ ಜೊತೆಗೆ ಇನ್ನೊಂದು ಕಾರಣ ಅತ್ಯಧಿಕ ತಾಪಗಳಲ್ಲಿ ಅನಿಲಗಳ ಚಲನಗತಿಗಳ ವಿಚಾರವಾಗಿ ನಾವು ಸಂಪಾದಿಸಿರುವ ಜ್ಞಾನ. ಭೌತ ವಿಜ್ಞಾನದ ಈ ಹೊಸ ಶಾಖೆಗೆ ಜನ್ಮ ಕೊಟ್ಟಾತ ನಮ್ಮ ದೇಶದ ಭೌತಜ್ಞ ಮೇಘನಾದ ಸಹಾ.

ಕಾಂತ-ಜಲ-ಚಾಲನ ವಿದ್ಯುಜ್ಜನಕಗಳಲ್ಲಿ ಅನಿಲಗಳನ್ನು ಉರಿಸಿಯೊ ಅಥವಾ ಅವನ್ನು ಪರಮಾಣು ಬೀಜಕ್ರಿಯಾಕಾರಕಗಳಲ್ಲಿ— Nuclear Reactor ಗಳಲ್ಲಿ— ಹಾಯಿಸಿಯೋ ಸುಮಾರು ಎರಡೂವರೆ ಸಾವಿರ ಸೆಂಟಿಗ್ರೇಡ್ ತಾಪಕ್ಕೇರಿಸಿ ಒಂದು ಉದ್ದನೆಯ ಪೋರ್ಸ್ಲೇನ್ ಕೊಳವೆಯೊಳಗೆ ಹರಿದು ಹೋಗಲು ಬಿಡುತ್ತಾರೆ. ಈ ತಾಪಕ್ಕೆ ಅನಿಲದ ಅಣುಗಳಲ್ಲಿ ಒಂದು ಅಲ್ಪ ಭಾಗದವು ಅಯೋಣುಗಳಾಗಿ

ಅಂದರೆ ಧನವಿದ್ಯುತ್ತಿನ ಭಾರತರ ಅಯೋಣುಗಳಾಗಿಯೂ ಋಣವಿದ್ಯುತ್ತಿನ ಅತಿಹಗುರವಾದ ಇಲೆಕ್ಟ್ರಾನ್‌ಗಳಾಗಿಯೂ ಪ್ರತ್ಯೇಕಗೊಳ್ಳುತ್ತವೆ. ವಸ್ತುವಿನ ಈ ಸ್ಥಿತಿ ಸಾಮಾನ್ಯವಾಗಿ ನಮಗೆ ತಿಳಿದಿರುವ ಘನ, ದ್ರವ, ಅನಿಲ ಸ್ಥಿತಿಗಳಿಗಿಂತ ಆಚೆಯ, ಅಧಿಕ ತಾಪಕ್ಕನುಗುಣವಾದ, ಬೇರೆ ಸ್ಥಿತಿ. ಇದನ್ನು ವಸ್ತುವಿನ ಪ್ಲಾಸ್ಮಾಸ್ಥಿತಿ, ವಸ್ತುವಿನ ತುರೀಯ ಸ್ಥಿತಿ ಎಂದು ಕರೆಯುತ್ತಾರೆ. ಈ ಪ್ಲಾಸ್ಮಾಪ್ರವಾಹ ಹರಿಯುತ್ತಿರುವ ಪೋರ್ಸಿಲೇನ್ ಕೊಳವೆಯ ಎಡಬಲ ಪಕ್ಕಗಳಲ್ಲಿ ತಾಮ್ರದ ಹಾಳೆಯ ಸುತ್ತುಗಳನ್ನಿಟ್ಟು ಅವುಗಳಲ್ಲಿ ಪ್ರಬಲವಾದ ವಿದ್ಯುತ್ಪ್ರವಾಹವನ್ನು ಹರಿಸಿದರೆ, ಪ್ಲಾಸ್ಮಾಪ್ರವಾಹಕ್ಕೆ ಅಡ್ಡಲಾಗಿ ಅಯಸ್ಕಾಂತಕ್ಷೇತ್ರ ಉತ್ಪತ್ತಿಯಾಗುತ್ತದೆ. ಇದರ ಪರಿಣಾಮವಾಗಿ ಪ್ರವಾಹದ ದಿಕ್ಕು, ಕಾಂತಕ್ಷೇತ್ರದ ದಿಕ್ಕು ಇವೆರಡಕ್ಕೂ ಅಡ್ಡವಾದ ದಿಕ್ಕಿನಲ್ಲಿ ಅಂದರೆ ಮೇಲಿನಿಂದ ಕೆಳಗಿನ ದಿಕ್ಕಿನಲ್ಲಿ ವಿದ್ಯುತ್ಪ್ರವಾಹದ ಪ್ರಚೋದನೆಯಾಗುತ್ತದೆ. ಏಕೆಂದರೆ ಪ್ಲಾಸ್ಮಾ ಪ್ರವಾಹವೂ ಚಲಿಸುತ್ತಿರುವ ವಿದ್ಯುದ್ವಾಹಕವೂ ತತ್ತ್ವತಃ ಒಂದೇ. ಆದ್ದರಿಂದ ಕೊಳವೆಯುದ್ದಕ್ಕೂ, ಮೇಲೂ ಕೆಳಗೂ ವಿದ್ಯುದ್ಧ್ರುವಗಳನ್ನು ಜೋಡಿಸಿದರೆ ಅವುಗಳ ಮೂಲಕ ವಿದ್ಯುತ್ಪ್ರವಾಹವನ್ನು ಹೊರಕ್ಕೆ ತಂದು ನಮಗೆ ಬೇಕಾದ ಇಲೆಕ್ಟ್ರಿಕ್ ಮೋಟಾರ್, ದೀಪ, ಬೀಸಣಿಗೆ, ಮುಂತಾದ ಸಲಕರಣೆಗಳಲ್ಲಿ ಹರಿಸಬಹುದು.

ಸಾಮಗ್ರಿಗಳನ್ನು ತಯಾರಿಸುವ ವಿದ್ಯೆಯನ್ನು ನಾವಿನ್ನೂ ಕಲಿತಿಲ್ಲ. ಆದ್ದರಿಂದ ಸದ್ಯಕ್ಕೆ ಸಮಸ್ಯೆಯನ್ನು ಬಗೆಹರಿಸಿರುವ ಉಪಾಯ ಸುಲಭವಾಗಿ ಅಯೋಣುಗಳಾಗಿ ಪ್ರತ್ಯೇಕಗೊಳ್ಳಬಲ್ಲ, ಕ್ಯಾಲ್ಸಿಯಂ, ಸ್ಟ್ರಾನ್ಷಿಯಂ, ಸೋಡಿಯಂ, ಪೋಟಾಸಿಯಂನಂಥ ಪದಾರ್ಥಗಳನ್ನು ಉರಿಯುವ ಅನಿಲಗಳಲ್ಲಿ ಬಿತ್ತನೆ ಮಾಡುವುದೇ ಆಗಿದೆ, ನೆಲದಲ್ಲಿ ಬೀಜ ಬಿತ್ತಿದಂತೆ. ಹೀಗೆ ಬಿತ್ತನೆ ಮಾಡಿದ ಪ್ಲಾಸ್ಮಾದ ವೃದ್ಧಿಗೊಂಡ ವಾಹಕತ್ವ ಕೂಡ ತಾಮ್ರದ್ದರ ಹತ್ತು ಸಾವಿರದಲ್ಲೊಂದು ಭಾಗ ಮಾತ್ರ ಆಗುತ್ತದೆ.

ಎರಡನೆಯ ಅನಾನುಕೂಲವೂ ಇದೆ. MHD ವಿದ್ಯುಜ್ಜನಕಗಳು ಏಕದಿಕ್ಪ್ರವಾಹದವು. ವಿದ್ಯುತ್ತಿನ ಸಾಗಾಣಿಕೆ ಹಂಚಿಕೆಗಳಿಗೂ ಇತರ ಅನೇಕ ಯಂತ್ರಗಳಿಗೂ ಆವರ್ತ ಪ್ರವಾಹವೇ ಬೇಕಾಗುತ್ತದೆ. ಏಕ ದಿಕ್ಪ್ರವಾಹವನ್ನು ಆವರ್ತಪ್ರವಾಹಕ್ಕೆ— D.C. ಯನ್ನು A.C. ಗೆ— ತಿರುಗಿಸಬಲ್ಲ ಯಂತ್ರಗಳೇನೋ ಇವೆ, ಆದರೆ ಅವು ಹೆಚ್ಚು ಹಣ ತಿನ್ನುವುದೇ ಅಲ್ಲದೆ ಅಷ್ಟು ವಿಶ್ವಾಸಾರ್ಹಗಳೂ ಅಲ್ಲ. ಕೊಳವೆಯ ಪಕ್ಕಗಳಲ್ಲಿರುವ ತಾಮ್ರದ ಹಾಳೆಗಳಲ್ಲಿ ಆವರ್ತ ಪ್ರವಾಹವನ್ನು ಹರಿಸಿ ಪ್ಲಾಸ್ಮಾ ಪ್ರವಾಹದಲ್ಲಿಯೇ ಆವರ್ತ ವಿದ್ಯುತ್ತನ್ನು ಪ್ರಚೋದಿಸುವುದು ಇನ್ನೊಂದುಪಾಯ. ಆಗ ಕೊಳವೆಯೊಳಗೆ ವಿದ್ಯುದ್ಧ್ರುವಗಳನ್ನು ಬೆಸಗೆ ಮಾಡುವ ರೇಜಿಗೆ ಕೆಲಸವೂ ತಪ್ಪುತ್ತದೆ. ಆದರೆ ಇಂಥ ಆವರ್ತ MHD ಜನಕಗಳು ಸೆಕೆಂಡಿಗೆ ಸಾವಿರ ಆವರ್ತಗಳ ಪ್ರವಾಹವನ್ನು ಉತ್ಪತ್ತಿ ಮಾಡುತ್ತವೆ. ನಮಗೆ ಅನುಕೂಲವಾಗಿರುವ ಐವತ್ತು ಆವರ್ತಗಳ ಪ್ರವಾಹವನ್ನೇ ಉತ್ಪಾದಿಸಬೇಕೆಂಬ ಹಠ ತೊಟ್ಟರೆ, ಅಲ್ಪ ಸಾಮರ್ಥ್ಯವನ್ನು ಒದಗಿಸುವುದಕ್ಕೆ ಕೂಡ ಸಿಕ್ಕಾಪಟ್ಟೆ ಉದ್ದದ ಪೋರ್ಸಿಲೇನ್ ಕಾಲುವೆಯನ್ನು ಕಟ್ಟಬೇಕಾಗುತ್ತದೆ.

ಇಷ್ಟೆಲ್ಲ ಕಷ್ಟಪರಂಪರೆಗಳಿದ್ದರೆ MHD ಜನಕಗಳನ್ನು ಕಟ್ಟಿಕೊಂಡೇಕೆ ಒದ್ದಾಡಬೇಕು ಎಂಬ ಪ್ರಶ್ನೆ ಬರುತ್ತದೆ. ಇದಕ್ಕೂ ಕಾರಣಗಳಿಲ್ಲದೆ ಇಲ್ಲ. ಮೊದಲನೆಯದಾಗಿ, ಅಧಿಕ ತಾಪಕ್ಕೇರಿಸಿದ ಅನಿಲಗಳಲ್ಲಿ ಪ್ರಚಂಡ ಶಕ್ತಿ ಅಡಗಿದೆ. ಉದಾಹರಣೆಗೆ ಒಂದು ಚದರ ಮೀಟರ್ ಅಡ್ಡವಿಸ್ತಾರದ ಅನಿಲಪ್ರವಾಹದಲ್ಲಿ ಹತ್ತು ಲಕ್ಷ ಕಿಲೋವಾಟ್ ಸಾಮರ್ಥ್ಯ ಅಡಗಿರುತ್ತದೆ. ಎರಡನೆಯದಾಗಿ ಈ ವಿದ್ಯುಜ್ಜನಕಗಳ ದಕ್ಷತೆ ಶೇಕಡ ೬೦ ರಷ್ಟನ್ನು ಮುಟ್ಟಬಹುದು. ಮೂರನೆಯದಾಗಿ ಕಡಮೆ ಅಣುತೂಕದ ಅನಿಲಗಳನ್ನುಪಯೋಗಿಸಿ ಹಗುರ ಯಂತ್ರಗಳಿಂದ ವಿಪುಲವಾದ ಸಾಮರ್ಥ್ಯವನ್ನು ಕಸಿಯಬಹುದು; ಅಂದರೆ ನಾಳಿನ ಅಂತರಿಕ್ಷ ನೌಕೆಗಳಿಗೆ ಸಾಮರ್ಥ್ಯವನ್ನೊದಗಿಸಲು ಇವನ್ನು ಬಳಸಬೇಕಾದೀತು. ಚಲಿಸುವ ಅಂಗಗಳೇನೂ ಇಲ್ಲವೆಂಬ ಮತ್ತೊಂದು ಅನುಕೂಲವನ್ನು ಆಗಲೇ ತಿಳಿಸಿದೆ.

ನಾಳಿನ ಮಾತಿರಲಿ. ಇದುವರೆಗೆ ಏನೇನು ಸಾಧನೆಯಾಗಿದೆ ಎಂದು ನೀವು ಕೇಳಬಹುದು. ಅದಕ್ಕುತ್ತರ ಇಷ್ಟೆ. ಅಮೇರಿಕದ ಬಾಸ್ಟನ್ ನಗರದಲ್ಲಿರುವ ಆವ್ಕೋ-ಇವರೆಟ್ ಕಂಪನಿಯ ಸಂಶೋಧನಾಲಯದಲ್ಲಿ ಐದು ಮೀಟರ್ ಉದ್ದ, ೧೫ ಸೆಂಟಿಮೀಟರ್ ಅಗಲ ೧೫ ಸೆಂಟಿಮೀಟರ್ ಆಳದ ಕೊಳವೆಯನ್ನು ಉಪಯೋಗಿಸಿ ೨,೦೦೦ ಕಿಲೋವಾಟ್ ಸಾಮರ್ಥ್ಯವನ್ನು ಉತ್ಪತ್ತಿಸಿದ್ದಾರೆ. ಇದರಿಂದ ಕಲಿತ ಪಾಠವನ್ನು ಉಪಯೋಗಿಸಿಕೊಂಡು ೩೦,೦೦೦ ಕಿಲೋವಾಟ್‌ಗಳ ಇನ್ನೊಂದು ವಿದ್ಯುಜ್ಜನಕವನ್ನು ತಯಾರಿಸುವುದರಲ್ಲಿ ಅವರೀಗ ನಿರತರಾಗಿದ್ದಾರೆ.

ಪ್ಲಾಸ್ಮಾದಲ್ಲಿ ಧನ ಅಯೋಣುಗಳೂ ಋಣ ಅಯೋಣುಗಳಾದ ಇಲೆಕ್ಟ್ರಾನ್‌ಗಳೂ ಸಮ ಸಮವಾಗಿದ್ದರೂ ವಿದ್ಯುತ್ಪ್ರವಾಹದ ಹೊಣೆಯೆಲ್ಲ ಇಲೆಕ್ಟ್ರಾನ್‌ಗಳ ಮೇಲೆಯೇ ಬೀಳುತ್ತದೆ. ಏಕೆಂದರೆ ಅವು ಹಗುರ ಕಣಗಳಾದ್ದರಿಂದ ಬಹು ವೇಗವಾಗಿ ಓಡುತ್ತವೆ. ಜಡ ಧನ ಅಯೋಣುಗಳದಾದರೋ ಮಂದಗತಿ. ಆದ್ದರಿಂದ ವಿದ್ಯುಜ್ಜನಕಗಳ ದಕ್ಷತೆಯನ್ನು ಹೆಚ್ಚಿಸಲು ಪ್ಲಾಸ್ಮಾದಲ್ಲಿರುವ ಇಲೆಕ್ಟ್ರಾನ್‌ಗಳ ತಾಪವನ್ನು ಮಾತ್ರ ಹೆಚ್ಚಿಸುವ ವಿಧಾನಗಳ ಮೇಲೆ ಸಂಶೋಧನೆಗಳಾಗುತ್ತಿವೆ. ಪ್ಲಾಸ್ಮಾ ಪ್ರವಾಹಕ್ಕೆ ವಿದ್ಯುತ್‌ಕ್ಷೇತ್ರವನ್ನೊದಗಿಸಿ ಇದನ್ನು ಸಾಧಿಸುವ ಸಂಭವವಿದೆ. ಏಕೆಂದರೆ ವಿದ್ಯುತ್ಕ್ಷೇತ್ರಕ್ಕೆ ಸಿಕ್ಕಿಬಿದ್ದ ಇಲೆಕ್ಟ್ರಾನ್‌ಗಳು ಅಯೋಣುಗಳಿಗಿಂತ ಅನೇಕ ಸಾವಿರಮಡಿ ಹೆಚ್ಚುವೇಗದಿಂದ ಓಡುತ್ತವೆ. ಅಲ್ಲದೆ ಅಣುಗಳು ಇತರ ಅಯೋಣುಗಳೊಂದಿಗೆ ಢಿಕ್ಕಿ ಹೊಡೆದು ತಾವು ವಿದ್ಯುತ್ ಕ್ಷೇತ್ರದಿಂದ ಸಂಪಾದಿಸಿದ ಚಲನಶಕ್ತಿಯನ್ನೆಲ್ಲ ಸುಲಭವಾಗಿ, ಶೀಘ್ರವಾಗಿ ಇತರರಿಗೆ ಹಂಚಿಕೊಡುತ್ತವೆ. ಇಲೆಕ್ಟ್ರಾನ್‌ಗಳು ಹಾಗೆ ಮಾಡುವುದಿಲ್ಲ. ಆದ್ದರಿಂದ ಅವುಗಳ ತಾಪವನ್ನು ಮಾತ್ರ ಹೆಚ್ಚಿಸುವುದು ಸಾಧ್ಯ. ಆದರೆ



ಚಿತ್ರ-೧ ಕಾಂತಜಲ-ಚಾಲನ (MHD) ವಿದ್ಯುಜ್ಜನಕ

ಈ ವ್ಯವಸ್ಥೆಯಲ್ಲಿರುವ ಒಂದು ಅನುಕೂಲ ಕೂಡಲೆ ಕಾಣುತ್ತದೆ. ಇಂಥ ವಿದ್ಯುಜ್ಜನಕಗಳಲ್ಲಿ ಗಿರ್ರನೆ ತಿರುಗುವ ಅಂಗಗಳಿಲ್ಲ. ದಿಕ್ಕು ನೇರವಾಗಿಸುವುದಕ್ಕೆಂದು ಜೋಡಿಸಬೇಕಾದ ಕಂಬಿ ಕುಂಚಗಳ ಆವಶ್ಯಕತೆಯಿಲ್ಲ. ಆದರೆ, ಈ ಅನುಕೂಲವನ್ನು ಮೀರಿಸುವ ಹಲವು ಅನಾನುಕೂಲಗಳೂ ಇವೆ. ಉದಾಹರಣೆಗೆ ೨೫೦೦ ಡಿಗ್ರಿಯಷ್ಟು ಅಧಿಕ ತಾಪದಲ್ಲಿ ಕೂಡ ಅಯೋಣು ವಿಭಜನೆಯಾಗುವುದು ಅತ್ಯಲ್ಪ ಪ್ರಮಾಣದಲ್ಲಿ; ಇದರ ಅರ್ಥ ಅನಿಲ ಪ್ರವಾಹದ ವಿದ್ಯುದ್ವಾಹಕತ್ವ ಅತ್ಯಲ್ಪ ಎಂದು. ಇದು ವಿದ್ಯುಜ್ಜನಕದ ಸಾಮರ್ಥ್ಯಕ್ಕೆ ಒಂದು ಮಿತಿಯನ್ನೊಡ್ಡುತ್ತದೆ. ಹಾಗಾದರೆ ತಾಪವನ್ನು ಹೆಚ್ಚಿಸಿದರಾಯಿತು ಎಂದು ಸುಲಭವಾಗಿ ಪರಿಹಾರವನ್ನು ಸೂಚಿಸಬಹುದು. ಆದರೆ ಎರಡೂವರೆ ಸಾವಿರ ಡಿಗ್ರಿಗಳಿಗಿಂತ ಹೆಚ್ಚಿನ ತಾಪವನ್ನು ತಟ್ಟಿಕೊಳ್ಳಬಲ್ಲ

ಇದರಿಂದ ಮತ್ತೊಂದು ತೊಡಕು ಹುಟ್ಟಿಕೊಳ್ಳುತ್ತದೆ. ಇಲೆಕ್ಟ್ರಾನ್‌ಗಳ ವೇಗ ಹೀಗೆ ಹೆಚ್ಚಿದ್ದರ ಪರಿಣಾಮವಾಗಿ ಕೊಳವೆಯಲ್ಲಿ ಚೆದರಿದ ಅಲೆಗಳೂ ಸುಳಿಗಾಳಿಗಳೂ ಹುಟ್ಟುತ್ತವೆ. ಇದರಿಂದ ವಿದ್ಯುಜ್ಜನಕದ ಸಾಮರ್ಥ್ಯ ಇಳಿಯುತ್ತದೆ.

ಕಾಂತ-ಜಲ-ಚಾಲನದ ವಿದ್ಯುಜ್ಜನಕಗಳನ್ನು ಕಟ್ಟುವವರು ಎದುರಿಸಬೇಕಾಗುವ ಈ ಚೆದರಿ ಏಳುವ ಅಲೆಗಳ ಒಳರಚನೆ, ಸುಳಿಗಳೆಬ್ಬಿಸುವ ತಳಮಳ ಮುಂತಾದ ತಾತ್ತ್ವಿಕ ಸಮಸ್ಯೆಗಳ ರೂಪರೇಖೆಗಳನ್ನು ಬಿಡಿಸಿ ಚಿತ್ರಿಸಿ ತೋರಿಸುವ ಪ್ರಯತ್ನದಲ್ಲಿ ಬೆಂಗಳೂರಿನ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್‌ನ ವಾಯು ನೌಕಾಶಾಖೆಯವರು ಅಮೆರಿಕದಲ್ಲಿರುವ ಪಾಸಡೀನಾದ ವಾಯ್ವಂತರಿಕ್ಷ ಶಾಖೆಯವರೊಂದಿಗೆ ಸಹಕರಿಸುತ್ತಿದ್ದಾರೆಂಬುದು ನಮಗೆ ನೆಮ್ಮದಿ ತರುವ ಸಂಗತಿ. ಇದರ ಫಲ ತಿಳಿಯಲು ನಾವು ಪ್ರಾಯಶಃ ಒಂದೆರಡು ವರ್ಷಗಳಿಗಿಂತ ಹೆಚ್ಚಾಗಿ ಕಾಯಬೇಕಾಗಿಲ್ಲ.

## ೩. ಇಂಧನ ಕೋಶಗಳು

ಸಂಪ್ರದಾಯಕ್ಕೆ ವಿಪರೀತವಾದ ಶಕ್ತಿಪರಿವರ್ತಕಗಳಿಗೆ ಎರಡನೆಯ ಉದಾಹರಣೆಯಾಗಿ ನಾವು ಇಂಧನಕೋಶಗಳನ್ನು ಆರಿಸಿಕೊಳ್ಳುತ್ತೇವೆ. ಇದು ಕೂಡ ಸಂಪೂರ್ಣವಾಗಿ ಹೊಸ ಉಪಕರಣವಲ್ಲ, ಏಕೆಂದರೆ ೧೮೩೯ ರಷ್ಟು ಮುಂಚೆಯೇ ಇಂಧನ ಕೋಶಗಳ ಮೊದಲ ಮಾದರಿ ಆಚರಣೆಯಲ್ಲಿತ್ತು. ಇಂಧನಕೋಶಗಳು ರಚನೆಯಲ್ಲಿ ಸಂಪ್ರದಾಯದ ವಿದ್ಯುತ್‌ಕೋಶಗಳನ್ನು- ಉದಾಹರಣೆಗೆ ನಮಗೆಲ್ಲ ಪರಿಚಿತನಾಗಿರುವ ಟಾರ್ಚ್ ಸೆಲ್ಲನ್ನು— ಬಹುಮಟ್ಟಿಗೆ ಹೋಲುತ್ತವೆ. ಶುಷ್ಕ ವಿದ್ಯುತ್ಕೋಶದಿಂದ—ಟಾರ್ಚ್ ಸೆಲ್ಲಿಂದ— ವಿದ್ಯುತ್ಪ್ರವಾಹವನ್ನು ಬಳಸಿಕೊಂಡಂತೆಲ್ಲ ಅದರ ವಿದ್ಯುದ್ಧ್ರುವಗಳು ತಿಂದು ಹೋಗುತ್ತವೆ; ವಿದ್ಯುದ್ಧ್ರುವಗಳು ನಶಿಸಿ ಹೋದಾಗ ಕೋಶ ಸತ್ತು ಹೋಗುತ್ತದೆ. ಆದರೆ ಇಂಧನಕೋಶದ ವಿದ್ಯುದ್ಧ್ರುವಗಳು ನಶಿಸಿ ಹೋಗುವುದಿಲ್ಲ, ಅವುಗಳಲ್ಲಿ ಯಾವ ರಾಸಾಯನಿಕ ಪರಿವರ್ತನವೂ ಆಗುವುದಿಲ್ಲ, ಎಂದಿನ ವರೆಗೆ ಇಂಧನದ ಮತ್ತು ಆ ಇಂಧನ ಉರಿಯುವುದಕ್ಕೆ ಬೇಕಾದ ದಹನಭರಣ ಸಾಮಗ್ರಿಯ ಪೂರೈಕೆಯಾಗುತ್ತಿರುತ್ತದೆಯೋ ಅಂದಿನ ವರೆಗೆ ಕೋಶ ಅವಿರತವಾಗಿ ವಿದ್ಯುತ್ಪ್ರವಾಹವನ್ನು ಒದಗಿಸುತ್ತಿರುತ್ತದೆ. ಇಂಧನದ ರಾಸಾಯನಿಕ ಶಕ್ತಿಯನ್ನು ಕೋಶಗಳು ನೇರವಾಗಿ ವಿದ್ಯುಚ್ಛಕ್ತಿಗೆ ಪರಿವರ್ತಿಸುತ್ತವೆ.

ಇಂಧನಕೋಶಗಳಲ್ಲೆಲ್ಲ ಸರಳತಮವಾದ ಕೋಶ ಜಲಜನಕ ಅನಿಲವನ್ನು ಇಂಧನವಾಗಿಯೂ ಆಮ್ಲಜನಕವನ್ನು ದಹನಭರಣ ಸಾಮಗ್ರಿಯಾಗಿಯೂ ಉಪಯೋಗಿಸುತ್ತದೆ. ಈ ಎರಡು ಅನಿಲಗಳ ಸಂಯೋಜನೆಯಿಂದ ದ್ರವರೂಪದ ನೀರು ತಯಾರಾಗುತ್ತದೆ. ನಮ್ಮ ಮನೆಗಳ ಸಾಮಾನ್ಯ ತಾಪವಾದ ೨೫ ಸೆಂಟಿಗ್ರೇಡ್ ಡಿಗ್ರಿಗಳ ತಾಪದಲ್ಲಿ ಈ ರಾಸಾಯನಿಕ ಕ್ರಿಯೋಷ್ಣಶಕ್ತಿಯ ಶೇಕಡ ೮೩ ರಷ್ಟು ವಿದ್ಯುಚ್ಛಕ್ತಿಯಾಗಿ ಪರಿವರ್ತನಗೊಳ್ಳುತ್ತದೆ. ಕಲ್ಲಿದ್ದಲನ್ನು ಉರಿಸುವ ವಿದ್ಯುಜ್ಜನಕಗಳ ದಕ್ಷತೆ ಹೆಚ್ಚೆಂದರೆ ಶೇಕಡ ೪೦ ಎಂಬುದನ್ನು ನೆನಪಿಗೆ ತಂದುಕೊಂಡರೆ ಇಂಧನಕೋಶಗಳಲ್ಲಿ ವಿಜ್ಞಾನಿಗಳಿಗಿರುವ ಆಸಕ್ತಿಯ ಮರ್ಮದ ಅರಿವು ನಮಗಾಗುತ್ತದೆ.




ಚಿತ್ರ-೨ **ಜಲಾಮ್ಲ ಇಂಧನ ಕೋಶ**

ಇಂಧನಕೋಶದ ಸಾಮಾನ್ಯ ರಚನೆಯನ್ನು ಮೇಲಿನ ಚಿತ್ರ ತಿಳಿಸುತ್ತದೆ. ಇದರಲ್ಲಿ ರಂಧ್ರಮಯವಾದ ಇಂಗಾಲದ ಎರಡು ವಿದ್ಯುದ್ಧ್ರುವಗಳನ್ನು ಪೊಟಾಸಿಯಂ ಕ್ಷಾರದ ದ್ರಾವಣದಲ್ಲಿ ಅದ್ದಿ ನಿಲ್ಲಿಸಿದ್ದಾರೆ. ಒಂದು ಧ್ರುವದ ಹಿಂದಿನ ಅನಿಲ ಕುಹರದೊಳಗೆ ಜಲಜನಕ ಅನಿಲವನ್ನು ಬಿಡುತ್ತಾರೆ. ಇದು ಋಣ ಧ್ರುವ. ಇನ್ನೊಂದರ ಹಿಂದಿನ ಅನಿಲ ಕುಹರದೊಳಗೆ ಆಮ್ಲಜನಕವನ್ನು ಬಿಡುತ್ತಾರೆ. ಇದು ಧನ ಧ್ರುವ. ವಿದ್ಯುದ್ದ್ರಾವಣದ ಮೇಲೆ ಇಟ್ಟಿರುವ ಕೊಳವೆ ನೀರಿನ ಆವಿಯನ್ನು ಎತ್ತಿಕೊಂಡು ಹೋಗುತ್ತದೆ.

ಅತಿ ಸರಳರಚನೆಯ ಈ ಕೋಶದ ಶಕ್ತಿ ಪರಿವರ್ತನ ಕಾರ್ಯವನ್ನು ರಾಸಾಯನಿಕ ಕ್ರಿಯಾವೇಗವರ್ಧಕಗಳನ್ನುಪಯೋಗಿಸಿಯೂ ವಿದ್ಯುದ್ಧ್ರುವಗಳ ಶಿಲ್ಪಕಾರ್ಯಕ್ಕೆ ಹೆಚ್ಚು ಗಮನ ಕೊಟ್ಟೂ ತುಂಬ ಉತ್ತಮ ಪಡಿಸಬಹುದು. ಉದಾಹರಣೆಗೆ ಸ್ವೀಡನ್ನಿನ ಸುಪ್ರಸಿದ್ಧ ವಿದ್ಯುದ್ಯಂತ್ರ ನಿರ್ಮಾಪಕರಾದ ASEA ಕಂಪೆನಿಯವರು ನಿಕಲ್ ಲೋಹವನ್ನೂ ಕ್ರಿಯಾವೇಗವರ್ಧಕಗಳನ್ನೂ ಸ್ತರ ಸ್ತರಗಳಾಗಿ ಜೋಡಿಸಿ ಕಟ್ಟಿ, ಅವುಗಳ ಮಧ್ಯೆ ದ್ರಾವಣ ಮತ್ತು ಅನಿಲಗಳು ಪರ್ಯಾಯವಾಗಿ ಹರಿಯುವಂತೆ ನಾಳಗಳನ್ನು ಒದಗಿಸಿ ವಿದ್ಯುದ್ಧ್ರುವ ಫಲಕಗಳನ್ನು ತಯಾರಿಸುತ್ತಾರೆ. ಆಮ್ಲಜನಕದ ಧ್ರುವದಲ್ಲಿ ಬೆಳ್ಳಿಯನ್ನು ಕ್ರಿಯಾವೇಗವರ್ಧಕವಾಗಿ ಉಪಯೋಗಿಸುತ್ತಾರೆ. ಜಲಜನಕದ ಧ್ರುವಕ್ಕೆ ಅನುಕೂಲವಾದ ವೇಗವರ್ಧಕ ಇನ್ನೂ ಪತ್ತೆಯಾಗಿಲ್ಲ. ಇಂಥ ಕೋಶಗಳನ್ನು ಒಂದರ ಪಕ್ಕದಲ್ಲೊಂದನ್ನು ಸೇರಿಸಿ ಇಟ್ಟಿಗೆಯಾಕಾರದ ಘಡೂತಿಯಾದ ಇಂಧನಕೋಶದ ವ್ಯೂಹಗಳನ್ನು ಅವರು ತಯಾರಿಸಿದ್ದಾರೆ. ಇಂಥ ಕೋಶಗಳಿಗೆ HYDROX ಅಂದರೆ ಜಲಾಮ್ಲ ಕೋಶಗಳೆಂದು ಹೆಸರು. ASEA ಅವರು ಅಮೋನಿಯವನ್ನು ಇಂಧನವಾಗಿಯೂ ಆಮ್ಲಜನಕವನ್ನು ದಹನ ಭರಣ ಸಾಮಗ್ರಿಯಾಗಿಯೂ ಉಪಯೋಗಿಸಿ AMOX ಕೋಶವನ್ನು ಹೊಸದಾಗಿ ಕಾರ್ಯರೂಪಕ್ಕೆ ತರುವ ಕೆಲಸದಲ್ಲಿ ಈಗ ನಿರತರಾಗಿದ್ದಾರೆ. ಅಮೇರಿಕದ ಜನರಲ್ ಇಲೆಕ್ಟ್ರಿಕ್ ಕಂಪೆನಿಯವರು ಅಯೋಣು ವಿನಿಮಯ ಪಟಲವನ್ನು ವಿದ್ಯುದ್ದ್ರಾವಣವಾಗಿ ಉಪಯೋಗಿಸಿಕೊಂಡು ಜಲಾಮ್ಲ ಕೋಶವನ್ನು ರಚಿಸಿ ಕಾರ್ಯರೂಪಕ್ಕೆ ತಂದಿದ್ದಾರೆ.

ಜಲಾಮ್ಲ ಇಂಧನಕೋಶದಿಂದ ನಾವು ಪಡೆಯಬಹುದಾದ ಸಾಮರ್ಥ್ಯ ಅದರ ತಾಪ ಹೆಚ್ಚಿದಂತೆ ಹೆಚ್ಚುತ್ತದೆ. ಉದಾಹರಣೆಗೆ ೨೫ ಸೆಂಟಿಗ್ರೇಡ್ ತಾಪದಲ್ಲಿ ಕೆಲಸ ಮಾಡುವ ಇಂಧನಕೋಶದಿಂದ

ಸೆಳೆಯಬಹುದಾದ ವಿದ್ಯುತ್ಪ್ರವಾಹದ ಹತ್ತರಷ್ಟು ಪ್ರವಾಹವನ್ನು ೨೦೦ ಡಿಗ್ರಿಗಳಲ್ಲಿ ಕೆಲಸ ಮಾಡುವ ಅದೇ ಗಾತ್ರದ ಕೋಶದಿಂದ ಸೆಳೆಯಬಹುದು. ಕೋಶವನ್ನು ಆ ಅಧಿಕ ತಾಪದಲ್ಲಿಡುವುದಕ್ಕೆ ಶಕ್ತಿ ವ್ಯಯವನ್ನು ಮಾಡಬೇಕಾಗುತ್ತದೆ ಎಂಬುದನ್ನು ಮಾತ್ರ ನಾವು ಮರೆಯಬಾರದು.

ಇಂಧನಕೋಶದ ಚೊಕ್ಕತನ, ದಕ್ಷತೆ ಮತ್ತು ನಿಶ್ಶಬ್ದತೆಗಳು ಅಪೂರ್ವ ಗುಣಗಳು. ಅದರಿಂದಲೆ ವಿದ್ಯುಚ್ಛಕ್ತಿಯನ್ನು ಪಿಂಡಿ ಪಿಂಡಿಗಳಾಗಿ ಒದಗಿಸಬಲ್ಲ ಇತರ ಸಾಂಪ್ರದಾಯಿಕ ಕೋಶಗಳಿಗಿಂತ ಹೆಚ್ಚಾಗಿ ಇದು ವಿಜ್ಞಾನಿಗಳ ಮನ ಸೆಳೆದಿರುವುದು. ಏಕದಿಕ್ಪ್ರವಾಹದ ವಿದ್ಯುತ್ತಿನಿಂದಲೆ ಅನುಕೂಲವಾಗಿ ನಡೆಸಬಹುದಾದ ರೈಲು ಎಂಜನುಗಳಲ್ಲಿ, ಮಣ್ಣು ಸಾಗಿಸುವ ಯಂತ್ರಗಳಲ್ಲಿ, ಖನಿಜಯಂತ್ರಗಳಲ್ಲಿ, ಜಲಾಂತರ್ಗಾಮಿ ನೌಕೆಗಳಲ್ಲಿ ಇಂಧನಕೋಶಗಳ ಇತರ ವಿದ್ಯುಜ್ಜನಕಗಳೊಂದಿಗೆ ಯಶಸ್ವಿಯಾಗಿ ಸ್ಪರ್ಧಿಸಬಲ್ಲವು. ಡೀಜೆಲ್ ಯಂತ್ರದಿಂದ ಓಡುವ ಜಲಾಂತರ್ಗಾಮಿ ನೌಕೆಯ ಕ್ರಿಯಾಕಾಲಕ್ಕಿಂತ ಮೂವತ್ತರಷ್ಟು ಹೆಚ್ಚುಕಾಲ ದ್ರವರೂಪದ ಜಲಜನಕ-ಆಮ್ಲಜನಕಗಳ ಇಂಧನಕೋಶಗಳಿಂದ ಓಡುವ ನೌಕೆ ಯಾನಮಾಡಬಲ್ಲದು ಎಂದು ಅಂದಾಜಾಗಿದೆ. ಇದು ಪರಮಾಣು ಬೀಜ ಶಕ್ತಿ ಯಂತ್ರಗಳಿಂದ ಸಜ್ಜಾಗಿರುವ ನೌಕೆಗಳ ಕ್ರಿಯಾಕಾಲಕ್ಕಿಂತ ತುಂಬ ಕಡಮೆಯೇನಲ್ಲ. ಅಷ್ಟೇ ಅಲ್ಲ ಚಂದ್ರಲೋಕ, ಶುಕ್ರಲೋಕ, ಅಂಗಾರಕ ಲೋಕಗಳಿಗೆ ಕಳಿಸಬೇಕೆಂದಿರುವ ಅಂತರಿಕ್ಷ ನೌಕೆಗಳಿಗೆ ಬೇಕಾಗುವ ವಿದ್ಯುಚ್ಛಕ್ತಿಯನ್ನು ಇಂಧನಕೋಶಗಳಿಂದ ಒದಗಿಸುವುದು ಲಾಭದಾಯಕವಾದೀತೆಂದು ಅಮೇರಿಕನ್ನರು ಅನುಮಾನಿಸಿ ಆ ವಿಷಯವಾಗಿ ಸಂಶೋಧನೆ ನಡೆಸುತ್ತಿದ್ದಾರೆ.

## ೪. ಜೈವಿಕ ಶಕ್ತಿಕೋಶಗಳು

ಇಂಧನಕೋಶಗಳ ಪರಾಮರ್ಶೆಯಾದಮೇಲೆ ಜೈವಿಕಕೋಶಗಳನ್ನು ನಮ್ಮ ಪರಾಮರ್ಶನಕ್ಕೆತ್ತಿಕೊಳ್ಳುವುದು ಸಹಜವಾಗಿದೆ. ಏಕೆಂದರೆ ಈ ಎರಡಕ್ಕೂ ರಚನಾಸಾದೃಶ್ಯ ಬೇಕಾದಷ್ಟಿದೆ. ಇವುಗಳಿಗಿರುವ ಕ್ರಿಯಾವ್ಯತ್ಯಾಸ ಎರಡುಬಗೆಯದು. ಜೈವಿಕಕೋಶದಲ್ಲಿರುವ ವಿದ್ಯುದ್ಧ್ರುವಗಳು ಇಂಧನಕೋಶದಲ್ಲಿರುವಂಥ ಜಡ ವಸ್ತುಗಳಲ್ಲ, ಜೀವಂತ ವಸ್ತುಗಳು. ಎರಡನೆಯದಾಗಿ ಇವುಗಳ ರಾಸಾಯನಿಕ ಕ್ರಿಯೆಗೆ ಸೂರ್ಯನ ಬೆಳಕು ಅತ್ಯವಶ್ಯ. ಜೈವಿಕ ಕೋಶದ ಋಣಧ್ರುವ ಸಮುದ್ರದ ಹುಲ್ಲು, ಧನಧ್ರುವ-ಎಷರಿಕಿಯಾ ಕೋಲೈ ಎಂಬ ಸೂಕ್ಷ್ಮಕ್ರಿಮಿ. ಇದರ ವಾಸಸ್ಥಾನ ನಮ್ಮ ಕರುಳುಗಳು. ಇವುಗಳನ್ನು ಅದ್ದಿರುವ ದ್ರಾವಣ ಹೆಚ್ಚು ಕಡಿಮೆ ನೀರೇ-ನೀರಿನಲ್ಲಿ ತೃಣಕ್ರಿಮಿಗಳ ಸಾಮ್ಯ ಜೀವಕ್ರಿಯೆಯಿಂದ ಹುಟ್ಟಿದ ಪದಾರ್ಥಗಳು ಅಲ್ಪಸ್ವಲ್ಪ ಕರಗಿರುತ್ತವೆ, ಅಷ್ಟೇ.

ಋಣ ಧ್ರುವದಲ್ಲಿ ಹಸುರು ಅಲ್ಗೀ (ಸಮುದ್ರದ ಹುಲ್ಲು) ಗಾಳಿಯಿಂದ ಇಂಗಾಲಾಮ್ಲವನ್ನು ಹೀರಿ, ಕೋಶದಿಂದ ಜಲಜನಕ ನೀರುಗಳನ್ನು ತೆಗೆದುಕೊಂಡು ಸೂರ್ಯನ ಬೆಳಕಿನ ಸಹಾಯದಿಂದ ಅವನ್ನು ಜಲೇಂಗಾಲಾಮ್ಲ (ಕಾರ್ಬೊಹೈಡ್ರೇಟ್) ಗಳಾಗಿ ಸಂಶ್ಲೇಷಿಸುತ್ತದೆ. ಧನಧ್ರುವದ ಕೋಲೈ ಕ್ರಿಮಿ ಜಲೇಂಗಾಲಾಮ್ಲಗಳನ್ನು ತಿರುಗಿ ಇಂಗಾಲಾಮ್ಲ, ಜಲಜನಕ, ನೀರುಗಳಾಗಿ ವಿಶ್ಲೇಷಿಸುತ್ತದೆ. ಅಂದರೆ ವಿದ್ಯುದ್ಧ್ರುವಗಳು ಯಾವ ರಾಸಾಯನಿಕ ಬದಲಾವಣೆಯನ್ನೂ ಹೊಂದದೆ ಮೊದಲಿದ್ದಂತೆಯೇ ನಿಲ್ಲುತ್ತವೆ. ಆಗಿರುವ ಬದಲಾವಣೆಯೆಲ್ಲ ಸೂರ್ಯನ ಬೆಳಕಿನಲ್ಲಿರುವ ಶಕ್ತಿ ವಿದ್ಯುಚ್ಛಕ್ತಿಯ ರೂಪ ತಾಳಿರುವುದು ಮಾತ್ರ. ಆದ್ದರಿಂದ ಇಂಧನಕೋಶಗಳನ್ನು ರಾಸಾಯನಿಕ ವಿದ್ಯುತ್ಪರಿವರ್ತಕಗಳೆಂದು ಕರೆದರೆ ಜೈವಿಕ ಕೋಶಗಳನ್ನು ತೇಜೋವಿದ್ಯುತ್ಪರಿವರ್ತಕಗಳೆಂದು ಕರೆಯಬಹುದು.

ಜೈವಿಕ ಕೋಶ ಹಗುರವಾಗಿದೆ, ಅಡಕವಾಗಿದೆ, ಅದನ್ನು ಒಂದು ಸಲ ಮಾಡಿಟ್ಟಮೇಲೆ ತಿರುಗಿ ಹೆಚ್ಚು ಕಡಮೆ ಅನಿರ್ದಿಷ್ಟ ಕಾಲ ಅದಕ್ಕೆ ಯಾವ ಪದಾರ್ಥಗಳನ್ನೂ ಒದಗಿಸಬೇಕಾಗುವುದಿಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ಇದು ಯಾವ ಶುಶ್ರೂಷೆಯನ್ನೂ ನಮ್ಮಿಂದ ಅಪೇಕ್ಷಿಸುವುದಿಲ್ಲ. ಆದ್ದರಿಂದ ಅಂತರಿಕ್ಷ ನೌಕೆಗಳಿಗೆ ಬೇಕಾಗುವ ಅಲ್ಪ ಸ್ವಲ್ಪ ವಿದ್ಯುತ್ ಸಾಮರ್ಥ್ಯವನ್ನು ಒದಗಿಸುವುದಕ್ಕೆ ಅದು ಅಚ್ಚುಕಟ್ಟಾದ ಸಾಧನವಾದೀತು. ಅದಕ್ಕೆ ಬೇಕಾದ್ದೆಲ್ಲ ಸೂರ್ಯನ ಬೆಳಕು. ಯಾವಾಗಲೂ ಅದರ ಮೇಲೆ ಬೀಳುವಂತೆ ನೌಕೆಯ ನಿಲುವನ್ನು ಹತೋಟಿಯಲ್ಲಿಡಬಲ್ಲ ಸೂರ್ಯ ರಶ್ಮಿವೇಧಕವನ್ನು ನೌಕೆಗೆ ಜೋಡಿಸಿಟ್ಟಿರುವುದೆಷ್ಟೋ ಅಷ್ಟೆ.

## ೫. ಉಬ್ಬರವಿಳಿತಗಳಿಂದ ವಿದ್ಯುಜ್ಜನಕಗಳು

ತೃಣ, ಕ್ರಿಮಿಗಳಂಥ ಕೀಳುಮಟ್ಟದ ಸಸ್ಯ, ಪ್ರಾಣಿಗಳ ಜೀವಕ್ರಿಯೆಗಳನ್ನು ಅವು ಕ್ಷುಲ್ಲಕವೆಂದು ತಿರಸ್ಕರಿಸದೆ ಅವುಗಳಿಂದಲೂ ಪ್ರಯೋಜನ ಪಡೆಯುವ ಪ್ರಯತ್ನಗಳನ್ನು ಮಾಡಲು ಹೇಗೆ ನಾವು ಹಿಂಜರಿದಿಲ್ಲವೋ ಹಾಗೆಯೇ ಉಬ್ಬರವಿಳಿತಗಳಂಥ ಭೌತಕ್ರಿಯೆಗಳ ಪ್ರಚಂಡ ಶಕ್ತಿಯನ್ನು ಪಳಗಿಸಿ ಅದನ್ನು ನಮ್ಮ ಸೇವೆಗೆ ನಿಲ್ಲಿಸಿಕೊಳ್ಳುವ ಪ್ರಯತ್ನಗಳಿಗೆ ಕೈ ಹಾಕಲೂ ಹೆದರಿಲ್ಲ.

ಸೂರ್ಯನಾಗಲಿ, ಚಂದ್ರನಾಗಲಿ ಅದಕ್ಕೆ ನೇರವಾಗಿ ಎದುರಿಗಿರುವ— ಅಭಿಮುಖವಾಗಿರುವ ಭೂಭಾಗವನ್ನು ಆಕರ್ಷಿಸುವ ಬಲ, ಆ ಭೂಭಾಗದ ಅಭಿಪಾದಿಭಾಗವನ್ನು ಆಕರ್ಷಿಸುವ ಬಲಕ್ಕಿಂತ ಹೆಚ್ಚಾಗಿರುತ್ತದೆ. ಈ ಎರಡು ಆಕರ್ಷಣೆಗಳಿಗಿರುವ ವ್ಯತ್ಯಾಸವೇ ಉಬ್ಬರವಿಳಿತಗಳಿಗೆ ಕಾರಣ. ಇದರಿಂದಲೇ ಪ್ರತಿದಿನವೂ ಮಧ್ಯಾಹ್ನಕಾಲದಲ್ಲಿಯೂ ಮಧ್ಯರಾತ್ರಿಯ ಕಾಲದಲ್ಲಿಯೂ ಸಮುದ್ರ ತೀರಗಳಲ್ಲಿ ನೀರು ನೆಲದಕಡೆ ಮುನ್ನುಗ್ಗುತ್ತದೆ, ಸೂರ್ಯೋದಯಾಸ್ತಗಳಲ್ಲಿ ಸರಾಸರಿ ಅಂಚಿನಿಂದ ಹಿಂದಕ್ಕೆ ಸಮುದ್ರಕ್ಕೇ ಓಡುತ್ತದೆ. ಇದೇ ರೀತಿಯಲ್ಲಿ ಚಂದ್ರನು ನೆತ್ತಿಯ ಮೇಲಿದ್ದಾಗ ಮತ್ತು ಚಂದ್ರನು ನಮ್ಮ ಅಭಿಪಾದಿಸ್ಥಾನದ ಮೇಲಿದ್ದಾಗ ಸಮುದ್ರ ಉಬ್ಬರಿಸುತ್ತದೆ. ಆ ಕಾಲಗಳ ಮಧ್ಯಕಾಲಗಳಲ್ಲಿ ಸಮುದ್ರ ಇಳಿಯುತ್ತದೆ. ಚಂದ್ರನು ಭೂಮಿಗೆ ಸೂರ್ಯನಿಗಿಂತ ತುಂಬ ಹತ್ತಿರವಿರುವುದರಿಂದ, ಚಂದ್ರನ ಎಬ್ಬಿಸುವ ಉಬ್ಬರವಿಳಿತಗಳು ಸೂರ್ಯನೆಬ್ಬಿಸುವುವಕ್ಕಿಂತ ಪ್ರಬಲವಾಗಿರುತ್ತವೆ. ಭೂಪ್ರದಕ್ಷಿಣೆ ಮಾಡಲು ಚಂದ್ರ ತೆಗೆದುಕೊಳ್ಳುವ ಸರಾಸರಿ ಕಾಲ ೨೪ ಘಂಟೆ ೫೦ ನಿಮಿಷಗಳಾದ್ದರಿಂದ ಚಂದ್ರನ ಉಬ್ಬರಗಳು ೧೨ ಘಂಟೆ ೨೫ ನಿಮಿಷಗಳಿಗೊಂದು ಸಲ ಕಾಣಿಸಿಕೊಳ್ಳುತ್ತವೆ. ಎರಡು ಉಬ್ಬರಗಳ ಮಧ್ಯೆ ಒಂದು ಇಳಿತವಿರಲೇಬೇಕೆಂಬುದನ್ನು ನೆನಪಿಟ್ಟುಕೊಳ್ಳಬೇಕು.

ಪ್ರಪಂಚದ ತೀರಗಳಲ್ಲೆಲ್ಲ ಹೀಗೆ ಮುನ್ನುಗ್ಗಿ, ಹಿನ್ನುಗ್ಗುತ್ತಿರುವ ನೀರುಗಳ ಚಲನಶಕ್ತಿಯನ್ನೆಲ್ಲ ಉಪಯುಕ್ತ ರೂಪಕ್ಕೆ ತಿರುಗಿಸಿಕೊಳ್ಳುವುದು ಸಾಧ್ಯವಾದರೆ ಅದು ಪ್ರಪಂಚಕ್ಕೆ ಬೇಕಾಗುವ ಶಕ್ತಿಯ ಅರ್ಧದಷ್ಟಾಗುತ್ತದೆ. ಆದರೆ ಆ ಶಕ್ತಿಯಲ್ಲಿ ಸಾವಿರದಲ್ಲಿ ಮೂರು ಭಾಗಕ್ಕಿಂತ ಹೆಚ್ಚನ್ನು ನಮ್ಮ ಹತೋಟಿಗೆ ನಾವೆಂದೂ ತಂದುಕೊಳ್ಳಲಾರೆವೆಂದು ಕಾಣುತ್ತದೆ.

ಉಬ್ಬರ, ಇಳಿತಗಳಲ್ಲಿ ನೀರಿನ ಮಟ್ಟಗಳಿರುವ ವ್ಯತ್ಯಾಸ ಕೆಲವು ತೀರಗಳಲ್ಲಿ—ಭೂಮಧ್ಯಸಮುದ್ರ ತೀರಗಳಲ್ಲಿ — ಎರಡು ಅಡಿಗಳಷ್ಟಿದ್ದರೆ, ಕೆಲವು ಕಡೆ ಕೆನಡಾದ ಪೂರ್ವತೀರದಲ್ಲಿರುವ ಫಂಡೀ ಕೊಲ್ಲಿಯಲ್ಲಿ— ಎಂಬತ್ತಡಿಗಳಷ್ಟಿರುತ್ತದೆ. ಈ ವ್ಯತ್ಯಾಸ ಇಪ್ಪತ್ತಡಿಗಳಿಗಿಂತ ಕಡಮೆ ಇದ್ದರೆ ಶಕ್ತ್ಯುತ್ಪತ್ತಿಯ ದೃಷ್ಟಿಯಿಂದ ನಮಗೆ ಅನುಪಯುಕ್ತವೆಂದು ಅಂದಾಜಾಗಿದೆ. ಉಬ್ಬರವಿಳಿತಗಳು ನಮಗಾಗಿ ದುಡಿಯುವಂತೆ ಮಾಡಬೇಕಾದರೆ ಅವುಗಳ ಮಟ್ಟಗಳಿಗಿರುವ ವ್ಯತ್ಯಾಸ ಇಪ್ಪತ್ತಡಿಗಳಿಗಿಂತ ಹೆಚ್ಚಾಗಿರಬೇಕಾದದ್ದೇ ಅಲ್ಲದೆ ಇತರ ಅನುಕೂಲ ಪರಿಸ್ಥಿತಿಗಳೂ ಒದಗಿ ಬರಬೇಕು. ಮೊದಲನೆಯದಾಗಿ ಇಂಥ ವಿದ್ಯುತ್ ಸ್ಥಾವರಗಳಿಗೆ ನದೀ ಮುಖವಿರುವ ತೀರವನ್ನೇ ನಾವು ಆರಿಸಿಕೊಳ್ಳಬೇಕು. ಎರಡನೆಯದಾಗಿ ಆ ನದಿಯ ಅಗಲ ತುಂಬ ಇರಬಾರದು, ಮೂರನೆಯದಾಗಿ ನದೀಮುಖದ ಅಕ್ಕಪಕ್ಕದ ಸಮುದ್ರದ ಅಂಚಿನ ವಿನ್ಯಾಸ ಸಮುದ್ರದ ನೀರು ಸಾಕಷ್ಟು ವೇಗದಿಂದ ನದಿಯೊಳಕ್ಕೆ ಹರಿಯುವುದಕ್ಕೂ ನದಿಯಿಂದ ಹರಿದು ಸಮುದ್ರಭಾಗವನ್ನು ಸೇರುವುದಕ್ಕೂ ಅನುಕೂಲವಾಗಿರಬೇಕು.

ಇದು ವರೆಗೆ ನಡೆಸಿರುವ ಪರಿಶೀಲನೆಗಳಿಂದ ಅಮೇರಿಕದ ಮೇಯ್ನ್ ಸಂಸ್ಥಾನದಲ್ಲಿರುವ ಹಡ್ಸನ್ ನದೀ, ದಕ್ಷಿಣ ಇಂಗ್ಲೆಂಡಿನ ಸೆವರ್ನ್ ನದೀ, ದಕ್ಷಿಣ ಅಮೇರಿಕಾದ ಅರ್ಜೆಂಟೈನಾದ ಶಾನ್‌ಜೊಸೆ ಮತ್ತು ಡೆಸಿಯಾಡೋ ನದಿಗಳು, ಕೆನಡಾದ ಫಂಡಿ ಕೊಲ್ಲಿಯ ಪೆಟಿಟ್‌ಕೋಡಿಯಾಕ್ ಮತ್ತು ಮೆಮ್‌ರಾಮ್‌ಕುಕ್ ನದೀ ಮುಖಗಳು ಮತ್ತು ಉತ್ತರ ಫ್ರಾನ್ಸ್‌ನ ರಾನ್ಸ್ ನದೀಮುಖ ಇವನ್ನು ಬಿಟ್ಟರೆ ಇತರ ಅನುಕೂಲ ನಿವೇಶಗಳಿದ್ದಂತೆ ಕಂಡುಬಂದಿಲ್ಲ. ಇವುಗಳಲ್ಲಿ ಫ್ರಾನ್ಸ್‌ನ ರಾನ್ಸ್ ನದೀ ಮುಖದಲ್ಲಿ ಮಾತ್ರ ವಿದ್ಯುಜ್ಜನಕ ಕೇಂದ್ರ ಈಗ ಸ್ಥಾಪನೆಯಾಗುತ್ತಿದೆ. ಇದು ಪ್ರಪಂಚದ ಮೊಟ್ಟಮೊದಲ ಉಬ್ಬರವಿಳಿತದ ವಿದ್ಯುಚ್ಛಕ್ತಿ ಕೇಂದ್ರವಾಗಲಿದೆ.

ಅನುಕೂಲವಾದ ಸನ್ನಿವೇಶ ಹೇಗಿರಬೇಕು

ಎಂಬುದನ್ನು ತೋರುವುದಕ್ಕಾಗಿ ರಾನ್ಸ್ ನದೀ ಮುಖ ಮತ್ತು ಅದರ ಅಕ್ಕಪಕ್ಕದ ನಕ್ಷೆಯನ್ನು ಕೆಳಗೆ ಕೊಟ್ಟಿದೆ. ನದಿಗೆ ಅಣೆಕಟ್ಟು ಹಾಕಿರುವ ಸ್ಥಳದಲ್ಲಿ ನದಿಯ ಅಗಲ ಅರ್ಧಮೈಲಿಗಿಂತ ಸ್ವಲ್ಪ ಕಡಮೆ ಇದೆ, ನದೀ ಮುಖದಿಂದ ಅದಿರುವ ದೂರ ಎರಡೂವರೆ ಮೈಲಿಗಳು ಮಾತ್ರ ಇದೆ. ಮತ್ತು ಸಮುದ್ರದ ಇಳಿತದ ಕಾಲದಲ್ಲಿ ನದಿಯ ಆಳ ಮುವ್ವ-




ಚಿತ್ರ-೩ ರಾನ್ಸ್ ನದೀಮುಖದ ನಕ್ಷೆ

ತ್ತೊಂಬತ್ತಡಿ ಮಾತ್ರ ಇರುತ್ತದೆ. ಈ ಅಂಕಿ ಅಂಶಗಳಿಂದ ನಾವು ತಿಳಿದುಕೊಳ್ಳಬೇಕಾದ ಸಂಗತಿ: ನದಿಯನ್ನು ಸಮುದ್ರದಿಂದ ಪ್ರತ್ಯೇಕಿಸಬಲ್ಲ ಅಣೆಕಟ್ಟನ್ನು ಇದ್ದುದರಲ್ಲಿ ಅಲ್ಪವ್ಯಯದಿಂದ ನಿರ್ಮಿಸಬಹುದು ಎಂದು. ಇತರ ಅಂಕಿ ಅಂಶಗಳು ಹೀಗೆ: ಉಬ್ಬರ ಇಳಿತಗಳ ಮಟ್ಟಗಳ ವ್ಯತ್ಯಾಸ ೪೪।। ಅಡಿಗಳು ಮತ್ತು ಉಬ್ಬರವಿಳಿತಗಳ ರಭಸ ಅತ್ಯಧಿಕವಾಗಿರುವ ವೇಳೆಗಳಲ್ಲಿ ನೀರಿನ ಪ್ರವಾಹ ಸೆಕೆಂಡೊಂದಕ್ಕೆ ಆರೂಕಾಲು ಲಕ್ಷ ಘನ ಅಡಿಗಳನ್ನು ಮುಟ್ಟುತ್ತದೆ.

ಇನ್ನು ಉಭಯದಿಕ್ಪ್ರವಾಹಗಳಿಂದ ವಿದ್ಯುಚ್ಛಕ್ತಿಯನ್ನುತ್ಪತ್ತಿಸುವ ವಿಧಾನವನ್ನು ಕುರಿತು ಎರಡು ಮಾತುಗಳು. ಉಬ್ಬರದ ಕಾಲದಲ್ಲಿ ಅಣೆಕಟ್ಟಿನ ತೂಬುಗಳನ್ನು ತೆಗೆದಿರುತ್ತಾರೆ. ಆಗ ಸಮುದ್ರದಿಂದ ನೀರು ಏರಿಯ ಹಿಂಭಾಗಕ್ಕೆ ಹರಿಯುವಾಗ ನದಿಯ ತಳದಲ್ಲಿಟ್ಟಿರುವ ಟರ್ಬೈನ್‌ನ ಚಕ್ರಗಳನ್ನು ತಿರುಗಿಸುವುದೇ ಅಲ್ಲದೆ ಅಣೆಕಟ್ಟನ್ನೂ ತುಂಬುತ್ತದೆ. ಉಬ್ಬರ ಅತ್ಯಧಿಕ ಎತ್ತರವನ್ನು ಮುಟ್ಟಿದಾಗ ತೂಬಿನ ಬಾಗಿಲುಗಳನ್ನು ಮುಚ್ಚುತ್ತಾರೆ. ಇಳಿತ ಆರಂಭವಾದ ಮೇಲೆ ಸಮುದ್ರದ ದಿಕ್ಕಿನಲ್ಲಿ ನೀರಿನ ಮಟ್ಟ ಸಾಕಷ್ಟು ಕಡಮೆಯಾದಾಗ ಇಳಿತದ ಪ್ರವಾಹ ಜಲಾಶಯದಿಂದ ಸಮುದ್ರದ ದಿಕ್ಕಿನಲ್ಲಿ ಹರಿಯುತ್ತದೆ. ಫ್ರೆಂಚರ ಯೋಜನೆಯ ಟರ್ಬೈನಿನಲ್ಲಿ ಇರುವ ವೈಶಿಷ್ಟ್ಯ, ಅದರ ಚಕ್ರಗಳಿಗೆ ಜೋಡಿಸಿರುವ ಎರಡು—ಮುಖಗಳ ಅಲಗುಗಳು. ಇವು ನೀರು ಸಮುದ್ರದ ಕಡೆ ಹರಿಯುವಾಗಲೂ ಜಲಾಶಯದ ಕಡೆ ಹರಿಯುವಾಗಲೂ ಟರ್ಬೈನನ್ನು ಒಂದೇ ದಿಕ್ಕಿನಲ್ಲಿ ತಿರುಗಿಸುತ್ತವೆ. ಈಗ ಟರ್ಬೈನ್‌ಗೆ ವಿದ್ಯುಜ್ಜನಕವನ್ನು ಜೋಡಿಸಿದರೆ ಸಂಪ್ರದಾಯದಂತೆ ವಿದ್ಯುಚ್ಛಕ್ತಿ ಉತ್ಪತ್ತಿಯಾಗುತ್ತದೆ.

ರಾನ್ಸ್ ನದೀ ಸ್ಥಾವರದಲ್ಲಿ ನದೀ ಪಾತ್ರದಿಂದ ಕೆಳಗೆ ೩೩ ಅಡಿ ಆಳದ ಗುಳಿಯನ್ನು ತೋಡಿ ಅದರಲ್ಲಿ ೨೪ ವಿದ್ಯುಜ್ಜನಕಗಳನ್ನು ಸ್ಥಾಪಿಸುತ್ತಿದ್ದಾರೆ. ಅವುಗಳ ಚಕ್ರಗಳ ಭ್ರಮಣವೇಗ ನಿಮಿಷಕ್ಕೆ ೯೩ ಸುತ್ತುಗಳು. ಒಂದೊಂದು ವಿದ್ಯುಜ್ಜನಕದ ಸಾಮರ್ಥ್ಯವೂ ೧೦,೦೦೦ ಕಿಲೋವಾಟ್‌ಗಳು. ಇಂಥ ಒಂದು ವಿದ್ಯುಜ್ಜನಕದಿಂದ ೧೦,೦೦೦ ಕಿಲೋವಾಟ್‌ಗಳನ್ನು ಯಶಸ್ವಿಯಾಗಿ ಆಗಲೇ ಉತ್ಪಾದಿಸಿದ್ದಾರೆ. ಅಲ್ಲಿಗೆ ಕೇಂದ್ರದ ಒಟ್ಟು ಸಾಮರ್ಥ್ಯ ೨,೪೦,೦೦೦ ಕಿಲೋವಾಟ್‌ಗಳಾಗುತ್ತದೆ. ಈ ಉದ್ಯಮಕ್ಕೆ ಬೆಂಬಲವಾಗಿ ಫ್ರೆಂಚ್ ವಿಜ್ಞಾನಿಗಳೂ ಯಂತ್ರಜ್ಞರೂ ೨೦ ವರ್ಷಗಳ ಕಾಲ ಸತತವಾಗಿ ನಡೆಸಿದ ಸಂಶೋಧನೆ ಇದೆ.

## ೬. ತಾಪ ವಿದ್ಯುಚ್ಛ್ಲೇಷ ಶಕ್ತಿಜನಕಗಳು

ವಿಲಕ್ಷಣ ಶಕ್ತಿಜನಕಗಳ ಈ ಪರಿಶೀಲನೆಯನ್ನು ತಾಪ ವಿದ್ಯುಚ್ಛ್ಲೇಷ ಜನಕಗಳ ಉಪಯುಕ್ತತೆಯ ಸಾಧ್ಯಾಸಾಧ್ಯತೆಗಳನ್ನು ವಿಮರ್ಶಿಸಿ ಮುಗಿಸುತ್ತೇವೆ. ಬೇರೆ ಬೇರೆ ಲೋಹಗಳ ಎರಡು ತಂತಿಗಳ ತುದಿಗಳನ್ನು ಒಂದುಗೂಡಿಸಿ—ಶ್ಲೇಷಿಸಿ—ಅವುಗಳಲ್ಲಿ ಒಂದು ಜಂಟಿತುದಿಯನ್ನು ಕಾಸಿ ಇನ್ನೊಂದನ್ನು ತಣ್ಣಗೇ ಇಟ್ಟಿದ್ದರೆ, ಆ ಸುತ್ತಿನಲ್ಲಿ ವಿದ್ಯುತ್ಪ್ರವಾಹವುಂಟಾಗುತ್ತದೆಂಬುದನ್ನು ಪ್ರಾಯಶಃ ಅನೇಕರು ಬಲ್ಲರು. ಆದರೆ ಈ ಪ್ರವಾಹವನ್ನು ಉಪಯುಕ್ತವಾಗುವಷ್ಟರ ಮಟ್ಟಕ್ಕೆ ಏರಿಸಲಾದೀತೆಂದು ಯಾರೂ ಅಂದುಕೊಂಡಿರಲಿಲ್ಲ. ಈ ಪರಿಸ್ಥಿತಿ ೧೯೬೧ ರಲ್ಲಿ ಬದಲಾಯಿಸಿತು. ಆ ವರ್ಷ ಅಮೇರಿಕದ ನೌಕಾಶಾಖೆಯುವರು ಭೂಪ್ರದಕ್ಷಿಣಪಥದಲ್ಲಿ ನಿಲ್ಲಿಸಿದ ನೌಕಾಯಾನ ಸಂಕ್ರಮ ಉಪಗ್ರಹದಲ್ಲಿ SNAP (ಸಹಾಯಕ ಬೈಜಿಕಸಾಮರ್ಥ್ಯ ವ್ಯವಸ್ಥೆ) ಎಂಬ ಹೆಸರಿನ ತಾಪ ವಿದ್ಯುಚ್ಛ್ಲೇಷಜನಕವನ್ನು ಉಪಗ್ರಹಕ್ಕೆ ಶಕ್ತಿಯನ್ನೊದಗಿಸುವುದಕ್ಕೆಂದು ಸ್ಥಾಪಿಸಿದರು. ಆ ಶ್ಲೇಷಗಳನ್ನು ಅವರು ೨೩೮ರ ಭಾರಾಂಕದ ಪ್ಲುಟೋನಿಯಂ ವಿಕಿರಣಧಾತು ಪ್ರಸಾರ ಮಾಡುವ ಕಣ, ಕಿರಣಗಳಿಂದ ಬಿಸಿಯಾಗಿಟ್ಟಿದ್ದಾರೆ. ಈ ಶ್ಲೇಷಜನಕದ ಸಾಮರ್ಥ್ಯ ಸುಮಾರು ೫ ವಾಟ್‌ಗಳು, ಇದು ೫ ವರ್ಷಗಳ ಕಾಲ ಬಾಳುತ್ತದೆಂಬ ನಿರೀಕ್ಷೆಯಿದೆ.

ಇಂಥ ಶ್ಲೇಷ ಶಕ್ತಿಜನಕಗಳಲ್ಲೆಲ್ಲ ಅತ್ಯಂತ ಪ್ರಬಲವಾದದ್ದನ್ನು ಅಮೇರಿಕದ ವೆಸ್ಟಿಂಗ್‌ಹೌಸ್ ಇಲೆಕ್ಟ್ರಿಕ್ ಕಾರ್ಪೊರೇಷನ್ನಿನವರು ರಚಿಸಿ ಪರೀಕ್ಷೆ

ಗೊಳಪಡಿಸಿದ್ದಾರೆ. ಇದರ ಸಾಮರ್ಥ್ಯ ೫,೦೦೦ ವಾಟ್‌ಗಳು. ಇವರು ೮೫ ತಾಪವಿದ್ಯುಚ್ಛ್ಲೇಷಗಳನ್ನು ಕೂಡಿಸಿ ಒಂದೊಂದು ಕಟ್ಟನ್ನು ಮಾಡಿದ್ದಾರೆ. ಇಂಥ ೧೪ ಕಟ್ಟುಗಳನ್ನು ವರ್ತುಲಾಕಾರವಾಗಿ ಜೋಡಿಸಿ, ಅಂಥದೇ ೧೪ ಕಟ್ಟುಗಳ ಇನ್ನೊಂದು ವರ್ತುಲವನ್ನು ಅದರ ಮೇಲಿಟ್ಟಿದ್ದಾರೆ. ವರ್ತುಲಯುಗ್ಮದ ಮಧ್ಯೆ ಕಲ್ಲಿದ್ದಲ ಕುಲುಮೆಯನ್ನಿಟ್ಟು ಶ್ಲೇಷಗಳನ್ನು ಬಿಸಿಗೇರಿಸುತ್ತಾರೆ. ಒಂದೊಂದು ಕಟ್ಟೂ ೮॥ ವೋಲ್ಟ್‌ಗಳನ್ನು ಇನ್ನೂರು ವಾಟ್‌ಗಳ ಸಾಮರ್ಥ್ಯದಲ್ಲಿ ಉತ್ಪತ್ತಿಸುತ್ತದೆ. ಶ್ಲೇಷಗಳಿಗೆ ಉಪಯೋಗಿಸುವ ಸಾಮಗ್ರಿಗಳು ಸೀಸ—ಟೆಲ್ಲೂರಿಯಂ, ಜರ್ಮೇನಿಯಂ-ಟೆಲ್ಲೂರಿಯಮ್‌ನಂಥ ಲೋಹಮಿಶ್ರಗಳು.

ಸಣ್ಣಗಾತ್ರದ ಶೈತ್ಯಪೇಟಿಕೆಗಳಿಗೆ—ರೆಫ್ರಿಜರೇಟರ್‌ಗಳಿಗೆ—ಶಕ್ತಿಯನ್ನೊದಗಿಸುವುದರಲ್ಲಿ ತಾಪವಿದ್ಯುಚ್ಛ್ಲೇಷಗಳು ಇತರ ಸಾಂಪ್ರದಾಯಿಕ ಶಕ್ತಿಜನಕಗಳೆದುರು ಸಮ ಸ್ಪರ್ಧಿಗಳಾಗಿ ಇಂದು ನಿಲ್ಲಬಲ್ಲವು.

**೭. ಉಪಸಂಹಾರ**

ಹೊಸ ಶಕ್ತಿಮೂಲಗಳ ಮತ್ತು ವಿಧಾನಗಳ ಮಾನವನ ಅನ್ವೇಷಣೆ ಹೀಗೆ ವಿರಾಮವಿಲ್ಲದೆ ಮುನ್ನುಗ್ಗುತ್ತಿದೆ.



ಅಂ! ನೀವು ಹೇಳಿದ್ದೇನು ?



## ದೈವೀಜೀವನ

೧

ಶ್ರದ್ಧೆಯು ಸುವರ್ಣ ತಂತುಗಳಲ್ಲಿ
ನಿರ್ಮಿಸಿದಂತಹ ಪಂಜರದಲ್ಲಿ
ಮನದ ಹಕ್ಕಿಯುನ್ನು ಇರಿಸಿ ಬಿಡು
ಕ್ರಿಯು ಅತ್ಯುತ್ಕಟತೆಯು ಊರ್ಮಿಯು
ಕೊಂಡಿ ಕೂಡಿಸಿದ ಸರಪಳಿಯಿಂದ
ಬುದ್ಧಿಯು ಪಶುವನು ಬಂಧಿಸಿಡು
ಅನನ್ಯ ಶರಣಾಗತಿಯು ಭಾವದಾ
ತಿಳಿತಿಳಿ ನೀರಿನ ಗಂಗೆಯುಲಿ
ಅಹಂಕಾರವನು ತೇಲಿಬಿಡು
ಪರಮಾತ್ಮನ ಪದಪದುಮಗಳಲ್ಲಿ
ಅನಂತ ಶಾಂತಿಯು ಆಶ್ರಯುದಲ್ಲಿ
ಚಿತ್ತ ಚೇತನವ ಕೆಡವಿಬಿಡು

೨

ನೋಡಾ ಬಳಿಕಾನಂದದ ಸವಿಯು
ನೋಡಾ ಬಳಿಕಾ ತಿಳಿವಿನ ಝರಿಯು
ಸಾಗರದೆಡೆಗೇ ಸಾಗರಬಿದ್ದು
ಬಂದಡೆತಡೆಗಳನೆಲ್ಲಾ ಒದ್ದು
ಕ್ಷಣ ಒಂದನ್ನು ವ್ಯರ್ಥಗೈಯುದೆ
ಸದಾ ಕಾಲವೂ ಹರಿಹರಿಯುತ್ತಿದೆ
ಹರಿ ಹರಿ ಹರಿ ಓಂ ನಾಮಾಮೃತದಾ
ಸಾಮುಸಾಗರದ ನಾದದ ಮೋದಾ
ಬೇಕು-ಬೇಡಗಳ ದಾಟಿದ ಛಂದ
ಸುಖ-ದುಃಖವ ಮೀರಿದ ಮಕರಂದ
ಅರಿವಿನ ಬಾಗಿಲ ತಿಳಿವಿನ ಕಂದ
ಅಂತರ್ಲೋಕದ ಆ ಆನಂದ !

೩

ತೆರೆತೆರೆತೆರೆಗಳ ಏರಿಳಿವಿನಲು
ಒಳಗಿನ ಬಡವಾನಲದ ಕುದಿಯುಲು
ಘೋರ್ಗರೆಯುತ್ತಿದೆ ಝೇಂಕಾರದಲಿ
ವಿಶ್ವಸಾರದಾ ಓಂಕಾರದಲಿ
ಬಿರುಗಾಳಿಗೂ ಬಿರುಮಳೆಗೂ ಕೂಡ
ತುಸುವೂ ಮೇರೆಯು ಮೀರಿದೆ ನೋಡ
ಮುತ್ತುರತ್ನ ಜಲಚರಗಳು ತುಂಬಿ
ಆಳದಿ ಪ್ರಶಾಂತ ಶಾಂತಿಯು ಗೊಂಬಿ
ಶ್ರದ್ಧೆಯು ಆನಂದದಿ ಏಕೈಕ
ಭಕ್ತಿಯು ಸ್ವಾನಂದದಿ ಏಕೈಕ
ಅನನ್ಯ ಶರಣಾಗತಿಯು ನಾದದಿ
ದೈವೀಜೀವನ ನಡೆಸಿದೆ ಮೋದದಿ !

—ದೇಸಾಯಿ ದತ್ತಮೂರ್ತಿ

ಲೇಖಕರು:
ಸಿಂಪಿ ಲಿಂಗಣ್ಣ,
ಚಡಚಣ

# ಶ್ರೀ ಅರವಿಂದರ ಅಧ್ಯಾತ್ಮದ ಹಿರಿಮೆ

ಭಾರತದಲ್ಲಿ ಅಸಂಖ್ಯ ಅನುಯಾಯಿಗಳನ್ನು ಪಡೆದ ಶ್ರೀ ಅರವಿಂದರು ಮಹಾ ದಾರ್ಶನಿಕರು, ಅವರ ಅಧ್ಯಾತ್ಮ ಹೊಸ ಹಾದಿಯನ್ನೇ ತುಳಿದಿದೆ. ಆದರೆ ಅವರು ಹಿಂದಿನದಾವುದನ್ನೂ ಕಡೆಗಣಿಸಲಿಲ್ಲ. ಪ್ರತಿಯೊಂದರೊಳಗಿನ ಸತ್ತ್ವ ಸ್ವೀಕರಿಸಿ ಅದಕ್ಕೆ ಸ್ವಾನುಭವ ಬೆರೆಯಿಸಿದರು. ಮಾನವಕುಲಕ್ಕೆ ಅವರು ತೋರಿದ ಈ ಪೂರ್ಣಯೋಗ ಸಮನ್ವಯಯೋಗವೂ ಆಗಿದೆ. ಅರವಿಂದರ ಅಧ್ಯಾತ್ಮವನ್ನು ಚೆನ್ನಾಗಿ ಅರಿತು ನುರಿತವರಾದ ಲೇಖಕರು ಅವರ ಹಿರಿಮೆಯನ್ನು ಕುರಿತು ಇಲ್ಲಿ ನಿರೂಪಿಸಿದ್ದಾರೆ.

ಬಹುಕಾಲ ಸಾಧನೆಮಾಡಿ ಶ್ರೀಅರವಿಂದರು, ಹಿಂದಿನ ಯಾವ ಯೋಗವನ್ನೂ ಕಡೆಗಣಿಸದೆ ಪ್ರತಿಯೊಂದು ಯೋಗದೊಳಗಿನ ಸತ್ತ್ವವನ್ನು ಸ್ವೀಕರಿಸಿ, ಸ್ವಾನುಭವವನ್ನು ಬೆರೆಯಿಸಿ ಹೊಸ ದೊಂದು ಮಾರ್ಗವನ್ನು ಮಾನವಜಾತಿಗೇ ತೋರಿಸಿ ಕೊಟ್ಟಿದ್ದರಿಂದ ಅದು ಪೂರ್ಣಯೋಗವೆನಿಸಿ ದಂತೆ, ಸಮನ್ವಯಯೋಗವೂ ಎನಿಸಿದೆ. ಆ ಮಾರ್ಗ ದಲ್ಲಿ ಅದೆಷ್ಟೇ ಸಾಗಿ ನಿಂತರೂ ಸಾಧಕನು ಚ್ಯುತಿ ಗೊಳ್ಳಲಾರನೆಂಬ ಕಾರಣದಿಂದ ಅದು ಶಾಶ್ವತ ಯೋಗವೂ ಅಹುದು. ವ್ಯಕ್ತಿಯೊಳಗಿನ ಅಂತ ರಾತ್ಮನು, ತಲೆಯ ಮೇಲ್ಭಾಗದ ಸಹಸ್ರದಳದಲ್ಲಿ ಪ್ರಸ್ಥಾಪಿತಗೊಂಡ ವಿಶ್ವಾತ್ಮನ ಅಂಗವಾದ ಅಧ್ಯಾತ್ಮದ ನೆರವಿನಿಂದ ಅದರೊಡನೆ ತಾದಾತ್ಮ್ಯ ಹೊಂದುವಂತೆ ಬೆಳೆಯಬಲ್ಲನಾದ್ದರಿಂದ ಅದು ಅಧ್ಯಾತ್ಮಯೋಗವೂ ಅಹುದು.

ಜಗತ್ತು ಶ್ರೀರಾಮಕೃಷ್ಣ ಪರಮಹಂಸರ ಸರ್ವ ಧರ್ಮಸಮನ್ವಯ ತತ್ತ್ವವನ್ನೊಪ್ಪಿ ಅಂಗೀಕರಿಸಿ ದಾಗಲೇ ಮುಂದೇನು? - ಎಂಬ ಪ್ರಶ್ನೆ ಕಾಣಿಸಿ ಕೊಂಡಿತು. ಸರ್ವಧರ್ಮಸಮನ್ವಯದ ತರು ವಾಯ ಸರ್ವಯೋಗಸಮನ್ವಯವು ಕ್ರಮಪ್ರಾ-ಪ್ತವೇ ಆಗಿದೆ. ಪುರುಷಾರ್ಥಗಳಲ್ಲಿ ಅರ್ಥಕಾಮ ಗಳನ್ನು ಭೌತ-ಪ್ರಾಣಪ್ರಕೃತಿಗಳು ಸಾಧಿಸಿದ ಮೇಲೆ, ಮಾನಸಪ್ರಕೃತಿಯು ಧರ್ಮವನ್ನೂ ಅಂತರಾತ್ಮವು ಮೋಕ್ಷವನ್ನೂ ಸಾಧಿಸಿದಾಗಲೇ ಪೂರ್ಣ ಪುರುಷಾರ್ಥವು ಪೂರ್ತಿಗೊಂಡಂತೆ. ಅದೇ ಪೌರುಷಕರ್ಮ. ಧರ್ಮಸಾಧನೆಯ ಮನ್ವಂತ-ರವು ಮಾನವನನ್ನು ಜಗತ್ತಿಗೆ ಕಾಣಿಕೆ ಕೊಟ್ಟಂತೆ, ಅದರ ಬೆನ್ನಲ್ಲಿ ಬರುವ ಮೋಕ್ಷಸಾಧನೆಯ ಮನ್ವಂತರವು ಅತಿಮಾನವನನ್ನು ಕಾಣಿಕೆ ಕೊಡ ಬೇಕಾಗಿದೆ. ಮಾನವನಿಗೆ ಮಾನಸವು ದಾರಿದೀಪ ವಾಗಿರುವಂತೆ, ಅತಿಮಾನವನಿಗೆ ಅಂತರಾತ್ಮವು ಮಾರ್ಗಪ್ರೇರಕವಾಗಬೇಕಾಗಿದೆ. ಮಾನಸವು ಮಾನವನಿಗೆ ಬುದ್ಧಿಯನ್ನು ಒದಗಿಸಿಕೊಟ್ಟಂತೆ. ಅಂತರಾತ್ಮವು ಅತಿಮಾನವನಿಗೆ ಅಂತಃಪ್ರೇರಣೆ ಯನ್ನು ಒದಗಿಸಿಕೊಡಬೇಕಾಗಿದೆ.

ನವಮನ್ವಂತರಕ್ಕೆ ಅನಿವಾರ್ಯವಾದ ಮೋಕ್ಷ ಅಂದರೇನು — ಎಂಬುದನ್ನು ತಿಳಕೊಳ್ಳುವುದು ಅತ್ಯಾವಶ್ಯಕ. ಎರಡು ವಿಧದ ಮೋಕ್ಷಗಳಿವೆ. ಕೈವಲ್ಯಮೋಕ್ಷ, ಜೀವನ್ಮೋಕ್ಷ. ಜಗತ್ತೆಂದರೆ ದುಃಸ್ವಪ್ನ, ನೀರಗುರುಳೆ, ಮಾಯೆ ಎಂದು ಬಗೆದು ಅದರೊಳಗಿಂದ ತೊಲಗಿಹೋಗುವುದೇ ಪುರುಷಾ-ರ್ಥವಾದ್ದರಿಂದ ಜೀವನವನ್ನು ಅಲ್ಲಗಳೆದು, ಜಗ ತ್ತಿನ ಸಂಪರ್ಕವನ್ನು ತಪ್ಪಿಸಿಕೊಂಡು 'ಏನೋ ಇದೆ' ಅಥವಾ 'ಏನೂ ಇಲ್ಲ' ಎಂಬ ಸ್ಥಿತಿಗೇರಿ ನಿಲ್ಲುವುದೇ ಕೈವಲ್ಯಮೋಕ್ಷ. ಇದನ್ನೆಲ್ಲ ತಪ್ಪಿಸಿ ಕೊಂಡೇ ಹೋಗುವುದಾದರೆ ಯಾವ ಮಾರ್ಗ, ಎಂಥ ಮಾರ್ಗ ನೋಡುವ ಕಾರಣವೇ ಇಲ್ಲ. ಆದರೆ ಜಗತ್ತು ಮಾಯೆಯೂ ಅಲ್ಲ, ದುಃಸ್ವಪ್ನವೂ ಅಲ್ಲ; ಅದು ಆನಂದಮಯವೆಂದೂ ನಮ್ಮ ಶ್ರೇಯಸ್ಸಿಗಾಧಾರವೆಂದೂ ಭಾವಿಸಿದರೆ, ಜೀವನ ವನ್ನು ತಿರಸ್ಕರಿಸದೆ ಅದನ್ನಪ್ಪಿಕೊಂಡೇ ನಾವು ಮುಕ್ತರೂ ಸಿದ್ಧರೂ ಆಗಲು ಸಾಧ್ಯವಿದೆ. ಅದನ್ನು ಸಾಧಿಸುವುದಕ್ಕೆ ಸಿಕ್ಕಹಾದಿ ಹಿಡಿದರಾಗದು. ಮನು ಷ್ಯನ ಸಮಗ್ರ ಸತ್ತೆಗಳನ್ನು ಜಾಗೃತಗೊಳಿಸುವ ದಾರಿಯನ್ನು ಕಂಡುಹಿಡಿಯಬೇಕಾಗಿದೆ. ನಮಗಿ ರುವ ಸರ್ವ ಅಂಗಗಳಿಂದ ಭಗವಂತನನ್ನು ಅಪ್ಪಿ ಕೊಳ್ಳಬೇಕಾಗಿದೆ. ಯಾವುದೋ ಒಂದಂಗದಿಂದ ಮಾತ್ರವಲ್ಲ. ಸರ್ವ ಅಂಗಗಳಲ್ಲಿ ದಿವ್ಯ ಸತ್ತ್ವವನ್ನು ಅರಳಿಸಬೇಕಾಗಿದೆ ಯಾವುದೋ ಒಂದಂಗದಲ್ಲಿ ಮಾತ್ರವಲ್ಲ.

"ಪ್ರಕೃತಿಯ ಸರ್ವಸ್ತರಗಳೂ ಮನುಷ್ಯನಲ್ಲಿ ನೆಲೆಸಿವೆಯಲ್ಲದೆ, ಸೃಷ್ಟಿಯ ಸಮಸ್ತಧಾರೆಗಳೂ ಅವನೊಳಗೆ ಪ್ರವಹಿಸುತ್ತವೆ. ಅವನಲ್ಲಿ ಒಂದರ ಮೇಲೊಂದರಂತೆ ಮೂರುಸ್ತರಗಳು ನೆಲೆಸಿರುವು-ದನ್ನು ಸ್ಪಷ್ಟವಾಗಿ ಕಾಣಬಲ್ಲೆವು. ದೇಹ ಹಾಗೂ ಅದನ್ನು ಸಂಜೀವಿತವಾಗಿರಿಸುವ ಪ್ರಾಣಶಕ್ತಿ ಒಂದು ಸ್ತರವಾದರೆ, ಬುದ್ಧಿ–ವಿಚಾರ–ಚಿಂತನೆ–ಭಾವುಕತೆ ಗಳಿಗೆ ಕ್ರೀಡಾಸ್ಥಲವೂ ಊರ್ಧ್ವತರಕ್ಷೇತ್ರವೂ ಆದ ಮನವು ಇನ್ನೊಂದು ಸ್ತರ. ಇನ್ನು, ಊರ್ಧ್ವತಮ ಕ್ಷೇತ್ರವೂ ವಿಜ್ಞಾನ-ಆನಂದಮಯ ಸ್ವರೂಪವೂ ಅಮೃತತ್ತ್ವದ ಅಧಿಷ್ಠಾನವೂ ಆದ ಅಧ್ಯಾತ್ಮಬೋ-ಧೆಯೇ ಮೂರನೇ ಸ್ತರ. ದೇಹ-ಪ್ರಾಣಗಳಿಗಿರುವ ಭಾವವು ಮನುಷ್ಯನ ಪಶುಭಾವ, ಮನ-ಬುದ್ಧಿಗಳ ಸಲುವಾಗಿರುವ ಭಾವವು ಮನುಷ್ಯನ ಮನುಷ್ಯ ಭಾವ. ತುರೀಯಜ್ಞಾನ ಹಾಗೂ ಆನಂದಗಳ ಭಾವವು ಮನುಷ್ಯನ ದೇಹಭಾವ, ಸಿದ್ಧಭಾವವೆಂ-ದರೂ ಅದೇ; ಭಾಗವತಭಾವವೆಂದರೂ ಅದೇ."

ಪಶುಭಾವದಿಂದ ಮನುಷ್ಯಭಾವಕ್ಕೂ, ಮನು-ಷ್ಯಭಾವದಿಂದ ದೇವಭಾವಕ್ಕೂ ಏರುತ್ತಲಿರುವುದು ಉತ್ಕ್ರಾಂತಿಯ ಕ್ರಮವೇ ಆಗಿದೆ- ಮನುಷ್ಯನಲ್ಲಿ ರುವ ಯಾವ ಶಕ್ತಿಯು ಅವನನ್ನು ಪಶುಭಾವದಿಂದ ಮನುಷ್ಯಭಾವಕ್ಕೂ ಮನುಷ್ಯಭಾವದಿಂದ ದೇವ ಭಾವಕ್ಕೂ ಒಯ್ಯಲು ಸಮರ್ಥವಾಗಿದೆಯೋ ಆ ಶಕ್ತಿಯೇ ಯೋಗಶಕ್ತಿ. ಯೋಗಶಕ್ತಿಯನ್ನು ಅರ ಳಿಸಿ ಅಳವಡಿಸುವ ಅನೇಕ ಯೋಗಗಳು ನಮ್ಮಲ್ಲಿ ಪ್ರಚಲಿತವಾಗಿವೆ. ಸ್ಥೂಲಶರೀರದಲ್ಲಿ ಕ್ಷೇತ್ರವುಳ್ಳ ಹಠಯೋಗವು ಶರೀರಪ್ರಾಣಶಕ್ತಿಗಳನ್ನು ಕೇಂದ್ರ-ವಾಗಿರಿಸಿಕೊಂಡು ಅದರೊಳಗೆ ಪರಮಾತ್ಮಸ್ಪರ್ಶ ವನ್ನು ಅನುಭವಿಸಬಲ್ಲದು. ಸೂಕ್ಷ್ಮ ಶರೀರದ ಕೇಂದ್ರೀಭೂತವಾದ ರಾಜಯೋಗವು ಮಾನಸ ಸತ್ತೆಯಲ್ಲಿ ಅಥವಾ ಚಿತ್ತದಲ್ಲಿ ಆ ಸ್ಪರ್ಶವನ್ನು ಅನು ಭವಿಸುವದು. ಇನ್ನು ಮನುಷ್ಯನ ಅಧ್ಯಾತ್ಮ ಬೋಧೆಯ ಮೇಲೆ ಜ್ಞಾನ-ಭಕ್ತಿ-ಕರ್ಮಯೋಗ ಗಳು ಪ್ರತಿಷ್ಠಿತವಾಗಿ ಅವು ಒಂದನ್ನೊಂದು ಆಶ್ರ-

ಯಿಸಿ ಮನುಷ್ಯನನ್ನು ಭಾಗವತಸತ್ತೆಯಲ್ಲಿ ಅಣಿಗೊಳಿಸುತ್ತವೆ. ಇವೆಲ್ಲ ವೈದಾಂತಿಕಯೋಗಗಳು. ಈ ಯೋಗಗಳಲ್ಲಿ ಸಾಧಕನು ಜ್ಞಾನವನ್ನೇ ಅವಲಂಬಿಸಬೇಕಾಗುತ್ತದೆ. ಪುರುಷನೇ ಸಾಧಕನಾಗಿ ಚೈತನ್ಯಮಯ ಆತ್ಮಸತ್ತೆಯೊಡನೆ ಯುಕ್ತನಾಗಿಬಿಟ್ಟರೆ ಯೋಗಸಿದ್ಧಿಯಾದಂತೆ.

ಮೇಲೆ ಹೇಳಿದ ಯೋಗಗಳಲ್ಲದೆ ನಮ್ಮಲ್ಲಿ ಪ್ರಚಲಿತವಾದ ಇನ್ನೊಂದು ಯೋಗವಿದೆ. ಅದೇ ತಂತ್ರಯೋಗ. ಅದರ ಪ್ರತಿಷ್ಠೆ ಜ್ಞಾನದಲ್ಲಿಲ್ಲ; ಅದರ ನಿಯಂತನು ಪುರುಷನಲ್ಲ. ತಂತ್ರಯೋಗದಲ್ಲಿ ಪ್ರಕೃತಿಯೇ ಸಾಧಕ; ಶಕ್ತಿಯೇ ಅದರ ಉಪಾಯ. "ಯಾವ ಸಾಧನದಲ್ಲಿ ಪುರುಷನು ಸಾಧಕನೋ ಜ್ಞಾನವು ಉಪಾಯವೋ ಅದಕ್ಕೆ ಉದಾಸೀನತೆ, ಜಗಲ್ಲೀಲೆಯಿಂದ ತನ್ನನ್ನು ಅಲಿಪ್ತಗೊಳಿಸಿ ಓಡಿಹೋಗುವುದು ಇವೇ ಮೂಲ"ವೆಂದು ಹೇಳುತ್ತಾರೆ. ಆದರೆ ತಂತ್ರವು ಜಗಲ್ಲೀಲೆಯನ್ನು ಸ್ವಾಗತಿಸುತ್ತದೆ. ಅದು ಪ್ರಕೃತಿಯ ಅಂತಃಸ್ಥಲದಲ್ಲಿ ನೆಲೆಸಿದ ಆದ್ಯಾಶಕ್ತಿ- ತಪಶ್ಶಕ್ತಿಗಳ ಬಲದಿಂದ ಸ್ವತಃ ಸ್ಫೂರ್ತಪ್ರೇರಣೆಯಂತೆ ಮುಂದುವರಿಯುತ್ತದೆ. ವೈದಾಂತಿಕ ಸಾಧಕನು ಪ್ರಕೃತಿಯನ್ನು ಮಾಯೆಯೆಂದು ತಿಳಿದರೆ, ತಾಂತ್ರಿಕನು ಚಿನ್ಮಯಿಯೆಂದು ಬಗೆಯುತ್ತಾನೆ. ಪ್ರಕೃತಿಯು ಅಂಧವೂ ಉಚ್ಛೃಂಖಲವೂ ಆಗಿದೆಯೆಂದು ತಿಳಿದು ವೈದಾಂತಿಕಸಾಧಕನು ತನ್ನನ್ನು ಅದಕ್ಕೊಪ್ಪಿಸಿಕೊಡಲು ಇಚ್ಛಿಸುವದಿಲ್ಲ. ಆದರೆ ತಾಂತ್ರಿಕನು ಪ್ರಕೃತಿಯ ಪ್ರೇರಣೆಯನ್ನೇ ಸಂಪೂರ್ಣವಾಗಿ ಅವಲಂಬಿಸುತ್ತಾನೆ. ಪುರುಷನನ್ನು ಪ್ರಕೃತಿಯ ಛಾಯೆಯಿಂದ ಮುಕ್ತಗೊಳಿಸುವುದೇ ವೇದಾಂತಯೋಗಗಳ ಉದ್ದೇಶವಾದರೆ, ತಂತ್ರವು ಪ್ರಕೃತಿಯನ್ನು ಜಗತ್ ಶಕ್ತಿಯ ಸಮಸ್ತ ಲೀಲೆಯನ್ನು ಸತ್ಯವೆಂದೂ ಆನಂದಮಯವೆಂದೂ ಒಪ್ಪಿಕೊಳ್ಳುತ್ತದೆ. ಶ್ರೀ ನಲಿನೀಕಾಂತ ಗುಪ್ತರು ಈ ವಿಷಯವನ್ನು ವಿವರಿಸಿದ್ದು ಹೇಗೆಂದರೆ—

"ವಾಸ್ತವದಲ್ಲಿ ಪುರುಷ-ಪ್ರಕೃತಿಗಳಾಗಲಿ, ತ್ಯಾಗ-ಭೋಗಗಳಾಗಲಿ ಭಿನ್ನವಲ್ಲ. ಅವುಗಳಲ್ಲಿ ಶ್ರೇಷ್ಠ-ಕನಿಷ್ಠಗಳೆಂಬ ತಾರತಮ್ಯವಿಲ್ಲ. ಅವೆರಡೂ ಒಂದೇ ವರ್ಗದವು. ಇಲ್ಲಿಯೇ ಪೂರ್ಣಯೋಗದ ಸಾಮಂಜಸ್ಯದ ಮೂಲವಿದೆ. ಪೂರ್ಣಯೋಗದ ದೃಷ್ಟಿಯಲ್ಲಿ ಈಶ್ವರನೇ ಪುರುಷ, ಈಶ್ವರನ ಕರ್ತೃಸಂಪಾದಿಕಾಶಕ್ತಿಯೇ ಪ್ರಕೃತಿ. ಚಿನ್ಮಯ ಪುರುಷನು ರೂಪಸಂಭಾವನೀಯತೆಯ ಮೇಲೆ ತನ್ನ ಚೇತನವನ್ನು ಕ್ರಿಯಾನ್ವಿತಗೊಳಿಸಿದಾಗ ಸೃಷ್ಟಿಯ ಅಂತರಾತ್ಮನು ಉದಿಸಿಬರುತ್ತಾನೆ. ಅದೇ ವಿಜ್ಞಾನ. ನಮ್ಮ ಶರೀರ, ಪ್ರಾಣ, ಮನಗಳಲ್ಲಿ ರೂಪಗ್ರಹಣ ಮಾಡಿ ವಿಜ್ಞಾನವು ತನ್ನನ್ನು ಜಾಗೃತಗೊಳಿಸುವ ಎತ್ತುಗಡೆಯನ್ನು ನಡೆಸಿದೆ."

ಸಮರ್ಪಣವೇ ಪೂರ್ಣಯೋಗಕ್ಕೆ ಮುಖ. ಮುಖದಿಂದ ಮುಖವನ್ನು ನೋಡಬಲ್ಲೆವಾದರೂ ಅದಕ್ಕೂ ಮೊದಲು ಕಣ್ಣಿಗೆ ಕಣ್ಣು, ದೃಷ್ಟಿಗೆ ದೃಷ್ಟಿ ಕೂಡಬೇಕಾಗುತ್ತದೆ. ಅದೇ ಸಂಪೂರ್ಣ ಸಮರ್ಪಣ. ಪರಮಾತ್ಮವೃಕ್ಷದೊಡನೆ ವ್ಯಕ್ತಿತರುವಿನ ಕಲಮಿಯಾಗುವ ಅದ್ಭುತಕಾರ್ಯವು ಸಂಪೂರ್ಣ ಸಮರ್ಪಣದೊಂದಿಗೆ ಉದ್ಘಾಟನ ಸ್ವೀಕಾರಶಕ್ತಿಗಳಿಂದ ಮಾತ್ರಸಾಧ್ಯ. ಅದರಿಂದಲೇ ಸರ್ವಾಂಗಗಳಿಗೆ ಸರ್ವರಸ—ಸರ್ವಸತ್ತ್ವಗಳ ಸ್ಪರ್ಶವಾಗಬಲ್ಲದು.

ಅದೆಷ್ಟೋ ಸಾವಿರವರುಷಗಳ ಹಿಂದೆ ಪಶುಭಾವವು ಮನುಷ್ಯಭಾವಕ್ಕೇರುವ ಸಂದರ್ಭವೊದಗಿದಂತೆ ಇಂದು ಮನುಷ್ಯಭಾವವು ದೇವಭಾವಕ್ಕೇರುವ ಸುಸಂದರ್ಭವೊದಗಿದೆ. ಸಂದರ್ಭವೇ ಒದಗಿಬಂದಿರುವಾಗ ಯೋಗಿಗಳ ಅಥವಾ ಯೋಗಸಾಧನದ ಆವಶ್ಯಕತೆಯೇನಿದೆ—ಎಂದು ಕೇಳಬಹುದು. ಸರ್ವಯೋಗಗಳು ಸಮನ್ವಯಗೊಂಡು ಪ್ರಕೃತಿಯ ಸರ್ವಸ್ತರಗಳಿಗೂ ಸರ್ವಜ್ಞ-ಸರ್ವಶಕ್ತನ ಸ್ಪರ್ಶವನ್ನು ತಂದೊದಗಿಸಿ, ಸರ್ವರಲ್ಲಿಯೂ ಸರ್ವತ್ರದಲ್ಲಿಯೂ ಸರ್ವೇಶನನ್ನು ಕಾಣಲು ಸಮರ್ಥನನ್ನಾಗಿ ಮಾಡದಿದ್ದರೆ ಮನುಷ್ಯಭಾವವು ದೇವಭಾವಕ್ಕೆ ಏರುವುದಾದರೂ ಹೇಗೆ? ಶ್ರೀಅರವಿಂದರು ವಿವರಿಸಿದ ಅಧ್ಯಾತ್ಮತತ್ತ್ವದಂತೆ—

"ನಮಗೆ ಗೋಚರವಾದ ಇಲ್ಲವೆ ಅಗೋಚರವಾಗಿದ್ದರೂ ನಮಗೆ ತಿಳಿದುಬರುವ ಎಲ್ಲ ವಸ್ತುಗಳೂ ಮಾನವರೂ ಏಕಮೇವಾದ್ವಿತೀಯ ಬ್ರಹ್ಮವೆಂದು ಸಾಕ್ಷಾತ್ಕಾರಪಡೆಯುವುದಕ್ಕೆ ಯೋಗವೂ ಬೇಕು; ಸಾಧನವೂ ಬೇಕು."

ಇಂಥ ಸಿದ್ಧಿಗೆ ಸರ್ವಯೋಗ-ಸಮನ್ವಯ ಯೋಗವು ಉಪಾಯವಾಗಿರುವಂತೆ, ಸರ್ವಸಮರ್ಥನಾದ ಸರ್ವವ್ಯಾಪಕನೇ ಸಾಧಕನಾಗಿ ನಿಲ್ಲಬೇಕಾಗುತ್ತದೆ. ಅದು ಪೂರ್ಣಯೋಗದಲ್ಲಿ ಮಾತ್ರ ಶಕ್ಯ. ಅದರ ಇನ್ನೊಂದು ವಿಶೇಷವೆಂದರೆ— ಪೂರ್ಣಯೋಗದ ಸಾಧಕನಿಗೆ ಮಾತ್ರ ಅದರ ಸಿದ್ಧಿಯು ಲಭಿಸದೆ, ಸಂಪೂರ್ಣ ಮಾನವಜಾತಿಗೇ ಅದು ಆನುಷಂಗಿಕವಾಗಿ ಪ್ರಾಪ್ತವಾಗುವದೆಂದು ಹೇಳಲಾಗುತ್ತದೆ. "ನಮಗೆ ದೊರೆತ ಜೀವನವು ನಮಗಾಗಿ ಮಾತ್ರ ಅಲ್ಲ. ಈಶ್ವರೀಕಾರ್ಯಕ್ಕಾಗಿಯೂ ಈಶ್ವರೀತತ್ತ್ವವನ್ನು ಪ್ರಕಟಗೊಳಿಸುವ ಸಲುವಾಗಿಯೂ ಇದೆಯೆಂದು ಮೊದಲು ತಿಳಿಯಬೇಕೆನ್ನುತ್ತಾರೆ ಶ್ರೀ ಅರವಿಂದರು-ಮಾನವಮುಕ್ತಿಯ ಈ ಮನ್ವಂತರದಲ್ಲಿ ಮುಕ್ತಿಯಷ್ಟೇ ಮಾನವ ಪರಿವರ್ತನೆಯೂ ಅನಿವಾರ್ಯವಾಗಿದೆ. ಕೇವಲ ಮುಕ್ತಿಯೇ ಭಾಗವತ ಜೀವನವಲ್ಲ; ಅದರಲ್ಲಿ ಶುದ್ಧಿ-ಸಿದ್ಧಿ-ಭುಕ್ತಿಗಳೂ ಸೇರ್ಪಡೆಯಾಗಬೇಕೆಂದು ಹೇಳಲಾಗುತ್ತದೆ. ನಾಲ್ಕು ಪುರುಷಾರ್ಥಗಳನ್ನು ಸಾಧಿಸಿದ ಪೌರುಷವುಳ್ಳವನೆಡೆಗೆ ಮಾತ್ರ ಪುರುಷೋತ್ತಮಸತ್ತ್ವಗಳು ಪ್ರವಹಿಸಿ ಬರಬಲ್ಲವು.

ಅಹಂಕಾರದ ಆಳಿಕೆಗೊಳಪಟ್ಟ ಈ ಮೂರು ಪ್ರಕೃತಿಗಳಲ್ಲಿ ಕಾಣಿಸಿಕೊಳ್ಳುವ ಸತ್ತ್ವ-ರಜ-ತಮ ಎಂಬ ಮೂರು ಕಿಲಬುಗಳು ಮಾರ್ಪಟ್ಟು ಜ್ಞಾನ-ಶಕ್ತಿ ಆನಂದಗಳಾಗಿ ಪರಿಣಮಿಸಬೇಕಾಗಿದೆ. ಜ್ಞಾನ-ಕರ್ಮ-ಭಕ್ತಿಯೋಗಗಳು ಸಂಗಮಗೊಳ್ಳುವ ಅವಸ್ಥೆಗೆ ಸಾಧಕನು ಬಂದಾಗ ಮೂರು ಪ್ರಕೃತಿಗಳ ಆಧಿಪತ್ಯವು ಅಹಂಕಾರದ ಕೈಬಿಟ್ಟು ಅಂತರಾತ್ಮನ ಕೈವಶಕ್ಕೆ ಬರುತ್ತದೆ. ಆಗ ಅಂತರಾತ್ಮನು ಸಹಸ್ರದಳದಲ್ಲಿ ವಿರಾಜಮಾನವಾಗಿರುವ ಅಧ್ಯಾತ್ಮದ ನೆರವಿನಿಂದ ಬೆಳೆದು, ಪ್ರಕೃತಿಗಳಲ್ಲಿ ಸಾಮರಸ್ಯವನ್ನು ತುಂಬಲನುವಾಗುವನು.

ದಿವ್ಯಜೀವನವು ದಿವ್ಯಶರೀರದಲ್ಲಿ, ಪರಿಪೂರ್ಣ ಪ್ರಕೃತಿಯಲ್ಲಿರದೆ ಇನ್ನೆಲ್ಲಿ ಇದ್ದೀತು ? ಬುದ್ಧಿಯು ತರ್ಕವಿತರ್ಕಗಳನ್ನು ಬಿಟ್ಟುಕೊಟ್ಟು ಅಂತರಾತ್ಮನ ಪ್ರಕಾಶವನ್ನು ಕನ್ನಡಿಸುವ ಕೆಲಸಕ್ಕೂ ಪ್ರಾಣವು ಆಶೆ-ಆಕಾಂಕ್ಷೆಗಳನ್ನು ಮಾರ್ಪಡಿಸಿಕೊಂಡು ಅಂತರಾತ್ಮನ ಅನುಜ್ಞೆಯನ್ನು ನಿರೀಕ್ಷಿಸುವದಕ್ಕೂ ದೇಹವು ನಿದ್ರೆ-ಆಲಸ್ಯಗಳಿಂದ ಕಡೆಗೆ ಬಂದು ಸಚೇತನವಾದ ದಿವ್ಯಯಂತ್ರವಾಗುವದಕ್ಕೂ ಅಣಿಯಾದ ಪರಿಪೂರ್ಣಪ್ರಕೃತಿಯೇ ದಿವ್ಯಜೀವನವನ್ನು ನಿರ್ವಹಿಸಬಲ್ಲದು.

ಬಿಸಿಲು-ಮಳೆ-ಚಳಿ ಕಾಲಗಳು ವರುಷಕ್ಕೊಮ್ಮೆ ಸುತ್ತಿ ಸುತ್ತಿ ಬರುವಂತೆ, ಪರಮಾತ್ಮಲೀಲೆಯನ್ನು ಹೊತ್ತ ಕಾಲವು ಸತ್ಯಯುಗದಿಂದ ಕಲಿಯುಗಕ್ಕೂ ಕಲಿಯುಗದಿಂದ ಸತ್ಯಯುಗಕ್ಕೂ ಸುತ್ತುತ್ತಿರುವದು. ಸಾಮರಸ್ಯವೇ ಸತ್ಯಯುಗದ ಹೆಗ್ಗುರುತು. ಒಡಕು ವಿರಸಗಳೇ ಕಲಿಯುಗದ ಲಕ್ಷಣ. ಆದರೂ ಸಂಪೂರ್ಣ ನಾಶಗೊಂಡ ಸಾಮರಸ್ಯವು ಚಿಗುರೊಡೆಯುವ ಸಿದ್ಧತೆ ನಡೆಯುವುದೂ ಕಲಿಯುಗದಲ್ಲಿಯೇ. "ಈಗ ಕಲಿಯುಗವು ಗತಿಸಿಹೋಗಿದ್ದರೂ ಅದರ ಪರಿಣಾಮವು ಇನ್ನೂ ಕಂಡುಬರುತ್ತಿದೆ.... ಒಂದು ನವೀನ ಸಾಮರಸ್ಯ ಹಾಗೂ ಪರಿಪೂರ್ಣತೆಗಳಿಗಾಗಿ ಪ್ರಥಮ ಪ್ರಯತ್ನ ನಡೆಯಬೇಕಾದ ಕಾಲವಿದು" ಎಂದು ಶ್ರೀ ಅರವಿಂದರು ಹೇಳಿದ್ದಾರೆ. ಮನುಷ್ಯನ ಹೃದಯ, ಕೃತಿ ಮನಸ್ಸು ಬದಲಾಗಬೇಕಲ್ಲದೆ ನಮ್ಮಲ್ಲಿಯೂ ಜಗತ್ತಿನಲ್ಲಿಯೂ ಪರಮಾತ್ಮಸಾಕ್ಷಾತ್ಕಾರ ಮಾಡಿಕೊಂಡು ಅದರ ಆಧಾರದಿಂದ ಜೀವನದ ಪುನಾರಚನೆ ಮಾಡುವುದರಿಂದ ಸತ್ಯಯುಗದ ಸಾಮರಸ್ಯವು ಗೋಚರಿಸಬಲ್ಲದು.

ಪ್ರಕೃತಿಯ ಪರಿವರ್ತನೆಯಾಗಲಿ, ಪರಮಾತ್ಮಸಾಕ್ಷಾತ್ಕಾರವಾಗಲಿ, ಪೂರ್ಣಯೋಗದಿಂದ ಸಾಧ್ಯವಾಗುವುದಲ್ಲದೆ ಮಾನವರಲ್ಲಿ ಸಾಮರಸ್ಯವನ್ನು ಒದಗಿಸಿಕೊಟ್ಟು ಜಗತ್ತಿನ ದಿಶೆಯನ್ನೇ ಬದಲಿಸಿ, ಸರಿ ದಾರಿಗೆ ತರಬಲ್ಲ ಪೂರ್ಣಯೋಗದ ತಂತ್ರವನ್ನು ಒದಗಿಸಿಕೊಟ್ಟು ಅದನ್ನು ಕೃಷಿ ಮಾಡುವ ದೇವಮುಹೂರ್ತವು ಸನ್ನಿಹಿತವಾಗಿರುವದೆಂದು ಘೋಷಿಸಿ, ಗಾಣವಾಡಿಸಿದವನು ಎಣ್ಣೆ ಬರುವ ಕಾಲಕ್ಕೆ ಕಣ್ಣು ಮುಚ್ಚಿಕೊಂಡು ಕುಳಿತರೆ ಎಲ್ಲವೂ ವ್ಯರ್ಥವಾಗುವದೆಂದು ಎಚ್ಚರಿಕೆ ಕೊಟ್ಟು, ದೇಶ ವರ್ಣ ವಯಸ್ಸುಗಳ ಭೇದವೆಣಿಸದೆ ಜೀವನಸಾರ್ಥಕ್ಯದ ಪಾಠಕಲಿಸಲು ತೊಡಗಿದ ಶ್ರೀ ಅರವಿಂದರ ಅಧ್ಯಾತ್ಮದ ಹಿರಿಮೆ ಅದೆಷ್ಟೆನ್ನುವುದು ಯಾರಿಗಾದರೂ ಕಂಡು ಬಾರದಿರದು.

# ಅಜ್ಜಿಯ ಸಂಭ್ರಮ...

ಆಕೆಯ ಸಂಭ್ರಮವು ವರ್ಣಿಸಲಸದಳ.
ಆಕೆಯ ಸಂಭ್ರಮವು ಜೀವನದ
ವಿಜಯೋತ್ಸಾಹಗಳನ್ನು ಪ್ರತಿಬಿಂಬಿಸುತ್ತದು—
ಈಗ ತನ್ನ ಮೊದಲ ಮೊಮ್ಮಗನು ಹುಟ್ಟಿದಾಗ
ಆಕೆಯ ಸಂತೋಷವು ಮೇರೆ ಮೀರಿದೆ.

**ಆಕೆಯ ರಹಸ್ಯ?**

ಸುವ್ಯವಸ್ಥಿತ ಗೃಹಕೃತ್ಯ
ಸುವ್ಯವಸ್ಥಿತ ಆಯವ್ಯಯ
ಮತ್ತು ಕ್ರಮವಾದ **ಉಳಿತಾಯ**
ಇವುಗಳು ಆಕೆಯನ್ನು ಜೀವನದಲ್ಲಿ ಯಶಸ್ವಿ
ಯಾಗಿರುವಂತೆ ಭರವಸೆಯಿಂದಿರುವಂತೆ ಮಾಡಿವೆ.
ಉಳಿತಾಯವು ಯೋಜಿಸಲ್ಪಡಬೇಕು.
ಖರ್ಚುಮಾಡಲಾರಂಭಿಸುವ ಮುನ್ನ
ನಿಮ್ಮ ವರಮಾನದಲ್ಲಿ ಉಳಿತಾಯದ ಬಗ್ಗೆ
ಹಣವನ್ನು ತೆಗೆದಿರಿಸಬೇಕು—ಇಲ್ಲದಲ್ಲಿ
ಉಳಿತಾಯಮಾಡಲು
ನಿಮಗೇನೂ ಉಳಿಯುವದಿಲ್ಲ.

**ದಿ
ಬ್ಯಾಂಕ್ ಆಫ್ ಇಂಡಿಯಾ
ಲಿಮಿಟೆಡ್**







# ಯಾರು ಗೆದ್ದರು?

ಮಗನಿಗೆ ತನ್ನ ಅಣ್ಣನ ಮಗಳೇ ಯೋಗ್ಯ ಎಂದು ಹೆಂಡತಿ ವಾದಿಸಿದರೆ ತನ್ನ ತಂಗಿಯ ಮಗಳಾದರೆ ಸರಿ ಎಂದು ಗಂಡ ಹೇಳಿದ. ಇಬ್ಬರೂ ಸೋಲುವ ಲಕ್ಷಣ ಕಾಣಲಿಲ್ಲ. ಅವರ ವಿಚಾರದಲ್ಲಿ ಮಗನ ಮದುವೆ ಗಗನಕುಸುಮವಾಗುವಲ್ಲಿತ್ತು. ಆದರೆ ಮಗನೆ ಈ ಪ್ರಶ್ನೆ ಪರಿಹರಿಸಿದ. ಅವನು ಕಂಡುಹಿಡಿದ ಕುತೂಹಲಕಾರಿ ಮಾರ್ಗವನ್ನು ನೀವು ಇದನ್ನು ಓದಿಯೇ ಅರಿಯಬೇಕು.

---

"........."

"........."

"ನೀವು ಸಾವಿರ ಹೇಳಿ. ನಾನನ್ನುವುದು ಇಷ್ಟೇ—ಆಗಬೇಕಾದದ್ದು ಆಗಿಬಿಡಬೇಕು."

"ನಾನು ಬೇಡ ಅಂದೆನೇನೇ ಈಗ ?"

"ನೀವು ಏನನ್ನುತ್ತೀರಿ ಎಂಬುದು ಗೊತ್ತೇ ಇದೆಯಲ್ಲ ? ಬೇಕೂನೂ ಇಲ್ಲ, ಬೇಡಾನೂ ಇಲ್ಲ. ಎಲ್ಲದಕ್ಕೂ ಕಂಣು ಮುಚ್ಚಿ ಕುಳಿತುಬಿಡುತ್ತೀರಿ, ಅಷ್ಟೆ."

"ಹೌದು, ನೀನು ಬಾಯಿ ತೆರೆದು ನಿಂತು ಬಿಡುತ್ತಿ. ಅಲ್ಲವೇ..."

"ನೀವು ಸುಮ್ಮನಿರಿ ಅಂದ್ರೆ, ಸಾಕು. ನಿಮಗೇನಾದರೂ ಹತ್ತಿದೆಯೇ ಈ ಮನೆಯ ವಿಚಾರ...?"

"ಹಾಗೆಯೆ ಮಾಡು, ನನಗೆ ಏನೂ ಹತ್ತಿಲ್ಲ. ಆಯಿತೇ? ನಿನಗೆ ಎಲ್ಲವೂ ಹತ್ತಿದೆ, ಒಪ್ಪಿಕೊಂಡೆ. ಏನೂ ಹಚ್ಚಿಕೊಳ್ಳದ ನಾನು ಬಿಟ್ಟಿರುವುದಾವುದು? ಎಲ್ಲವನ್ನೂ ಹಚ್ಚಿಕೊಂಡ ನೀನು ಮಾಡಿರುವುದು ಯಾವುದು ? ಅದನ್ನಾದರೂ ಹೇಳೇ. ನೀನು ಪೇಚಾಡುತ್ತಿ, ನಾನು ಪೇಚಾಡುವುದಿಲ್ಲ. ಅಷ್ಟೆ ತಾನೆ ಭೇದ ?"

"ಪೇಚಾಡದೆ ನಾನೇನು ಮಾಡಲಿ ಹೇಳಿ, ಹೆಂಣು ಹೆಂಗಸು. ಹುಡುಗನನ್ನು ಹಾಗೆ ಬಿಟ್ಟು ಬಿಟ್ಟರೆ ಮುಂದೇನು ಗತಿ ಎಂಬ ಯೋಚನೆಯೇ ಇಲ್ಲ ನಿಮಗೆ."

"ಹಾಗೆ ಬಿಟ್ಟುಬಿಟ್ಟರೆ ಅಂದರೆ ? ಹೇಗೆ ಬಿಟ್ಟಿದ್ದೇನೆ ?"

"ಇನ್ನೂ ಹೇಗೆ ಬಿಡಬೇಕು ಕಣ್ರೀ ? ಮದುವೆ ಮಾಡುವುದು ಬೇಡವೆ ಅವನಿಗೆ ? ಅವನನ್ನು ಇನ್ನೂ ಕೂಸೆಂದು ತಿಳಿದಿರೇನು ನೀವು ?"

"ಈಗಾಗಲೆ ಮದುವೆ ವಯಸ್ಸು ಮೀರಿಹೋಯಿತೇನೆ ನಿನ್ನ ಮಗನಿಗೆ ? ಮುದಕನಾಗಿ ಬಿಟ್ಟನೆ ?"

"ಅದು ಆಗುವುದೊಂದೆ ಬಾಕಿ. ನನಗೆ ನಿಮ್ಮ ಪುರಾಣವೆಲ್ಲ ಬೇಡ ಕಣ್ರೀ. ಈ ಮಾತಿಗೆ ಜವಾಬು ಹೇಳಿ ದಯವಿಟ್ಟು. ಎದೆ ಉದ್ದವಾಗಿ ನಿಂತಿದ್ದಾನೆ ಮಗ. ಅವನ ಮದುವೆಯ ಯೋಚನೆಯನ್ನಾದರೂ ಮಾಡಿದ್ದೀರಾ ನೀವು ಹೇಳಿ."

"ಅಲ್ಲವೇ, ಈಗ ಅವನಿಗೆಷ್ಟೇ ವಯಸ್ಸು ?"

"ನಿಮ್ಮನ್ನು ನಾನು ಲಗ್ನವಾದಾಗ ನಿಮಗೆಷ್ಟಿತ್ತು ವಯಸ್ಸು, ಅದನ್ನು ಹೇಳಿ ಹಾಗಾದರೆ."

"ಚೆನ್ನಾಗಿದೆ ಕಣೇ ನಿನ್ನ ಸವಾಲು. ಆ ಕಾಲ ಯಾವುದೂ— ಈ ಕಾಲ ಯಾವುದೂ..."

"ಕಾಲ ಏನು ಮಾಡುತ್ತದೇರೀ ? ಎಲ್ಲ ಕಾಲದಲ್ಲೂ ಮದುವೆ ಆಗಲೇಬೇಕು, ಗಂಡೇ ಆಗಲಿ, ಹೆಂಣೇ ಆಗಲಿ."

"ಏನೇ, ಒಳ್ಳೆಯ ಸಾಹಿತಿಯಂತೆ ಮಾತನಾಡುತ್ತಿ ?"

"ಸಾಹಿತಿಯೂ ಇಲ್ಲ, ಪಾಹಿತಿಯೂ ಇಲ್ಲ. ನಾನೇಕೆ ಸಾಹಿತಿಯಾಗಲಿ, ದುಡಿದು ತಂದು ಹಾಕುವ ನೀವಿರುವಾಗ ? ಮಗ ವಯಸ್ಸಿಗೆ ಬಂದಿದ್ದಾನೆ, ಬೇಗ ಲಗ್ನಮಾಡಿ ಅಂದೆ ಅಷ್ಟೆ."

"ಆಗಲಿ ಮಾಡೋಣ. ಏನು ಅವಸರ ಅವನಿಗೀಗ ?"

"ಇನ್ಯಾವಾಗ ಹಾಗಾದರೆ ಅವಸರ ? ಇಪ್ಪತ್ತೈದು ಮದುವೆ ವಯಸ್ಸು ಅಲ್ಲವೆ? ನಿಮಗೆ ಲಗ್ನವಾದಾಗ...."

"ನನ್ನ ವಯಸ್ಸು ಹದಿನೈದು, ಹೌದು. ನನ್ನ ಅಪ್ಪ, ನಿನ್ನ ಅಪ್ಪ ಲಗ್ನವಾದಾಗ ಅವರ ವಯಸ್ಸು ಐದು. ಅಷ್ಟು ಚಿಕ್ಕವಯಸ್ಸಿನಲ್ಲಿ ಲಗ್ನವಾಗಬೇಡಿ ಎಂದವರಿಗೆ ಹೇಳಲು ನಾನಿದ್ದೆನೇನೆ ಆಗ?"

"ನೋಡೀ ಹೀಗೆಲ್ಲ ಅರ್ಥವಿಲ್ಲದ ಮಾತನ್ನಾಡಿ ಮೆಲ್ಲನೆ ಜಗಳವನ್ನು ಆರಂಭಿಸಬೇಡಿ ನೀವು..."

"ಜಗಳ ! ನಿನ್ನೊಡನೆ !! ಚೆನ್ನಾಯಿತು. ಹಣೇಬಾರ. ಹೇಳು ಮಹರಾಯತಿ, ಅಗತ್ಯ ಹೇಳು. ನೀನನ್ನುವುದೇನು, ಸ್ಪಷ್ಟವಾಗಿ ಹೇಳಿಬಿಡು."

"ಇನ್ನೂ ಹೇಗೆ ಕಣ್ರೀ ಹೇಳಬೇಕು ನಿಮಗೆ ? ನಾನಿದುವರೆಗೂ ಹಿಂದಿಯಲ್ಲಿ ಹೇಳಿದೆನೇ ? ಹೇಳುವುದಕ್ಕೂ ಇಲ್ಲ, ಕೇಳುವದಕ್ಕೂ ಇಲ್ಲ. ಹೆಸರು ಕೆಟ್ಟ ಮೇಲೆ ಏನಿದೆ ಅನ್ನತೇನೆ. ಮಗ ಅಡ್ಡದಾರಿ ಹಿಡಿದು ಜನರ ಬಾಯಲ್ಲಿ ಬಿದ್ದರೆ ಮುಗಿಯಿತು ಕಥೆ. ಆಗ ಹೆಣ್ಣು ಕೊಡುವವರೂ ಗತಿ ಇರುವುದಿಲ್ಲ."

"ಏನೇ ನೀನನ್ನುವುದು ? ಮೂವತ್ತೈದೂ, ನಲವತ್ತರ ಕನ್ಯಾಮಣಿಗಳು ದಾರಿಯುದ್ದಕ್ಕೂ ಓಡಾಡುತ್ತಿವೆ. ಎರಡೂ ಮೂರು ಜಡೆ ಹಾಕಿಕೊಂಡು. ಅವರಿಗೇ ಇಲ್ಲದ ಅವಸರ...."

"ನನಗೆ ಬೇರೆಯವರ ಮಾತು ಬೇಕಿಲ್ಲ. ಖಡಾಖಂಡಿತ ಹೇಳುತ್ತೇನೆ. ನೋಡಿ ನಮ್ಮ ಮಗನ ಮದುವೆಯ ಮಾತು ನಮಗೆ ಬೇಕು. ಅದನ್ನಷ್ಟೇ ಆಡಿರಿ. ಯಾಕಂದರೆ...."

"ಸರಿ ನಿಲ್ಲಿಸಿಬಿಡು. ಅಲ್ಲಿಗೆ ಯಾಕೆ ಎಂದು ನಾನಂದರೆ ತಾನೇ ನಿನ್ನ ಮುಂದಿನ ಮಾತು? ಆಯಿತು, ನಾಳೆಯೆ ಅವನ ಮದುವೆಮಾಡಿಬಿಡೋಣ, ಅವನು ಒಪ್ಪಲಿ ಬಿಡಲಿ."

"ಒಪ್ಪದೆ ಏನು ತಲೆ ಮಾಡುತ್ತಾನೆ ಅಂದೆ. ಮದುವೆ ಬೇಡ ಎಂದು ಅವನೇಕೆ ಕಣ್ರೀ ಅನ್ನುತ್ತಾನೆ ಅಂದೆ. ನೀವು ಬೇಡ ಎಂದು ಅಂದಿರಾ ?"

"ಬೇಡ ಎಂದಲ್ಲ, ಬೇಕು ಎಂದು ತಕರಾರು ಹೂಡಿ ಕಾಲು ತಿಕ್ಕಿ ಅಳುತ್ತ ಕುಳಿತಿದ್ದೆ. ಆಯಿತೇನೆ ? ನನ್ನ ವಿಷಯ ಬಿಟ್ಟುಬಿಡು ಎಂದು ಆಗಲೆ ಹೇಳಿದೆ. ಅದೀಗ ಚರಿತ್ರೆ ಆಯಿತು. ನಾಳೆಯೆ ಅವನ ಮದುವೆ ಮುಗಿಸಿ ಬಿಡೋಣ. ಕನ್ಯೆ ಹುಡುಕಿ ತೆಗೆದುಕೊಂಡು ಬಾ."

"ಅದಕ್ಕೇಕೆ ಹುಡುಕುತ್ತಾ ಹೋಗಬೇಕು ! ಕೈಯಲ್ಲಿ ತುಪ್ಪ ಇಟ್ಟುಕೊಂಡು, ಬೆಂಣೆಗಾಗಿ ಹುಡುಕಾಡಿದರಂತೆ, ಹಾಗಿದೆ ನಿಮ್ಮ ಮಾತು."

"ತುಪ್ಪ ! ಎಲ್ಲಿದೆಯೇ ನಿನ್ನ ತುಪ್ಪ?"

"ನನ್ನಣ್ಣನ ಮಗಳಿಲ್ಲವೇ ?...."

"ಅದು ತುಪ್ಪ ಅಲ್ಲ ಕಣೇ, ಅದು ಡಾಲ್ಡ. ಮಹರಾಯತೀ ನನ್ನ ಮಗನಿಗೆ ಮದುವೆಯೇ ಇಲ್ಲ?

ನನ್ನ ಸಂತತಿ ನಷ್ಟ ಸಂತತಿಯಾದರೂ ಚಿಂತೆ ಇಲ್ಲ. ಆ ಹುಡುಗಿ ಮಾತ್ರ ಬೇಡ."

"ಏನ್ರೀ ಆಗಿದ್ದಾಳೆ ಅವಳು ?"

"ಇನ್ನೂ ಏನೇ ಆಗಬೇಕು ? ಏನೇ ಆಗಲಿ ಬಿಡಲಿ. ನಿನ್ನ ಬಳಗದವಳಂತೂ ಆಗಿದ್ದಾಳಲ್ಲ, ಸಾಕು. ನಮೋನ್ನಮಃ ಕೈಮುಗಿದೆ ಮಹ ರಾಯುಳೀ !"

"ಹೌದು, ಪಾಪ ! ಅಷ್ಟುಕೆಟ್ಟವರು ನಾವು, ನಿಮ್ಮ ಬಳಗ ಮಾತ್ರ..."

"ಆ ಮಾತು ಅಲ್ಲಿಗೇ ಬಿಟ್ಟುಬಿಡು ಅಂದೆ. ನನ್ನ ಬಳಗದವರನ್ನು ಬೈದು ನನ್ನನ್ನು ರೇಗಿಸಬೇಡ. ತಿಳಿಯಿತೇನೆ ನಾನು ಹೇಳಿದ್ದು ?"

"ತಿಳಿಯಲಿಲ್ಲ. ಇನ್ನೂ ಹೇಳಿ. ಚೆನ್ನಾಗಿ ವಿವರಿಸಿ ಹೇಳಿ. ನಾನೆಂದಾದರೂ ನೋಡಿದ್ದೇನೆಯೆ ನಿಮ್ಮ ಬಳಗದವರನ್ನು, ಪಾಪ ! ಯಾಕೆ ಕಣ್ರೀ, ನನ್ನ ಅಂಣ ಅತ್ತಿಗೆ ಏನಾಗಿದ್ದಾರೆ ಅಂದೆ."

"ಏನೂ ಆಗಿಲ್ಲ. ನಿನ್ನೊಬ್ಬಳನ್ನು ತಂದುಕೊಂಡದ್ದೇ ಸಾಕು, ಪುಣ್ಯಾತ್ಮಳೆ. ನಿನ್ನ ಅಂಣನ ಮಗಳನ್ನು ತಂದುಬಿಟ್ಟರೆ ಮುಗಿದೇಹೋಯಿತು. ನಾನು ನನ್ನ ಮಗ ಇಬ್ಬರೂ ಆಗ ನಮ್ಮ ಮನೆಯಲ್ಲಿಯೇ ಸ್ವಾತಂತ್ರ್ಯಕ್ಕಾಗಿ ಚಳುವಳಿ ಹೂಡಬೇಕಾದೀತು. ಬ್ರಿಟಿಶರ ಕೈಯಿಂದ ನಮ್ಮ ದೇಶವನ್ನು ಪಾರು ಮಾಡಿದ ಆ ಗಾಂಧಿ ಮಹಾತ್ಮಾ ಮತ್ತೆ ಹುಟ್ಟಿ ಬರಬೇಕು, ನನ್ನ, ನನ್ನ ಮಗನ ವಿಮೋಚನೆಗಾಗಿ."

"ಹೂಂ, ಹೇಳಿಹೇಳಿ. ಯಾಕೆ ? ಅಷ್ಟಕ್ಕೇ ನಿಲ್ಲಿಸಿದಿರಲ್ಲ? ಅಲ್ಲ ಕಣ್ರೀ ! ನಮ್ಮಪ್ಪ, ಅಮ್ಮ ನನ್ನನ್ನು ನಿಮಗೆ ಕಟ್ಟಿದರು ಎಂದು ನಿಮ್ಮದೂ ಒಂದು ಮನೆ ಆಯಿತು. ಗಿಳಿಯಂತಹ ಮಗನನ್ನು ಕಂಡಿರಿ. ನನ್ನನ್ನು ಅವರು ಕೊಡದೆ ಇದ್ದಿದ್ದರೆ ಏನಾಗುತ್ತಿತ್ತು ನಿಮ್ಮ ಗತಿ ? ಮದುವೆಯಾದರೂ ಆಗುತ್ತಿತ್ತೆ ನಿಮಗೆ ?"

"ಇಲ್ಲ, ಸಂನ್ಯಾಸಿಯಾಗಿ ಹೋಗುತ್ತಿದ್ದೆ ಯಾವುದಾದರೂ ಮಠಕ್ಕೆ. ಅದೆಲ್ಲ ಇರಲಿ. ಈಗ ಮಗನ ಮದುವೆ ಮಾತು ಹೇಳು. ನನ್ನ ತಂಗಿಯ ಮಗಳು ಹೇಗೂ ಬೆಳೆದು ನಿಂತಿದೆ..."

"ಯಾರು ! ನಿಮ್ಮ ತಂಗಿಯ ಮಗಳೇ ? ಗೋಽಽಽವಿಂದ ! ನನ್ನ ಮಗ ಬಿಡಿ ಸಂನ್ಯಾಸಿಯಾಗಿ ಊರೂರು ಅಲೆದರೂ ನನಗೆ ಯೋಚನೆ ಇಲ್ಲ-ಸ್ವಾಮೀ ! ನಿಮ್ಮ ಬಳಗದ ಹುಡುಗಿ ಮಾತ್ರ ನಮ್ಮ ಮನೆಗೆ ಸೊಸೆಯಾಗುವುದುಬೇಡ. ಗಂಡ, ಮಗನ ಸೇವೆ ಮಾಡುತ್ತಿದ್ದೇನೆ ಈಗ. ಆಗ ಸೊಸೆಯ ಸೇವೆಯನ್ನೂ ಮಾಡಬೇಕು, ಅಷ್ಟೆ."



"ಈ ಮನೆಗೆ ಯಜಮಾನ ನಾನು ಕಣೇ, ಗೊತ್ತೆ? ನೀನು ಬಾರದಿದ್ದರೂ ಸರಿ, ಉಡಿಯಲ್ಲಿ ಅಡಿಕೆ ಇಟ್ಟುಕೊಂಡಾದರೂ ಹಸೆಯ ಮೇಲೆ ಕುಳಿತು ಮಗನ ಮದುವೆ ಮುಗಿಸಿ ಬಿಡುತ್ತೇನೆ. ನನ್ನ ತಂಗಿಯ ಮಗಳನ್ನೇ ತರುತ್ತೇನೆ."

"ಆಗ ನಾನು ಕಡಲೆ ತಿನ್ನುತ್ತ ಕುಳಿತಿರುತ್ತೇನೆ. ನಾನು ಯಜಮಾನತಿ ಕಣ್ರೀ ಈ ಮನೆಗೆ. ನನ್ನ ಅಂಣನ ಮಗಳನ್ನು ತಂದು ನನ್ನ ಮಗನಿಗೆ ಮದುವೆ ಮಾಡದಿದ್ದರೆ ಕುರೋ ಎಂದು ಕರೆದು ಬಿಡಿ. ಏನೋ ತಿಳಿದಿದ್ದಾರೆ ನನ್ನನ್ನು."

"ನೋಡುತ್ತೀ ಏನೇ ಹಾಗಾದರೆ ? ನನ್ನ ಮಾತು ಮೀರುತ್ತಾನೆಯೆ ನನ್ನ ಮಗ ?"

"ನನ್ನ ಮಗ ನನ್ನ ಮಾತು ಮೀರುತ್ತಾನೆಯೇ ? ನೋಡಿಯೆ ಬಿಡುತ್ತೇನೆ ಯಾರು ಗೆಲ್ಲುತ್ತಾರೊ ?"

"ಆಗಿಯೆ ಹೋಗಲಿ. ನಾನೂ ನೋಡುತ್ತೇನೆ, ಯಾರು ಗೆಲ್ಲುತ್ತಾರೊ"

"ಪೋಸ್ಟ್-ಪೋಸ್ಟ್"

"ಪೋಸ್ಟ್ ಬಂದಂತಿದೆ ನೋಡಿ ಬಾಗಿಲಲ್ಲಿ ಯಾರದೋ ಕಾಗದ ?"

"ಇನ್ನಾರದು, ಅವನದೇ; ಅಕ್ಷರವನ್ನು ನೋಡಿದರೆ ತಿಳಿಯುವುದಿಲ್ಲವೇ ?"

"ಓದಿ ನೋಡಿ, ಏನು ಬರೆದಿದ್ದಾನೆಯೊ ಹುಡುಗ"

"ಪರಮ ಪೂಜ್ಯರಾದ ತಂದೆ-ತಾಯಿ ಅವರಿಗೆ— ನಿನ್ನೆಯ ದಿನ ಚರ್ಚಿನಲ್ಲಿ ನನ್ನ ಮದುವೆ ಆಯಿತು. ನನಗೆ ಮತ್ತು ನನ್ನ ಲೂಸೀಗೆ ನಿಮ್ಮ ಆಶೀರ್ವಾದಗಳನ್ನು ಕಳಿಸಿ."

---

ಅಶ್ವಿನಿಗಳಿಂದ ಗರ್ಭಾಧಾನವಾದರೂ
ಪಾಂಡುವಿನ ಕೂಡ ಸಹಗಮನ ;
ಕಸದ ಡಬ್ಬಿಯಲಗುಳ ಹುಡುಕುತ್ತಲಿದ್ದರೂ
ಬೊಗಳುವರೆ ಬಾನತ್ತ ವದನ ;
ಮೊಲೆಯ ಮೇಲಿರುವ ಯೋಗಿ ನಾನು
ಒಲೆಯು ಹೊಕ್ಕುರಿಯುು ಕೃಶಾನು.

—ಪಾ.ವೆಂ

ಲೇಖಕರು :
ಸೇವ ನಮಿರಾಜ ಮಲ್ಲ

# ಶಾಸನಗಳಿಂದ ಸಮಾಜ ಸುಧಾರಣೆ

ಕೆಲವೊಂದು ಚಟಗಳು ಕೆಟ್ಟವು ಎಂಬುದು ಗೊತ್ತಿದ್ದರೂ ವ್ಯಕ್ತಿ ತಾನು ಚಟ ಬಿಡಲಾರದೆ ಇತರರು ಸುಧಾರಿಸಬೇಕೆಂದು ಹಂಬಲಿಸುವ ಪ್ರವೃತ್ತಿ ಬೆಳೆದುಬಂದಿದೆ. ಈ ಅನಿಷ್ಟಗಳನ್ನು ನಿವಾರಿಸಲು ಶಾಸನಗಳೇ ಮದ್ದು ಎಂದು ಇನ್ನೂ ಹಲವಾರು ಜನರು ಅಭಿಪ್ರಾಯಪಡುತ್ತಾರೆ. ಆದರೆ ಈ ಬಗೆಯ ಶಾಸನಗಳಿಂದ ಆದ ಸುಧಾರಣೆ ಎಷ್ಟು ? ಶಾಸನಗಳು ಒತ್ತಾಯದಿಂದ ಸಮಾಜವನ್ನು ಸುಧಾರಿಸಲಾರವೆಂಬುದು ಕಂಡುಬರುತ್ತದೆ. ವಿದ್ಯಾಪ್ರಸಾರವೇ ಸಮಾಜ ಸುಧಾರಣೆ ಶಾಸನಗಳು ಯಶಸ್ವಿಯಾಗಲು ಮುಖ್ಯವಾಗಿವೆ. ನಮ್ಮ ಸುಧಾರಣ ಶಾಸನಗಳನ್ನು ಈ ದೃಷ್ಟಿಯಿಂದ ಪರ್ಯಾಲೋಚಿಸಬೇಕೆಂದು ಲೇಖಕರು ಇಲ್ಲಿ ಅಭಿಪ್ರಾಯಪಟ್ಟಿದ್ದಾರೆ.

---

'ಇತರರ ಅಭ್ಯಾಸಗಳನ್ನು ಸುಧಾರಿಸುವ ಕೆಲಸದಷ್ಟು ಅಗತ್ಯವಾದ ಸುಧಾರಣೆ ಬೇರೊಂದಿಲ್ಲ' ಎಂದು ಮಾರ್ಕ್‌ಟ್ವೈನ್ ಒಮ್ಮೆ ಹೇಳಿದ್ದ. ಅಂದರೆ, ತನ್ನನ್ನು ಹೊರತು ಇತರರನ್ನು ಸುಧಾರಣೆ ಮಾಡಬೇಕೆಂದು ಬಯಸದವರು ಇಲ್ಲ. ಇಂಥ ಸುಧಾರಣಾಪ್ರಯೋಗಕ್ಕೆ ಯಜ್ಞಪಶುಗಳಾಗಿ ಕೆಲವು ಭಾಗ್ಯಶಾಲಿಗಳಿಗೆ ಜನ ದೊರಕಬಹುದು. ಹಾಗೆ ದೊರಕದವರು 'ಸ್ವಗೃಹೇ ಪೂಜ್ಯತೇ ಮೂರ್ಖಃ' ಎನ್ನುವಂತೆ ತಮ್ಮ ಮನೆಯಲ್ಲಿರುವವರನ್ನಾದರೂ ಸುಧಾರಣೆ ಮಾಡಬೇಕೆಂದು ಟೊಂಕಕಟ್ಟುತ್ತಾರೆ. ಬೀಡಿ ಸೇದುವ ತಂದೆ ತನ್ನ ಮಗನು ಬೀಡಿ ಸೇದಬಾರದೆಂದು ಸುಗ್ರೀವಾಜ್ಞೆ ಹೊರಡಿಸುತ್ತಾನೆ. ಸಿನೀಮಾ ನೋಡದೆ ನಿದ್ದೆ ಬಾರದವನು ತನ್ನ ಮಗನು ಸಿನೀಮಾ ಮಂದಿರದ ಬಳಿ ಹಾಯಬಾರದೆಂದು ಕಟ್ಟಪ್ಪಣೆ ಮಾಡುತ್ತಾನೆ. ಮಧುಮೇಹ ರೋಗದಿಂದ ಬಳಲುವ ರೋಗಿ ತನ್ನ ಇತರ ಬಂಧುಗಳಾದರೂ ಸಕ್ಕರೆ-ಸಿಹಿ ತಿನ್ನಬಾರದೆಂದು ಆಜ್ಞೆ ವಿಧಿಸುತ್ತಾನೆ.

ಹೀಗೆ ನಮ್ಮಲ್ಲಿ ಸುಧಾರಣಾಪ್ರವೃತ್ತಿ ಆತ್ಮನಿಷ್ಠವಾಗಿ ಬೆಳೆಯದೆ ವಸ್ತುನಿಷ್ಠವಾಗಿ ಬೆಳೆಯುತ್ತದೆ. 'ಮದ್ಯಪಾನ ಮಾಡುವುದು ಕೆಟ್ಟದೆಂಬುದು ಹೆಂಡ ಕುಡಿಯುವ ನನಗೆ ಗೊತ್ತಿದೆ. ಆದರೆ ಇತರರೂ ನನ್ನಂತೆ ಈ ದುಶ್ಚಟಕ್ಕೆ ಬಲಿ ಬೀಳಬಾರದೆಂಬುದು ನನ್ನ ಆಶಯ' ಎನ್ನುತ್ತ ಸುಧಾರಣಾ ಪ್ರಚಾರಕ ತನ್ನ ದುರ್ವ್ಯಸನದಲ್ಲೇ ಮುಂದರಿಯುತ್ತಾನೆ. ತನ್ನ ಸುಧಾರಣೆಯಿಂದಾಗಿ ತಾನೊಬ್ಬನಾದರೂ ಉಳಿಯದಿದ್ದರೆ ಇತರರು ಏನಾದರೆ ತನಗೇನು ? ಎಂಬುದು ಬಹುಶಃ ಅವನಿಗೆ ತೋಚುವುದಿಲ್ಲ. ಈ ದೃಷ್ಟಿಯಿಂದ ಸುಧಾರಣಾವಾದಿಯು ನಿಃಸ್ವಾರ್ಥಿಯೆನ್ನಬಹುದು.

ಇಂಥ ಸುಧಾರಣಾ ಪ್ರವೃತ್ತಿಯು ಕೇವಲ ವ್ಯಕ್ತಿಗತವಾಗಿದ್ದರೆ ಅದರ ಪರಿಣಾಮವು ಅಷ್ಟೊಂದು ವ್ಯಾಪಕವಾಗದು. ಆದರೆ ಈ ಪ್ರವೃತ್ತಿ ಕೆಲವು ವೇಳೆ ಸಾಮುದಾಯಿಕ ರೂಪವನ್ನು ತಾಳುವುದು. ಅಂಥ ಸಂದರ್ಭಗಳಲ್ಲಿ ಸುಧಾರಣಾಶಾಸನಗಳು ಹುಟ್ಟಿಕೊಳ್ಳುವುವು. ಹೀಗೆ ಇವು ಶಾಸನಗಳಾದೊಡನೆ ಅವು ಸಾಮಾಜಿಕ ಸಮಸ್ಯೆಯಾಗಿ ರೂಪ ತಾಳುವುವು. ಈ ಸುಧಾರಣಾಪ್ರವೃತ್ತಿಯು ಮನುಷ್ಯನ ಪ್ರತಿಯೊಂದು ಸಾಮಾಜಿಕ ವಿಕಾಸದ ಘಟ್ಟದಲ್ಲಿಯೂ ಇದ್ದಿರಬೇಕೆಂಬುದರಲ್ಲಿ ಸಂಶಯವಿಲ್ಲ. ಇಲ್ಲವಾದರೆ ಮನುಷ್ಯನಲ್ಲಿ ಇಂದಿನಷ್ಟು ಸಹಿಷ್ಣುತೆಯ ಸಂಸ್ಕೃತಿ ಉಂಟಾಗುತ್ತಿರಲಿಲ್ಲ; ಮತ್ತು ಕೌಟುಂಬಿಕ ಬಾಂಧವ್ಯ ವಿವಾಹ ಸಂಬಂಧ ಮುಂತಾದ ನಿರ್ದಿಷ್ಟ ಪರಿಧಿಯನ್ನೊಳಗೊಂಡ, ಒಂದು ವಿಧದ ಪಾವಿತ್ರ್ಯದಿಂದೊಡಗೂಡಿದ ಭಾವನೆಗಳು ಮನುಷ್ಯನಲ್ಲಿ ಹುಟ್ಟುತ್ತಿರಲಿಲ್ಲ. ನೀತಿ-ಅನೀತಿಗಳ ಪ್ರಶ್ನೆಯಂತೂ ಅವನಲ್ಲಿ ಮೂಡುತ್ತಲೇ ಇರಲಿಲ್ಲ.

ಆದರೆ ಸುಧಾರಣೆಯು ಶಾಸನದ ರೂಪವನ್ನು ತಾಳುವಾಗ ಕೆಲವೊಂದು ಅಡಚಣೆಗಳಾಗುವುದು ಸ್ವಾಭಾವಿಕ. ಏಕೆಂದರೆ ಸುಧಾರಣೆಯ ಧ್ಯೇಯವು ಮಾನವ ಸಮಾಜದ ಉದ್ಧಾರವಾಗಿದ್ದರೆ, ಶಾಸನದ ಧ್ಯೇಯವು ಬರಿ ಸ್ವಾಮಿತ್ವದ ಸಕ್ರಿಯ ಭಾವನೆಗಳನ್ನು ಕಾರ್ಯಗತಗೊಳಿಸುವುದಾಗಿರುತ್ತದೆ. ಶಾಸನಕ್ಕೆ ಸಾಮಾಜಿಕ ಭದ್ರತೆ ಮುಖ್ಯ. ಆ ಭದ್ರತೆಗೆ ಸಾಮಾಜಿಕ ಶಾಂತಿ ಅಗತ್ಯ. ಶಾಸನದ ಮೂಲೋದ್ದೇಶವಾದರೂ ಈ ಸಾಮಾಜಿಕ ಶಾಂತಿರಕ್ಷಣೆಯಾಗಿದೆ. ಮತ್ತೆ ವಿಶಿಷ್ಟವಾಗಿ ಖಾಸಗಿ ವ್ಯಕ್ತಿಗಳ ವೈಯಕ್ತಿಕ ಹಕ್ಕು ಬಾಧ್ಯತೆಗಳನ್ನು ನಿರ್ದಿಷ್ಟಗೊಳಿಸುವ ಕಾರ್ಯವನ್ನು ಮಾಡುವ ಒಂದು ಉಪಾಂಗವೂ ಶಾಸನಕ್ಕಿದೆ. ಮೂಲತಃ ಈ ಮುಖ್ಯೋದ್ದೇಶವನ್ನು ಬಿಟ್ಟರೆ ಶಾಸನಕ್ಕೆ ಉಳಿದುದೆಲ್ಲವೂ ಅನ್ಯವಾದುದು.

ಆದರೆ ಸುಸಂಘಟಿತ ಸಮಾಜದಲ್ಲಿ ಶಾಸನದ ಶಕ್ತಿ ಎಲ್ಲರಿಗೂ ತಿಳಿದುದೇ ಆಗಿದೆ. ಅದರ ಈ ಶಕ್ತಿಯನ್ನು ಉಳಿದ ಕೆಲವು ದುಷ್ಟನಾಯಕರು ತಮ್ಮ ಸ್ವಾರ್ಥದ ಬೇಳೆಯನ್ನು ಅದರ ಮೂಲಕ ಬೇಯಿಸಲೂ ಹವಣಿಸಿದ ಉದಾಹರಣೆಗಳು ಇವೆ. ಯುರೋಪಿನಲ್ಲಿ ಮಧ್ಯಯುಗದಲ್ಲಿ ಶಾಸನವನ್ನು ಮತಧರ್ಮದಿಂದ ಬೇರ್ಪಡಿಸುವುದು ಕಷ್ಟವಾಗುತ್ತಿತ್ತು. ಸಮ್ರಾಟರು ಶಾಸನದ ಮೂಲಕ ತಮ್ಮ ವೈಯಕ್ತಿಕ ಶ್ರದ್ಧೆಗಳನ್ನು ಪ್ರಜೆಗಳ ಮೇಲೆ ಹೇರಲು ಯತ್ನಿಸಿದರು. ಕ್ರಾಮ್ವೆಲ್‌ನಂಥ ಪರಿಶುದ್ಧವಾದಿಗಳು ತಮಗೆ ಉಚಿತವೆಂದು ತೋರಿದ ಸಾಮಾಜಿಕ ಶಾಸನಗಳನ್ನು ಕಾರ್ಯಾಚರಣೆಗೆ ತಂದರು. ಆದರೆ ಹೆಚ್ಚಾಗಿ ಶಾಸನದೊಡನೆ ಸಮ್ಮಿಶ್ರವಾದ ಸುಧಾರಣೆ ಹೆಚ್ಚು ಪರಿಣಾಮಕಾರಿಯಾಗಲಿಲ್ಲ. ಶಾಸನದ ಶಾಸ್ತಿಯ ಬೆದರಿಕೆ ಹೆಚ್ಚಿನವರನ್ನು ಮಣಿಸಲಿಲ್ಲ.

ಬ್ರಿಟಿಶರು ನಮ್ಮದೇಶಕ್ಕೆ ಬಂದಬಳಿಕ ಅನೇಕ ಸುಧಾರಣಾಶಾಸನಗಳನ್ನು ಮಾಡಿದರು. ಇವುಗಳಲ್ಲಿ ಸಹಗಮನದ ವಿರುದ್ಧವಾದ ಶಾಸನವು ಮುಖ್ಯವಾದ ಸುಧಾರಣಾ ಶಾಸನಗಳಲ್ಲೊಂದು. ಇದರಿಂದಾಗಿ ಸಹಗಮನದ ಪದ್ಧತಿಯು ನಮ್ಮ ಸಮಾಜದಲ್ಲಿ ಹೆಚ್ಚುಕಡಿಮೆ ನಿಂತೇ ಹೋಯಿತೆನ್ನಬಹುದು. ಇದರಂತೆ ಬಾಲ್ಯವಿವಾಹ ಪದ್ಧತಿಯನ್ನು ನಿಷೇಧಿಸುವ ಶಾಸನವೂ ಸ್ವಲ್ಪಮಟ್ಟಿಗೆ ಯಶಸ್ವಿಯಾಯಿತು. ಇನ್ನೂ ಕೆಲವೆಡೆ ಪ್ರಚಲಿತವಾಗಿದ್ದ ಮೂಢನಂಬಿಕೆಯ ಕಂದಾಚಾರ ಪದ್ಧತಿಗಳನ್ನು ವಿಶಿಷ್ಟ ಆಜ್ಞೆ ಅಥವಾ ಶಾಸನಗಳ ಮೂಲಕ ನಿರ್ಮೂಲಿಸಿದರು. ಉದಾಹರಣೆಗೆ, ಒಂದು

ಪ್ರಸಿದ್ಧ ದೇವಾಲಯಕ್ಕೆ ಹರಿಕೆ ಹೇಳಿಕೊಂಡ ಭಕ್ತರು ಕಳೆದಶತಮಾನದ ಮಧ್ಯಭಾಗದ ವರೆಗೂ ಒಂದು ಕೊಳದಲ್ಲಿ ಸ್ನಾನಮಾಡಿ ವಿವಸ್ತ್ರರಾಗಿ ಹೋಗುತ್ತಿದ್ದರೆಂಬ ದಾಖಲೆಯಿದೆ. ಬ್ರಿಟಿಷ್ ಸರಕಾರ ಈ ಪದ್ಧತಿಯನ್ನು ಬಹಿಷ್ಕರಿಸಿತು. ಆ ದೇವಾಲಯಕ್ಕೆ ಹೋಗುವ ಭಕ್ತರಸಂಖ್ಯೆ ಇಂದು ಕೂಡ ಹೆಚ್ಚಾಗಿದ್ದರೂ ಈ ವಿವಸ್ತ್ರದರ್ಶನದ ಪದ್ಧತಿ ಮಾತ್ರ ಸಂಪೂರ್ಣವಾಗಿ ನಶಿಸಿಹೋಗಿದೆ! ಹೀಗೆಯೇ ಪ್ರಾಣಿಬಲಿ ನಿಷೇಧ ಮುಂತಾದ ಸಮಾಜಸುಧಾರಣೆಗಳಿಗೂ ಅವರು ಶಾಸನಗಳ ಅಡಿಪಾಯಹಾಕಿದ್ದರೆನ್ನಬಹುದು.

ಬ್ರಿಟಿಷರ ಆಡಳಿತೆಯು ಅಂತಿಮ ಘಟ್ಟದಲ್ಲಿದ್ದಾಗ ಹಿಂದೂ ಸಮಾಜದಲ್ಲಿ ಅಬಲೆಯಾಗಿದ್ದ ಸ್ತ್ರೀಯ ಸ್ಥಾನಮಾನಗಳನ್ನು ಉದ್ಧರಿಸುವ ಶಾಸನ ಮೂಲಕದ ಪ್ರಯತ್ನ ಆರಂಭವಾಯಿತು. ಅವರ ಕಾಲದಲ್ಲಿ ಆರಂಭವಾದ ಸಬಲಾಶಾಸನವು ಮುಂದೆ ಸ್ವಾತಂತ್ರ್ಯದ ಕಾಲದಲ್ಲಿ ಹಿಂದೂ ಶಾಸನ ಸುಧಾರಣೆ ಮತ್ತು ಕ್ರೋಢೀಕರಣಕ್ಕೆ ನಾಂದಿಯಾಯಿತು. ಏನಿಲ್ಲದಿದ್ದರೂ ಬ್ರಿಟಿಶರ ಆಡಳಿತೆಯ ಕೇವಲ ಕೆಲವೇ ವರಪ್ರದಾನಗಳಲ್ಲಿ ಅವರು ನಿರ್ಮಿಸಿದ ಶಾಸನವ್ಯವಸ್ಥೆಯು ಅತ್ಯಂತ ಮಹತ್ವದ್ದೆನ್ನುವುದರಲ್ಲಿ ಸಂಶಯವಿಲ್ಲ. ಕ್ರೋಢೀಕೃತವಾದ ಸಾರ್ವಜನಿಕ ಹಾಗೂ ವೈಯಕ್ತಿಕ ಶಾಸನಗಳನ್ನು ಅವರು ನಮಗೆನೀಡಿ ಹೋಗಿದ್ದಾರೆ.

ಈ ಶಾಸನವ್ಯವಸ್ಥೆಯ ಚೌಕಟ್ಟಿನೊಳಗೆ ಸಮಾಜಸುಧಾರಣೆಯ ಶಾಸನಗಳನ್ನು ನಮ್ಮ ಪ್ರಜಾರಾಜ್ಯ ಸರಕಾರ ರೂಪಿಸಿದೆ, ರೂಪಿಸುತ್ತಿದೆ. ಅಸ್ಪೃಶ್ಯತಾನಿವಾರಣಾ ಕಾಯಿದೆ ಅಂಥವುಗಳಲ್ಲೊಂದು. ಅಸ್ಪೃಶ್ಯತೆಯನ್ನು ಯಾರು ಆಚರಿಸುತ್ತಾನೋ ಅವನು ಈ ಕಾಯಿದೆಯ ಮೇರೆಗೆ ತಪ್ಪಿತಸ್ಥನಾಗುತ್ತಾನೆ. ಆದರೆ ಸಮಾಜಸುಧಾರಣಾ ಶಾಸನಗಳ ದೌರ್ಬಲ್ಯವನ್ನು ವಿಶದೀಕರಿಸಲು ಈ ಕಾಯಿದೆಯನ್ನು ಉದಾಹರಣೆಯನ್ನಾಗಿ ತೆಗೆದುಕೊಳ್ಳಬಹುದು. ಈ ಕಾಯಿದೆ ಮೇರೆಗೆ ಯಾವುದೇ ಸಾರ್ವಜನಿಕ ಅಂಗಡಿ ಮೊದಲಾದ ಸ್ಥಳಗಳಲ್ಲಿ ಅಸ್ಪೃಶ್ಯ ವರ್ಗದವರನ್ನು ಪ್ರತ್ಯೇಕಿಸುವುದು ಅಪರಾಧವಾಗಿದೆ. ಆದರೆ ಇಷ್ಟುಮಾತ್ರದಿಂದಲೇ ಅಸ್ಪೃಶ್ಯತೆಯನ್ನು ನಾವು ಹೋಗಲಾಡಿಸಲು ಸಾಧ್ಯವಿದೆಯೆ? ಅಸ್ಪೃಶ್ಯವರ್ಗದವರು ಒಂದೇ ಅಂಗಡಿಯಲ್ಲಿ ಸ್ಪೃಶ್ಯರೊಡನೆ ವ್ಯಾಪಾರ ಮಾಡಿದೊಡನೆ, ಒಂದೇ ಖಾನಾವಳಿಯಲ್ಲಿ ಆಹಾರ ಭುಂಜಿಸಿದೊಡನೆ ಒಂದು ದೇವಾಲಯದೊಳಗೆ ಹೋದೊಡನೆ, ಒಂದೇ ವಾಹನದಲ್ಲಿ ಪ್ರಯಾಣ ಮಾಡಿದೊಡನೆ ಅಸ್ಪೃಶ್ಯತೆಯ ಆಚರಣೆ ಸಂಪೂರ್ಣವಾಗಿ ನಿವಾರಣೆಯಾಗುವುದೆ? ಅಸ್ಪೃಶ್ಯತೆ ನಮ್ಮಲ್ಲಿ ಪರಂಪರಾಗತವಾಗಿ ಹುಟ್ಟಿನಿಂದ ಬಂದಿದೆ. ಆ ಬಗ್ಗೆ ಸ್ಪೃಶ್ಯ ವರ್ಗದವರಿಗೂ ದೃಢವಾದ ಭಾವನೆಯಿದೆ; ಅಸ್ಪೃಶ್ಯವರ್ಗದವರಲ್ಲೂ ಅಂಥ ಸ್ಥಿರ ಭಾವನೆಯಿದೆ. ಸ್ಪೃಶ್ಯ ವರ್ಗದವರು ಕಡ್ಡಾಯವಾಗಿ ಅಸ್ಪೃಶ್ಯ ವರ್ಗದವರನ್ನು ತಮ್ಮ ಮನೆಯೊಳಗೆ ಬರಬಿಡಬೇಕು, ಅವರೊಡನೆ ಉಣ್ಣಬೇಕು, ಅವರೊಡನೆ ವಿವಾಹಸಂಬಂಧ ಬೆಳೆಸಬೇಕು ಎಂಬಿತ್ಯಾದಿಯಾಗಿ ಅಸ್ಪೃಶ್ಯತೆಯನ್ನು ಒಮ್ಮೆಲೇ ನಿವಾರಿಸಬಲ್ಲ ರಾಮಬಾಣದಂಥ ಶಾಸನವನ್ನಾದರೂ ನಮ್ಮ ಹಕ್ಕು—ಬಾಧ್ಯತೆಪ್ರಧಾನವಾದ ಶಾಸಕೀಯ ವ್ಯವಸ್ಥೆಯಲ್ಲಿ ಮಾಡಲು ಸಾಧ್ಯವಿದೆ ಎಂದು ಹೇಳುವಂತಿಲ್ಲ.

ಇನ್ನೊಂದು ಶುದ್ಧವಾದ ಸಮಾಜಸುಧಾರಣೆಯ ಶಾಸನವೆಂದರೆ ವರದಕ್ಷಿಣೆ ಸ್ವೀಕಾರವನ್ನು ನಿಷೇಧಿಸುವ ಕಾನೂನು. ಇದರ ಮೇರೆಗೆ ವರದಕ್ಷಿಣೆ ಸ್ವೀಕಾರವು ಶಿಕ್ಷಾರ್ಹವಾದ ಅಪರಾಧ. ಆದರೆ ವರನಿಗೆ ನಗದೀ ಹಣದರೂಪದಲ್ಲಿ ಕನ್ಯಾಶುಲ್ಕವನ್ನು ಕೊಡದಿದ್ದರೂ ಅವನಿಗೆ 'ಉಡುಗೊರೆ' ಕೊಡಲು ಅಡ್ಡಿಯಿಲ್ಲ. ಇದರಲ್ಲಿ ವರದಕ್ಷಿಣೆಯು 'ಉಡುಗೊರೆ'ಯ ರೂಪವನ್ನು ತಾಳುವ ಅಪಾಯವೊಂದೇ ಅಲ್ಲ. ಪ್ರಾಯಕ್ಕೆ ಬಂದ, ವಿವಾಹಕ್ಕೆ ಸಿದ್ಧವಾದ ವಧುವನ್ನು ಕಡ್ಡಾಯವಾಗಿ ವಿವಾಹಯೋಗ್ಯ ವರನು ವಿವಾಹ ಮಾಡಿಕೊಳ್ಳಲೇಬೇಕೆಂದು ವಿಧಿಸುವುದು ಸಾಧ್ಯವೆ? ವಾಸ್ತವಿಕವಾಗಿ ವರದಕ್ಷಿಣೆಯ ಪದ್ಧತಿಯಿಂದ ಆಗುವ ಅವಾಂತರ ನಮಗೆ ಚೆನ್ನಾಗಿ ಗೊತ್ತು. ನಮ್ಮ ಸಾಹಿತ್ಯಕೃತಿಗಳಲ್ಲಿ, ನಾಟಕಗಳಲ್ಲಿ, ಚಲಚ್ಚಿತ್ರಗಳಲ್ಲಿ ಎಲ್ಲ ಅದರ ದುರಂತ ಮುಖ ಬೇಕಾದಷ್ಟು ಚಿತ್ರಿತವಾಗಿದೆ. ಆದರೆ ವರದಕ್ಷಿಣೆ ಪದ್ಧತಿ ಹಿಂದಿನಿಂದ ಬಂದುದು. ಕನ್ಯೆಯನ್ನು ವರನಿಗೆ ಕೊಡುವಾಗ ಅವನು ಸ್ವತಂತ್ರ ಜೀವನವನ್ನು ಆರಂಭಿಸಲು ಕನ್ಯಾಪಿತನು ಸಂತೋಷದಿಂದ ವರದಕ್ಷಿಣೆ ಕೊಡುತ್ತಿದ್ದ. ಆದರೆ ಎಲ್ಲ ವ್ಯವಹಾರಗಳಂತೆ ಇದೂ ಕ್ರಮೇಣ ಪೈಪೋಟಿಯ ಹಣಕಾಸಿನ ವ್ಯವಹಾರವಾಗಿ ಪರಿಣಮಿಸಿತು. ಹೀಗೆ ಅದು ನಿಜವಾದ ಪ್ರೇಮಕ್ಕೆ ಕಂಟಕವಾಯಿತು. ಕೃತ್ರಿಮಪ್ರೇಮಕೆ ಪ್ರೇರಕವಾಯಿತು. ಇಂದಿನ ಕನ್ಯಾಪಿತರು



ದೀಪಾವಳಿಯು ಸರ್ವರಿಗೂ
ಸುಖಸಂಪ್ರದವನ್ನೀಯಲಿ !



ಯೋಗ್ಯ ವರನನ್ನು ದೊರಕಿಸಿಕೊಳ್ಳಲು ಮಾಡುವ ಯತ್ನ ಭಗೀರಥ ಯತ್ನಕ್ಕೆ ಸಮವಾದುದು. ಆದರೆ ವರದಕ್ಷಿಣೆ ನಿಷೇಧದ ಕಾಯದೆ ಅವರ ಸ್ಥಿತಿಯನ್ನು ಸುಧಾರಿಸಿತೆ? ಬಡಕನ್ಯೆಯ ಸ್ಥಿತಿಯನ್ನು ಸುಧಾರಿಸಿತೆ? ಒಬ್ಬನು ವರದಕ್ಷಿಣೆ ಪಡೆದ ಅಪರಾಧಿಯೆಂದು ಸಿದ್ಧಪಡಿಸುವವರಾದರೂ ಯಾರು? ಕನ್ಯಾಪಿತನೇ ಈ ಆರೋಪವನ್ನು ಮಾಡಬೇಕಷ್ಟೆ. ಆದರೆ ಅಳಿಯನಾದವನಿಗೆ ಈ ಆರೋಪದ ಉಡುಗೊರೆಯನ್ನು ತಕ್ಷಣ ನೀಡಲು ಸಿದ್ಧರಾಗಿರುವ ಕನ್ಯಾಪಿತೃಗಳು ನಮ್ಮಲ್ಲಿ ಎಷ್ಟು ಮಂದಿ ಇದ್ದಾರೆ? ಅಂಥವರು ಇದ್ದರೂ ಅವರ ಸ್ಥಿತಿಯು ಮೇಲಕ್ಕೆ ಉಗುಳಿ ಎಂಜಲನ್ನು ತನ್ನ ಮುಖಕ್ಕೆ ಸುರುವಿಕೊಂಡವನಂತಾಗುವುದೆಂಬುದರಲ್ಲಿ ಸಂಶಯವಿಲ್ಲ.

ಇಂದು ಬಲವಾದ ಟೀಕೆಗೊಳಗಾಗಿ ವಿವಾದಾಸ್ಪದವಾದ ಇನ್ನೊಂದು ಸಮಾಜಸುಧಾರಣಾ ಶಾಸನವೆಂದರೆ ಪಾನಪ್ರತಿಬಂಧ ಕಾನೂನು. ಮದ್ಯಪಾನದಿಂದಾಗುವ ದುಷ್ಪರಿಣಾಮ ಎಲ್ಲರಿಗೂ ತಿಳಿದದ್ದೇ: ಒಂದೆಡೆ ಕುಡುಕನ ಆರೋಗ್ಯ ಹಾಳಾಗುತ್ತದೆ; ಇನ್ನೊಂದೆಡೆ ಅವನು ತನ್ನ ದುಡಿತವನ್ನೆಲ್ಲ ಅದಕ್ಕಾಗಿ ಪೋಲು ಮಾಡಿ ತನ್ನ ಕುಟುಂಬಕ್ಕೇ ಮಾರಿಯಾಗುತ್ತಾನೆ. ಕುಡುಕತನದ ಮಿತಿಯನ್ನು ಮೀರಿದವನಂತೂ ದುಷ್ಟಪ್ರಜೆಯಾಗುತ್ತಾನೆ; ತನ್ನ ವಿವೇಕವನ್ನು ಕಳೆದುಕೊಂಡು ಯಾವ ಅಪರಾಧ ಮಾಡಲೂ ಅವನು ಹಿಂದೆಮುಂದೆ ನೋಡುವುದಿಲ್ಲ. ಇಂಥ ಕಾಲಕೂಟದಿಂದ ನಾಗರಿಕರೆಲ್ಲರನ್ನು ರಕ್ಷಿಸುವುದು ಕಲ್ಯಾಣರಾಜ್ಯದ ಗುರಿಯನ್ನಿಟ್ಟುಕೊಂಡ ಯಾವುದೇ ಸರಕಾರಕ್ಕೂ ಭೂಷಣವಾದ ಧ್ಯೇಯವೆನ್ನುವುದನ್ನು ಯಾರೂ ಅಲ್ಲಗಳೆಯಲಾರರು. ಆದರೆ ಈ ಕಾನೂನು ಕಾರ್ಯಗತವಾಗುವ ವಿಧಾನವನ್ನು ಕಂಡು ಮಾತ್ರ ಕೆಲವರು ನಿರಾಶರಾಗಿದ್ದಾರೆ. ಇದು ಕುಡುಕತನವನ್ನು ಪ್ರತಿಬಂಧಿಸಿಲ್ಲ ಮಾತ್ರವಲ್ಲ, ಕಳ್ಳಭಟ್ಟಿಯ ಕೈಗಾರಿಕೆಗೂ ಲಂಚಗುಳಿತನಕ್ಕೂ ಪ್ರಚೋದನೆಯನ್ನು ಕೊಟ್ಟು ಸಾಮಾನ್ಯ ನಾಗರಿಕನಿಗೆ ಕಾಯದೆಯ ಮೇಲಿದ್ದ ಅಭಿಮಾನ-ಗೌರವಗಳನ್ನು ತೊಡೆದುಹಾಕುತ್ತಿದೆಯೆಂದು ಟೀಕಿಸಲಾಗುತ್ತಿದೆ. ಈ ಟೀಕೆಗಳನ್ನು ವಿಮರ್ಶೆ ಮಾಡಲು ಈ ಲೇಖಕನು ಅನರ್ಹನಾಗಿದ್ದಾನೆ. ಆದರೆ ಇಂಥದೇ ಶಾಸನವನ್ನು ಅಮೆರಿಕದಲ್ಲಿ ಪ್ರಯೋಗಿಸಿ ಮತ್ತೆ ಅದನ್ನು ಬಿಟ್ಟುಕೊಡಲಾಯಿತೆಂಬುದು ಸ್ಮರಣಾರ್ಹವಾಗಿದೆ. ಅಲ್ಲಿ ಪಾನನಿರೋಧ ಕಾಯದೆಯಿಂದಾಗಿ ಊಹಿಸಲಾರದಂಥ ಅಕೃತ್ಯಗಳು ತಲೆದೋರಿದುವು. ಒಂದೆಡೆ ಮದ್ಯದಕಳ್ಳಸಾಗಾಣಿಕೆಯ ವ್ಯಾಪಾರ ಭರದಿಂದ ಸಾಗಿದರೆ, ಮತ್ತೊಂದೆಡೆ ಅದರಲ್ಲಿ ಉದ್ಯುಕ್ತರಾದ ನ್ಯಾಯಬಾಹಿರ ಪ್ರವೃತ್ತಿಯ ಜನರು ತಮ್ಮದೇ ಆದ ಭೂಗತ ಅಕೃತ್ಯಕಾರಿ ಸಂಸ್ಥೆಗಳನ್ನು ನಡೆಸಿ ನಾಗರಿಕರ ಜೀವನವನ್ನು ಅಲ್ಲೋಲಕಲ್ಲೋಲ ಮಾಡಿದರು.

ಪಾನಪ್ರತಿಬಂಧ ತತ್ತ್ವವು ನಮ್ಮ ರಾಜ್ಯಾಂಗದ ನಿರ್ದೇಶಕ ತತ್ತ್ವಗಳಲ್ಲೊಂದಾಗಿದೆ. ಈ ಕಾಯದೆಯನ್ನು ಆದಷ್ಟು ಬಿಗುಗೊಳಿಸಲಾಗಿದೆಯಲ್ಲದೆ ಈಗ ತೇಕ್‌ಚಂದ್ ಸಮಿತಿಯು ಅದರ ಕಾರ್ಯಾಚರಣೆಯಲ್ಲಿರುವ ಲೋಪದೋಷಗಳನ್ನು ನಿವಾರಿಸಿ ಅದನ್ನು ಇನ್ನೂ ಹೆಚ್ಚು ಸಮರ್ಥವನ್ನಾಗಿ ಮಾಡಲು ಸೂಚನೆಗಳನ್ನು ನೀಡಲಿದೆ. ಭಾರತದಂಥ ಬಡದೇಶಕ್ಕೆ ಯಶಸ್ವಿ ಪಾನಪ್ರತಿಬಂಧ ಕಾಯದೆಯು ಅಮೂಲ್ಯವಾದ ವರದಾನವೆಂಬುದರಲ್ಲಿ ಭಿನ್ನಾಭಿಪ್ರಾಯವಿರಲಾರದು.

ಇತ್ತೀಚೆಗೆ ಜಾರಿಗೆ ಬಂದಿರುವ ಚಿನ್ನ ನಿಯಂತ್ರಣಾಜ್ಞೆಯಲ್ಲಿಯೂ ಸಮಾಜಸುಧಾರಣೆಯ ಧ್ಯೇಯವಿಲ್ಲದೆ ಇಲ್ಲ. ಸ್ವರ್ಣಸಂಗ್ರಹ ನಮ್ಮ ಪರಂಪರಾನುಗತವಾದ ಹವ್ಯಾಸ. ಸ್ವರ್ಣಾಭರಣ ಧಾರಣದ ಮೂಲಕ ನಮ್ಮ ಪಾಳೆಯಗಾರಿ ಪ್ರವೃತ್ತಿಯನ್ನು ಪ್ರದರ್ಶನ ಮಾಡುತ್ತೇವೆ. ಆದರೆ ಆಧುನಿಕ ಶಾಸ್ತ್ರದ ದೃಷ್ಟಿಯಿಂದ ಚಿನ್ನದಲ್ಲಿ ಹಣವನ್ನು ವಿನಿಯೋಗಿಸುವುದಕ್ಕೂ ಬಾವಿಯಲ್ಲಿ ಹಣವನ್ನು ಎಸೆಯುವುದಕ್ಕೂ ಹೆಚ್ಚಿನ ಅಭ್ಯಂತರವಿಲ್ಲ. ಇಂದಿನ ಆರ್ಥಿಕ ತತ್ತ್ವದ ಪ್ರಕಾರ ಚಿನ್ನವೆಲ್ಲ ಸರಕಾರಕ್ಕೆ ಸೇರಬೇಕು. ಒಂದು ಸರಕಾರದೊಡನೆ ಎಷ್ಟು ಚಿನ್ನವಿದೆಯೋ ಅಷ್ಟರಮಟ್ಟಿಗೆ ಅದು ಅಂತಾರಾಷ್ಟ್ರೀಯ ವ್ಯಾಪಾರ-ವ್ಯವಹಾರಗಳಲ್ಲಿ ಬಲಿಷ್ಠವಾಗಿರುತ್ತದೆ. ಆದ್ದರಿಂದ ನಾಗರಿಕರು ತಮ್ಮಲ್ಲಿದ್ದ ಚಿನ್ನವನ್ನು ಸರಕಾರಕ್ಕೆ ಬೆಲೆ ತೆಗೆದುಕೊಂಡಾದರೂ ಒಪ್ಪಿಸುವುದು ಅವಶ್ಯ. ಇಂಥ ಆದರ್ಶದ ಈ ನಿಯಂತ್ರಣಾಜ್ಞೆಯು ಕಾರ್ಯರೂಪಕ್ಕಿಳಿಯುವಾಗ ಮೊದಲು ಕಳವಳಗೊಂಡವರು ಅಕ್ಕಸಾಲಿಗರು. ಸರಕಾರ ಅವರಿಗೆ ಈಗ ಪರಿಹಾರ ನೀಡುತ್ತಿದೆ. ಆದರೆ ಅವರಿಗೆ, ಚಿನಿವಾರರಿಗೆ ಎಲ್ಲ ಇಷ್ಟು ತೊಂದರೆಯಾದರೂ ನಮ್ಮೊಡನಿದ್ದ ಸರಕಾರಕ್ಕೆ ಚಿನ್ನದಲ್ಲಿ ಹೆಚ್ಚಿನಂಶ ಸಂದಿಲ್ಲವೆಂದು ಲೆಕ್ಕ ಹಾಕಲಾಗುತ್ತಿದೆ. ನಮ್ಮ ಚಿನ್ನದ ಆಭರಣಗಳ ಮೇಲಂತೂ ಈ ಆಜ್ಞೆ ಏನೂ ಮಾಡಲಾರದಾಗಿದೆ. ಆದ್ದರಿಂದ ಬರೀ ಈ ಆಜ್ಞೆಯ ಮೂಲಕ ಜನಸಮುದಾಯದ ಚಿನ್ನದ ಮೋಹವು ತಗ್ಗಿತು ಅಥವಾ ನಶಿಸಿತು ಎಂದು ಹೇಳುವುದು ಸದ್ಯ ಕಷ್ಟವಾಗಿದೆ.

ಕಡ್ಡಾಯದ ಪ್ರಾಥಮಿಕ ಶಿಕ್ಷಣದ ಕಾಯಿದೆಯು ನಮ್ಮ ಪ್ರಜಾರಾಜ್ಯದ ಬೆಳವಣಿಗೆಯ ದೃಷ್ಟಿಯಿಂದಲೂ ಮಹತ್ವದ್ದು. ಸಮಾಜಸುಧಾರಣೆಗೆ ಇದು ಅಡಿಗಲ್ಲು ಎಂದು ಹೇಳಬಹುದು. ಇದಕ್ಕಾಗಿ ಸಾಕಷ್ಟು ಹೊಸ ಸಾಲೆಗಳ ನಿರ್ಮಾಣವೂ ಆಗಿದೆಯಲ್ಲದೆ ಮಕ್ಕಳಿಗೆ ಉಚಿತ ಪುಸ್ತಕ, ಉಡುಪು, ಮಧ್ಯಾಹ್ನದ ಊಟ ಮುಂತಾದ ಸೌಲಭ್ಯಗಳನ್ನು ಸಾರ್ವತ್ರಿಕವಾಗಿ ಒದಗಿಸುವ ಸ್ತುತ್ಯ ಪ್ರಯತ್ನ ನಡೆಯುತ್ತಿದೆ. ಆದರೆ ಈ ಕಡ್ಡಾಯ ಶಿಕ್ಷಣದ ಸಾಧನೆಯನ್ನು ಕಾರ್ಯಗತ ಮಾಡುವವರು ಯಾರು? ಅಧ್ಯಾಪಕರು ಸಾಲೆಯಲ್ಲಿದ್ದರೂ ಹೆತ್ತವರು ಮನೆಯಲ್ಲೋ ಹೊಲದಲ್ಲೋ ಕಚೇರಿಯಲ್ಲೋ ಇರುತ್ತಾರೆ. ಇದರ ಪರಿಣಾಮವಾಗಿ ಹೆಚ್ಚಿನ ಮಕ್ಕಳು ತಮ್ಮ ಮನೆ ಮತ್ತು ಸಾಲೆಗಳ ಮಧ್ಯೆ ಉಳಿದು ಬಿಡುತ್ತಾರೆ. ಮತ್ತೆ ಸಾಲೆಗೆ ಹಾಜರಾಗುವ ಮಕ್ಕಳ ಪೈಕಿ ಎಲ್ಲರೂ ಶಿಕ್ಷಣ ಲಾಭವನ್ನು ಪಡೆಯುತ್ತಾರೆಂದು ಹೇಳುವುದು ಹೇಗೆ ಸಾಧ್ಯ? ಕೆಲವು ಮಕ್ಕಳಾದರೂ ತಾವು ಸಾಲೆಗೆ ಸೇರುವಾಗ ಎಷ್ಟು ನಿಷ್ಕಲ್ಮಷರಾಗಿದ್ದವೋ ಅಷ್ಟೇ ನಿಷ್ಕಲ್ಮಷರಾಗಿ ಕಡ್ಡಾಯ ಶಿಕ್ಷಣಾವಧಿಯ ಅಂತ್ಯದಲ್ಲಿ ಸಾಲೆಯಿಂದ ಹೊರಬರಬಹುದು.

ಯಾವುದಾದರೂ ಕಾಯಿದೆಯನ್ನು ಮಾಡುವಾಗ ಅದನ್ನು ಎಷ್ಟು ಸಮರ್ಥವಾಗಿ, ಎಷ್ಟು ಸಾರ್ವತ್ರಿಕವಾಗಿ ಕಾರ್ಯಗತ ಮಾಡಲು ಸಾಧ್ಯವಿದೆ ಎಂಬ ಪ್ರಶ್ನೆ ಅದರ ಒರೆಗಲ್ಲಾಗಿರಬೇಕು. ಈ ಒರೆಗಲ್ಲಿಗೆ ನಾವು ಸಮಾಜ ಸುಧಾರಣೆಯ ಶಾಸನಗಳನ್ನು ತಿಕ್ಕಿ ನೋಡಿದರೆ ಹೆಚ್ಚಿನವು ಈ ಪರೀಕ್ಷೆಯಲ್ಲಿ ಪೂರ್ಣ ಯಶಸ್ಸನ್ನು ಗಳಿಸಲಾರವು. ಯಾವ ಸುಧಾರಣೆಗೂ ಜನಸಮುದಾಯದಲ್ಲಿ ವಿದ್ಯಾಪ್ರಸಾರ ಮುಖ್ಯ. ಸಾಮಾನ್ಯವಾಗಿ ಈ ವಿದ್ಯಾಬಲದಿಂದಲೇ ಪ್ರತಿಯೊಬ್ಬನೂ ತನ್ನ ನಾಗರಿಕ ಹಕ್ಕುಬಾಧ್ಯತೆಅರಿತುಕೊಂಡು ಅನುಷ್ಠಾನಕ್ಕೆತರಲು ಶಕ್ತನಾಗುತ್ತಾನೆ. ಸಮಾಜ ಸುಧಾರಣೆಯ ಶಾಸನಗಳು ಹೆಚ್ಚಾಗಿ ನಾಗರಿಕರಿಂದ ಸ್ವೇಚ್ಛೆಯಿಂದ ಸ್ವೀಕರಿಸಲ್ಪಡತಕ್ಕವುಗಳಾಗಿವೆ. ಅವುಗಳನ್ನು ಕೇವಲ ಬಾಹ್ಯಕಾರ್ಯಾಚರಣೆಯಿಂದಲೇ ಕಡ್ಡಾಯವಾಗಿ ಇತರರ ಮೇಲೆ ಹೇರುವುದು ಸುಲಭದ ಮಾತಲ್ಲ. ಆದರೆ ಸುಶಿಕ್ಷಿತ ಸಮಾಜಕ್ಕೆ ಸುಧಾರಣಾ ಶಾಸನಗಳು ಅಗತ್ಯವೇ ಎಂಬುದೂ ವಿಚಾರಾರ್ಹ ಸಂಗತಿ. ಹೀಗೆ ಸಮಾಜ ಸುಧಾರಣಾ ಶಾಸನಗಳ ಸ್ಥಾನವು ನಮ್ಮ ಆಧುನಿಕ ಸಮಾಜದಲ್ಲಿ ಎಲ್ಲಿದೆ ಎಂದು ನಿಖರವಾಗಿ ಹೇಳುವುದು ಕಷ್ಟ. ಅಶಿಕ್ಷಿತ ಸಮಾಜದಲ್ಲಿ ಈ ಶಾಸನಗಳು ಕುದುರೆಯ ಮುಂದೆ ಗಾಡಿಯನ್ನು ಕಟ್ಟಿದಂತಾಗುವ ಸಂಭವ ಒಂದೆಡೆ ಇದ್ದರೆ, ಸುಶಿಕ್ಷಿತ ಸಮಾಜವು ಶಾಸನವಿಲ್ಲದೆ ಸುಧಾರಿಸಿಕೊಳ್ಳಲಾರದೆ ಎನ್ನುವ ಪ್ರಶ್ನೆ ಬೇರೆಯೇ ಇದೆ. ಅಂತೂ ಕಾರ್ಯಾಚರಣೆಯ ದೃಷ್ಟಿಯಿಂದ ಹೆಚ್ಚಿನ ಸಮಾಜ ಸುಧಾರಣೆಯ ಶಾಸನಗಳು ಹೆಚ್ಚುಕಡಿಮೆ ಕೇವಲ ಪ್ರಾಯೋಗಿಕ ರೂಪದಲ್ಲಿರುವುದು ಇಂದಿನ ಪರಿಸ್ಥಿತಿಯಲ್ಲಿ ಅನಿವಾರ್ಯವೆಂದೆನಿಸುತ್ತದೆ. ಅವು ಮುಂದೆ ವಿಕಾಸಗೊಂಡು ದೇಶದ ಸಾಮಾನ್ಯ ಕಾಯದೆಗಳೊಡನೆ ಕ್ರಮೇಣ ವಿಲೀನವಾಗಬೇಕಷ್ಟೆ.

ಲೇಖಕರು :
ಆರ್. ಕೆ. ಜೋಶಿ
ಬೆಂಗಳೂರು

ಅಗಸ್ಟ ಚಳವಳಿಯ ಒಂದು ನೆನಹು

# ಕರ್ಮವೀರ ಕ್ರಾಂತಿವೀರನಾದ ಕಥೆ

ಸಂಕ್ರಾಂತಿ ದಿನ ರೂಪತಾಳಿದ ಕರ್ಮವೀರ ಕ್ರಾಂತಿಕಾರಿ ಹೋರಾಟದಿಂದಲೇ ಮುಂದುವರಿಯುತ್ತ ಬಂದಿದೆ, ೧೯೩೦ರ ಹೋರಾಟದಲ್ಲಿ ಆಳರಸರ ದಬ್ಬಾಳಿಕೆಗೆ ಒಳಗಾಗಿ ಅಜ್ಞಾತವಾಸ ಕೈಕೊಂಡು ೧೯೪೦ರಲ್ಲಿ ಅದು ಪುನಃ ತಲೆಯೆತ್ತಿತು. ಆದರೆ ೧೯೪೨ ರ ಅಗಸ್ಟ ಚಳವಳಿಯ ಸೆಕೆ ಮತ್ತೆ ಅದಕ್ಕೆ ತಾಗಿತು. ಹರಿಜನ ಪುರವಣಿ ಹೊರಡಿಸುತ್ತಿದ್ದ ಕರ್ಮವೀರ ಆಳರಸರ ಕೃಪಾಕಟಾಕ್ಷಕ್ಕೆ ಪುನಃ ತುತ್ತಾಗಿ ಆರು ವಾರ ಕಾಲ ನಿಲ್ಲಬೇಕಾಯಿತು. ಕರ್ಮವೀರಕ್ಕೆ, ಅದರ ಸಂಪಾದಕರಿಗೆ ಸಹಕಾರ್ಯ ಕರ್ತರಿಗೆ ಇದೊಂದು ತುಂಬ ಅಭಿಮಾನದ ಸಂಗತಿಯಾಗಿ ಪರಿಣಮಿಸಿತು. ಕರ್ಮವೀರ ಕ್ರಾಂತಿವೀರನಾದುದನ್ನು ಪ್ರತ್ಯಕ್ಷ ಕಂಡ ಲೇಖಕರು ಆ ಕಥೆಯನ್ನು ಇಲ್ಲಿ ಇದ್ದಕಿದ್ದಂತೆ ಚಿತ್ರಿಸಿದ್ದಾರೆ.

ಇದು ಕೇವಲ ಕತೆಯಲ್ಲ; ಸತ್ಯಕತೆ. ೧೯೪೨ ನೇ ವರುಷದ ಮಾತು. ಅಗಸ್ಟ ತಿಂಗಳ ಕೊನೆ ಅಥವಾ ಸೆಪ್ಟೆಂಬರ ಇದ್ದಿರಬಹುದು. ಒಂದು ದಿನ ಮಧ್ಯಾನ್ಹ ೪-೦ ಗಂಟೆ ಸುಮಾರಿಗೆ ಹುಬ್ಬಳ್ಳಿ ಪಾವರಹೌಸ ಬಳಿ ಇದ್ದ ಸಂಯುಕ್ತಕರ್ನಾಟಕ ಕಾರ್ಯಾಲಯದ ಮುಂದೆ ಹಳೇ ಫೋರ್ಡ ಮಾದರಿಯ ಕಾರೊಂದು ಲಿಕಿ ಲಿಕಿ ಸಪ್ಪಳ ಮಾಡುತ್ತ, ಬಹಳ ದಣಿದು ತೇಕುಹತ್ತಿದವರಂತೆ ಉಸಿರುಬಿಡುತ್ತ ಬಂದು ನಿಂತಿತು. ಒಂದು ಬಾಗಿಲ ತೆರೆಯಿತು; ಒಳಗಿಂದ ಸಮವಸ್ತ್ರಧಾರಿ ಪೋಲೀಸ ಇನಸ್ಪೆಕ್ಟರರು ಇಳಿದರು. ಅವರು ಆಕಾರದಲ್ಲಿ ಕುಳ್ಳರಿದ್ದರೂ ಬಿಗುವು ತುಂಬಿತ್ತು. ಬ್ರಿಟಿಶ್ ಕಾಲದ ಪೋಲೀಸ ಇನಸ್ಪೆಕ್ಟರರ ಠೀವಿಯೇ ಠೀವಿ. ಅದು ಇಂದಿನ ಪೋಲೀಸ ಸುಪರಿಂಟೆಂಡೆಂಟರಿಗೂ ಬರಲಾರದು. ಅದೇ ತಾನೇ ಸ್ಟಾರ್ಚ ಇಸ್ತ್ರಿ ಮಾಡಿದ ಖಾಕಿ ಪ್ಯಾಂಟ, ಶರ್ಟು ಮತ್ತು ಕೋಟನ್ನು ನೀಟಾಗಿ ಧರಿಸಿ, ತಲೆಯ ಮೇಲೆ ತನ್ನ ಅಧಿಕಾರದ ಅಂತಸ್ತನ್ನು ಸೂಚಿಸುವ ಡ್ರಾಯವರ ಮಾದರಿಯ ಹ್ಯಾಟ್ ಇರಿಸಿಕೊಂಡಿದ್ದ. ಕಾಲಲ್ಲಿ ಸಾಕ್ಸ ಮತ್ತು ಬೂಟ್ಸ. ಕೋಟಿನ ಹಿತ್ತಾಳಿಯ ಬಿರಡಿಗಳು ಪಾಲಿಶ್ ಮಾಡಿದ್ದರಿಂದ ಲಕಲಕ ಹೊಳೆಯುತ್ತಿದ್ದವು. ಸೊಂಟವನ್ನು ಸ್ವಲ್ಪ ಅಗಲವಾದ ತೊಗಲಿನ ಬೆಲ್ಟ ಸುತ್ತಿಕೊಂಡಿತ್ತು. ಎಡಭಾಗದಲ್ಲಿ ಅದಕ್ಕೆ ತೂಗುಬಿದ್ದಿದ್ದ ಚರ್ಮದ ಚೀಲದಲ್ಲಿ ಗುಂಡು ತುಂಬಿದ ಪಿಸ್ತೂಲ ಶೋಭಿಸುತಿತ್ತು. ಅವರ ಹಿಂದೆ ಮತ್ತೆ ನಾಲ್ವರು ಕಾರಿನಿಂದ ಇಳಿದರು. ಅವರಲ್ಲಿ ಒಬ್ಬನು ಮಾತ್ರ ಪೋಲೀಸ ಪೇದೆಯ ಸಮವಸ್ತ್ರ ಹಾಕಿಕೊಂಡಿದ್ದನು. ಉಳಿದವರು ಸಾಮಾನ್ಯ ನಾಗರಿಕರ ಉಡುಪಿನಲ್ಲಿದ್ದರೂ ಪೋಲೀಸರೆಂಬ ಬಗ್ಗೆ ಸಂಶಯವೇ ಇದ್ದಿಲ್ಲ.

ಪೋಲೀಸ ಇನಸ್ಪೆಕ್ಟರ ಮುಂದೆ ಮುಂದೆ, ಅವರ ಹಿಂದೆ ಉಳಿದವರು— ಹೀಗೆ ಎಚ್ಚರಿಕೆಯಿಂದ ಅಡಿ ಇರಿಸುತ್ತ, ಸುತ್ತು ಮುತ್ತು ಕಣ್ಣರಳಿಸಿ ನೋಡಿ ಏನೂ ಗಂಡಾಂತರವಿಲ್ಲೆಂದು ಖಚಿತ ಮಾಡಿಕೊಳ್ಳುತ್ತ, ನಮ್ಮ ಕಾರ್ಯಾಲಯದ ಪಾವಟಿಗೆಗಳನ್ನು ಅರ್ಧ ದರ್ಪದಿಂದಲೂ ಅರ್ಧ ಅಳುಕಿನಿಂದಲೂ ಹತ್ತಿ ಏರಿ ಬಂದರು.

ಶ್ರೀ. ಮೊಹರೆ ಹಣಮಂತರಾಯರು ಆಗ ಊರಲ್ಲಿರಲಿಲ್ಲವಾದ್ದರಿಂದ ಕರ್ಮವೀರದ ಸಂಪಾದಕ ಶ್ರೀ. ಹ. ರಾ. ಪುರೋಹಿತರು ಮತ್ತು ನಾನು ಅವರನ್ನು ಸ್ವಾಗತಿಸಲು ಬಾಗಿಲಲ್ಲೇ ನಿಂತಿದ್ದೆವು. ಈ ರೀತಿ ನಾವು ಪೋಲೀಸರನ್ನು ಸ್ವಾಗತ ಮಾಡಬೇಕಾಗುವದೆಂಬ ವಾಸನೆ ಮೊದಲೇ ತಾಗಿತ್ತು. ಮಧ್ಯರಾತ್ರಿಯಲ್ಲೋ ಇಲ್ಲವೆ ನಸುಕಿನಲ್ಲೋ ಈ ಪ್ರಸಂಗ ಬರಬಹುದೆಂಬ ನಮ್ಮ ತರ್ಕ ಮಾತ್ರ ತಲೆಕೆಳಗಾಗಿ ಅವರು ಹಗಲುಹಾಡೇ ನಮಗೆ ದರ್ಶನವಿತ್ತರು. ಇನಸ್ಪೆಕ್ಟರ ಮೊದಲು ಪ್ರವೇಶಿಸಿದರು. ಅವರ ಹಿಂದೆಯೇ ನಡೆದುಬಂದ ಸಾಮಾನ್ಯಪೋಷಾಕಿನ ಪೋಲೀಸ ಪೇದೆಯ ವೇಷ ವಿಚಿತ್ರವಾಗಿತ್ತು. ಆತನು ಪೋಲೀಸ ಶಾಖೆಯವರು ಉಪಯೋಗಿಸುವಂಥ ನೂಲಿನ ದಪ್ಪ ಹಗ್ಗದ ಒಂದು ತುದಿಯನ್ನು ತನ್ನ ಸೊಂಟಕ್ಕೆ ಕಟ್ಟಿಕೊಂಡಿದ್ದನು. ಇನ್ನೊಂದು ತುದಿಯನ್ನು ಪಿಸ್ತೂಲಿನ ಹಿಡಿಕೆಗೆ ಬಿಗಿದು, ಅದನ್ನು ಈಗಲೇ ಗುರಿ ಇಟ್ಟು ಹೊಡೆಯುವವರಂತೆ ಬಲಗೈಯಲ್ಲಿ ಹಿಡಿದುಕೊಂಡಿದ್ದನು. ಅವನ ಹಿಂದೆ ಉಳಿದವರು ಬರುತ್ತಿದ್ದರು.

ಚಲೇಜಾವ್ ಚಳವಳಿಯ ಕಾಲವದು. ಪೋಲೀಸರ ಆಗಮನದಿಂದ ನಮಗೆ ಅಚ್ಚರಿಯೆನಿಸಲಿಲ್ಲ. ಆದರೆ ಪಿಸ್ತೂಲ ಧಾರಣೆಯ ಈ ವಿಚಿತ್ರ ಪದ್ಧತಿ ನೋಡಿ ನಾನು ಚಕಿತಗೊಂಡೆ; ಪೋಲೀಸರ ಹೆದರಿಕೆಯನ್ನೇ ತೊರೆದಿದ್ದ ನನಗೆ ಆಶ್ಚರ್ಯದ ಜೊತೆ ನಗುವೂ ಬಂದಿತು.

"ಇನಸ್ಪೆಕ್ಟರ ಸಾಹೇಬರೇ, ಇದೇನು? ಮೊದಲ ತುತ್ತಿಗೇನೆ ನಮ್ಮ ಪ್ರಾಣಾಪಹರಣದ ವಿಚಾರವಿದೆಯೋ?" ಎಂದು ನಾನು ಆ ಪೇದೆಯ ಕೈಯಲ್ಲಿದ್ದ ಪಿಸ್ತೂಲಿನ ಕಡೆಗೆ ಬೆರಳು ಮಾಡಿ ಪ್ರಶ್ನಿಸಿದೆ.

ಅವರು ಸರ್ರನೆ ಹೊರಳಿ, ಪೋಲೀಸ ಪೇದೆಯನ್ನೂ ನನ್ನನ್ನೂ ದಿಟ್ಟಿಸಿ ನೋಡಿದರು. ಒಂದು ನಿಮಿಷದ ನಂತರ ಅವರ ತುಟಿಗಳಿಂದ ಮುಗುಳು ನಗೆ ಸೂಸಿ ಬಂದಿತು.

"ಮಿಸ್ಟರ ಜೋಶಿ, ನಿಮ್ಮ ಪ್ರಾಣಹರಣಕ್ಕಲ್ಲ; ನಮ್ಮ ಪ್ರಾಣ ರಕ್ಷಣೆಗೆ ಅದು" ಎಂದು ಸಾವಧಾನವಾಗಿ ಉತ್ತರಿಸಿದರು.

"ಅಂದರೆ, ಏನು ಇದರರ್ಥ?" ಎಂದು ಪುನಃ ಕೇಳಿದೆ.

"ಈ ಸಲದ ಗಾಂಧಿ ಚಳವಳಿ ಮೊದಲಿನಂತಲ್ಲ. ಪೋಲೀಸರನ್ನೂ ಸರಕಾರಿ ಅಧಿಕಾರಿಗಳನ್ನೂ ಪ್ರಸಂಗ ಬಂದಲ್ಲಿ ಕೊಲ್ಲುವದಕ್ಕೆ ಕಾಂಗ್ರೆಸಿಗರಿಗೆ ನಿರ್ಬಂಧವಿಲ್ಲ. ಪೋಲೀಸರ ಕೈಯಲ್ಲಿನ ಪಿಸ್ತೂಲನ್ನೇ ಕಸಿದುಕೊಂಡು ತಿರುಗಿ ಅವರಿಗೇ ಗುಂಡು ಹಾಕುವ ಭಯ ಸರಕಾರಕ್ಕಿರುತ್ತದೆ. ಆದುದರಿಂದ ಪಿಸ್ತೂಲನ್ನು ನೀವು ಕಸಿದುಕೊಳ್ಳದಂತೆ ಅದನ್ನು ರಕ್ಷಿಸಲು ಹಗ್ಗ ಬಿಗಿದು, ಆ ಹಗ್ಗದ ಇನ್ನೊಂದು ತುದಿಯನ್ನು ಅವನ ಸೊಂಟಕ್ಕೆ ಕಟ್ಟಲಾಗಿದೆ" ಎಂದವರು ವಿವರಿಸಿದಾಗ ನಾವೆಲ್ಲರೂ ಘೊಳ್ಳನೇ ನಕ್ಕೆವು.

"ಹಾಗಾದರೆ ನಾವೂ ಕೊಲೆಗಡಕರೆಂದು ನೀವು ಭಾವಿಸಿದಿರಾ?"—ನಗು ನಿಂತ ನಂತರ ಮತ್ತೆ ನನ್ನ ಪ್ರಶ್ನೆ ಮುಂದುವರಿಯಿತು.

"ಆ ರೀತಿ ಭಾವಿಸಬೇಡಿ. ಸಂಯುಕ್ತಕರ್ನಾಟಕದ ಚಾಲಕರಲ್ಲಿ ನನಗೆ ವಿಶ್ವಾಸವಿದೆ. ಆದರೆ ಇದು ಚಳವಳಿಯ ಕಾಲ. ಸರಕಾರದ ಆಜ್ಞೆಯನ್ನು ನಾವು ಪಾಲಿಸಬೇಕಾಗುವದು. ಪಿಸ್ತೂಲನ್ನು ಅರಕ್ಷಿತವಾಗಿ ಒಯ್ಯಕೂಡದೆಂದು ನಿರ್ಬಂಧ ವಿದೆ" ಎಂದವರು ವಿವರಿಸಿದರು. ಇನಸ್ಪೆಕ್ಟರರು ನಮಗೆ ಅಷ್ಟು ಅಪರಿಚಿತರಲ್ಲವಾದ್ದರಿಂದ ನಮ್ಮೊಡನೆ ಬಿಚ್ಚುಮನಸ್ಸಿನಿಂದಲೇ ಮಾತಾಡಿದರು.

*

ಗಾಂಧೀಜಿಯ ಮೊದಲಿನ ಚಳವಳಿಯಲ್ಲಿ, ಕರ್ನಾಟಕದಲ್ಲಿ ಅಭೂತಪೂರ್ವ ಕ್ರಾಂತಿಯನ್ನೆಬ್ಬಿಸಿ, ೧೯೩೦ರ ಹೋರಾಟದಲ್ಲಿ ಆಳರಸರ ದಬ್ಬಾಳಿಕೆಗೆ ಗುರಿಯಾಗಿ ಅಜ್ಞಾತವಾಸ ಕೈಕೊಂಡಿದ್ದ "ಕರ್ಮವೀರ" ವಾರ ಪತ್ರಿಕೆಯನ್ನು ೧೯೪೦ ನೇ ವರುಷ ಹಿಂದಿನ ಸವಿನೆನಪಿಗಾಗಿ ಮತ್ತೆ ಆರಂಭಿಸಲಾಗಿತ್ತು. ಕರ್ಮವೀರ ಕರ್ನಾಟಕ ಸ್ವಾತಂತ್ರ್ಯ ಹೋರಾಟದ ಕಡುಗಲಿ ಎನಿಸಿತ್ತು. "ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ"—ಈ ಗೀತೋಕ್ತಿ ಅದರ ಶಕ್ತಿಮಂತ್ರ. ಗಾಂಧೀಜಿಯ ನಿಸ್ಸೀಮ ಭಕ್ತರಾದ ಶ್ರೀ ದಿವಾಕರ ರಂಗರಾಯರು, ದಿ. ಕಬ್ಬೂರ ಮಧ್ವರಾಯರು, ಶ್ರೀ ಹುಕ್ಕೇರಿಕರ ರಾಮರಾಯರು ಕೇವಲ ನಾಡಸೇವೆಗಾಗಿ ಇದನ್ನು ಸ್ಥಾಪಿಸಿ ನಡೆಸುತಿದ್ದರು. ಬ್ರಿಟಿಶರ ವಿರುದ್ಧ ಕಲಿತನದಿಂದ ಕಾದಿ ಕರ್ನಾಟಕದ ಆಬಾಲಯುವಕವೃದ್ಧರಲ್ಲಿ ವೀರಶ್ರೀ ತುಂಬಿದ ಕೀರ್ತಿ ಕರ್ಮವೀರದ್ದು. ಸ್ವಾತಂತ್ರ್ಯ ಹೋರಾಟದ ಕೊನೆಯ ಅಂಕು ಇನ್ನೂ ಮುಂದೆ ಇದ್ದುದರಿಂದ ಅದನ್ನು ಶ್ರೀ. ದಿವಾಕರರು ೧೯೪೦ ರಲ್ಲಿ ಮತ್ತೆ ಪುನರುಜ್ಜೀವನಗೊಳಿಸಿದರು. ಸೆಲೆ ಬತ್ತಿದ್ದ ಕಾರಂಜಿ ಮತ್ತೆ ಉತ್ಸಾಹದಿಂದ ಪುಟಿಯಲಾರಂಭಿಸಿತು. ಹಿಂದೆ ಅದರ ಸಂಪಾದಕ ಮಂಡಲದಲ್ಲಿದ್ದು, ಶ್ರೀ. ದಿವಾಕರ ಮತ್ತು ಶ್ರೀ ಕೆರಮುರಕರರು ಆಳರಸರ ಅತಿಥಿಗಳಾಗಿ ಹೋದಾಗ, ಒಬ್ಬೊಂಟಿಗರಾಗಿ ಈ ಸಾಪ್ತಾಹಿಕವನ್ನು, ಕೆಲ ಕಾಲ ನಡೆಸಿದ ಶ್ರೀ ಹ. ರಾ. ಪುರೋಹಿತರು, ಆಗ ಸಂಪಾದಕರಾಗಿ ಅದರ ಪೂರ್ಣ ಹೊಣೆ ಹೊತ್ತುಕೊಂಡರು; ಇಂದಿಗೂ ಅವರು ಅದರ ಸಂಪಾದಕರಾಗಿರುವರು. ವಾರ - ವಾರವೂ ನಿಮ್ಮ ಬಾಗಿಲಿಗೆ ಜ್ಞಾನಾಮೃತ ತಂದು ಹಂಚಿಕೊಡುವ, ದೀಪಾವಳಿಗೊಮ್ಮೆ ನಿಮ್ಮ ಮನ-ಮನೆಗಳಲ್ಲಿ ಬೆಳಕು ಬೀರುವ ಕನ್ನಡಿಗರ ನೆಚ್ಚಿನ ಕರ್ಮವೀರದ ಸರ್ವಾಂಗಿಕ ಉನ್ನತಿಗೆ ಇವತ್ತಿಗೂ ಹಗಲಿರುಳು ಪರಿಶ್ರಮಿಸುತ್ತಿರುವರು.

ಕರ್ಮವೀರವನ್ನು ೧೯೪೦ರಲ್ಲಿ ಪುನರುಜ್ಜೀವಿಸಿದ ನಂತರ ಅದರಲ್ಲಿ ಹೊಸದಾಗಿ ಶಕ್ತಿ ತುಂಬಲು ನಾನಾ ಬಗೆಯ ಉಪಾಯ ಯೋಜಿಸಲಾಯಿತು. ೧೯೪೦ರ ವೈಯಕ್ತಿಕ ಸತ್ಯಾಗ್ರಹ ಮುಗಿದ ನಂತರ ೧೯೪೨ ರ "ಮಾಡು ಇಲ್ಲವೆ ಮಡಿ" ಹೋರಾಟದ ಲಕ್ಷಣಗಳು ಒಂದು ವರ್ಷ ಮೊದಲೇ ಅಸ್ಪಷ್ಟವಾಗಿ ಕಾಣುತಿದ್ದವು. ಹರಿಜನ ಪತ್ರಿಕೆಯಲ್ಲಿ ಗಾಂಧೀಜಿ ಬರೆಯುವ ಲೇಖನಗಳು ಜನತೆಗೆ ವಿದ್ಯುತ್‌ಪ್ರವಾಹದಂತೆ ಚೈತನ್ಯ ನೀಡುತಿದ್ದವು. ಅವರ ಲೆಕ್ಕಣಿಕೆಯಿಂದ ಬರುವ ಪ್ರತಿ ಶಬ್ದವನ್ನೂ ಜನ ಮನನ ಮಾಡುತಿದ್ದಿತು. ಆದರೆ ಕೇವಲ ಕನ್ನಡ ಓದು-ಬರೆಹ ಬಲ್ಲ ಅಸಂಖ್ಯ ಕನ್ನಡಿಗರಿಗೆ ಆ ಸೌಭಾಗ್ಯ ಇದ್ದಿಲ್ಲ. ಇಂಗ್ಲೀಷು ಬಲ್ಲವರು ಓದಿ ಹೇಳಿದ್ದನ್ನು ಕೇಳಿ ಅವರು ಸಂತೋಷಪಡಬೇಕಾಗಿತ್ತು. ಈ ಕೊರತೆಯನ್ನು ನಿವಾರಿಸಲು ಕರ್ಮವೀರ ಬದ್ಧ ಕಂಕಣವಾಯಿತು. ಗಾಂಧೀಜಿಯ ಆಜ್ಞೆಯಂತೆ ಹರಿಜನ ಲೇಖನಗಳ ಪ್ರತಿಗಳನ್ನು ಮೊದಲೇ ತರಿಸಿಕೊಂಡು, ಕನ್ನಡಿಸಿ, ಕರ್ಮವೀರದ ಹರಿಜನ ಪುರವಣಿಯೆಂದು ಪ್ರಕಟಿಸಲಾಗುತಿತ್ತು. ಇಂಗ್ಲೀಷ ಮತ್ತು ಹಿಂದಿ ಭಾಷೆಯ ಹರಿಜನ ಬರುವ ಹೊತ್ತಿಗೆ ಕರ್ಮವೀರದ ಕನ್ನಡ ಹರಿಜನವೂ ಪ್ರಸಾರದಲ್ಲಿರುತಿದ್ದಿತು. ಗಾಂಧಿ ಅಮೃತವಾಣಿಯನ್ನು ಹೊತ್ತು ತರುತಿದ್ದ ಅದರ ಲೋಕಪ್ರಿಯತೆ ವರ್ಣನಾತೀತ. ನಿಕಟ ಸಂಪರ್ಕವಿದ್ದವರಿಗೇ ಅದು ಗೊತ್ತು. ಚಲೇಜಾವ್ ಚಳವಳಿಯಲ್ಲಿ ಬ್ರಿಟಿಶ್ ಸರಕಾರ ಗಾಂಧೀಜಿಯನ್ನು ಬಂಧಿಸಿ, ಹರಿಜನ ನಿಲ್ಲಿಸುವವರೆಗೂ ಕನ್ನಡ ಹರಿಜನ ಪುರವಣಿ ತಪ್ಪದೆ ಪ್ರಕಾಶನಗೊಳ್ಳುತಿದ್ದಿತು.

*

ಹರಿಜನ ಪ್ರಕಟಣೆಯೇ ಅಂದಿನ ಪೋಲೀಸ ದಾಳಿಗೆ ಮೂಲವಾಗಿತ್ತು. ೧೯೪೨ ಅಗಸ್ಟ ೮ ರಂದು ಗಾಂಧೀಜಿ ಚಲೆಜಾವ್ ಚಳವಳಿ ಘೋಷಿಸಿ, ಭಾರತೀಯರಿಗೆ "ಮಾಡು ಇಲ್ಲವೆ ಮಡಿ" ಸಂದೇಶವಿತ್ತಿದ್ದರಿಂದ ನಾಡಿಗೆ ನಾಡೇ ದಾಸ್ಯದ ಕೋಟೆಗೆ ರಭಸದಿಂದ ಮುತ್ತಿಗೆ ಹಾಕಿತು. ತಂತಿ ಕತ್ತರಿಸುವ, ರೈಲುಗಳನ್ನು ನಿಲ್ಲಿಸುವ, ಸರಕಾರಿ ಕಟ್ಟಡಗಳಿಗೆ ಬೆಂಕಿ ಇಡುವ ಮೊದಲಾದ ಕ್ರಮಗಳು ದೇಶದಾದ್ಯಂತ ಪ್ರಾರಂಭವಾದವು. ದೈವವಶಾತ್ ನಾನು ಮುಂಬಯಿ ಗೋವಾಲಿಯಾ ಟ್ಯಾಂಕ ಮೈದಾನದಲ್ಲಿ ಸೇರಿದ್ದ ಈ ಅಭೂತಪೂರ್ವ ಮತ್ತು ಚಿರಸ್ಮರಣೀಯ ಎ.ಐ.ಸಿ.ಸಿ. ಸಭೆಗೆ ಹೋಗಿದ್ದೆ. ಗಾಂಧೀಜಿ ಹಾಗೂ ರಾಷ್ಟ್ರದ ಮುಂದಾಳುಗಳನ್ನು ಬ್ರಿಟಿಶ್ ಸರಕಾರವು ಬಂಧಿಸಿದನಂತರ, ಶ್ರೀಮತಿ ಮೃದುಲಾಬೇನ್ ಸಾರಾಭಾಯಿ ಇವರ ಮನೆಯಲ್ಲಿ ಸ್ವಾಮಿ ಆನಂದರನ್ನು ಶ್ರೀ. ದ. ಪ. ಕೆರಮುರಕರರ ಜೊತೆಯಲ್ಲಿ ಕಾಣುವ ಸದವಕಾಶ ನನಗೆ ಲಭಿಸಿತ್ತು. ಗಾಂಧೀಜಿಯ ಬಂಧನವಾದಾಗ ಸ್ವಾಮಿ ಆನಂದರು ಅವರ ಬಳಿಯಲ್ಲಿಯೇ ಇದ್ದರು. ಆದುದರಿಂದ ಗಾಂಧೀಜಿ ಸಂದೇಶ ಕೇಳಲು ನಾವು ಆತುರರಾಗಿದ್ದವು. ಅವರು ಚಳವಳಿಯ ರೂಪ-ರೇಷೆ ವಿವರಿಸಿದರು. ವಿಧ್ವಂಸಕತೆಗೆ ಅನುಮತಿ ಕೊಡಲಾಗಿದೆಯೆಂದು ನಮಗೆ ತಿಳಿವಳಿಕೆಯಾಯಿತು. ನಾನು ಹುಬ್ಬಳ್ಳಿಗೆ ಮರಳಿ ಬಂದ ನಂತರ ಈ ವಿಷಯವನ್ನು ಅನೇಕ ಕಾಂಗ್ರೆಸಿಗರಿಗೆ ತಿಳಿಸಿದ್ದೆ. ಅಷ್ಟರಲ್ಲಿ ಶ್ರೀ. ಕೆ. ಜಿ. ಮಶ್ರುವಾಲಾ ಅವರು ಹರಿಜನ ಪತ್ರಿಕೆಯಲ್ಲಿ ವಿಧ್ವಂಸಕತೆಯ ರೂಪರೇಷೆ ಬಗ್ಗೆ ಬಹಿರಂಗವಾಗಿ ಒಂದು ಲೇಖನವನ್ನೇ ಬರೆದರು. ಸರಕಾರದ ವಿರುದ್ಧ ಬಂಡಾಯದ ಪ್ರಚೋದನೆ ಅದರಲ್ಲಿತ್ತು.

ಗಾಂಧೀಜಿ ಮತ್ತು ಕಾಂಗ್ರೆಸ್ ಎಂದರೆ ಕೆಂಡ ಕಾರುತ್ತಿದ್ದ ಬ್ರಿಟಿಶ್ ಸರಕಾರ ಹರಿಜನ ಪತ್ರಿಕೆಯ ಮೇಲೆ ತನ್ನ ಗದೆ ಎತ್ತಿತು. ಹರಿಜನದ ಲೇಖನಗಳನ್ನು ಮುಂಗಡ ತರಿಸಿಕೊಂಡು ಪ್ರಕಟಿಸುತ್ತಿದ್ದ ಇತರ ಪತ್ರಿಕೆಗಳ ಮೇಲೂ ಗದೆ ಬೀಸಿತು. ಇದೇ ಹೋರಾಟದಲ್ಲಿ ಕರ್ಮವೀರದ ತಲೆಗೆ ಸ್ವಲ್ಪ ಪೆಟ್ಟು ಬಿದ್ದದ್ದು. ಸಂಯುಕ್ತಕರ್ನಾಟಕ ಹಾಗೂ ಕರ್ಮವೀರದ ಕೆಲಸಗಾರರಾದ ನಾವೆಲ್ಲ ಮಾಡು-ಮಡಿ ಹೋರಾಟಕ್ಕೆ ಅಣಿಯಾಗಿದ್ದೆವೆಂದು ಹೇಳುವದೇ ಬೇಡ. ನಮ್ಮ ಧರ್ಮದರ್ಶಿ ಶ್ರೀ ದಿವಾಕರ ರಂಗರಾಯರು ಗಾಂಧೀಜಿ ಕರೆಗೆ ಓಗೊಟ್ಟು, ಬ್ರಿಟಿಶ್ ಸರಕಾರದ ಕೈಗೆ ಸಿಕ್ಕದಂತೆ ಭೂಗತರಾಗಿ ಚಳವಳಿಯ ಸೂತ್ರ ನಿರ್ವಹಿಸಿಕೊಂಡಿದ್ದರು. ಈ ಮಧ್ಯೆ ಅವರು ಒಮ್ಮೆ ಹುಬ್ಬಳ್ಳಿಗೆ ಬಂದು ಪತ್ರಿಕೆಯ ಚಟುವಟಿಕೆ ಕುರಿತು ವಿಚಾರವಿನಿಮಯ ಮಾಡಿ' ನಮ್ಮ ಕರ್ತವ್ಯವನ್ನು ನಿವೇದಿಸಿದ್ದರು. ಪತ್ರಿಕಾಕರ್ತರು ಚಳವಳಿಯಲ್ಲಿ ನೇರವಾಗಿ ಧುಮುಕದೆ, ಪತ್ರಿಕೆಗಳನ್ನು ನಡೆಸುತ್ತ ಆಂದೋಲನಕ್ಕೆ ಬೆಂಬಲ ಕೊಡಬೇಕೆಂಬ ಕಾಂಗ್ರೆಸ್ ನೀತಿಗನುಸರಿಸಿ ಕಾರ್ಯ ಮಾಡಲು ನಿರ್ಧರಿಸಿದ್ದೆವು. ಒಂದು ವೇಳೆ ಸರಕಾರದ ಗದಾಪ್ರಹಾರವಾಗಿ ಪತ್ರಿಕೆ ನಿಲ್ಲಿಸುವ ಪ್ರಸಂಗ ಬಂದರೆ, ಅದಕ್ಕೆ ಸಹ ತಕ್ಕ ವ್ಯವಸ್ಥೆ ಮಾಡಿದ್ದೆವು. ಕೆಲಸಗಾರರಿಗೆ ಆರು ತಿಂಗಳ ವರೆಗೆ ತೊಂದರೆಯಾಗದಂತೆ ಹಣಕಾಸಿನ ವ್ಯವಸ್ಥೆ ಮಾಡಲಾಗಿತ್ತು.

ಹೀಗಾಗಿ ನಾವು ದಿನವೂ ಏನಾದರೊಂದು ಗಂಡಾಂತರ ನಿರೀಕ್ಷಿಸುತ್ತಿದ್ದೆವು. ಹಲವಾರು ದಿನಗಳ ನಂತರ ಧಾರವಾಡದಿಂದ ಒಂದು ಸುದ್ದಿ ಕೇಳಬಂದಿತು.— ಸಂಯುಕ್ತ ಕರ್ನಾಟಕ ಕಾರ್ಯಾಲಯ ಝಡತಿ ಮಾಡಲಿದ್ದಾರೆಂದು. ಸಂಯುಕ್ತಕರ್ನಾಟಕ ಕಾರ್ಯಾಲಯದ ಝಡತಿ ಮತ್ತು ಜಪ್ತಿ ವಾರಂಟ ಆಜ್ಞೆ ಕೊಡಲು ನಮ್ಮ ಕಟ್ಟಡದ ನಂಬರು ಕಲೆಕ್ಟರ ಕಚೇರಿಯವರಿಗೆ ಗೊತ್ತಿದ್ದಿಲ್ಲ. ೧೯೩೭ ರಲ್ಲಿ ನಾವು ಮುದ್ರಣಾಲಯದ ಬಗ್ಗೆ ಸಾದರ ಪಡಿಸಿದ ಡಿಕ್ಲೇರೇಶನ್ ಅವರಿಗೆ ಸಿಕ್ಕಿದ್ದಿಲ್ಲ. ಅದನ್ನು ಶೋಧಿಸಲು ಅವರಿಗೆ ಮೂರು ದಿನ ಹಿಡಿಯಿತು. ಅಷ್ಟರಲ್ಲಿ ಕಲೆಕ್ಟರ ಕಚೇರಿಯಲ್ಲಿದ್ದ ನಮ್ಮ ಗುಪ್ತಚಾರರು ಈ ಸುಳುವನ್ನು ನಮಗೆ ಕೊಟ್ಟರು.

ಏತಕ್ಕಾಗಿ ಈ ಝಡತಿ ನಡೆಯಲಿದೆಯೆಂದು ನಾವು ವಿಚಾರಿಸುವಷ್ಟರಲ್ಲಿ, ಕರ್ಮವೀರದ ಬಗೆಗೆ ಎಂದು ತಿಳಿಯಿತು. ಹರಿಜನ ಪ್ರಕಟಣೆಯ ಪರಿಣಾಮವದು. ಆದರೆ ದೈವವಶಾತ್ ಆ ಹರಿಜನ ಪುರವಣಿಯಲ್ಲಿ ಶ್ರೀ ಮಶ್ರೂವಾಲಾ ಅವರ ಲೇಖನ ಬಿಟ್ಟು ಉಳಿದವುಗಳನ್ನು ಪ್ರಸಿದ್ಧಿಸಲಾಗಿತ್ತು. ಅದು ಹೇಗೆ ಉಳಿದುಕೊಂಡಿತೆಂಬುದು ಈಗ ನೆನಪಿನಲ್ಲಿಲ್ಲ. ಅದನ್ನು ಬಿಟ್ಟರೂ ಉಳಿದ ಲೇಖನಗಳು ಸಹ ಆಕ್ಷೇಪಾರ್ಹವಿದ್ದವು. ಇದಕ್ಕಾಗಿಯೇ ಈ ಝಡತಿ ನಡೆಯಲಿದೆಯೆಂದು ನಾವು ಪೋಲೀಸರ ಸ್ವಾಗತಕ್ಕೆ ಸಿದ್ಧರಾಗಿದ್ದೆವು. ಕರ್ಮವೀರ ಫೈಲಿನಲ್ಲಿಯ ಒಂದು ಪ್ರತಿ ಬಿಟ್ಟು, ಉಳಿದ ಪ್ರತಿಗಳು ಸಿಕ್ಕದಂತೆ ಏರ್ಪಾಟು ಮಾಡಿ ಕಾರ್ಯಾಲಯವನ್ನು ಸ್ವಚ್ಛಗೊಳಿಸಿದ್ದೆವು. ನಮ್ಮ ಕೆಲಸ ಮುಗಿಯುವದಕ್ಕೂ ಪೋಲೀಸರ ದಾಳಿ ಪ್ರಾರಂಭವಾಗುವದಕ್ಕೂ ಸರಿಹೋಯಿತು.

*

ಇನಸ್ಪೆಕ್ಟರರು ಪಿಸ್ತೂಲಿನ ವರ್ಣನೆ ಮುಗಿಸಿದ ನಂತರ, ಝಡತಿ ವಾರಂಟ ತೋರಿಸಿ ತಮ್ಮ ಕಾರ್ಯ

ವನ್ನಾರಂಭಿಸಿದರು. ನಾವು ಸಂತೋಷದಿಂದ ಅವರಿಗೆ ನೆರವಾದೆವು. ಆ ಐದು ಜನರು ಒಂದು ಗಂಟೆಯ ವರೆಗೆ ಎಲ್ಲವನ್ನೂ ಕಿತ್ತಾಡಿದರು. ನಾವಾಗಿಯೇ ಮೇಲಿರಿಸಿದ್ದ ಕರ್ಮವೀರದ ಒಂದು ಪ್ರತಿಯ ಹೊರ್ತು ಇನ್ನಾವ ಆಕ್ಷೇಪಾರ್ಹ ಕಾಗದವೂ ಅವರಿಗೆ ಸಿಕ್ಕಲಿಲ್ಲ. ಅಹಮ್ಮದಾಬಾದದಿಂದ ಬಂದ ಲೇಖನಗಳ ಮೂಲ ಪ್ರತಿ ಎಲ್ಲಿದೆ? ಅವನ್ನು ಯಾರು ಭಾಷಾಂತರಿಸಿದರು ಎಂದು ಮುಂತಾಗಿ ಏನೇನೋ ಪ್ರಶ್ನಿಸಿದರು. ಮೂಲಪ್ರತಿ ಕೆಲಸ ಮುಗಿದ ಕೂಡಲೇ ನಾಶ ಮಾಡಲಾಗುತ್ತದೆಂದು ತಿಳಿಸಿದಾಗ ಅವರಿಗೆ ನಿರಾಶೆಯಾಯಿತು.

ಝಡತಿಯ ಕಾರ್ಯ ಮುಗಿಯುತ್ತ ಬಂದಂತೆ ಇನ್ನೇನು ನಮ್ಮ ಕಾರ್ಯಾಲಯದ ಬಾಗಿಲು ಮುಚ್ಚಿ ಮೊಹರ ಬಂದ ಮಾಡಲಾಗುತ್ತದೆಂಬ ತಿಳಿವಳಿಕೆ ನಮ್ಮಲ್ಲಿ ಮೆಲ್ಲನೇ ಮೂಡತೊಡಗಿತು. ಬೇರೆ ಕೆಲ ಮುದ್ರಣಾಲಯಗಳು ಆ ರೀತಿ ಮುಚ್ಚಿದ್ದವು. ಅದಕ್ಕಿಂತ ಕಡಿಮೆ ದಂಡನೆಯಾಗಲಾರದೆಂದು ನಮಗನಿಸಿತ್ತು. ಇಷ್ಟಾಗುವದರಲ್ಲಿ ಇಳಿಹೊತ್ತು ಪ್ರಾರಂಭವಾಯಿತು. ಇನಸ್ಪೆಕ್ಟರರು ಝಡತಿ ಕೆಲಸ ಮುಗಿಸಿ, ಅದೊಂದು ಪ್ರತಿಯನ್ನು ಜಪ್ತಮಾಡಿ ತಮ್ಮ ಹತ್ತಿರ ಇರಿಸಿಕೊಂಡರು. ಆ ಮೇಲೆ ಒಂದು ನಿಮಿಷ ಯೋಚಿಸಿದಂತೆ ಮಾಡಿ, "ಟೆಲಿಫೋನಿನಲ್ಲಿ ನಾನು ಕಲೆಕ್ಟರರೊಡನೆ ಮಾತಾಡಬೇಕಾಗಿದೆ" ಎಂದು ಹೇಳಿದರು. ನಾನು ಅವರನ್ನು ಟೆಲಿಫೋನ್ ಇದ್ದ ಕೋಣೆಗೆ ಕರೆದೊಯ್ದೆ.

"ನೀವು ಸ್ವಲ್ಪ ಹೊರಗೆ ಹೋಗುವಿರಾ? ಕಲೆಕ್ಟರರೊಡನೆ ಗುಪ್ತವಿಷಯ ಮಾತಾಡಬೇಕಾಗಿದೆ" ಎಂದು ಸೌಮ್ಯವಾಗಿ ಹೇಳಿದರು. ನಾನು ಹೊರಗೆ ಬಂದೆ. ಆದರೆ ಅದು ಇಟ್ಟಿಗೆ ಗೋಡೆಯ ಕೋಣೆಯಾಗಿರದೇ ಹಲಗೆ ಪಾರ್ಟಿಶನ್ ಕೋಣೆಯಾಗಿತ್ತು. ದೂರ ನಿಂತರೂ ಅವರು ಮಾತಾಡುವದು ಅಲ್ಪ-ಸ್ವಲ್ಪ ಕೇಳಿಸುತ್ತಿತ್ತು. ಅವರು ಟೆಲಿಫೋನ ಸಂಭಾಷಣೆ ಮುಗಿಸಿ ಹೊರಬಂದಾಗ ಪರಿಹಾರದ ನಿಡಿದಾದ ಉಸಿರೆಳೆದರು.

"ನಿಮ್ಮ ಮುದ್ರಣಾಲಯ ಮೋಹರಬಂದ ಮಾಡುವ ಕೆಲಸ ತಪ್ಪಿತು" ಎಂದಿಷ್ಟೇ ತಿಳಿಸಿ, ಇನ್ನು ಮುಂದೆ ಕರ್ಮವೀರ ಪ್ರಕಟಣೆ ಪ್ರತಿಬಂಧಿಸಲಾಗಿದೆಯೆಂಬ ಆಜ್ಞೆ ಜಾರಿಮಾಡಿ ಮೊದಲು ಬಂದಂತೆ ಹೊರಟು ಹೋದರು. ಪೋಲೀಸ ಪೇದೆ ಆಗಲೂ ಪಿಸ್ತೂಲನ್ನು ಮೊದಲಿನಂತೆಯೆ ಹಿಡಿದುಕೊಂಡಿದ್ದ.

ಸರಕಾರದ ಈ ಆಜ್ಞೆ ನಮಗೆ ವಿಚಿತ್ರವೆನಿಸಿತು. ಮುದ್ರಣಾಲಯ ಮುಚ್ಚುವ ವಿಚಾರವಿದ್ದರೂ ಮುಚ್ಚಲಿಲ್ಲ. ಕರ್ಮವೀರವನ್ನು ಮಾತ್ರ ಪ್ರತಿಬಂಧಿಸಿದರು. ಈ ನಿಗೂಢ ತಿಳಿದುಕೊಳ್ಳುವ ಉತ್ಸುಕತೆ ನಮ್ಮಲ್ಲಿ ಹೆಚ್ಚಾಯಿತು. ಕಲೆಕ್ಟರ ಶ್ರೀ. ಎ. ಎಲ್. ಡಯಾಸರನ್ನು ಕಾಣಲು ಶ್ರೀ. ಪುರೋಹಿತರು ಮತ್ತು ನಾನು ಧಾರವಾಡಕ್ಕೆ ತೆರಳಿದೆವು.

ಧಾರವಾಡದಲ್ಲಿ ನಾವು ಮೊದಲು ಕಂಡದ್ದು ದಿವಂಗತ ಶ್ರೀ. ಕಬ್ಬೂರ ಮಧ್ವರಾಯರನ್ನು. ಅವರು ಈ ಪತ್ರಿಕೆಯ ಸಂಸ್ಥಾಪಕರಲ್ಲೊಬ್ಬರು ಮತ್ತು ನಮ್ಮ ಸಂಸ್ಥೆಯ ಹಿತೈಷಿಗಳು. ಅವರು ಪ್ರಸಿದ್ಧ ವಕೀಲರಿದ್ದುದರಿಂದ ಕಾಯಿದೆಸಲ್ಲಾಗಾರರಾಗಿಯೂ ಸಹಾಯ ಮಾಡುತಿದ್ದರು ಅವರ ಮನೆಗೆ ನಾವು ಹೋದಾಗ, ಅವರು ಅಟ್ಟದ ಗ್ಯಾಲರಿಯಲ್ಲಿ ನಿಂತಿದ್ದರು. ನಾವು ಮೇಲಕ್ಕೆ ಹತ್ತಿ ಹೋದೆವು. ಅಂದು ನಡೆದ ಸಂಗತಿಯನ್ನು ಸ್ವಲ್ಪದರಲ್ಲಿ ವಿವರಿಸಿದೆವು.

ಅವರು ದೊಡ್ಡದಾಗಿ ನಕ್ಕುಬಿಟ್ಟರು. "ನನಗೆ ಗೊತ್ತು,"ಕರ್ಮವೀರದ ಕತೆಯೇ ಹೀಗೆ" ಎಂದರು.

ಮುಂದುವರಿದು: "ಕರ್ಮವೀರ ಸಂಕ್ರಾಂತಿ ದಿನ ಜನ್ಮವೆತ್ತಿದೆ. ಅದು ಕ್ರಾಂತಿಕಾರಕ ಹೋರಾಟದಿಂದಲೇ ಮುಂದುವರಿಯಬೇಕು. "ಸಂಯುಕ್ತ-ಕರ್ನಾಟಕ" ಅಕ್ಷಯ್ಯತೃತಿಯ ದಿನದಂದು ಪ್ರಾರಂಭವಾಗಿದೆ. ಅದಕ್ಕೆ ಕ್ಷಯವಿಲ್ಲ" ಎಂದು ತಮ್ಮ ಸಿದ್ಧಾಂತವನ್ನು ತಿಳಿಸಿ, "ನೋಡುವಾ, ಬಂದದ್ದನ್ನು ಎದುರಿಸೋಣ" ಎಂದು ಧೈರ್ಯ ಹೇಳಿ ನಮ್ಮನ್ನು ಬೀಳ್ಕೊಟ್ಟರು.

*

ಅಲ್ಲಿಂದ ಹೊರಟು ನಾವು ನೇರವಾಗಿ ಜಿಲ್ಹಾ ಮ್ಯಾಜಿಸ್ಟ್ರೇಟ ಮತ್ತು ಕಲೆಕ್ಟರ ಶ್ರೀ. ಎ. ಎಲ್. ಡಯಾಸ್ ಆಯ. ಸಿ. ಎಸ್. ಇವರ ಕಚೇರಿಗೆ ಬಂದೆವು. ಕತ್ತಲಾಗುತ್ತಬಂದಿದ್ದರೂ ಅವರು ಇನ್ನೂ ಕೆಲಸ ಮಾಡುತಿದ್ದರು. ಅವರು ಹಿಂದೀ ಕ್ರಿಶ್ಚಿಯನ್ನರು. ಆಯ. ಸಿ. ಎಸ್. ಅಧಿಕಾರಿಗಳಾಗಿದ್ದರೂ ಅದಕ್ಕೆ ಅಂಟಿಕೊಂಡುಬಂದ ಒಣ ಹೆಮ್ಮೆ ಅವರಿಗಿರಲಿಲ್ಲ. ಅವರು ಈಗಲೂ ಮಹಾರಾಷ್ಟ್ರ ಸರಕಾರದ ಸೇವೆಯಲ್ಲಿರುವಂತೆ ಕಾಣುತ್ತದೆ. ಇತ್ತೀಚೆಗೆ ಅವರು ಮುಂಬಯಿ ಪೋರ್ಟಟ್ರಸ್ಟ ಅಧ್ಯಕ್ಷರಾಗಿದ್ದರು. ಯುದ್ಧ ಮತ್ತು ಚಳವಳಿ ಮೂಲಕ ಪ್ರೆಸ್ ಸೆನ್ಸಾರಶಿಪ್ ಇದ್ದಿತು. ತತ್ಪರಿಣಾಮವಾಗಿ ನಾವು ಅವರನ್ನು ಮೇಲಿಂದ ಮೇಲೆ ಕಾಣಬೇಕಾಗುತಿದ್ದುದರಿಂದ ಸಾಕಷ್ಟು ಪರಿಚಯವೂ ಇದ್ದಿತು.

ಶ್ರೀ. ಪುರೋಹಿತರು. ಮತ್ತು ನಾನು ಅವರಿಗೆ ಎದುರಾಗಿ ಕುಳಿತು ಮಾತುಕತೆ ಪ್ರಾರಂಭಿಸಿದೆವು.

"ಸರಕಾರದ ಆಜ್ಞೆಯಲ್ಲಿ, ಯಾವ ಲೇಖನ ಆಕ್ಷೇಪಾರ್ಹವಿದೆ. ಏಕೆ ಆಜ್ಞೆ ಹೊರಡಿಸಲಾಯಿತೆಂಬುದರ ವಿವರಗಳೇ ಇಲ್ಲ. ಇದು ನಿಮ್ಮ ಲಕ್ಷಕ್ಕೆ ಬಂದಿದೆಯೇ ?"—ನಮ್ಮ ಮೊದಲನೆಯ ಪ್ರಶ್ನೆ.

ಶ್ರೀ. ಡಯಾಸರು ತಮ್ಮ ಹೃದಯವನ್ನೇ ಬಿಚ್ಚಿದರು: "ಆಜ್ಞೆ ಅಸ್ಪಷ್ಟವಾಗಿದೆಯಷ್ಟೇ ಅಲ್ಲ. ಇನ್ನೂ ದೀರ್ಘವಾಗಿತ್ತು. ನಿಮ್ಮ ಮುದ್ರಣಾಲಯಕ್ಕೆ ಬೀಗ-ಮುದ್ರೆ ಹಾಕಲು ಆಜ್ಞೆಯಾಗಿತ್ತು. ಅದನ್ನು ತಿರುಗಿಸಬೇಕಾದರೆ ನನಗೆ ಸಾಕುಬೇಕಾಯಿತು."

ನಮ್ಮ ಕುತೂಹಲ ಇನ್ನೂ ಕೆರಳಿತು. ಏಕೆ, ಏನಾಯಿತೆಂದು ಇಬ್ಬರೂ ಒಮ್ಮೆಲೇ ವಿಚಾರಿಸಿದೆವು.

ಶ್ರೀ. ಡಯಾಸರು ಮುಂದುವರಿದು: "ಹರಿಜನ ಪತ್ರಿಕೆಯನ್ನು ಸರಕಾರ ನಿರ್ಬಂಧಿಸಿದ ಕೂಡಲೇ, ಅದನ್ನು ದೇಶಭಾಷೆಯಲ್ಲಿ ಪ್ರಕಟಮಾಡುವ ಪತ್ರಿಕೆಗಳನ್ನೂ ನಿಲ್ಲಿಸಿ ಅವುಗಳ ಮುದ್ರಣಾಲಯಕ್ಕೆ ಬೀಗ-ಮುದ್ರೆ ಹಾಕಲು ನಿರ್ಣಯಿಸಲಾಯಿತು. ಕರ್ಮವೀರದ ಮೇಲೆ ಕ್ರಮ ಕೈಕೊಳ್ಳುವಂತೆ ನನಗೂ ಆ ಆಜ್ಞೆಯ ಪ್ರತಿ ಬಂದಿತು. ನಾನು ಆಲೋಚನೆ ಮಾಡಿದೆ. ಕರ್ಮವೀರ ಮುದ್ರಣವಾಗುವ ಮುದ್ರಣಾಲಯಕ್ಕೆ ಬೀಗ-ಮುದ್ರೆ ಹಾಕಿದರೆ, ಸಂಯುಕ್ತ ಕರ್ನಾಟಕಕ್ಕೆ ಪೆಟ್ಟು ಬಿದ್ದು ಅನ್ಯಾಯವಾಗುತ್ತದೆ. ನನ್ನ ಸ್ಥಿತಿ ಅಡಕತ್ತಿನಲ್ಲಿ ಸಿಕ್ಕಂತಾಗಿತ್ತು. ಕಂಡೂ ಕಂಡು ಅನ್ಯಾಯ ಬಗೆಯಲು ನನ್ನ ಮನಸ್ಸು ಒಪ್ಪಲಿಲ್ಲ. ಆಗ ಸರಕಾರಕ್ಕೆ ಬರೆದು ತಿಳಿಸಿದೆ. ಸಂಯುಕ್ತ ಕರ್ನಾಟಕದ ಲೇಖನಗಳು ಉಗ್ರವೂ ಟೀಕಾತ್ಮಕವೂ ಇದ್ದಾಗ್ಯೂ ಕಾಯದೆ ಮೀರಿಲ್ಲ. ಆದುದರಿಂದ ಆ ಪತ್ರಿಕೆಯನ್ನು ನಿಲ್ಲಿಸುವದು ಅನ್ಯಾಯವಾಗುತ್ತದೆಂದು ನಿವೇದಿಸಿದ್ದೆ. ಅದಕ್ಕೆ ಈ ವರೆಗೂ ಉತ್ತರ ಬಂದಿರಲಿಲ್ಲ. ಕಾರಣ, ಪೋಲೀಸ ಅಧಿಕಾರಿಯನ್ನು ಝಡತಿಗಾಗಿ ಕಳಿಸಿ ಬೀಗ-ಮುದ್ರೆ ಹಾಕುವದಕ್ಕೆ ಟೆಲಿಫೋನಿನಲ್ಲಿ ಇನ್ನೊಮ್ಮೆ ಕೇಳಬೇಕೆಂದು ಆದೇಶವಿತ್ತಿದ್ದೆ.

ಇತ್ತ ಮುಂಬಯಿಗೆ ಟೆಲಿಫೋನ ಮಾಡಿದೆ. ಸುದೈವದಿಂದ ನನ್ನ ಸೂಚನೆಗೆ ಅನುಮತಿ ಸಿಕ್ಕಿತು. ಇಲ್ಲವಾದರೆ ಸಂಯುಕ್ತಕರ್ನಾಟಕವೂ ಇವತ್ತಿನಿಂದ ಬಂದಾಗುತ್ತಿತ್ತು" ಎಂದು ವಿವರಿಸಿ ತಮ್ಮ ಕತೆ ಮುಗಿಸಿದರು.

" ಕರ್ಮವೀರ ಬಂದುಮಾಡಲಿಕ್ಕೂ ಕಾರಣವಿಲ್ಲ. ಪ್ರಕಟಣೆಗೆ ಏಕೆ ಅಪ್ಪಣೆ ಕೊಡಬಾರದು ?"

"ಅದು ನನ್ನ ಕೈಯಲ್ಲಿಲ್ಲ. ಸರಕಾರಕ್ಕೆ ಸೇರಿದ್ದು. ನಾನು ಸರಕಾರದ ಆಜ್ಞೆಯನ್ನು ಮಾತ್ರ ಜಾರಿ ಮಾಡಿದ್ದೇನೆ."

"ನೀವು ಸರಕಾರಕ್ಕೆ ಬರೆದು ಕೇಳಬಹುದಲ್ಲ."

"ಅಷ್ಟು ಮಾಡುತ್ತೇನೆ."

ಅವರೊಡನೆ ಈ ರೀತಿ ಮಾತಾಡಿ ನಂತರ ಹುಬ್ಬಳ್ಳಿಗೆ ಹಿಂದಿರುಗಿದೆವು.

ಮುಂಬಯಿಯಲ್ಲಿದ್ದ ಶ್ರೀ. ದಿವಾಕರರಾಯರಿಗೂ ಶ್ರೀ ಮೊಹರೆಯವರಿಗೂ ಸಾದ್ಯಂತ ಸಂಗತಿಯನ್ನು ತಿಳಿಸಿದೆವು.

*

ಮರುದಿನ ಮುಂಜಾನೆ ಎಲ್ಲ ಕಡೆಗೂ ಅದೇ ಮಾತು. ಕರ್ಮವೀರ ನಿಂತಿತಲ್ಲ ಎಂದು ನಮಗೆ ಕಿಂಚಿತ್ ವಿಷಾದವಾಗಿತ್ತು. ಆದರೆ ಸ್ವಾತಂತ್ರ್ಯ ಹೋಮಕ್ಕೆ ಈ ಬಲಿ ಅಷ್ಟುದೊಡ್ಡದಲ್ಲ. ದೇಶಸೇವೆಗೆ ಮುಡಿಪಾಗಿದ್ದ ಪತ್ರಿಕೆ ದಬ್ಬಾಳಿಕೆ ಮೂಲಕ ನಿಂತಿದ್ದು ಅದಕ್ಕೂ ಸಂಸ್ಥೆಗೂ ಗೌರವ.

ಆ ಸಮಯಕ್ಕೆ ಭಾರತದಲ್ಲಿ ಅನೇಕ ರಾಷ್ಟ್ರೀಯ ಪತ್ರಿಕೆಗಳು ಈ ರೀತಿ ಬಂದಾಗಿದ್ದವು. ಒಂದೆರಡು ವಾರಗಳಲ್ಲಿ ಮುಂಬಯಿಯಲ್ಲಿ ಅಂಥ ಪತ್ರಿಕೆಗಳ ಸಂಪಾದಕರ ಪರಿಷತ್ತನ್ನು ಶ್ರೀ. ಸಾಮಲದಾಸ ಗಾಂಧೀಯವರು ಕರೆದಿದ್ದರು. ಶ್ರೀ. ಪುರೋಹಿತರಿಗೆ ಆಮಂತ್ರಣ ಬಂದಿತ್ತೆಂದು ಹೇಳುವದೇ ಬೇಡ. ಅವರು ಪರಿಷತ್ತು ಮುಗಿಸಿಕೊಂಡು ಬಂದು ನಮಗೆ ವಿವರಗಳನ್ನೆಲ್ಲ ತಿಳಿಸಿದರು.

ಇದಾದ ಒಂದೆರಡು ವಾರಗಳಲ್ಲಿ ನಮಗೆ ಕಲೆಕ್ಟರರಿಂದ ಕಾಗದ ಬಂದಿತು. ಕರ್ಮವೀರದ ಪುನಃ ಪ್ರಕಟಣೆಗೆ ಅದರಲ್ಲಿ ಅನುಮತಿ ಕೊಡಲಾಗಿತ್ತು. ಆರು ವಾರ ಅಜ್ಞಾತವಾಸದ ನಂತರ, ಕರ್ಮವೀರ ಮತ್ತೆ ಬೆಳಕು ಕಂಡಿತು. ಅಂದಿನಿಂದ ಇವತ್ತಿಗೂ ಅವಚ್ಛಿನ್ನವಾಗಿ ಅದು ಜನತೆಗೆ ಬೆಳಕು ನೀಡುತ್ತಿದೆ.

ಲೇಖಕಿ :
ಶ್ರೀಮತಿ ಅನುಪಮಾ ನಿರಂಜನ್
ಬೆಂಗಳೂರು

# ಹೃದಯ ಸಮುದ್ರ

ಶ್ರೀಮತಿ ಅನುಪಮಾ ನಿರಂಜನ

ಬಡ ಕಾರಕೂನನಿಂದ ಜೀವನ ಪ್ರಾರಂಭಿಸಿದ ಅವರು ಕೆಲವೇ ದಿನಗಳಲ್ಲಿ ಒಡೆಯನ ಪ್ರೀತಿಗಳಿಸಿ ತಮ್ಮದೇ ಅಂಗಡಿ ಪ್ರಾರಂಭಿಸಿದರು. ಹನಿಗೆ-ಹನಿ ಕೂಡಿ ಹಳ್ಳ— ಸಮುದ್ರವೇ ಆಯಿತು ಅವರ ಪ್ರಾಪ್ತಿ. ಆದರೆ ಅವರ ಹೃದಯ ಸಮುದ್ರದಲ್ಲಿ ಅಡಗಿದ ಸಂಗತಿಗಳೆಷ್ಟೊ. ತಂದೆ ಜಿಪುಣ, ತನ್ನನ್ನು ಅಂಗಡಿಯ ಕೆಲಸಕ್ಕೇ ಹಚ್ಚುವ, ಇನ್ನೂ ಹಣ ಬರಬೇಕೆಂದು ಶ್ರೀಮಂತ ಪುತ್ರಿಯ ಕೈಹಿಡಿಯೆನ್ನುವ ಎಂದು ಅವರ ಮಗ ನರಹರಿ ಭಾವಿಸಿದ್ದ. ಆದರೆ ತಂದೆಯ ವಾತ್ಸಲ್ಯದ ಅರಿವು ಆಗುವಾಗ ಅವರು ಕಾಲನ ಕರೆಗೆ ಓ ಕೊಟ್ಟಾಗಿತ್ತು. ಇದೊಂದು ತುಂಬ ಕುತೂಹಲಕಾರಿಯಾದ ಕತೆ.

---

ಮಲಗಿದ ಕೂಡಲೇ ನಿದ್ದೆ ಬರಬಹುದೆಂದು ಹೆಗಡೆ ಎಣಿಸಿದ್ದರು. ಮೈದಣಿದಿತ್ತು. ಮನಸ್ಸು ಆಯಾಸಗೊಂಡಿತ್ತು. ಕಣ್ಣು ರೆಪ್ಪೆಗಳು ಭಾರವಾಗಿದ್ದುವು. ಆಕಳಿಕೆಗಳೂ ಸಮುದ್ರದ ಅಲೆಗಳಂತೆ ಬರುತ್ತಿದ್ದುವು. ಆದರೆ ದಿಂಬಿಗೆ ತಲೆಯಾನಿಸಿ ಮಲಗಿದಾಗ ಮಾತ್ರ, ನಿದ್ದೆ ಹತ್ತಿರ ಸುಳಿಯಲಿಲ್ಲ. ಬೇಸರಗೊಂಡು ಅವರು ಆ ಪಕ್ಕ ಈಪಕ್ಕ ತಿರುಗಿದರು. ಚಳಿಯೆಂದು ಕಂಬಳಿಯನ್ನು ಕತ್ತಿನ ವರೆಗೂ ಹೊದ್ದುಕೊಂಡರು.

ಅಗೋ ಕಣ್ಣುಗಳು ಭಾರವಾಗುತ್ತಿವೆ. ಇನ್ನೇನು ಬಂದೀತು ನಿದ್ದೆ.

ಕೊಠಡಿಯ ಇನ್ನೊಂದು ಮಗ್ಗುಲಲ್ಲಿ ಮಂಚದ ಮೇಲೆ ಮಲಗಿದ್ದ ಅವರಾಕೆ ನೀಳವಾಗಿ ಉಸಿರಾಡುತ್ತಿದ್ದಳು. 'ಇವಳಿಗೆ ಮಲಗಿದ ಕೂಡಲೇ ನಿದ್ದೆ ಬರುತ್ತದಲ್ಲ! ದೇವರು ಆ ವರ ನನಗ್ಯಾಕೆ ಕೊಡಲಿಲ್ಲ?'—ಎಂದು ಹೆಗಡೆ ಚಿಂತಿಸಿದರು.

ಭಾರವಾದ ಕಣ್ಣುರೆಪ್ಪೆಗಳು ಅಗಲವಾಗಿ ತೆರೆದು ಬೆದರಿದ ಹರಿಣಿಗಳಂತೆ ಮೆಲ್ಲಮೆಲ್ಲನೆ ಹೆಜ್ಜೆಯಿಡುತ್ತಾ ಕಿಟಕಿ ದಾಟಿ ಆಕಾಶವನ್ನು ದಿಟ್ಟಿಸಿದುವು. ಚಂದಿರನ ಶುಭ್ರವಾದ ಬೆಳಕು ಆಕಾಶಕ್ಕೆ ಸುಣ್ಣ ಬಳಿದಿತ್ತು. ಅಲಂಕರಿಸಿದ ಪುಷ್ಪಗಳಾಗಿದ್ದುವು, ಕಿರುತಾರೆಗಳು. ಎಲ್ಲವೂ ನೀರವ, ಪ್ರಪಂಚದ ಜನವೆಲ್ಲ ಮಲಗಿದ್ದಾರೆ. ಕನಸು ಕಾಣುತ್ತಿದ್ದಾರೆ. ತನಗೆ ಮಾತ್ರ ಆ ಸೌಭಾಗ್ಯವಿಲ್ಲ.

ನಾಯಿಗಳು ಬೊಗಳುತ್ತಿವೆ. ಗೂರ್ಖನ ಶಿಳ್ಳು. ಕೋಲಿನಿಂದ ಗೇಟುಗಳಿಗೆ, ಕಲ್ಲುಗಳಿಗೆ ಬಡಿಯುವ ಟೊಕ್ ಟೊಕ್. ಹತ್ತಿರ ಬಂದ. ಇನ್ನು ತಮ್ಮ ಮನೆಯ ಎದುರಲ್ಲೇ.

ಟೊಕ್ ಟೊಕ್—

ತನ್ನ ತಲೆಯ ಮೇಲೆಯೇ ಉಳಿಯ ಪೆಟ್ಟು! ಬರುವ ನಿದ್ದೆಯನ್ನೂ ಈ ಕೊರಮ ಕೆಡಿಸುತ್ತಾನೆ. ಆ ಬಗ್ಗೆ ಅವನಿಗೆ ಹೇಳಬೇಕೆಂದು ಅದೆಷ್ಟೋ ಸಾರೆ ಅವರು ಯೋಚಿಸಿದ್ದರು. ಇವತ್ತಲ್ಲ ನಾಳೆ ಎಂದು ಇನ್ನು ಮುಂದೆ ಹಾಕುವುದು ಯಾಕೆ?

ಹೆಗಡೆ ಸಿಟ್ಟಿನಿಂದ ಕಂಬಳಿ ಬಿಸುಟು ಮೇಲೆದ್ದರು. ಕಿಟಕಿಗೆ ಮುಖವಾನಿಸಿ ಕೂಗಿ ಕರೆದರು.

"ಏ ಗೂರ್ಖಾ, ಪತ್ತರ್‌ಕೊ ಮತ್ ಮಾರೊ"

"ಜೀ ಸಾಬ್."

ಬಾಕಿ ಉಳಿದಿದ್ದ ಕೆಲಸವೊಂದನ್ನು ಮುಗಿಸಿದ ಸಮಾಧಾನದಿಂದ ಹೆಗಡೆ ಬಂದು ಹಾಸಿಗೆಯ ಮೇಲೆ ಕುಳಿತರು. ಕಣ್ಣಿಗೆ ಕತ್ತಲೆ ಕವಿದಂತಾಯಿತು. ಎದೆಯನ್ನು ಒತ್ತಿಹಿಡಿದು ಅಮುಕಿದಂತೆ ಭಾಸವಾಯಿತು. ಉಸಿರಿಗಾಗಿ ಅವರು ಚಡಪಡಿಸಿದರು.

"ಆಯಾಸ ಮಾಡಿಕೋಬೇಡಿ. ನಿಮ್ಮ ಹಾರ್ಟ್ ವೀಕಾಗಿದೆ!"

ನನ್ನ ಹೃದಯ ಅಶಕ್ತವಾಗಿದೆಯೆ? ಎಂತೆಂಥ ಕಷ್ಟಗಳನ್ನು ಎದುರಿಸಿ ಈಸಿ ಜಯಶಾಲಿಯಾಗಿ ಬಂದ ನನ್ನ ಹೃದಯ?

ಸಮುದ್ರವನ್ನು ಈಸಬಲ್ಲೆನೆ ನಾನು?

ಡಬ್ ಡಬಾಲ್...ಡಬ್ ಡಬಾಲ್

ರಾತ್ರೆಯ ನೀರವತೆಯನ್ನು ಭೇದಿಸುತ್ತಾ ಜೋಗುಳದಂತೆ ಕೇಳಿಸುತ್ತಿದ್ದ ಕಡಲಿನ ನಿನಾದ. ಆ ಜೋಗುಳ ಅದೆಷ್ಟೋ ಸಾರೆ ಅವರನ್ನು ತಟ್ಟಿ ಮಲಗಿಸಿತ್ತು. ನಿದ್ರೆ ಮಾಡಿಸಿತ್ತು......

...ಆಗ ನಾನಿನ್ನೂ ಯುವಕ. ನದಿ ದಾಟಿ ಬಂದ ನನಗೆ ಬಷೀರ್ ಅಂಡ್ ಕೋ ಮರದ ದಿಮ್ಮಿಗಳ ಅಂಗಡಿಯಲ್ಲಿ ಕಾರಕೂನಿಕೆ ಲಭಿಸಿತು. ಬಡ ಕಾರಕೂನ ಹಾಕಿಕೊಳ್ಳಲು ಒಂದೇ ಜೊತೆ ಬಟ್ಟೆಗಳು. ಕಾಲಿಗೆ ಚಪ್ಪಲಿಯಿಲ್ಲ. ಒಂದೇ ಹೊತ್ತು ಊಟ. ರಾತ್ರಿ ಸಮುದ್ರದ ಗಾಳಿಯೇ ಆಹಾರ. ಮರದ ದಿಮ್ಮಿಗಳ ಜೊತೆಯಲ್ಲಿಯೇ ರಾತ್ರಿ ಮಲಗುತ್ತಿದ್ದುದುಂಟು.

ಮುಂದೆ ಆ ಲೆಕ್ಕಗಳ ಪ್ರಪಂಚದಲ್ಲಿ ನಾನು ನಿಸ್ಸೀಮನಾದೆ. ಬಷೀರ್ ಸಾಹೇಬನಿಗೆ ಹತ್ತಾರು ಸಾವಿರಗಳ ಇನ್‌ಕಂಟ್ಯಾಕ್ಸ್ ಉಳಿಸಿಕೊಟ್ಟೆ. ಸುಪ್ರೀತನಾದ ಬಷೀರ್ ಸಂಬಳ ಜಾಸ್ತಿ ಮಾಡಿದ. ದಿಮ್ಮಿಗಳ ಏಜೆಂಟರು ನನಗೆ ಹತ್ತರಿಂದ ಐವತ್ತರ ವರೆಗೆ 'ಇನಾಮು' ಕೊಟ್ಟರು. ಅದನ್ನೆಲ್ಲಾ ನಾನು ಜೋಪಾನ ಮಾಡಿದೆ.

ಹನಿ ಕೂಡಿ ಹಳ್ಳವಾಯಿತು. ಹಳ್ಳವೇಕೆ ಸಮುದ್ರವೇ ಆಯಿತು ಅನ್ನಬಲ್ಲೆ.

ಅಲ್ಲಿಂದ ಐದು ವರ್ಷಗಳಲ್ಲಿ ನಾನು ಹೊಟ್ಟೆ ಬಟ್ಟೆ ಕಟ್ಟಿ ಕೂಡಿಸಿಟ್ಟ ಹಣ ಹಲವಾರು ಸಾವಿರಗಳಾದುವಲ್ಲ!

ಕಾರಕೂನನಾಗಿದ್ದ ನಾನು ಮುಂದೆ ವ್ಯಾಪಾರಿಯಾದೆ. ಸ್ವತಂತ್ರ ವ್ಯಾಪಾರಿ. ಉಡಲು ಒಳ್ಳೆಯ ಬಟ್ಟೆಗಳು, ಕಾಲಿಗೆ ಬೂಟುಗಳು ಬಂದುವು. ಮರದ ದಿಮ್ಮಿಗಳ ಜೋಪಡಿಯೂ ಸಿದ್ಧವಾಯಿತು. ಹೋಟೆಲಿನಲ್ಲಿ ಎರಡು ಹೊತ್ತು ಪುಷ್ಕಳ ಭೋಜನ.

ನನ್ನನ್ನ 'ಬೇವಾರ್ಸಿ' ಎಂದ ಜನ ಈಗ 'ಗೃಹಸ್ಥ' ಎಂದರು. ಹೆಣ್ಣೊಂದನ್ನು ನನ್ನ ತಲೆಗೆ ಕಟ್ಟಿದರು.

ಇವಳ ಹೆಸರು ಲಕ್ಷ್ಮಿ. ಅವಳು ಮನೆಗೆ ಕಾಲಿರಿಸಿದ ಗುಣವೋ, ಧನಲಕ್ಷ್ಮಿ ಬೊಗಸೆಗೈಯಿಂದ ನನ್ನ ಮನೆ ತುಂಬಿದಳು. ಮಕ್ಕಳಾದರು. ನರಹರಿ, ಸೀತಾರಾಮ.

ಈ ಮಕ್ಕಳಿಗೆ ತಿನ್ನಲು ಕೊರತೆಯಿರಲಿಲ್ಲ. ಹೂವಿನ ಹಾಸಿಗೆಯ ಮೇಲೆ ಅವರು ಬೆಳೆದರು.

ಅದೇ ತಪ್ಪಾಯಿತು ಎಂದು ನಾನೆನ್ನುವುದು. ಕಷ್ಟದಲ್ಲಿ ಬೆಳೆದ ಮಕ್ಕಳು ಗಟ್ಟಿಮುಟ್ಟಾಗುತ್ತಾರೆ; ನನ್ನ ಹಾಗೆ. ಇಲ್ಲದಿದ್ದರೆ ಬರೀ ಜೊಳ್ಳು. ಸಾಗರದ ಗಾಳಿ ಬೀಸಿತೆಂದರೆ ತೂರಿಕೊಂಡು ಹೋಗುವಷ್ಟು ಮೈ ಹಗುರ, ಮೆದುಳೂ ಹಗುರ.

ಸೀತಾರಾಮನಿಗೆ ಲಿವರ್ ಕಾಹಿಲೆ ಎಂದರು. ಹಣವನ್ನು ನೀರಿನಂತೆ ಖರ್ಚು ಮಾಡಿದೆ. ಆದರೆ ಅವನು ಉಳಿಯಲಿಲ್ಲ.

ನರಹರಿ ಬೆಳೆದು ದೊಡ್ಡವನಾದ. ಮೆಟ್ರಿಕ್ಯುಲೇಷನ್ ಪಾಸಾಯಿತು. 'ಕಾಲೇಜಿಗೆ ಹೋಗ್ತೀನಿ' ಅಂದ.

ನಾನಂತೂ ಕಾಲೇಜು ಮುಖ ಕಾಣಲಿಲ್ಲ. ಮಗನಿಗಾದರೂ ಡಿಗ್ರಿ ಬರಲಿ – ಅಂತ ನನ್ನ ಅಂತರಂಗದ ಬಯಕೆ. ಹೂಂ ಎಂದೆ. ತಗೊಳ್ಳಪ್ಪ, ಕಾಲೇಜಿಗೆ ಕಾಲಿಟ್ಟದ್ದೇ ತಡ, ಶೋಕಿ ಶುರುವಾಯ್ತು.- ಟೈ ಏನು? ಸೂಟು ಬೂಟುಗಳೇನು? ಥತ್, ಹುಡುಗಿಯರ ಹಾಗೆ ಶೃಂಗಾರ?

"ಲೋ ಮಗನೆ, ಪಾಠಗಳ ಕಡೆ ಗಮನ ಕೊಡು. ಶೋಕಿ ಮಾಡಿ ಹಾಳಾಗ್ಬೇಡ!" .

—ಎಂದು ನಾನು ನರಹರಿಯನ್ನು ಗದರಿಸಿದೆ.

ಮಗ ಪಾಠಗಳಲ್ಲಿ ಶ್ರದ್ಧೆ ವಹಿಸಿದ. ಆದರೆ ಶೋಕಿ ಕಡಮೆಯಾಗಲಿಲ್ಲ.

ಬಿ. ಏ.ಪಾಸಾದಾಗ ಏನಂತಾನೆ ಈ ಬಡ್ಡೀಮಗ?

"ಅಪ್ಪ, ನಾನು ಎಂ. ಎ. ಓದ್ತೀನಿ. ಕಾಲೇಜು ಲೆಕ್ಚರರಾಗುತ್ತೀನಿ."

ಅಲ್ಲವೆ? ಅಂಗಡೀಲಿ ಹಗಲು-ರಾತ್ರಿ ದುಡಿದು ನಿಂಗೆ ದುಡ್ಡು ಸುರಿಯೋದಕ್ಕೆ ನಾನಿದೀನಲ್ಲವೆ? ಅಲ್ಲವೊ: ಬೆಪ್ಪ, ಅಪ್ಪನಿಗೆ ವಯಸ್ಸಾಯ್ತು. ಅಂಗಡೀ ನೋಡ್ಕೊಳ್ಳಾನ ಅನ್ನೋ ಬುದ್ಧಿ ನಿಂಗೆ ಬರಬೇಡ್ವೇನೋ?

ಅದನ್ನು ಕೇಳಿ ನರಹರಿ ಅಂದ ಮಾತು ನಾನೆಂದಾದ್ರೂ ಮರೆಯೋಕಾಗುತ್ತಾ?

"ಬಿ. ಏ. ಪಾಸ್ ಮಾಡ್ಕೊಂಡು ಅಂಗಡೀಲಿ ಕೂತ್ಕೊಳ್ಳೋಕೆ ಅವಮಾನವಾಗುತ್ತೆ ಅಪ್ಪ!"

ಅಬ್ಬಾ, ಇಷ್ಟು ಸೊಕ್ಕೆ ನಿನಗೆ? ಕೈಕಾಲು ಮುರಿದ್ಹಾಕೇನು! ಅಂಗಡೀಲಿ ಕೂತ್ಕೊಳ್ಳೋಕೆ ಅವಮಾನವಾ ನಿಂಗೆ? ನಿಂಗೆ ಅನ್ನ ಕೊಟ್ಟಿದ್ದು ಯಾವ ದುಡ್ಡೋ? ನಿಂಗೆ ಬಟ್ಟೆ ಕೊಟ್ಟಿದ್ದು, ಕಾಲೇಜು ಓದಿಸಿದ್ದು, ನಿನ್ನ ಮಾವ ಕೊಟ್ಟ ರೂಪಾಯಿ ಅಂದುಕೊಂಡ್ಯಾ? ಭಿಕ್ಷಾನ್ನ ಎತ್ತಿ ಅವರಿವರ ಕಾಲು ಹಿಡಿದು, ನೀನು ವಿದ್ಯಾಭ್ಯಾಸ ಮಾಡಬೇಕಾಗಿತ್ತು. ಕಣಯ್ಯಾ! ಆಗ ದುಡ್ಡಿನ ಬೆಲೆ ನಿಂಗೆ ತಿಳಿಯೋದು! ಬಾಯಿ ಮುಚ್ಕೋ— ಗೊತ್ತಾಯಾ? — ಬಾಯಿ ಮುಚ್ಕೋ. ನಾಳೆಯಿಂದ ಅಂಗಡಿ ವ್ಯವಹಾರ ಹೇಳ್ಕೊಡತೀನಿ ನಡಿ. ಇಲ್ಲಾ...ಹೋಗು...ನಿಂಗೆಲ್ಲಿ ಬೇಕಾದ್ರೂ ತೊಲಗಿ ಹೋಗು. ನಾನು ನಿನ್ನಪ್ಪ ಅಲ್ಲ. ನೀನು ನನ್ನ ಮಗ ಅಲ್ಲ...

... ಹಾಸಿಗೆಯ ಮೇಲೆ ಕುಳಿತಿದ್ದ ಹೆಗಡೆ ಮತ್ತೆ ಎದೆಯನ್ನು ಕೈಲಿ ಒತ್ತಿ ಹಿಡಿದರು. ಎದೆಗೆ ತಣ್ಣನೆಯ ಹಾವೊಂದು ಸುತ್ತಿದ ಹಾಗೆ. ಮೈಕೈಯೆಲ್ಲಾ ಐಸ್‌ಕ್ರೀಮಿನ ಹಾಗೆ. ಉಸಿರೇ ಮೇಲಕ್ಕೆ ಬರಲೊಲ್ಲದು. ಆಯಾಸ. ಕತ್ತಲೆ. ಕೊನೆಗೂ ಈ ಹೃದಯ ಕೈ ಕೊಡುತ್ತದೊ!

ಮೆಲ್ಲನೆ ಅವರು ಮೇಲೆದ್ದು ಕಪಾಟಿನ ಬಾಗಿಲು ತೆರೆದರು. ನಾಲ್ಕು ಸಾಲುಗಳ ತುಂಬಾ ಔಷಧಿಗಳ ಸಣ್ಣ ದೊಡ್ಡ ಶೀಷೆಗಳು. ಅದರಲ್ಲೊಂದು ಮಾತ್ರೆಯನ್ನು ಎತ್ತಿ ಬಾಯಿಯಲ್ಲಿ ಹಾಕಿಕೊಂಡರು, ಮತ್ತೊಂದನ್ನು ತಡಕಾಡಿದರು.

ಕೋರಮಿನ್ ಡ್ರಾಪ್ಸ್. ಹೃದಯ ಉದ್ದೀಪಕ ಬಿಂದುಗಳು.

ಅದೆಷ್ಟು ಬಾರಿ ಆ ಹನಿಗಳನ್ನು ತೆಗೆದುಕೊಂಡಿರುವೆನೋ ಏನೋ!




ಈ ಹಾರ್ಟಿಗೆ ಎಷ್ಟು ಕೋರಮಿನ್ ಕೊಟ್ಟರೂ ಸಾಲದು. ಸಮುದ್ರದ ನೀರೆಲ್ಲಾ ಕೋರಮಿನ್ ಡ್ರಾಪ್ಸ್ ಆದರೂ ಈ ಹೃದಯಕ್ಕೆ ಸಾಲದೋ ಏನೊ!

ನಿಮಿಷಗಳು ಯುಗಗಳ ಹಾಗೆ ಕಳೆದುವು. ಇನ್ನೂ ಅನಿಶ್ಚತತೆ. ಈ ಸ್ಥಿತಿಯಲ್ಲಿ ಇನ್ನು ಎಷ್ಟು ದಿವಸ? ಹಾರ್ಟ್ ಚೆನ್ನಾಗಿದೆ ಎಂದೇನೋ ಹೇಳುತ್ತಾರೆ ಡಾಕ್ಟರು. ಆದರೆ, ನನಗೆ ನಂಬಿಕೆಯಿಲ್ಲ. ನನಗೆ ನಂಬಿಕೆಯೇ ಇಲ್ಲ. ನಾಳೆ ಏನಾದರೊಂದು ನಿರ್ಣಯಕ್ಕೆ ಬರಬೇಕು. ಈ ಮಗನಿಗೆ ಬುದ್ಧಿ ಕಲಿಸಬೇಕು. ನಾನು ಸಂಪಾದಿಸಿದ ಆಸ್ತಿಯಲ್ಲಿ ಒಂದು ಕಾಸನ್ನೂ ಕೊಡಬಾರದು. ಇವರು ತಮ್ಮ ಕಾಲ ಮೇಲೆ ನಿಂತು ಕಷ್ಟಪಟ್ಟು ಹಣ ಸಂಪಾದಿಸಿದಾಗ, ಆಗ ಅದರ ಬೆಲೆ ಅವನಿಗೆ ತಿಳಿಯುತ್ತದೆ. ಈಗಲ್ಲ. ಆಗ...

ಚಡಪಡಿಕೆ ಕಡಿಮೆಯಾಯಿತು. ನಿದ್ದೆಯ ತಂಪು ಗಾಳಿ. ಅವರ ಮೈಯನ್ನು ಮುಟ್ಟಿತು. ಹೆಗಡೆ ಕಂಬಳಿ ಹೊದೆದು ಭಾರವಾಗಿದ್ದ ಎವೆಗಳನ್ನು ಮುಚ್ಚಿದರು.

ಅಂತೂ ದಯೆ ಬಂತೇನಪ್ಪ ಭಗವಂತ...

*

ದಿನವೂ ಬೇಗನೆ ಎಚ್ಚರಗೊಳ್ಳುತ್ತಿದ್ದ ತಂದೆ, ಇಂದು ಏಳು ಗಂಟೆಯಾದರೂ ಏಳದುದನ್ನು ನೋಡಿ, ನರಹರಿ ಕೊಠಡಿಯೊಳಗೆ ಹಣಿಕಿ ಹಾಕಿದ. ಆಳವಾದ ನಿದ್ದೆಯಲ್ಲಿದ್ದ ತಂದೆಯನ್ನು ನೋಡಿ, ಅವನಿಗೆ ಸಮಾಧಾನವಾಯಿತು. ಬಾಗಲೆಳೆದುಕೊಂಡು ಆತ ಒಳಗೆ ಹೋದ.

ಸುಮಾರು ಎಂಟು ಗಂಟೆಯ ಹೊತ್ತಿಗೆ ಹೆಗಡೆಯವರಿಗೆ ಎಚ್ಚರವಾಯಿತು. – ಗಡಿಯಾರ ನೋಡಿ ಅವರಿಗೆ ದಿಗ್ಭ್ರಮೆ.

'ಎಷ್ಟು ಹೊತ್ತು ಮಲಗಿಬಿಟ್ಟೆ!'

ಮೇಲೆದ್ದು ಮುಖ ತೊಳೆದುಕೊಂಡರು. ಬ್ರಷ್‌ಗೆ ಕಾಲ್‌ಗೇಟ್ ಟೂತ್‌ಪೇಸ್ಟ್ ಹಾಕಿ ಹಲ್ಲು ಉಜ್ಜಿದರು.

ಕಪ್ಪಗಿನ ಕುಳ್ಳಗಿನ ಅವರ ಸ್ಥೂಲಕಾಯ, ಅಡುಗೆಮನೆಯ ಬಾಗಿಲ ಮುಂದಿನಿಂದ ಹಾದು ಹೋಗುತ್ತಿದ್ದಾಗ ಅವರಾಕೆ ಮೆಲ್ಲನಂದರು:

"ತಿಂಡಿಯೆಲ್ಲ ತಣ್ಣಗಾಯ್ತು!"

"ಏಳೋದು ತಡವಾಯ್ತು. ಅಂತಲೋ ನಿನ್ನ ಪುಕಾರು? ಊಂ... ಮಲಗಿದರೆ ನಿದ್ದೆ ಬರ್ಬೇಕಲ್ಲ? ನೀವೇನು ಹಾಯಾಗಿ ನಿದ್ದೆ ಮಾಡ್ಬಿಡ್ತೀರ! ಸಂಸಾರದ ಯೋಚನೆಯೆಲ್ಲ ನನ್ನ ಪಾಲಿಗೆ ತಾನೆ? ಬೆಳಗಿನ ಜಾವ ಕಣ್ಣಿಗೆ ನಿದ್ದೆ ಹತ್ತಿರ್ಬೇಕು!"

ಹೆಗಡೆಯವರು ಹಾಗೆ ಮಾತನಾಡಿದಾಗ, ಉತ್ತ-ರಿಸುವ ಧೈರ್ಯ ಆ ಮನೆಯಲ್ಲಿ ಯಾರಿಗೂ ಇಲ್ಲ.

ಅವರು ಕೊಠಡಿಯೊಳಗೆ ಹೋಗಿ ಗಟ್ಟಿಯಾಗಿ ಕೂಗಿದರು;

" ನರಹರಿ, ಇಡ್ಲಿ ಬರಲಿ!"

ಸ್ಟೇನ್‌ಲೆಸ್ ಸ್ಟೀಲ್ ತಟ್ಟೆಯಲ್ಲಿ ತುಸು ಬಿಸಿಯಾಗಿಯೇ ಇದ್ದ [ಲಕ್ಷ್ಮಮ್ಮ ಅವನ್ನು ಒಲೆಯ ಮೇಲೆ ಮುಚ್ಚಿಟ್ಟಿದ್ದರು.] ಎರಡು ಇಡ್ಲಿಗಳನ್ನು ತೆಗೆದುಕೊಂಡು ನರಹರಿ ಒಳಗೆ ಬಂದು ಟೇಬಲ ಮೇಲಿರಿಸಿದ. ತಂದೆಯ ಕಡೆ ನೋಡಿದ.

ದುಂಡಗಿನ ಅಗಲ ಮುಖ ತಂದೆಯದು. ಆ ಮುಖಕ್ಕೆ ಸಣ್ಣವಾದುವೇನೋ ಎಂಬಂತಿದ್ದ ತೀಕ್ಷ್ಣವಾದ ಕಣ್ಣುಗಳು. ಮೊಂಡುಮೂಗು, ಅಗಲವಾದ ಬಾಯಿ. ಅದರ ಮೇಲ್ಭಾಗವನ್ನು ಪೂರ್ತಿಯಾಗಿ ಮುಚ್ಚಿದ್ದ ಕುರುಚಲು ಮೀಸೆ. ಬಿಳಿಯ ಮತ್ತು ಕಪ್ಪು ಕೂದಲುಗಳು ಅದರಲ್ಲಿ. ತುಂಬಿದ ಮುಖದಲ್ಲಿ ಮೂಗಿನಿಂದ ಇಳಿದು, ಕೆನ್ನೆಗಳ ಮೇಲೆ ಜಾರಿ, ಗಲ್ಲದ ಕೆಳಗೆ ಬಂದುಕೂಡಿದ್ದ ಅಗಲವಾದ ಎರಡು ಗೆರೆಗಳು.

ತಟ್ಟೆಯನ್ನು ನೋಡಿದೊಡನೆ ಹೆಗಡೆಯವರ ಮೀಸೆ ಕುಣಿಯಿತು.

" ಚಟ್ನಿ ಎಲ್ಲಿ ? "

"ಉಪ್ಪು ಬೇಡ ಅಂತ ಡಾಕ್ಟರು ಹೇಳಿದ್ರು. ಬ್ಲಡ್‌ಪ್ರೆಷರ್ ಜಾಸ್ತಿ ಆಗುತ್ತಂತೆ. ಹಾರ್ಟಿಗೆ...".

"ನಿನ್ನ ತಲೆಕಾಯಿ! ಉಪ್ಪಿಗೂ ಹಾರ್ಟಿಗೂ ಏನೋ ಸಂಬಂಧ? ಆ ಡಾಕ್ಟ್ರು ಹೇಳುತಾನೆ ಉಪ್ಪು ಬೇಡ. ತುಪ್ಪ ಬೇಡ. ಖಾರ ಬೇಡ, ಅನ್ನ ಬೇಡ, ಯಾವುದೂ ಬೇಡ, ಬರೀ ಸಮುದ್ರದ ಮೇಲಿನಿಂದ ಬರೋ ಗಾಳೀನ ಕುಡೀರಿ ಅಂತ. ಇವನ್ನೆಲ್ಲಾ ಬಿಟ್ಟು ಒಂದಿವಸ ಅವನಿರಲಿ ನೋಡೋಣ. ಹೋಗೋ ಹೋಗೊ! ಚಟ್ನಿ ತಗೊಂಬಾರೊ! ಚಟ್ನಿ ತಿಂದರೇನೇ ನನ್ನ ಹಾರ್ಟು ಗಟ್ಟಿಯಾಗೋದು!"

ಮರುಮಾತಾಡದೆ ನರಹರಿ ಒಳಗೆಹೋಗಿ ತಂದೆ ಕೇಳಿದುದನ್ನು ತಂದುಕೊಟ್ಟ. ಹೆಗಡೆಯವರು ತಿಂಡಿತಿಂದು ಹಾಲು ಕುಡಿದು ತೇಗಿದರು.

ನರಹರಿ ಬಂದು ಔಷಧಿಗಳ ಕಪಾಟಿನ ಬಾಗಿಲು ತೆರೆದ. ಬಾಯಿಪಾಠ ಮಾಡಿದ ಮಗ್ಗಿಯಂತೆ ಹೆಗಡೆ ದಡಬಡನೆ ಹೇಳಿದರು.

"ಒಂದು ಸರ್‌ಪಾಸಿಲ್, ಎರಡು ನೆಫ್ರಿಲ್, ಒಂದು ಬಿ ಕಾಂಪ್ಲೆಕ್ಸ್. ಒಂದು ಡಿಗಾಕ್ಸಿನ್... ಇಷ್ಟು ಮಾತ್ರೆಗಳು ಸಾಕು..."

ಅವನ್ನೆಲ್ಲಾ ನುಂಗಿ ನೀರುಕುಡಿದರು. ಯಾಕೋ ಸ್ವಲ್ಪ ಆಯಾಸವೆನಿಸಿ 'ಇವತ್ತು ಸ್ನಾನ ಬೇಡ' ಎಂದರು.

ಆಗಲೇ ತಡವಾಗಿತ್ತು. ನಸ್ಯಬಣ್ಣದ ಉಣ್ಣೆ ಕೋಟು ಧರಿಸಿ, ಚಪ್ಪಲಿ ಮೆಟ್ಟುತ್ತಾ ಅವರೆಂದರು:

"ನರಹರಿ, ನೀನು ಅಂಗಡಿಗೆ ಹೋಗು, ಇವತ್ತು ನಾನು ಬರೋದಿಲ್ಲ. ಸರದೂರಿಗೆ ಹೋಗಿ ಬರ್ತೀನಿ ಕೆಲ್ಸವಿದೆ."

ಹೊಳೆ ದಾಟಿ, ನಾಲ್ಕಾರು ಮೈಲು ದೂರ ಬಸ್ಸಿನಲ್ಲಿ ಪ್ರಯಾಣ ಮಾಡಿದರೆ ಸಿಗುವ ನೆರೆಊರು ಅದು. ತಂದೆ ಎಂದಿಗೂ ಅಂಗಡಿಗೆ ಬಾರದೆ ಹೋದವರಲ್ಲ. ಅಂತಹ ಅವಸರದ ಕೆಲಸವಿತ್ತಾದರೂ ಏನು?

"ಸುಮ್ನೆ ಆಯಾಸ ಮಾಡಿಕೋಬೇಡಿ ಅಪ್ಪ."

ಹೆಗಡೆ ಸಿಟ್ಟಿಗೆದ್ದರು.

"ಹೋಗೋ! ಹೇಳಿದಷ್ಟು ಕೆಲ್ಸ ಮಾಡು ತಿಳೀತಾ? ನಾನು ಕತ್ತಲಾಗೋದ್ರೊಳಗೆ ಮನೆಗೆ ಬರ್ತೀನಿ. ನಿಮ್ಮ ಅಮ್ಮನಿಗೂ ಹೇಳಿಹೋಗು."

ಬ್ರೀಫ್‌ಕೇಸ್ ತೆಗೆದುಕೊಂಡು, ಬೆಳ್ಳಿಹಿಡಿಯಿದ್ದ ಕಪ್ಪುಮರದ ವಾಕಿಂಗ್‌ಸ್ಟಿಕ್ ಹಿಡಿದು ಹೆಗಡೆ ಹೊರಬಿದ್ದರು.

ನದಿಯ ದಂಡೆಯವರೆಗೂ ಬಸ್ಸುಹೋಗುತ್ತಿತ್ತು. ಅಲ್ಲಿಂದ ಎದುರುದಂಡೆಗೆ ನದಿಯಮೇಲೆ ಮೋಟರು ಲಾಂಚಿನಲ್ಲಿ ಪ್ರಯಾಣ. ಬೆಳಗಿನ ಹೊತ್ತಾದುದರಿಂದ ಅಲ್ಲಿ ಹೆಚ್ಚು ಗದ್ದಲವಿರಲಿಲ್ಲ. ಗುರುತಿದ್ದವರು ಕೈಮುಗಿದರು, ಮಾತನಾಡಿಸಿದರು. ಹೆಗಡೆಯವರದು ಮಾತ್ರ ಎಲ್ಲರಿಗೂ ಚುಟುಕು ಉತ್ತರ.

ಸುಂಯ್ ಎಂದು ನೀರನ್ನು ಸೀಳುತ್ತಾ ಮೋಟ-ರು ಲಾಂಚು ಹೊರಟಿತು. ಉಕ್ಕಿ ಉಬ್ಬಿ ಹರಿಯುತ್ತಿದ್ದ ನೀಲಿ ನೀರು.

ನಾನು ಯಾತಕ್ಕೆ ಹೊರಟಿರುವೆನೆಂದು ಈ ಮೂಢರಿಗೆ ತಿಳಿದಿದೆಯಾ? ಇಲ್ಲ. ಆದರೆ ನಾನು ಈ ನಿರ್ಧಾರ ಕೈಗೊಂಡಿರುವುದು ಸರಿಯೇ? ಅಥವಾ ನನ್ನ ನಿಶ್ಚಯ ಬದಲಿಸಲೇ?

ಅಂದು ರಾತ್ರೆ ಮನೆಗೆ ಹಿಂತಿರುಗಿದ ಹೆಗಡೆಯವರು ತುಂಬಾ ಆಯಾಸಗೊಂಡಿದ್ದರು. ಬ್ರೀಫ್‌ಕೇಸಿನಿಂದ ಕಾಗದಪತ್ರಗಳನ್ನು ತೆಗೆದು ನೀಲಿಯ ತಿಜೋರಿಯಲ್ಲಿ ಅವರು ಇಡುತ್ತಿದ್ದುದನ್ನು ನರಹರಿ ನೋಡಿದ. ಆ ತಿಜೋರಿಯಲ್ಲಿ ಎಂಥ ಬ್ರಹ್ಮಾಂಡ ಅಡಗಿದೆಯೋ! ಅದರ ಬೀಗದಕ್ಕೆ ಯಾವಾಗಲೂ ತಂದೆಯ ಉಡಿದಾರದಲ್ಲೇ ಇರುತ್ತಿತ್ತು.

*

ಒಂದು ಸುಂದರವಾದ ಬೆಳಗು, ಅರುಣರಂಜಿತ ಆಕಾಶ ವರ್ಣಮಯವಾಗಿತ್ತು. ಸಮುದ್ರದ ಅಲೆಗಳು ರಭಸದಿಂದ ಬಂದು ದಂಡೆಗೆ ಅಪ್ಪಳಿಸಿ ಮತ್ತೆ ಹೋಗಬೇಕೆ? ಎಂದು ಬಿಸಿಸುಯುತ್ತಾ ಹಿಂತಿರುಗುತ್ತಿದ್ದವು. ಅದನ್ನು ನೋಡುತ್ತ ಮರಳರಾಶಿಯ ಮೇಲೆ ಹೆಗಡೆ ಕುಳಿತಿದ್ದರು.

ಸಾಗರದ ಮೇಲೆ ಹಾಯಿದೋಣಿಯೊಂದು ಚಲಿಸುತ್ತಿತ್ತು. ಬೀಸುತ್ತಿದ್ದ ಗಾಳಿಗೆ ಒಮ್ಮೊಮ್ಮೆ ತುಯ್ದಾಡುತ್ತಾ ನೀರ ಮೇಲೆ ನಡೆಯುತ್ತಿತ್ತು ಆ ದೋಣಿ.

ದೋಣಿಯಂತಹ ಬದುಕು.

ಗಾಳಿ ಜೋರಾದಾಗ ಅದಕ್ಕೆ ಅಪಾಯ. ಸಂಸಾರದ ಗತಿ? ದೋಣಿಯನ್ನು ಗಟ್ಟಿಯಾಗಿ ಕಟ್ಟಬೇಕು. ಅದನ್ನು ಸರಿಯಾಗಿ ನಡೆಸುವ ಸಾಮರ್ಥ್ಯವನ್ನು ಮಗನಿಗೆ ತಿಳಿಸಬೇಕು. ಅವನ ಜತೆಗೆ ಇನ್ನೆರಡು ಬಾಹುಗಳನ್ನು ತರಬೇಕು.

ಸರದೂರಿನ ಶ್ರೀಮಂತರ ಏಕಮಾತ್ರ ಪುತ್ರಿ.

ತಾನು ಮಾಡಿರುವ ಸಂಧಾನ ಯೋಗ್ಯವಾದದ್ದು.

ಹೆಗಡೆ ಪಂಚೆಗೆ ಹತ್ತಿದ್ದ ಮರಳು ಜಾಡಿಸಿ, ಚಪ್ಪಲಿಗಳನ್ನು ಮೆಟ್ಟಿ ಮನೆಯ ಕಡೆಗೆ ನಡೆದರು.

"ನರಹರಿ, ಇಲ್ಲಿ ಬಾ. ನಿನ್ನ ತಾಯಿಯನ್ನೂ ಕರಿ."

ಇದೇನು ವಕ್ರಿಸಿತಪ್ಪಾ ಎಂದುಕೊಂಡ ನರಹರಿ. ಲಕ್ಷ್ಮಮ್ಮ ಒದ್ದೆಯಾಗಿದ್ದ ಕೈಯ್ಯನ್ನು ಸೀರೆಗೆ ಒರೆಸಿಕೊಳ್ಳುತ್ತಾ ಬಾಗಿಲ ಹತ್ತಿರ ಬಂದು ನಿಂತಳು.

"ಸರದೂರಿನ ಸಂಜೀವಯ್ಯನವರು... ಅವರು ನಿನ್ನ ತಾಯಿಗೆ ದೂರದ ಸಂಬಂಧವೂ ಆಗ್ಬೇಕು ನರಹರಿ. ಅವರ ಮಗಳನ್ನು ನೀನು ಲಗ್ನವಾಗ್ಬೇಕು."

ನರಹರಿಗೆ ಆ ಹುಡುಗಿಯನ್ನು ಕಂಡ ನೆನಪು. ಶ್ಯಾಮಲ ವರ್ಣದ, ತುಸು ಉಬ್ಬುಹಲ್ಲಿನ ಬಾಲಿಕೆ. ನಗರದ ಶೋಕಿ ಹುಡುಗಿಯರನ್ನು ಕಂಡ ಅವನ ಕಣ್ಣುಗಳು, ಮನಸ್ಸು, ಆಕೆಯನ್ನು ಒಪ್ಪಲಿಚ್ಛಿಸಲಿಲ್ಲ. ಧೈರ್ಯತಂದುಕೊಳ್ಳುತ್ತ ತಾಯಿಯೊಡನೆ ಅವನೆಂದ:

"ಆ ಉಬ್ಬುಹಲ್ಲಿನ ಹುಡುಗಿ ಬೇಡವಮ್ಮಾ!"

ಹೆಗಡೆ ನರಸಿಂಹಾವತಾರ ತಾಳಿದರು.

"ಏನೆಂದೆ? ಉಬ್ಬುಹಲ್ಲೆ? ನೀನು ಬಹಳ ಲಕ್ಷಣವಾಗಿದೀಯೊ? ನೀನು ಮನ್ಮಥ ಎಂದುಕೊಂಡಿಯೇನೋ ಮಗನೆ? ಉಬ್ಬುಹಲ್ಲಿನ ಹುಡುಗಿಗೆ ಒಂದು ಲಕ್ಷಕ್ಕೂ ಹೆಚ್ಚು ಆಸ್ತಿ ಬರುತ್ತೆ. ಅದು ಇನ್ನೊಬ್ಬರ ಪಾಲಾದ ಮೇಲೆ ಕೈಕೈ ಹಿಸುಕಿಕೋಬೇಡ, ತಿಳೀತಾ? ಬುದ್ಧಿವಂತನ ಹಾಗೆ ಹುಂ ಅನ್ನು. ನಾನು ನಿನ್ನ ತಂದೆ. ನಿನ್ನ ಒಳ್ಳೇದಕ್ಕೆ ಹೇಳ್ತೀನಿ."

ಅನೇಕ ಕಾರಣಗಳಿಂದ ಒತ್ತರಿಸಿಬಂದಿದ್ದ ಬಹಳ ದಿನಗಳ ಬೇಸರವನ್ನು ಒಮ್ಮೆಲೆ ಹರಿಯಬಿಟ್ಟು ನರಹರಿಯೆಂದ:

"ನನ್ನನ್ನ ಇದೊಂದು ವಿಷಯದಲ್ಲಿ ಬಲವಂತ ಮಾಡ್ಬೇಡಿ!"

"ನಾನು ಒಪ್ಕೊಂಡು ಬಂದಿದೀನಿ. ನಾಳೆ ಲಗ್ನ ಕಟ್ಟಿಸೋಕೆ ಸರದೂರಿಗೆ ಹೋಗ್ಬೇಕು, ತಿಳೀತಾ? ಇಲ್ಲದಿದ್ರೆ ನನ್ನ ಆಸ್ತೀಲಿ ನಿಂಗೆ ಒಂದು ಕುರುಡು ಕವಡೇನೂ ಸಿಗೋಲ್ಲ. ಎಲ್ಲ ದಾನಧರ್ಮ ಮಾಡಿಬಿಡ್ತೀನಿ."

"ಎಂಥಾ ಮಾತಾಡ್ತೀರಿ!"

—ಎಂದು ಲಕ್ಷ್ಮಮ್ಮ ಸೀರೆಯನ್ನು ಕಣ್ಣಿಗೊ-ತ್ತುತ್ತಾ ಮುಂದೆ ಬಂದಳು.

"ಮಗನಪರ ವಕಾಲತ್ತೋ?"

—ಎಂದು ಹೆಗಡೆ ಧಡಧಡನೆ ಪತ್ನಿಯ ಕಡೆಗೆ ಹೆಜ್ಜೆ ಹಾಕಿದರು. ಆದರೆ ಅರ್ಧದಲ್ಲೇ ನಿಂತು, ಎದೆಯನ್ನು ಇದ್ದಕ್ಕಿದ್ದಂತೆ ಹಿಡಿದುಕೊಂಡು 'ಅಯ್ಯೋ' ಎಂದರು.

"ಏನಾಯಿತಪ್ಪ?". ಎಂದು ನರಹರಿ ಗಾಬರಿಯಿಂದ ತಂದೆಯ ಬಳಿಗೆ ಧಾವಿಸಿದ.

"ಕೋರಮಿನ್ ಡ್ರಾಪ್ಸ್ ಕೊಡು" ಎಂದರು ಹೆಗಡೆ. ಮಗ ಕೊಟ್ಟಾಗ ಅದನ್ನು ಕುಡಿದರು. ಸಲೀ

ಸಾಗಿ ಉಸಿರಾಡಿದರು. ಅನಂತರ ನಿಧಾನವಾಗಿ ಅಂದರು:

"ಹೋಗು. ಡಾಕ್ಟರನ್ನ ಕರ್ಕೊಂಡು ಬಾ."

ಅಲ್ಲಿಂದ ಒಂದು ಫರ್ಲಾಂಗ್ ದೂರದಲ್ಲಿದ್ದ ಡಾಕ್ಟರು ತುಸು ಹೊತ್ತಿನಲ್ಲಿಯೇ ಆಗಮಿಸಿದರು. ನರಹರಿ ಅವರ ಬ್ಯಾಗನ್ನು ತಂದು ಒಳಗಿಟ್ಟು ಹೊರ ಹೋದ.

"ನಮಸ್ಕಾರ ಡಾಕ್ಟ್ರೆ......"

"ನಮಸ್ಕಾರ. ಚೆನ್ನಾಗಿದೀರಾ?"

[ಯಾವಾಗಲೂ ಬೆಣ್ಣೆಯಂತಹ ಮಾತು. ಚೆನ್ನಾಗಿದ್ದಿದ್ದರೆ ನಾನು ಹೇಳಿ ಕಳಿಸುತ್ತಿದ್ದೆನಾ?]

ಡಾಕ್ಟರು ಸ್ಟೆತಾಸ್ಕೋಪನ್ನು ಹೊರತೆಗೆದರು. ಹೆಗಡೆಯವರ ಮಂಚದ ಪಕ್ಕದಲ್ಲಿದ್ದ ಕುರ್ಚಿಯನ್ನು, ಇನ್ನೂ ಹತ್ತಿರಕ್ಕೆಳೆದುಕೊಂಡು ಕುಳಿತರು.

"ಏ ನರಹರಿ! ಎಲ್ಲಿ ಹಾಳಾಗಿ ಹೋದೆ? ಅವಳೆಲ್ಲಿ? ಲೇ ಲಕ್ಷ್ಮೀ, ಡಾಕ್ಟರು ಬಂದಾಗ ನೀವಿಬ್ರೂ ಇಲ್ಲಿರಬೇಕೊಂತ, ಎಷ್ಟು ಸಾರೆ ನಾನು ಹೇಳೋದು?"

ನರಹರಿ. ಲಕ್ಷ್ಮಮ್ಮ ಇಬ್ಬರೂ ಒಳಗೆ ಬಂದು ನಿಂತರು. ಡಾಕ್ಟರು ತಮ್ಮ ಪರೀಕ್ಷೆಯನ್ನು ಮುಂದುವರಿಸಿದರು.

"ಹಾರ್ಟು ಹೇಗಿದೆ?" ಹೆಗಡೆಯವರ ಪ್ರಶ್ನೆ.

"ಚೆನ್ನಾಗಿದೆ. ಚೆನ್ನಾಗಿದೆ. ಸ್ವಲ್ಪ ಎನ್‌ಲಾರ್ಜ್ ಆಗಿದೆ. ಆದ್ರೂನೂ......"

[ನಿನ್ನ ಜಾತೀನ ನಂಬಿದೋರುಂಟೇನಯ್ಯಾ? ಆಸಾಮಿ ಈಗ ಗೊಟಕ್ ಅನ್ನುತ್ತೆ ಅಂತಿರೋವಾಗ಼್್ಲೂ 'ಚೆನ್ನಾಗಿದೆ' ಎಂತಲೇ ಹೇಳೋವರು ನೀವು! ನಾನು ಎಂ. ಬಿ. ಬಿ. ಎಸ್. ಮಾಡ್ಕೊಂಡಿಲ್ಲ. ಆದ್ರೆ ನನ್ನ ಹಾರ್ಟು ಹೇಗಿದೆ ಅಂತ ನಾನು ಹೇಳ್ತೀನಿ ಕೇಳು]

ಮುಂದುವರಿಸುತ್ತ ಡಾಕ್ಟರು:

"ನೀವು ತುಂಬಾ ಆಯಾಸ ಮಾಡ್ಕೊಬಾರ್ದು ಹೆಗಡೆಯವರೇ."

"ಆಯಾಸದ ಸ್ಪ್ರಿಂಗಿನ ಮೇಲೇ ನಿಂತಿರೋವನು ನಾನು. ನಂಗೆ ವಿಶ್ರಾಂತಿ ಸಿಗೋದುಂಟೆ ಡಾಕ್ಟ್ರೆ?"

ರಕ್ತದ ಒತ್ತಡದ ಪರೀಕ್ಷೆ ಮಾಡಿದ ಬಳಿಕ ಡಾಕ್ಟರು ಅಂದರು:

"ನೀವು ಏನೇನು ಆಹಾರ ತಗೋತೀರಿ? ಉಪ್ಪು ಬೇಡ ಅಂತ ಅವತ್ತೇ ಹೇಳಿದ್ದೆನಲ್ವೆ?"

"ಛೆ... ಛೆ... ಉಪ್ಪನ್ನು ಮುಟ್ಟೋರ್ಯಾರು? ಇಲ್ನೋಡಿ, ಬೆಳಗ್ಗೆ ಎರಡು ಇಡ್ಲಿ ತಿಂತೀನಿ. ಹತ್ತು ಗಂಟೆಗೆ ಎರಡು ಬಾಳೆಯ ಹಣ್ಣು, ಒಂದು ಕಿತ್ತಳೆ ಹಣ್ಣು. ಮಧ್ಯಾಹ್ನ ಹನ್ನೆರಡಕ್ಕೆ ಊಟ. ಎರಡೇ-ಎರಡು ಚಪಾತಿ, ಸ್ವಲ್ಪ ತಿಳಿಸಾರು ಅನ್ನ, ಪಲ್ಯ, ಮೊಸರು, ಮೊಸರನ್ನ, ಎರಡು ಗಂಟೆಗೆ ಎರಡು ಸೇಬಿನ ಹಣ್ಣು, ಹಾಲು. ನಾಲ್ಕು ಗಂಟೆಗೆ ಎರಡು ಇಡ್ಲಿ, ಕಾಫಿ, ರಾತ್ರಿ ಊಟ. ಎರಡೇ ಎರಡ..."

"ಸಾಕು, ಸಾಕು..."

—ಎಂದರು ದಿಗ್ಭ್ರಮೆಗೊಂಡ ಡಾಕ್ಟರು. ಸ್ವಲ್ಪ ಹೊತ್ತು ಚೇತರಿಸಿಕೊಂಡು ಅವರು ನುಡಿದರು:

"ಒಂದು ಮಾತು ಹೇಳ್ತೀನಿ. ನೀವೇನೂ ತಿಳ್ಕೋಬಾರ್ದು. ನಿಮ್ಮ ಡಯೆಟ್ ಸ್ವಲ್ಪ ಕಡಮೆ ಮಾಡ್ಬೇಕು. ಇಲ್ಲದಿದ್ರೆ ಹೃದಯಕ್ಕೆ ತುಂಬಾ ಘಾಸಿಯಾಗುತ್ತೆ!"

[ಇನ್ನೂ ಕಡಮೆ ಮಾಡಬೇಕಾ? ಇಷ್ಟು ತಿಂದರೂ ನಂಗೆ ಹಸಿವೆ. ಏನು ಉಪವಾಸ ಇರಬೇಕೆಂತಿಯೋ ಹ್ಯಾಗೆ? ನನ್ಕೈಲಿ ಸಾಧ್ಯವಿಲ್ಲಪ್ಪ. ಇರೋವರ್ಗೂ ಚೆನ್ನಾಗಿ ತಿಂದುಬಿಡೋದು. ಅದು ನನ್ನ ಧೋರಣೆ. ಅಲ್ಲ, ತಿನ್ನದಿದ್ರೆ ಹಾರ್ಟಿಗೆ ಶಕ್ತಿ ಬರೋದು ಹ್ಯಾಗೆ? ಆಹಾರದ ವಿಷಯದಲ್ಲಿ ಈ ಡಾಕ್ಟರುಗಳಿಗೆ ಹೇಳಿ ಪ್ರಯೋಜನವಿಲ್ಲ. ಆ ವಿಷಯದಲ್ಲಿ ಅವರು ಕಟುಕರು. ನಿಷ್ಕರುಣಿಗಳು ......ಊಂ...]

ಬಿಗಿದ ಮುಖದ ಹೆಗಡೆ, ಡಾಕ್ಟರ ಮಾತಿಗೆ ಉತ್ತರ ಕೊಡದೆ ಮಗನನ್ನು ನೋಡುತ್ತಾ ಅಂದರು

"ಡಾಕ್ಟರಿಗೆ ಪುಸ್ತಕ ಕೊಡು"

ಹಸಿರು ರಟ್ಟಿನ ಎಕ್ಸರ್‌ಸೈಜ್ ಬುಕ್ಕು. ಹೆಸರು ಎಂದಿರುವೆಡೆ 'ಡಾ। ಸುಬ್ರಹ್ಮಣ್ಯ' ಎಂದು ಬರೆದಿತ್ತು. ಅದು ಹೆಗಡೆಯವರ ಹಸ್ತಾಕ್ಷರ.

ತುಂಬಿದ್ದ ಹತ್ತಿಪ್ಪತ್ತು ಪುಟಗಳನ್ನು ತಿರುವಿ ಡಾಕ್ಟರು, ಖಾಲಿ ಜಾಗದಲ್ಲಿ ಬರೆದರು. ನಾಡಿ ಮಿಡಿತ = ನೂರು, ರಕ್ತದ ಒತ್ತಡ = ೧೮೦/೧೦೦, ಹೃದಯ = ಮರ್‌ಮರ್ಸ್; ಪಿತ್ತಕೋಶ = ಎನ್‌ಲಾರ್ಜಡ್, ಕಾಲಿನ ಊತ +

ಅದಾದಮೇಲೆ ಯಾವ ಯಾವ ಹೊತ್ತಿನಲ್ಲಿ, ಯಾವ ಯಾವ ಔಷಧಿಗಳನ್ನು ತೆಗೆದುಕೊಳ್ಳಬೇಕೆಂಬ ಬಾಯ್ತೆರೆಯ ಸೂಚನೆ.

"ಬರೆದುಕೊಳ್ಳೋ ನರಹರಿ."

ಎಂದು ಹೆಗಡೆ ಆಜ್ಞಾಪಿಸಿದರು. ಬೇರೆ ಹಾಳೆಯೊಂದನ್ನು ಪೆನ್ನೊಂದನ್ನೂ ಹಿಡಿದು ನಿಂತ ನರಹರಿ

ಬೆಳಗ್ಗೆ ಒಂದು ಸ್ಲೈಸ್ ಬ್ರೆಡ್, ಹಾಲು. ಮಧ್ಯಾಹ್ನ ತಿಳಿ ಸಾರು ಅನ್ನ, ಮೊಸರನ್ನ, ಸಂಜೆಗೆ ಹಾಲು-ಬ್ರೆಡ್, ರಾತ್ರಿ ಡಿಟೊ...

ಡಾಕ್ಟರು ಮೇಲೆದ್ದಾಗ ನರಹರಿ ಕೇಳಿದ:

"ಏನೂ ಭಯವಿಲ್ವೆ ಡಾಕ್ಟರೇ?"

ಛೆ...ಛೆ..."

ಹೆಗಡೆ ಬಿರುನೋಟದಿಂದ ಮಗನನ್ನು ನೋಡಿದರು.

[ಭಯ ನಿಮಗೆ ಕಣ್ರೋ! ನನಗಲ್ಲ. :ಇನ್ನೊಂದು ಕೆಲ್ಸ ಇದೆ. ಅದನ್ನು ಮುಗಿಸಿಬಿಟ್ರೆ ಅಂದ್ರೆ ನಂಗೆ ಇನ್ನೇನೂ ಭಯ ಇಲ್ಲ]

"ನಾಳೆ ಸರದೂರಿಗೆ ಹೋಗಿ ಬರ್ಬೇಕೊಂತಿದಾರೆ"

"ಖಂಡಿತ ಬೇಡ, ಅವರಿಗೆ ಯಾವ ವಿಧವಾದ ಆಯಾಸಾನೂ ಆಗ್ಬಾರದು."

ಹೆಗಡೆ ಕ್ರುದ್ಧರಾದರು.

"ನಾಳೆ ಮಾತು ಈಗ ಆಡೋದು ಬೇಡ ಹೋಗೋ ಮುಂಚೆ ನಿಮಗೆ ಹೇಳಿಕಳಿಸ್ತೀನಿ. ನೀವು ಹೂಂ ಅಂದರೆ ಪ್ರಯಾಣ..."

ಡಾಕ್ಟರು ನಗುತ್ತಾ ಹೊರಕ್ಕೆ ನಡೆದರು.

ಅವರ ಆದೇಶದ ಪ್ರಕಾರ ಪುಸ್ತಕವನ್ನೋದಿಕೊಂಡು ಹೆಗಡೆ ಮಾತ್ರೆಗಳನ್ನು ಸೇವಿಸಿ ಕೂಗಿ ನುಡಿದರು:

"ಅಡುಗೆ ಆಗಿದೆಯೇನೆ? ಇವತ್ಯಾಕೊ ತುಂಬಾ ಹಸಿವು. ಚಪಾತಿ; ಮೊಸರನ್ನದ ಜೊತೆ ಒಂದು ನಿಂಬೆ ಹಣ್ಣಿನ ಉಪ್ಪಿನಕಾಯಿ ಇರ್ಲಿ. ಯಾಕೋ ಬಾಯಿಯ ರುಚೀನೇ ಕೆಟ್ಟಿದೆ."

*

ಮರುದಿನ ಬೆಳಗ್ಗೆ ಎಂದಿನಂತೆಯೇ ಹೆಗಡೆ ಬೇಗನೆದ್ದರು. ತಿಂಡಿ ತೀರ್ಥಗಳು ಲಗುಬಗೆಯಿಂದ ನಡೆದುವು. ತಮ್ಮ ನಶ್ಯ ಬಣ್ಣದ ಕೋಟನ್ನು ಹಾಕಿಕೊಂಡರು. ಚಪ್ಪಲಿ ಮೆಟ್ಟಿದರು. ನೀಲಿಯ ತಿಜೋರಿಯನ್ನು ತೆಗೆದು ಕಾಗದಪತ್ರಗಳನ್ನು ಪರಿಶೀಲಿಸಿದರು.

ಸಿದ್ಧವಾಗಿ ಬಂದ ನರಹರಿಗೆ "ಯಾಕೋಸುಸ್ತು" ಎಂದರು. "ಡಾಕ್ಟರನ್ನು ಕರೆಯಲಿ?" ಎಂದ ನರಹರಿ.

"ಬೇಕಾಗಿಲ್ಲ. ಶುಭಕಾರ್ಯಕ್ಕೆ ಹೋಗ್ತಿರುವಾಗ ಅವನು ಬಂದರೆ 'ಬೇಡ' ಅಂತ ಕಲ್ಲು ಹಾಕ್ತಾನೆ. ಹೋಗು ಟ್ಯಾಕ್ಸಿ ತಗೊಂಡು ಬಾ."

ನರಹರಿ ಹೊರಟುಹೋದ. ಹೆಗಡೆ ಔಷಧಿಯನ್ನು ತೆಗೆದುಕೊಂಡು ಹೆಂಡತಿಯನ್ನು ಕರೆದು ಅಂದರು.

"ಬೇಗ ಸಿದ್ಧವಾಗು, ತಡ ಆಯ್ತು. ಇದೊಂದು ಲಗ್ನ ಮುಗಿಸಿಬಿಟ್ರೆ ನಾನು ಯಾವ ಚಿಂತೇನೂ ಇಲ್ದೆ ಪ್ರಾಣ ಬಿಡಬಹುದು."

"ಅಯ್ಯೊ! ಯಾಕೆ ಹಾಗೆ ಮಾತಾಡ್ತೀರಿ?"

ಎಂದು ಲಕ್ಷಮ್ಮ ಬುಳುಬುಳುಸಿ ಅಳಲು ಆರಂಭಿಸಿದಳು.

"ಶುರುಮಾಡಿದ್ಯಾ? ಯಾಕಳ್ತೀ ಒಳ್ಳೇ ಕಾರ್ಯಕ್ಕೆ ಹೋಗುವಾಗ? ಅಂದಹಾಗೆ ನಾವು ಮೂರು ಜನ ಆದ್ವಿ ಅಲ್ವ? ಅಂಗಡಿಗೆ ಹೋಗಿ ಒಬ್ಬ ಆಳುಮಗನ್ನ ಜೊತೇಲಿ ಕರ್ಕೊಂಡು ಹೋಗೋಣ. ಸಾಮಾನು ಗೀಮಾನು ಹೊರ್ಲಿಕ್ಕೆ ಇರ್ಲಿ."

ಎಲ್ಲರನ್ನೂ ತುಂಬಿಸಿಕೊಂಡು ಟ್ಯಾಕ್ಸಿ ಹೊಳೆಯ ದಂಡೆಗೆ ನಡೆಯಿತು. ಹೆಗಡೆ ಕೆಳಗಿಳಿದು ಸುತ್ತಲೂ ನೋಡಿದರು. ಎದುರಿಗಿದ್ದ ವಿಶಾಲವಾದ, ಉಗ್ರವಾಗಿ ಹರಿಯುತ್ತಿದ್ದ ಹೊಳೆ. ಅದಕ್ಕೆ ಹಸಿರು ತೋರಣ ಕಟ್ಟಿದಂತಿದ್ದ ತೆಂಗಿನ ಮರಗಳು ಜನರ ಗದ್ದಲ, ಮೋಟರು ಲಾಂಚಿಗೆ ಏರುವವರು, ಇಳಿಯುವವರು.

[ಬಿಳಿಯ ಹಾಯಿ ದೋಣಿ. ಸಮೀಪದ ಸಮುದ್ರದಲ್ಲಿ ಭೀಕರ ಅಲೆಗಳು, ಕಣ್ಣಿಗೆ ಕತ್ತಲು, ಹೃದಯವನ್ನು ಯಾವುದೋ ಕರಾಳ ಹಸ್ತ ಒತ್ತಿ ಹಿಡಿದಂತಾಯಿತು. ಥೂ ಇದೇನು? ನನಗೆ ಇಷ್ಟು ಶಕ್ತಿ ಇಲ್ಲವಾಯಿತೆ? ಬೇಕಾದರೆ ಈ ಹೊಳೆಯನ್ನೇ ಈಜಿ ದಾಟಬಲ್ಲೆ ನಾನು. ಜತೆಗೆ ಮಗನೂ ಇಲ್ಲವೆ? ಅವನ ತೋಳುಗಳಲ್ಲಿ ಬಲವಿಲ್ಲವೆ?]

"ಅಪ್ಪ, ನಡೀರಿ ದೋಣಿ ಬಂತು"

"ಹೂಂ"

ಭಾರವಾದ ಕಾಲುಗಳನ್ನು ಮೇಲೆತ್ತಿ ಇಟ್ಟರು ಹೆಗಡೆ.

[ನದಿಯ ಸೆಳೆತ ಜೋರಾಗಿಯೇ ಇದೆ. ಆದರೆ ಶಕ್ತಿಯಿರುವ ವರೆಗೆ ಯಾವದೇನು ಅಂಜಿಕೆ?

ದೋಣಿ ಗಟ್ಟಿಯಾಗಿದ್ದರೆ ಹಾಯಿ ಹರಿಯದಿದ್ದರೆ, ಯಾವುದೂ ಯಾರದೂ ಹೆದರಿಕೆಯಿಲ್ಲ, ಆದರೆ ದೋಣಿ ಯಾಕೋ ನಡುಗುತ್ತಿದೆ.]

"ನರಹರಿ, ಕೈ ಹಿಡಿದುಕೋ ಬಿಡಬೇಡ."

ನರಹರಿ ತಂದೆಯ ಕೈ ಹಿಡಿದುಕೊಂಡ. ದೋಣಿಯೊಳಗೆ ಹೆಗಡೆ ಕಾಲಿಟ್ಟರು.

[ಥರಥರನೆ ಹಾಯಿದೋಣಿ ಅಲುಗಾಡಿತು. ರಭಸದಿಂದ ನೀರು ಅದರೊಳಗೆ ನುಗ್ಗಿತು. ರೋಯೋ ಎಂದು ಗಾಳಿ ಅಲೆಗಳಂತೆ ಬೀಸಿ, ಹಾಯಿಯನ್ನು ಹರಿದುಹಾಕಿತು. ದೋಣಿ ಚಕ್ರದಂತೆ ಗಿರಗಿರನೆ ತಿರುಗಿತು. ಬೆಳಕು ಮರೆಯಾಯಿತು, ಕತ್ತಲೆ, ಆಳಕ್ಕೆ, ನೀರಿನಾಳಕ್ಕೆ.]

"ಅಯ್ಯೋ!"

-ಎಂದು ಕುಸಿದು ಕುಳಿತರು ಹೆಗಡೆ.

ನರಹರಿ ಗಾಬರಿಯಿಂದ "ಅಪ್ಪ-ಅಪ್ಪ" ಎಂದು ಕೂಗಿದ. ತಂದೆ ಮಾತನಾಡಲಿಲ್ಲ. ಅವರ ತೆರೆದ ಕಣ್ಣುಗಳು ನದಿಯೊಳಗೆ ನಾಟಿದ್ದುವು. ಮೈ ಕಲ್ಲಿನಂತೆ ಸೆಟೆದಿತ್ತು. ಲಕ್ಷ್ಮಮ್ಮ ಓಡಿಬಂದಳು. ಅವರನ್ನು ಒರಗಿಸಿಕೊಂಡು ಕುಳಿತಳು. "ಅಯ್ಯೊ ಮಾತಾಡ್ರಿ, ಯಾಕೆ ಹೀಗ್ಮಾಡ್ತೀರಿ? ಯಾಕೆ? ಜನ್ರಪ್ಪಾ...ಇವರನ್ನ ಉಳಿಸ್ರಿ..."

ಸುತ್ತಲೂ ಜನ ನೆರೆದರು.

ಕೋಟು ತೊಟ್ಟೇ ಇದ್ದರು. ಕಾಲಲ್ಲಿ ಚಪ್ಪಲಿಗಳಿದ್ದವು. ಎಡಗೈಲಿ ಚಮಣದ ಚೀಲವಿತ್ತು. ಹೆಗಡೆಯವರ ದೇಹದಲ್ಲಿ ಜೀವವಷ್ಟೇ ಇರಲಿಲ್ಲ.

ನರಹರಿಯ ಕಣ್ಣುಗಳಲ್ಲಿ ಬಳಬಳನೆ ನೀರು ಸುರಿಯಿತು.

*

ನರಹರಿಯ ಪಾಲಿಗೆ ಎಲ್ಲವೂ ಶೂನ್ಯ. ಹೆಜ್ಜೆಯಿಟ್ಟಲ್ಲಿ ತಂದೆಯ ನೆನಪು ಅವನನ್ನು ಕಿತ್ತು ಕಾಡುತ್ತಿತ್ತು. ತಂದೆಯ ಆಜ್ಞೆಗಳ ಬೆಳಕಿನಲ್ಲೇ ಬೆಳೆದುಬಂದ ಅವನಿಗೆ, ಸ್ವತಂತ್ರವಾಗಿ ಉಸುರಾಡುವುದೂ ಕಷ್ಟವೆನಿಸುತ್ತಿತ್ತು. ಹಿಂದೆ ಒಮ್ಮೊಮ್ಮೆ ತಂದೆಯ ಆಳ್ವಿಕೆ ಕಂಡು ಅವನಿಗೆ ಸಿಟ್ಟು ಬರುತ್ತಿದ್ದುದು ನಿಜ. ಈ ಅಪ್ಪ ಇಲ್ಲದಿದ್ದರೆ ಎಷ್ಟು ಹಾಯಾಗಿರಬಹುದಾಗಿತ್ತು! ಎಂದೂ ಅವನು ನೆನೆಸದೆ ಇಲ್ಲ. ಆದರೆ ಆ ತಂದೆ ನಿಜವಾಗಿಯೂ ಇಲ್ಲವಾದಾಗ, ಅವನ ಹೃದಯ ಭವಿಷ್ಯವನ್ನೆದುರಿಸಲಾರದೆ ಜರ್ಜರಿತವಾಗಿತ್ತು.

ಹೆಗಡೆ ಮಗನ ವಿಷಯದಲ್ಲಾಗಲಿ ಹೆಂಡತಿಯ ವಿಷಯದಲ್ಲಿಯಾಗಲಿ ಎಂದೂ ಪ್ರೀತಿ ತೋರಿಸಿದವರಲ್ಲ. 'ಅಪ್ಪನಿಗೆ ನನ್ನ ಮೇಲೆ ಅಕ್ಕರೆಯೇ ಇಲ್ಲವೇನೋ?' ಹಾಗಾದರೆ ಇನ್ನು ಯಾರ ಮೇಲೆ? ಆಸ್ತಿಯನ್ನೆಲ್ಲಾ ದಾನಧರ್ಮ ಮಾಡುತ್ತೇನೆ-ಎಂದು ಎಷ್ಟೋ ಸಾರೆ ಹೆಗಡೆ ಅಂದಿದ್ದರು. ಈಗಾಗಲೇ ಮಾಡಿರುವರೋ ಏನೋ! ಮಾಡಲಿ. ಅವರು ಸಂಪಾದಿಸಿದ ಒಂದು ಕಾಸೂ ನನಗೆ ಬೇಡ. ಇನ್ನಾದರೂ ನನ್ನ ಕಾಲಮೇಲೆ ನಾನು ನಿಂತುಕೊಳ್ಳಲು ಕಲಿಯಬೇಕು.

ತಂದೆ ಮಲಗುತ್ತಿದ್ದ ಮಂಚ ಖಾಲಿಯಾಗಿತ್ತು. ಕಪಾಟಿನೊಳಗೆ ಕುಳಿತಿದ್ದ ನೂರಾರು ಶೀಷೆಗಳು ಮೌನ ತಳೆದಿದ್ದವು; ದುಃಖಿಸುತ್ತಿದ್ದುವು. ಅಲ್ಲಿಂದ ನರಹರಿಯ ದೃಷ್ಟಿ ನೀಲಿಯ ತಿಜೋರಿಯತ್ತ ಹರಿಯಿತು.

ಅಪ್ಪ ಬದುಕಿದ್ದಾಗ ಅದನ್ನು ತಾನೆಂದೂ ಮುಟ್ಟುವಹಾಗಿರಲಿಲ್ಲ.

ನರಹರಿ ಅದರ ಬಾಗಿಲು ತೆರೆದು ನೋಡಿದ.

ಹಲವಾರು ಕಾಗದಪತ್ರಗಳ ಮೇಲ್ಗಡೆ ಹೊಚ್ಚಹೊಸತೊಂದು ಕವರು. ಇನ್‌ಶ್ಯೂರೆನ್ಸ್ ಪಾಲಿಸಿಯೊಂದು ಐವತ್ತು ಸಾವಿರಕ್ಕೆ! ಎಷ್ಟು ಕಾಲವಾಯಿತು ಇದನ್ನು ಮಾಡಿಸಿ? ಒಂದೇ ವಾರ. ಎಲ್ಲಿ? ಸರದೂರಿಗೆ ಒಬ್ಬರೇ ಹೋಗಿದ್ದ ತಂದೆ ಮಾಡಿಸಿದ್ದು, ಅದರ ಜೊತೆ ಇನ್ನೊಂದು ಲಕೋಟೆ. ಸರದೂರಿನ ಶ್ರೀಮಂತ ಸಂಜೀವಯ್ಯನವರ ಕಾಗದ. ತಮ್ಮ ಮಗಳನ್ನು ನರಹರಿಗೆ ಕೊಡಲು ಒಪ್ಪಿ ಬರೆದುದು.

ಮತ್ತೂ ಹುಡುಕಿದಾಗ ತಂದೆಯ ಕೈ ಬರಹವಿದ್ದ ಕಾಗದವೊಂದು ಸಿಕ್ಕಿತು.

ನರಹರಿ- ನನ್ನ ಆಯುಸ್ಸು ಯಾವತ್ತಿಗೆ ಮುಗಿಯುವುದೋ ಹೇಳಲಾರೆ. ಅಂಗಡಿ ನಿನ್ನದು. ಐವತ್ತು ಸಾವಿರದ್ದು ಹಳೆಯ ಇನ್‌ಷ್ಯೂರೆನ್ಸ್ ಪಾಲಿಸಿ. ಹೊಸದು ಐವತ್ತು ಸಾವಿರದ್ದು, ನಿನಗಾಗಿ. ಸಂಜೀವಯ್ಯನವರ ಮಗಳನ್ನು ಲಗ್ನವಾಗು. ನಿನಗೆ ಒಳ್ಳೆಯದಾಗುತ್ತದೆ. ನಿನ್ನ ಭವಿಷ್ಯ ಭದ್ರವಾಗಲಿ ಎಂದು ಇಷ್ಟೆಲ್ಲಾ ಮಾಡಿದೇನೆ — ಹೆಗಡೆ.

ನರಹರಿಯ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತ್ತು. ತನ್ನ ತಂದೆ ಪ್ರೀತಿವಿಶ್ವಾಸಗಳಿಗೆ ಎಡೆಯಿಲ್ಲದ ಕ್ರೂರ ಹೃದಯ — ಎಂದು ಕೊಂಡಿದ್ದೆನಲ್ಲ! ಅವನ ಅಳಲಿಗೆ 'ಭರತ' ಬಂತು.



ಜ್ಯೋತಿಷಿ :

**ಶ್ರೀ ಕೃಷ್ಣಶಾಸ್ತ್ರಿ ಭಿಡೆ**

ಭವಿಷ್ಯ ಕಥನ ಆಫೀಸ :

ಮನೆ ನಂಬರ ೨೮೮೦,
( ಸಿಟಿ ಪೋಲೀಸ ಸ್ಟೇಶನ ಎದುರಿಗೆ)
**ಖಡೇಬಾಜಾರ, ಬೆಳಗಾವಿ**

# ವರ್ಷಭವಿಷ್ಯ

**ಶಕೆ ೧೮೮೫ ಕಾರ್ತಿಕ ಶುದ್ಧ ಪ್ರತಿಪದೆ ರವಿವಾರದಿಂದ ಶಕೆ ೧೮೮೬ ಆಶ್ವಿನ ಬಹುಳ ಅಮಾವಾಸ್ಯೆ ಬುಧವಾರ ಅಂದರೆ ೧೯೬೩ ನೇ ಇಸ್ವಿಯ ನವೆಂಬರ ೧೭ ರಿಂದ ೧೯೬೪ ನವೆಂಬರ ೪ ರ ವರೆಗೆ ಒಂದು ವರ್ಷದ ಭವಿಷ್ಯ.**

( ಈ ದೀಪಾವಳಿಯಿಂದ ಮುಂದಿನ ದೀಪಾವಳಿಯು ವರೆಗೆ)

**ಸೂಚನೆ:—** ಈ ವರ್ಷಭವಿಷ್ಯವು ಸ್ಥೂಲಮಾನದ್ದು. ಅವರವರ ಜನ್ಮಕುಂಡಲಿಯ ಮೇಲಿಂದ ಭವಿಷ್ಯವನ್ನು ಹೇಳಿದರೆ ಮಾತ್ರ ಅದು ಪೂರ್ಣವಾಗಿ ಸತ್ಯವಾಗಿ ಪರಿಣಮಿಸುವದು. ಆದರೂ ಈ ಭವಿಷ್ಯದಿಂದ ಆಯಾ ರಾಶಿಯುವರಿಗೆ ಆಗಬಹುದಾದ ದುಷ್ಟ-ಸುಷ್ಟ ಪರಿಣಾಮಗಳ ಕಲ್ಪನೆ ಮಾತ್ರ ನಿಶ್ಚಿತವಾಗಿ ಬರುವುದು. ಜನ್ಮರಾಶಿಯಂತೆ ಜನ್ಮಲಗ್ನದಿಂದಲೂ ಭವಿಷ್ಯವನ್ನು ಹೇಳಿದರೆ ಅದು ಹೆಚ್ಚು ನಿಜವಾಗಿ ಪರಿಣಮಿಸಿದ್ದು ಕಂಡುಬರುವದು.

## ಮೇಷ

ಈ ವರ್ಷ ಈ ರಾಶಿಯುವರಿಗೆ ಬಹುಶಃ ಎಲ್ಲ ವಿಷಯುಗಳಲ್ಲಿ ಸುಖ ಮತ್ತು ಭಾಗ್ಯ ವರ್ಧಕವಾಗಿದ್ದು ಅದರ ಸ್ಪಷ್ಟ ಲಕ್ಷಣಗಳು ಮಾರ್ಚ ೧೪ ರಿಂದ ಕಾಣಹತ್ತುವವು ಎಂಬಲ್ಲಿ ಸಂದೇಹವಿಲ್ಲ.

ಈ ರಾಶಿಯು ಜನರ ಆರೋಗ್ಯದ ಬಗ್ಗೆ ಮಾರ್ಚ ೧೪ ರ ವರೆಗೆ ಇರುವ ದ್ವಾದಶ ಗುರುವಿನಿಂದ ಕಿರುಕಳ ಸ್ವರೂಪದ್ದಾದರೂ ಮೇಲಿಂದ ಮೇಲೆ ಕ್ಲೇಶವಾಗುವ ಯೋಗವಿದ್ದರೂ ಗಂಡಾಂತರದ ಅಂಜಿಕೆ ಮಾತ್ರ ಸ್ವಲ್ಪೂ ಇಲ್ಲ. ಅರ್ಥಾತ್ ಪ್ರಥಮ ಗುರು ಬಂದ ಬಳಿಕ ಅಂದರೆ ಮೇಲಿನ ಅವಧಿಯ ನಂತರ ಆರೋಗ್ಯಚೆನ್ನಾಗಿ ಉಳಿಯುವದು ಮತ್ತು ಒಳ್ಳೆ ಉತ್ಸಾಹದಿಂದಿದ್ದು ಆನಂದ ಸಾಗರದಲ್ಲಿ ನಲಿದಾಡುವಿರಿ. ಅವಾಂತರ ವಿಷಯುಗಳಲ್ಲಿ ಆವಶ್ಯಕವಾದ ದೇಹಸುಖಕ್ಕೆ ನವಂಬರ ೨೬ ರಿಂದ ಮಾರ್ಚ ೨೦, ಎಪ್ರಿಲ ೨೮ ರಿಂದ ಜೂನ ೭, ಜುಲೈ ೨೦ ರಿಂದ ಸಪ್ಟಂಬರ ೫ ಮತ್ತು ೨೮ ಅಕ್ಟೋಬರದಿಂದ ಮುಂದಿನ ಅವಧಿಯೆಲ್ಲ ಬಹಳ ಅನುಕೂಲವಿರುವದು.

ಹೆಂಡತಿಯು ಆರೋಗ್ಯ ಜಾನೇವರಿ ೨೮ರ ವರೆಗೆ ಇರುವ ಚತುರ್ಥ ಶನಿಯಿಂದ ಸ್ವಲ್ಪ ಕಿರಿಕಿರಿಯುದಾಗಿದ್ದರೂ ಮುಂದೆ ಪಂಚಮ ಶನಿ ಬಂದ ಬಳಿಕ ಬಹಳ ಸುಧಾರಿಸುವದು ಮತ್ತು ಮನೆತನದ ವಿಷಯುಗಳಲ್ಲಿ ಉಂಟಾಗುವ ಸ್ವಲ್ಪ ಮತಭೇದವನ್ನು ಬಿಟ್ಟುಗೊಟ್ಟರೆ ಉಳಿದ ಎಲ್ಲ ವಿಷಯುಗಳಲ್ಲಿ ಉಭಯುತರಲ್ಲಿ ಮತೈಕ್ಯ ಮತ್ತು ಮನಃಸಮ್ಮಿಳನ ಉಳಿಯುವದು ಮತ್ತು ಈ ವರ್ಷದಲ್ಲಿ ಉಭಯುತರ ಸಹವಾಸದಲ್ಲಿ ಸಹಸಾ ವ್ಯತ್ಯಯು ಬರುವದಿಲ್ಲ. ಅದರಂತೆಯೇ ಪಂಚಮಶನಿಯಿಂದ ಸಾಂಸಾರಿಕ ಸುಖವೂ ಸುಧಾರಿಸುವದು ಮತ್ತು ಮಾರ್ಚ ೧೪ ರಿಂದ ಬರುವ ಪ್ರಥಮಗುರುವಿನಿಂದ ಕೆಲವು ವಿಷಯುಗಳಲ್ಲಿ ಅಪರಿಮಿತ ಸಮಾಧಾನವಾಗುವದು. ಮನೆಯುಲ್ಲಿ ಬಹುತರ ಜನ ನಿಮ್ಮ ಮಾತಿಗೆ ಬೆಲೆ ಕೊಡುವರು. ಆದರೆ ಬಂಧುಗಳು ಮಾತ್ರ ಕೆಲ ಸಮಯು ಅದನ್ನು ಮೀರಿ ನಡೆಯುವರು. ಇದಕ್ಕೆ ಈ ವರ್ಷ ಇರುವ ತೃತೀಯು ರಾಹು ಕಾರಣನು.

ಅದೇ ರೀತಿಯಾಗಿ ಈ ರಾಶಿಯುವರಲ್ಲಿ ಯಾರ-ದಾದರೂ ಮದುವೆಯಾಗುವದಿದ್ದರೆ ಅದಾಗುವಂತೆ ಈ ವರ್ಷ ಗುರುಬಲವಿದೆ, ಅಂದರೆ ಮಾರ್ಚ ೧೪ ರಿಂದ ಬರುವ ಪ್ರಥಮಗುರುವಿನಿಂದ ಬಾಶಿಂಗಬಲ ತೀವ್ರವಿದೆ. ಆನಂತರ ಅದು ಅಲ್ಪಾಯಾಸದಿಂದ ಕೂಡಿಬರುವುದು ಮತ್ತು ಕೂಡಲೆ ನಿರ್ವಿಘ್ನವಾಗಿ ವಿವಾಹವಾಗಿಹೋಗುವುದು. ವಧು ಮತ್ತು ವರ ಸುಬುದ್ಧ ಮತ್ತು ಅನುರೂಪ ಇರುವರು.

ನಿಮ್ಮ ಮಕ್ಕಳಲ್ಲಿ ಯಾರದಾದರೂ ವಿವಾಹವನ್ನು ಈ ಸಲ ಮಾಡುವದಿದ್ದರೆ ಅದಕ್ಕೂ ಪ್ರಥಮ ಗುರು ಬಂದನಂತರವೇ ಹೆಚ್ಚು ಅನುಕೂಲಯೋಗವಿದೆ. ಆಗಲೆ ಲಗ್ನ ಕೂಡಿಸಲಿಕ್ಕೆ ಪ್ರಯತ್ನಿಸು-ವುದು ಅತ್ಯವಶ್ಯ. ಆದರೆ ಕೂಡುವುದಕ್ಕೆ ಸ್ವಲ್ಪು ಕಿಟಿಕಿಟಿಯೆನಿಸುವುದು. ಆದರೆ ಒಮ್ಮೆ ನಿಶ್ಚಯವಾದ ನಂತರ ಅಡಚಣಿಯಿಲ್ಲದೆ ವ್ಯವಸ್ಥಿತವಾಗಿ ಲಗ್ನ ನಡೆದುಹೋಗುವುದು. ಸೊಸೆ ಇಲ್ಲವೆ ಅಳಿಯ ಎಲ್ಲರಿಗೂ ಪೂರ್ಣವಾಗಿ ಮನಸ್ಸಿಗೆ ಬರುವಂತಹರು ಮತ್ತು ಸುಗುಣಿಗಳು ಇರುವರು. ಮಕ್ಕಳಿಂದಲೂ ಈ ವರ್ಷ ಬಹಳ ಉತ್ತಮ ಸುಖ ಫೆಬ್ರುಅರಿ ನಂತರ ಸಿಕ್ಕಹತ್ತುವುದು. ಮತ್ತು ದಿಸೆಂಬರ ೧೫ ರಿಂದ ಮಾರ್ಚ ೧೩ ಮತ್ತು ಮೇ ೧೪ ರಿಂದ ಜುಲೈ ೧೪ ಈ ಅವಧಿಯುಲ್ಲಿ ಕೆಲವರ ಸಂಸ್ಮರಣೀಯು ಉನ್ನತಿಯಾಗುವುದು. ಮತ್ತು ಒಬ್ಬನಿಗೆ ಪರದೇಶ ಪ್ರವಾಸದ ಯೋಗವೂ ಇದೆ. ಬಹುಶಃ ಎಪ್ರಿಲ ೧೩ ರಿಂದ ಮೇ ೧೪ ಇಲ್ಲವೆ ಅಗಸ್ಟ ೧೬ ರಿಂದ ಸಪ್ಟಂಬರ ೧೬ ಈ ಅವಧಿಯುಲ್ಲಿ ಈ ಯೋಗ ಬರುವುದು. ಧಂದೆ-ಕೂಲಿಕಾರರಿಗೆ ಪ್ರಥಮ ಗುರು ಬರುವವರೆಗೆ ಅಂದರೆ ಮಾರ್ಚ ೧೪ ರ ವರೆಗೆ ಸ್ವಲ್ಪ ಮಾಂದ್ಯವೇ. ಅನಂತರ ಮಾತ್ರ ಒಳ್ಳೆ ಜೋರಿನಿಂದ ಪ್ರಗತಿಯಾಗಹತ್ತುವುದು. ಪ್ರತಿಷ್ಠೆ ಮತ್ತು ಪತ್ತು-ಬಹಳಷ್ಟು ಹೆಚ್ಚುವವು. ಅಂದಾಜಿಗಿಂತ ಬಹಳ ಹೆಚ್ಚು ದ್ರವ್ಯ ಸಿಕ್ಕುವುದು. ಔದ್ಯೋಗಿಕ ಕ್ಷೇತ್ರದಲ್ಲಿ ಬಹಳ ಯುಶಸ್ಸು ಸಿಕ್ಕಿದ್ದು ವರ್ಷಾಂತ್ಯದಲ್ಲಿ ಕಂಡುಬರುವುದು. ಏಕೆಂದರೆ ಇದೇ ಗುರು ನವಮ ಅಂದರೆ ಭಾಗ್ಯಸ್ಥಾನದ ಸ್ವಾಮಿಯಾಗಿದ್ದು ಪ್ರಥಮಸ್ಥಾನಕ್ಕೆ ಬಂದ ಬಳಿಕ ಅವನ ಪೂರ್ಣದೃಷ್ಟಿ ಭಾಗ್ಯಸ್ಥಾನದ ಮೇಲೆಬೀಳುವದು. ಅಲ್ಲದೆ ಜನೆವರಿ ೨೮ ರಿಂದ ಲಾಭೇಶ ಶನಿ ಇವನೂ ೧೧ ನೆಯದಕ್ಕೆ ಅಂದರೆ ಲಾಭಸ್ಥಾನಕ್ಕೆ ಬರುವನು. ಅಂತೆಯೇ ಈ ವರ್ಷ ಭರಭರಾಟಿಯಿಂದ ಲಾಭವಾಗುವುದು.

ನೋಕರರಿಗೂ ಮೇಲಿನಂತೆಯೇ ಈ ವರ್ಷ ಅನುಭವವಾಗುವುದು. ಅನೇಕರಿಗೆ ಎಪ್ರಿಲ ೨೮ ರಿಂದ ಜೂನ ೭ ಇಲ್ಲವೆ ಜುಲೈ ೨೦ ರಿಂದ ಸಪ್ಟೆಂ-ಬರ ೫ ಈ ಅವಧಿಯುಲ್ಲಿ ಮೇಲಿನ ಗ್ರೇಡೂ ಸಿಕ್ಕುವುದು. ಮತ್ತು ಬಗೆಬಗೆಯಾಗಿ ಉತ್ಕರ್ಷವಾಗುವುದು. ಅಶಕ್ಯ ಅಥವಾ ದುರ್ಘಟವೆನಿಸಿದಂಥ ಸಂಗತಿಗಳೂ ಅಲ್ಪಾಯಾಸದಿಂದ ಯುಶಸ್ವಿಯಾಗುವವು. ಮತ್ತು ವರ್ಷವಿಡೀ ಇರುವ ತೃತೀಯು ರಾಹುವಿನಿಂದ ಯೋಜಿಸಿದ ಪ್ರತಿಯೊಂದು ಕಾರ್ಯದಲ್ಲಿ ಎಣಿಸಿದಷ್ಟು ಯುಶಸ್ಸು ಸಂಪಾದಿಸುವೆನೆಂಬ

ಆತ್ಮವಿಶ್ವಾಸವೂ ಉಳಿಯುವುದು. ವಿಶೇಷವಾಗಿ ನವಂಬರ ೨೬ ರಿಂದ ಮಾರ್ಚ ೨೦, ಜುಲೈ ೨೦ ರಿಂಧ ಸಪ್ಟಂಬರ ೫ ಮತ್ತು ಅಕ್ಟೋಬರ ೨೮ ರ ನಂತರದ ಕಾಲ ಭಾಗ್ಯಕ್ಕೆ ಬಹಳ ಅನುಕೂಲವಿದೆ. ತುಂಬ ಲಾಭ ಮತ್ತು ವಿಶೇಷ ಪ್ರತಿಷ್ಠೆ ಈ ಅವಧಿಯಲ್ಲಿ ಸಿಕ್ಕುವುವು. ಕೈಕೆಳಗಿನ ನೋಕರ ಚಾಕರರು ಜನೆವರಿ ೨೮ ರ ವರೆಗೆ ಬೇಕೆಂತಲೇ ಚುಕಾರತಟ್ಟುಗಳಂತೆ ಮನಸ್ವೀ ವರ್ತಿಸುವರು. ವೈಗಳ್ಳರಾಗುವರು. ಅನಂತರ ಮಾತ್ರ ಒಳ್ಳೆ ವಿನಮ್ರರಾಗಿದ್ದುಕೊಂಡು ಕೆಲಸ ಮಾಡುವರು. ನಿಮ್ಮ ಹಿತವನ್ನು ಸಾಧಿಸುವರು. ಮಾರ್ಚ ೧೪ ರ ನಂತರ ಯಾತ್ರೆಗಾಗಿ ಇಲ್ಲವೆ ಮಂಗಲಕಾರ್ಯಕ್ಕಾಗಿ ಬಹಳ ದೂರದ ಪ್ರವಾಸ ಸಂಭವಿಸುವುದು. ಆದರೆ ಫೆಬ್ರುಅರಿ ನಂತರದಿಂದ ಆಪ್ತರು ಮತ್ತು ಮಿತ್ರರು ಅತ್ಯಂತ ಪ್ರೀತಿಯಿಂದ ನಡೆಯುಹತ್ತುವರು. ಪ್ರಥಮಗುರುವಿದ್ದಾಗ ಬಂಧುಗಳ ಮತ್ತು ಏಕಾದಶ ಶನಿಯಿಂದ ಮಿತ್ರರ ಉನ್ನತಿ ಬಹಳಾಗುವುದು. ಮಾರ್ಚ ೧೪ ರಿಂದ ಜುಲೈ ೨೪ ರ ವರೆಗೆ ರೋಖ ಇಲ್ಲವೆ ಕೆಲವು ಉಚ್ಚ ವಸ್ತುಗಳ ಸಂಗ್ರಹದ ಸಂಭವವಿದೆ. ಅನೇಕರಿಗೆ ನವಂಬರ ೨೬ ಕ್ಕಿಂತ ಮೊದಲು ಆದರೆ ಕೆಲವರಿಗೆ ಜೂನ ೭ ರಿಂದ ಜುಲೈ ೨೦ ರ ಅವಧಿಯಲ್ಲಿ ಮೂಲಗ್ರಹಬಲಾನುಸಾರ ಗುಪ್ತ ಇಲ್ಲವೆ ಅಕಲ್ಪಿತ ಲಾಭವೂ ಆಗುವುದು. ವಾಹನಸುಖ ಬಹಳ ಉತ್ತಮ ಸಿಕ್ಕುವುದು.



ದಾವೆ, ಫಿರ್ಯಾದಿ ಇಲ್ಲವೆ ಖಾಸಗಿ ಸ್ಪರ್ಧೆಗಳಲ್ಲಿ ದ್ವಾದಶ ಗುರು ಇರುವ ವರೆಗೆ ಅಪಯಶಸ್ಸಿನ ಅಂಜಿಕೆ ಇದೆ. ಆದರೆ ಪ್ರಥಮ ಗುರುಬಂದ ಬಳಿಕ ಒಳ್ಳೆಯ ಯಶಸ್ಸು ಸಿಕ್ಕಹತ್ತುವದು. ಮಾರ್ಚ ೨೯ ರಿಂದ ಜೂನ ೨೦ ಜುಲೈ ೫ ರಿಂದ ೨೩ ಈ ಅವಧಿಯಲ್ಲಿ ಯಶಸ್ಸು ಸಿಕ್ಕಹತ್ತಿ ಶತ್ರುಗಳ ಪೂರ್ಣ ಫಜೀತಿ ಆಗುವುದು.

ಈ ರಾಶಿಯ ಗರ್ಭವತಿ ಸ್ತ್ರೀಯರಲ್ಲಿ ಮಾರ್ಚ ೧೪ ಕ್ಕಿಂತ ಮೊದಲು ಹಡೆದವರಿಗೆ ಬಹುಶಃ ಹೆಣ್ಣು ಹುಟ್ಟುವುದು. ಪ್ರಸೂತಿಕಷ್ಟವೂ ಅಲ್ಪ ಸ್ವಲ್ಪ ಎನಿಸುವದು. ಅನಂತರ ಹಡೆದರೆ ಸ್ವಲ್ಪವೂ ಕಷ್ಟವೆನಿಸದೆ ಪುತ್ರಲಾಭವೂ ಆಗುವುದು. ಆದರೆ ಯಾವಾಗ ಹಡೆದರೂ ಹುಟ್ಟುವ ಕೂಸು ದೀರ್ಘಾಯು ಮತ್ತು ಸಶಕ್ತ ಉಳಿಯುವುದು.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಮಾರ್ಚ ೧೪ಕ್ಕಿಂತ ಮೊದಲು ಆದರೆ ಅವರು ಪಾಸಾಗುವ ಬಗ್ಗೆ ಬಹಳಷ್ಟು ಖಾತ್ರಿ ಹಿಡಿಯಬೇಕಾಗಿಲ್ಲ. ಆ ನಂತರ ಪರೀಕ್ಷೆ ಕಟ್ಟಿದವರು ಖಾತ್ರಿಯಿಂದ ಪಾಸಾಗುವರು. ಅಷ್ಟೇ ಅಲ್ಲ ಎಪ್ರಿಲ ೧೩ ರಿಂದ ಜುಲೈ ೧೬ ಇಲ್ಲವೆ ಅಗಸ್ಟ ೧೬ ರಿಂದ ಸಪ್ಟಂಬರ ೧೬ ಈ ಅವಧಿಯಲ್ಲಿ ಪರೀಕ್ಷೆ ಕಟ್ಟಿದವರು ವರ್ಗವನ್ನೂ ಸಂಪಾದಿಸುವರು.

# ವೃಷಭ

ಒಟ್ಟಾರೆ ಈ ವರ್ಷ ಈ ರಾಶಿಯುವರಿಗೆ ಶಾರೀರಿಕ ಮತ್ತು ಪ್ರಾಪಂಚಿಕ ದೃಷ್ಟಿಯಿಂದ ಅಷ್ಟಕಷ್ಟೇ ಇದ್ದರೂ ಔದ್ಯೋಗಿಕ ವಿಕಾಸ ಮತ್ತು ಆರ್ಥಿಕ ಭರಭರಾಟೆ ಬಹಳ ಉತ್ತಮವಿದೆ. ಇದು ಖಾತ್ರಿಯಿಂದ ಪ್ರತ್ಯಯಕ್ಕೆ ಬರುವದು.

ಈ ವರ್ಷ ಇರುವ ಅಷ್ಟಮ-ಕೇತುವಿನಿಂದ ಈ ರಾಶಿಯುವರ ಆರೋಗ್ಯ ಕಿರಿಕಿರಿಯದೆ ; ಯಾವ ವಿಕಾರದಿಂದ ಪ್ರಕೃತಿ ಕೆಟ್ಟಿದೆಂಬುದು ವೈದ್ಯರಿಗಾಗಲಿ; ಡಾಕ್ಟರರಿಗಾಗಲಿ ತಿಳಿಯುವದಿಲ್ಲ. ಕೆಲವರಿಗೆ ಭೂತಬಾಧೆ ಇಲ್ಲವೆ ಮಾಟಮಂತ್ರದಂಥ ಅದೃಶ್ಯ ಉಪದ್ರವ ಕೂಡ ಆಗುವದು. ಆದರೂ ಕೇತು ತನ್ನ ಉಚ್ಚರಾಶಿಯಾದ ಧನುವಿನಲ್ಲಿಯೇ ಇರುವದರಿಂದ ಗಂಡಾಂತರದ ಅಂಜಿಕೆಯಿಲ್ಲ. ಆದರೂ ಕ್ಲೇಶಪರಿಹಾರಾರ್ಥ ಕೇತುವಿನ ೧೭ ಸಾವಿರ ಮತ್ತು ಮಹಾಮೃತ್ಯುಂಜಯ ೧೧ ಸಾವಿರ ಜಪ ಮಾಡುವದು ಒಳಿತು. ಉಳಿದ ದೇಹಸುಖಕ್ಕೆ ಏಕಾದಶ ಗುರು ಇರುವ ವರೆಗೆ ಅಂದರೆ ಮಾರ್ಚ ೧೪ ರ ವರೆಗೆ ಬಹಳ ಸುಲಭ ಮತ್ತು ಅನಂತರ ಅವನು ೧೨ನೆಯುವನಾಗುವದರಿಂದ ಸ್ವಲ್ಪ ಕಷ್ಟ ಸಾಧ್ಯವಾಗುವುದು. ಅಂದರೆ ಮೊದಲು ಮನೋಭಂಗವಾಗಿ ಅನಂತರ ಮನೋರಥಸಿದ್ಧಿಯಾಗುವುದು. ಕೆಲ ಸಂಗತಿಗಳು ಸರಳವಿದ್ದರೂ ನಿಮ್ಮ ತಪ್ಪು ತಿಳುವಳಿಕೆಯಿಂದಲೆ ಜಟಿಲವಾಗಿ ಪರಿಣಮಿಸುವವು. ವಿಶೇಷವಾಗಿ ಈ ಬಗೆಯ ಯೋಗ ನವಂಬರ ೨೫ ರಿಂದ ಡಿಸೆಂಬರ ೧೮ ಮತ್ತು ಮಾರ್ಚ ೧ ರಿಂದ ಎಪ್ರಿಲ ೧ ಮತ್ತು ಅಕ್ಟೋಬರ ೨೪ರ ನಂತರದ ಅವಧಿಯಲ್ಲೆಲ್ಲ ಬಹಳ ಎನಿಸುವುದು. ೧೨ನೇ ಗುರು ಬಂದಾಗ ಸ್ವಭಾವ ವಿಚಿತ್ರವಾಗುವುದು.

ಅದರಂತೆಯೇ ಹೆಂಡತಿಯ ಆರೋಗ್ಯ ಜನೆವರಿ ೨೮ರ ನಂತರ ಶನಿ ೧೦ನೆಯುವನಾಗುವದರಿಂದ ಅಷ್ಟೊಂದು ಅನುಕೂಲವುಳಿಯುವದಿಲ್ಲ. ಉಷ್ಣದಿಂದ ಸ್ವಲ್ಪ ಕೆಡುವುದು ಮತ್ತು ದ್ವಾದಶಗುರು ಬಂದನಂತರ ಹೆಂಡತಿಯ ಸ್ವಭಾವ ಸಂಶಯದು ಮತ್ತು ಸಿಟ್ಟಿನದು ಆಗುವದು. ಏಕಾದಶ ಗುರು ಇದ್ದಾಗ ಉಭಯತರ ಮನಃಸಮ್ಮಿಳನ ಅನಂತರ ಅಂದರೆ ದ್ವಾದಶಗುರು ಬಂದನಂತರ ಮೇಲಿಂದ ಮೇಲೆ ಮತಭೇದವಾಗುವದರಿಂದ ಉಭಯತರ ಮನಸ್ಸು ವ್ಯಗ್ರವಾಗುವುದು. ಅದೇ ರೀತಿಯಾಗಿ ಈ ರಾಶಿಯುವರು ಈ ವರ್ಷ ಮದುವೆ ಮಾಡಿಕೊಳ್ಳುವದಿದ್ದರೆ ಏಕಾದಶಗುರು ಇರುವ ವರೆಗೆ ಅಲ್ಪಾಯಾಸದಿಂದ ಕೂಡಿಬರುವುದು. ಆದರೆ ಮುಂದೆ ಮಾತ್ರ ಅವನು ೧೨ನೆಯುವನು ಬರುವದರಿಂದ ಮದುವೆ ಕೂಡಿಬರುವದು ಕಠಿನವೇ. ಅದರಲ್ಲಿಯೂ ಕೂಡಿಬಂದರೆ ಮೊದಲು ಬಹಳಷ್ಟು ಅಡಚಣಿಗಳನ್ನು ಸಹಿಸಬೇಕಾಗುವುದು. ಆದರೆ ವಧೂ ಮತ್ತು ವರ ಅನುರೂಪ ಇರುವರು. ಆದರೆ ಒಟ್ಟಾರೆ ಇಡೀ ವರ್ಷ ಇರುವ ದ್ವಿತೀಯ ಅಂದರೆ ಕುಟುಂಬಸ್ಥಾನದ ರಾಹುವಿನಿಂದ ಪ್ರಾಪಂಚಿಕ ಸುಖ ಅಷ್ಟಕಷ್ಟೆ. ದ್ವಾದಶಗುರುವಿದ್ದಾಗ ಎಷ್ಟೋ ಜನ ವಿಭಕ್ತರಾಗಿ ಉಳಿಯಬೇಕಾದ ಪ್ರಸಂಗವೂ ಬರುವದು.

ಅದರಂತೆಯೇ ನಿಮ್ಮ ಮಕ್ಕಳಲ್ಲಿ ಯಾರದಾದರೂ ಮದುವೆಮಾಡುವದಿದ್ದರೆ ಮಾರ್ಚ ೧೪ರ ವರೆಗೆ ಅದಕ್ಕೆ ಹೆಚ್ಚು ಬಾಶಿಂಗಬಲವಿದೆ. ಮುಂದೆ ಅಷ್ಟೊಂದು ಬಾಶಿಂಗಬಲವಿಲ್ಲ. ೧೦ನೇ ಶನಿ ಮತ್ತು ೧೧ನೇ ಗುರು ಹೀಗೆ ಗ್ರಹಯೋಗವಿರುವ ಕಾಲದಲ್ಲಿ ಅಂದರೆ ಜನವರಿ ೨೮ ರಿಂದ ಮಾರ್ಚ ೧೪ರ ಅವಧಿಯಲ್ಲಿ ಅಲ್ಪಾಯಾಸದಿಂದ ಮತ್ತು ಅಂದಾಜಿಗಿಂತ ಹೆಚ್ಚು ಉತ್ತಮ ಸ್ಥಳ ಸಿಕ್ಕುವ ಸಂಭವವಿದೆ. ಸೊಸೆ ಇಲ್ಲವೆ ಅಳಿಯ ಕಲ್ಪನೆಗಿಂತ ಹೆಚ್ಚು ಉತ್ತಮ. ಅದರಂತೆ ಎಲ್ಲರಿಂದಲೂ ಈ ವರ್ಷ ಒಳ್ಳೆ ಸುಖ ಸಿಕ್ಕುವುದು. ಅವರೂ ಅದರಂತೆ ನಡೆದುಕೊಳ್ಳುವರು. ಆದರೆ ದ್ವಾದಶ ಗುರುವಿದ್ದಾಗ ನಿಮಗೇ ಅವರ ಬೆಲೆ ಗೊತ್ತಾಗದೆ ಎಲ್ಲರ ಮನಸ್ಸನ್ನು ದುರುತ್ತರಗಳಿಂದ ನೋಯಿಸುವಿರಿ. ಅವರಲ್ಲಿ ಒಬ್ಬರಾದರೂ ಬಹಳ ಉತ್ಕರ್ಷಹೊಂದುವ ಯೋಗವಿದೆ. ಅಲ್ಲದೆ ಫೆಬ್ರುಅರಿ ೬ ರಿಂದ ಜೂನ ೨೫, ಜುಲೈ ೨ ರಿಂದ ಜುಲೈ ೨೩ ಮತ್ತು ಸಪ್ಟಂಬರ ೨೯ ರಿಂದ ಅಕ್ಟೋಬರ ೧೫ ಈ ಅವಧಿ ಪ್ರತಿಯೊಬ್ಬರಿಗೆ ಸ್ವಲ್ಪಾದರೂ ಪ್ರಗತಿಯುದ್ದೀನಿಸುವುದು.

ಧಂದೆ—ಕೂಲಿಕಾರರಿಗೆ ಏಕಾದಶ ಗುರುವಿರುವ ವರೆಗೆ ಒಳ್ಳೆ ಭರಭರಾಟಿ. ದಶಮಶನಿ ಬಂದ ಬಳಿಕ ಪ್ರತಿಯೊಂದರಲ್ಲಿ ಯಶಸ್ಸು ಮತ್ತು ವಿಸ್ತಾರ ವಾಗುವುದು. ದಶಮಶನಿ ಮತ್ತು ಏಕಾದಶಗುರು ಇದ್ದಾಗ ಅಂದರೆ ಜನೆವರಿ ೨೮ ರಿಂದ ಮಾರ್ಚ ೧೪ ಈ ಅವಧಿಯಲ್ಲಿ ಸಂಸ್ಮರಣೀಯವಾಗಿ ಉಳಿಯು ವಂಥ ಯಾವದೊಂದು ಭಾಗ್ಯವೃದ್ಧಿಯ ಘಟನೆ ಒದಗುವುದು. ಮದ ಬರುವಷ್ಟು ದ್ರವ್ಯಲಾಭ ಆದ ಅನುಭವ ಬರುವುದು. ನೂರರಲ್ಲಿ ಕನಿಷ್ಟ ೯೦ ಜನರಿಗಾದರೂ ಇದರ ಅನುಭವ ಬರುವದು. ಅವರು ಧಂದೆ ಮಾಡುವವರಿರಲಿ ಇಲ್ಲವೆ ನೋಕರ ರಿರಲಿ ಈ ಬಗೆಯ ಅನುಭವವಿರುವದು- ದ್ವಾದಶ ಗುರು ಬಂದಬಳಿಕವೂ ಲಾಭದಲ್ಲಿ ಸ್ವಲ್ಪವೂ ಕಡಮೆಯಾಗುವದಿಲ್ಲ. ತದ್ವಿರುದ್ಧವಾಗಿ ಈ ರಾಶಿ ಯುವರಿಗೆ ಈ ಗ್ರಹ ಅಷ್ಟಮ. ಈ ಗುಪ್ತ ಲಾಭಕಾರಕಸ್ಥಾನದ ಸ್ವಾಮಿಯಾಗಿರುವದರಿಂದ ಮತ್ತು ಅವನು ದ್ವಾದಶ ಸ್ಥಾನಕ್ಕೆ ಬಂದಬಳಿಕ ಅವನ ಪೂರ್ಣ ದೃಷ್ಟಿ ಅಷ್ಟಮ ಸ್ಥಾನದಲ್ಲಿ ಬೀಳು ವದು; ಪರಿಣಾಮವಾಗಿ ಅನೇಕರಿಗೆ ಸಟ್ಟಾ ಲಾಟರಿ, ಶಬ್ದಸ್ಪರ್ಧೆ, ಪ್ರಾಯಿಜಬಾಂಡ ಭೂಮಿ ಗತದ್ರವ್ಯ ಸಿಕ್ಕುವ, ಬಕ್ಷಿಸ ಇಲ್ಲವೆ ವಾರಸಾ ಇವೇ ಮೊದಲಾದ ಮಾರ್ಗಗಳಿಂದ ಬಹಳಷ್ಟು ಹಣ ಸಿಕ್ಕು ಪರಿಸ್ಥಿತಿ ಬಹಳಷ್ಟು ಸುಧಾರಿಸುವದು. ಆಕ ಸ್ಮಿಕ ಲಾಭವಾಗುವದು. ಧಂದೆಯುವರಿಗೆ ಜನವರಿ ೪ ರಿಂದ ಎಪ್ರಿಲ ೨೮, ಜೂನ ೭ ರಿಂದ ಜುಲೈ ೨೦ ಮತ್ತು ಸಪ್ಟಂಬರ ೫ ರಿಂದ ಅಕ್ಟೋಬರ ೨೦ ಈ ಅವಧಿ ಬಹಳ ಲಾಭದ್ದೆನಿಸುವದು.

ಆದರಂತೆಯೇ ನೋಕರರಿಗೆ ಡಿಸೆಂಬರ ೧ ರಿಂದ ಮಾರ್ಚ ೧೧ ರ ಅವಧಿಯಲ್ಲಿ ಮೇಲಿನ ಗ್ರೇಡು ಖಾತ್ರಿಯಿಂದ ಸಿಕ್ಕುವದು. ಬಹುಶಃ ಅದೇ ಕಾಲಕ್ಕೆ ಬದಲಿಯಾಗುವುದು ಇಲ್ಲವಾದರೆ ಕೆಲಸದ ಶಾಖೆಯಾದರೂ ಬದಲಾಗುವದು ನೋಕರರಿಗೆ ಒಳ್ಳೆ ಊರು ಸಿಕ್ಕುವದು ಆದರೆ ೧೨ ನೇ ಗುರು ಬಂದಾಗ ಎಲ್ಲರಿಗೂ ಬಹಳ ಹಣ ವೆಚ್ಚ ಮಾಡಬೇಕಾದ ಪ್ರಸಂಗ ಬರುವದು. ಆದರೆ ಅದನ್ನೆಲ್ಲ ಮುಳುಗುಗಂಟಾಗುವಂತೆ ಅನಿಷ್ಟ ಕಾರ್ಯಗಳಿಗಾಗಿ ಮಾಡುವ ಪ್ರಸಂಗ ತಂದುಕೊಳ್ಳ ಬಾರದು. ಇಷ್ಟ ಕಾರ್ಯಗಳಿಗಾಗಿಯೇ ಆ ಹಣ ವೆಚ್ಚವಾಗುವುದರಿಂದ ಮನಸ್ಸಿನಲ್ಲಿ ಸಮಾ ಧಾನವೇ ಇರುವುದು. ಕೈಕೆಳಗಿನ ನವಕರರು ೧೨ ನೇ ಗುರುವಿದ್ದಾಗ ಬಹಳ ತೊಂದರೆ ಕೊಡು ವರು. ದುಡ್ಡು ಬೇಕಾದಷ್ಟು ಬಂದರೂ ಸಂಗ್ರಹ ಮಾಡಲಿಕ್ಕೆ ಉಳಿಯಲಾರದು. ದೂರಕ್ಕಿಂತ ಸಮೀಪದ ಪ್ರವಾಸವೇ ಹೆಚ್ಚಿಗೆ ಆಗುವದು. ದಶಮ ಶನಿ ಬಂದ ಬಳಿಕ ಭೆಟ್ಟಿಯ ಕೆಲಸಗಳೆಲ್ಲ ಅನುಕೂಲವೆನಿಸುವವು. ಮತ್ತು ಏಕಾದಶ ಗುರು ಇರುವ ವರೆಗೆ ಉತ್ತಮ ಮಿತ್ರ ಸುಖ ದೊರೆಯು ವುದು. ದ್ವಾದಶ ಗುರು ಬಂದಾಗ ಅವರಲ್ಲಿ ಬಹಳ ಜನ ಅಷ್ಟೊಂದು ಚೆನ್ನಾಗಿ ನಡೆಯುವುದಿಲ್ಲ. ವಾಹನಗಳಿದ್ದರೆ ಅವುಗಳ ಸುಖಕ್ಕಿಂತ ತೊಂದ ರೆಯೇ ಹೆಚ್ಚು. ಅವುಗಳಿಗಾಗಿ ಹೆಚ್ಚು ಹಣವನ್ನು ವೆಚ್ಚ ಮಾಡಬೇಕಾಗುವುದು.

ದಾವೆ ಫಿರ್ಯಾದಿ ಸ್ಪರ್ಧೆಯ ಕೆಲಸಗಳಲ್ಲಿ ಜನೆ ವರಿ ೨೮ ರ ವರೆಗೆ ಅತಿ ಉತ್ತಮ ಮತ್ತು ಅನಂ ತರ ಮಾರ್ಚ ೧೪ ರ ವರೆಗೆ ಮಧ್ಯಮ ಹೀಗೆ ಯಶಸ್ಸು ಸಿಕ್ಕುವದು. ಅನಂತರ ಅಪಯಶಸ್ಸಿನ ಅಂಜಿಕೆ ಇದೆ.

ಮಾರ್ಚ ೧೪ ರೊಳಗಾಗಿ ಹಡೆಯುವ ಸ್ತ್ರೀ- ಯರಿಗೆ ಕಷ್ಟವೇ ಎನಿಸಲಾರದು. ಆದರೆ ಅನಂತರ ಹಡೆಯುವವರಿಗೆ ಗಂಡು ಹುಟ್ಟಿದರೆ ಬಹಳ ಕಷ್ಟ ವಾಗುವದು. ಹೆಣ್ಣು ಹುಟ್ಟಿದರೆ ಅದೇನೂ ಅನಿ ಸದು. ಆದರೆ ಈ ವರ್ಷ ಈ ರಾಶಿಯುವರಿಗೆ ಬಹುಶಃ ಹೆಣ್ಣು ಹುಟ್ಟುವವು. ಈ ರೀತಿ ಯೋಗ ವಿದೆ.

ಮಾರ್ಚ ೧೪ ರೊಳಗೆ ಪರೀಕ್ಷೆಯಾಗುವ ವಿದ್ಯಾರ್ಥಿಗಳು ಖಾತ್ರಿಯಿಂದ ಪಾಸಾಗುವರು. ಅಲ್ಲದೆ ಮಾರ್ಚ ೧೩ ರಿಂದ ೨೯ ಅಥವಾ ಸಪ್ಟೆಂಬರ ೨೯ ರಿಂದ, ಅಕ್ಟೋಬರ ೧೫ ಈ ಅವಧಿಯಲ್ಲಿ ಯಾರು ಪರೀಕ್ಷೆ ಕಟ್ಟುವರೋ ಅವರು ಬಹುಶಃ ಪಾಸಾಗುವರು.

# ಮಿಥುನ

ಸರ್ವಸಾಮಾನ್ಯವಾಗಿ ೯ ನೇ ಶನಿ ಬರು ವುದರಿಂದ ಸ್ವೈರ ಭಾಗ್ಯೋದಯುವಾಗ ಹತ್ತುವದು. ೧೧ ನೇ ಗುರು ಬಂದ ಬಳಿ ಕಂತೂ ಶುಕ್ಲಪಕ್ಷದ ಚಂದ್ರಮನಂತೆ ಅದು ದಿನದಿನಕ್ಕೆ ವೃದ್ಧಿಯಾಗುತ್ತ ಹೋಗು ವದು ಎಂಬದನ್ನು ಈ ರಾಶಿಯವರು ತಿಳಿದು ಕೊಳ್ಳತಕ್ಕದ್ದು.

ಈ ರಾಶಿಯುವರಿಗೆ ಜನೆವರಿ ೨೮ ರ ವರೆಗೆ ಇರುವ ಅಷ್ಟಮ ಶನಿಯಿಂದ ಪ್ರಕೃತಿಯಲ್ಲಿ ಏನಾ ದರೂ ತಕರಾರು ಇದ್ದದ್ದೇ. ಆದರೆ ಅನಂತರ ಮಾತ್ರ ೯ ನೆಯ ಶನಿ ಬರುವುದರಿಂದ ಪ್ರಕೃತಿ ಸುಧಾರಿಸುವದು. ಅದರಂತೆಯೇ ವರ್ಷವಿಡೀ ಜನ್ಮಸ್ಥ ಅಂದರೆ ಪ್ರಥಮ ರಾಹುವಿನಿಂದ ಪ್ರಕೃತಿ ಚೆನ್ನಾಗಿ ಉಳಿಯುವದು. ಏಕಂದರೆ ಇದು ರಾಹು ವಿನ ಉಚ್ಚ ರಾಶಿಯಾಗಿದೆ. ಅದರಂತೆಯೇ ನವಮ ಶನಿ ಬಂದಂದಿನಿಂದ ಮನಸ್ಸಿನಲ್ಲಿಯ ಎಲ್ಲ ಸಂಗತಿ ಗಳು ಅನಾಯಾಸವಾಗಿ ಸಾಧ್ಯವಾಗುವವು. ಮತ್ತು ೧೧ ನೇ ಗುರು ಬಂದ ನಂತರ ಅಂದರೆ ಮಾರ್ಚ ೧೪ ರ ನಂತರ ಕನಸುಮನಸಿನಲ್ಲಿಲ್ಲದ ಮತ್ತು ಎಲ್ಲ ರಿಗೂ ಆಶ್ಚರ್ಯವೆನಿಸುವಂತೆ ಒಳ್ಳೊಳ್ಳೆ ಕಾರ್ಯಗಳು ಅಕಸ್ಮಾತ್ತಾಗಿ ಸಾಧ್ಯವಾಗುವವು. ಅದರಿಂದ ನಿಮ್ಮ ಪ್ರಯತ್ನಕ್ಕಿಂತ ದೈವವೇ ನಿಮಗೆ ಹೆಚ್ಚು ಅನುಕೂಲವಾಗಿ ಪರಿಣಮಿಸುವದೆಂಬುದು ನಿಮಗೆ ಖಾತ್ರಿಯಾಗುವದು. ಆದರೆ ವರ್ಷಾರಂಭದಲ್ಲಿ ಈ ರಾಶಿಯ ಸ್ವಾಮಿಯಾದ ಬುಧನು ಆರನೇ ಅಂದರೆ ಅಶುಭ ಸ್ಥಾನದಲ್ಲಿರುವದರಿಂದ ಮತ್ತು ಶತ್ರು ಕ್ಷೇತ್ರದಲ್ಲಿರುವದರಿಂದ ನಿಮಗೆ ಸಿಕ್ಕುವ ಸುಖದ ಶಾಶ್ವತಿಯ ಬಗ್ಗೆ ನಿಮಗೆ ನಿರರ್ಥಕವಾಗಿ ಸಂಶಯ ಉಳಿಯುವದು.

ಈ ವರ್ಷ ಹೆಂಡತಿಯ ಆರೋಗ್ಯ ನವಂಬರ ೨೬ ರಿಂದ ಜನವರಿ ೪ ಮತ್ತು ಸಪ್ಟೆಂಬರ ೫ ರಿಂದ ಅಕ್ಟೋಬರ ೨೮ ಈ ಅವಧಿಯಲ್ಲಿ ಸ್ವಲ್ಪ ಕೆಡುವ ಸಂಭವವಿದೆ. ಆದರೆ ಉಳಿದ ಅವಧಿಯಲ್ಲಿ ಅದು ಚೆನ್ನಾಗಿಯೇ ಉಳಿಯುವುದು. ಮಾರ್ಚ ೧೪ರಿಂದ ಬರುವ ೧೧ ನೇ ಗುರು ಉಭಯತರಲ್ಲಿಯ ಪ್ರೇಮ ಮತ್ತು ಏಕನಿಷ್ಠೆಗೆ ಬಹಳಷ್ಟು ಅಡೆತಡೆಯನ್ನು ತರುವನು. ಅವಳು ಕೊಡುವ ಸಲಹೆ ಕೊನೆಗೆ ಅನುಭವದಿಂದ ಬಹು ಅಮೂಲ್ಯದ್ದೆನಿಸುವುದು.

ಅದರಂತೆಯೇ ಈ ರಾಶಿಯುವರು ಈ ವರ್ಷ ಲಗ್ನ ಮಾಡಿಕೊಳ್ಳುವುದಿದ್ದರೆ ಮಾರ್ಚ ೧೪ ರ ವರೆಗೆ ಅಲ್ಪ ಪ್ರಯಾಸದಿಂದ ಅನಂತರ ಅತಿ ಸರಳವಾಗಿ ಅದು ಕೂಡಿಬರುವುದು. ಇಂತು ಬಾಸಿಂಗಬಲವಿದೆ. ೧೦ ನೇ ಗುರುವಿದ್ದಾಗ ಆಗುವ ವಿವಾಹ ವಧೂ-ವರರಲ್ಲಿ ಬಹಳ ಇಜ್ಜೋಡು ಎನಿಸುವದು.(ನೋಡುವುದರಲ್ಲಿ ಮಾತ್ರ). ಆದರೆ ಏಕಾದಶ ಗುರು ಬಂದಾಗ ರೂಪ ಗುಣ ಮತ್ತು ಸ್ವಭಾವದಲ್ಲಿ ಅತ್ಯಂತ ಸಾಮ್ಯವಿ- ದ್ದದ್ದು ಕಂಡುಬರುವುದು.

ಅದರಂತೆಯೇ ನಿಮ್ಮ ಮಕ್ಕಳ ಮದುವೆ ಈಗ ಮಾಡುವದಿದ್ದರೆ ಅದಕ್ಕೂ ಮಾರ್ಚ ೧೪ ರ ನಂತ-

ರವೇ ಒಳ್ಳೇ ಬಾಸಿಂಗಬಲವಿದ್ದರೂ ಕೂಡುವಾಗ ಸ್ವಲ್ಪ ತೊಂದರೆಯೆನಿಸಬಹುದು. ಆದರೆ ಮುಂದೆ ಮಾತ್ರ ಯಾವುದೇ ಬಗೆಯ ಕಿಟಿಕಿಟಿಯಿಲ್ಲದೆ ವ್ಯವಸ್ಥಿತವಾಗಿ ಲಗ್ನವಾಗುವುದು. ಮತ್ತು ಸೊಸೆ ಇಲ್ಲವೆ ಅಳಿಯ ಎಲ್ಲರಿಗೂ ಒಪ್ಪಿಗೆಯಾಗುವಂತಹರಿರುವರು. ಅದರಂತೆ ಮಕ್ಕಳ ಉನ್ನತಿಗೂ ೯ ನೇ ಶನಿ ಬಂದ ಬಳಿಕವೇ ಅನುಕೂಲವಾಗುವುದು. ಹನ್ನೊಂದನೇಗುರು ಬಂದ ನಂತರವಂತೂ ಅದೊಳ್ಳೆ ವಿಕಾಸ ಹೊಂದುವುದು ಮತ್ತು ಒಬ್ಬಿಬ್ಬರಂತೂ ಬಹಳ ಕೀರ್ತಿವಂತರಾಗುವರು. ಮಕ್ಕಳೆಲ್ಲ ಒಳ್ಳೇ ಪ್ರೇಮದಿಂದ ಮತ್ತು ಆದರದಿಂದ ನಡೆದುಕೊಳ್ಳುವರು. ಅವರಲ್ಲೊಬ್ಬನಿಗೆ ಪರದೇಶ ಪ್ರವಾಸದ ಯೋಗವೂ ಇದೆ. ಮತ್ತು ಅದು ಬಹುಶಃ ಮಾರ್ಚ ೧ ರಿಂದ ೨೯ ಇಲ್ಲವೆ ಜುಲೈ ೨೪ ರಿಂದ ಸಪ್ಟಂಬರ ೧ ಈ ಮಧ್ಯಂತರ ಅವಧಿಯಲ್ಲಿ ಒದಗಿಬರುವುದು. ಹೆಣ್ಣುಮಕ್ಕಳಿಗಿಂತ ಗಂಡುಮಕ್ಕಳ ಉನ್ನತಿಗೆ ಈ ವರ್ಷ ಹೆಚ್ಚು ಅನುಕೂಲವಿದೆ.

ಧಂದೆ-ಕೂಲಿಯವರಿಗೆ ಈ ವರ್ಷ ಬಹಳ ಭಾಗ್ಯೋದಯಕಾರಕವಿದೆ. ೯ ನೇ ಶನಿ ಬಂದಬಳಿಕವೇ ಅದು ಪ್ರತ್ಯಯಕ್ಕೆ ಬರಹತ್ತುವುದು. ಮತ್ತು ಏಕಾದಶ ಗುರು ಬಂದಂದಿನಿಂದ ದ್ರವ್ಯಲಾಭವಾಗಹತ್ತುವದು. ಮತ್ತು ಉಚ್ಚ ಮತ್ತು ಮೂಲ್ಯವುಳ್ಳ ವಸ್ತುಗಳು ಬಹಳ ಕಡಿಮೆ ಬೆಲೆಗೆ ಸಿಕ್ಕುವವು.

ನೋಕರದಾರರಿಗೂ ೯ನೇ ಮತ್ತು ೧೦ನೇ ಗುರು ಇರುವಾಗ ಅಂದರೆ ಜನವರಿ ೨೮ ರಿಂದ ಮಾರ್ಚ ೧೪ ರೊಳಗೆ ಮೇಲಿನ ಗ್ರೇಡು ಖಾತ್ರಿಯಿಂದ ಸಿಕ್ಕುವುದು. ೧೧ ನೇ ಗುರು ಬಂದ ಮೇಲೆ ಲಾಭದ ಪ್ರಮಾಣ ಬಹಳ; ಬಗೆಬಗೆಯಾಗಿ ಅದು ಹೆಚ್ಚುವದು. ಹಿಂದಿದ್ದ ಆರ್ಥಿಕ ವಿವಂಚನೆ ತ್ವರಿತವಾಗಿ ಮಾಯವಾಗಹತ್ತುವದು. ಬದಲಿಯಾದರೆ ಅದು ಕೂಡ ಸೋಯಿಯಿರುವ ಮತ್ತು ಒಳ್ಳೆ ಹವೆಯಿರುವ ಸ್ಥಳಕ್ಕೆ ವರ್ಗವಾಗುವದು. ವರಿಷ್ಠರ ಮರ್ಜಿಯೂ ಆಗುವದು. ಕೈಕೆಳಗಿನ ನೋಕರರು, ಅಬ್ರುದಿಂದ ಮತ್ತು ಹಿತವನ್ನು ಲಕ್ಷಿಸಿ ನಡೆಯುವರು. ೧೧ ನೇ ಗುರುವಿನಿಂದ ಮಿತ್ರಸುಖ ಬಹಳ ಚೆನ್ನಾಗಿ ಸಿಕ್ಕುವದು. ಅವರಲ್ಲಿ ಕೆಲವರು ಎಪ್ರಿಲ ೨೮ ರಿಂದ ಜೂನ ೭ ಮತ್ತು ಸಪ್ಟೆಂಬರ ೫ ರಿಂದ ಅಕ್ಟೋಬರ ೨೮ ರ ಅವಧಿಯಲ್ಲಿ ನಿಮಗೆ ಎಲ್ಲ ಬಗೆಯಿಂದ ಅಂದರೆ ಆರ್ಥಿಕವಾಗಿ ಕಾಯಿಕ ಮತ್ತು ವಾಚಿಕವಾಗಿ ಸಹಾಯ ಮಾಡುವರು. ಅದರಂತೆಯೇ ಅಕ್ಟೋಬರ ೨೮ ರ ನಂತರದ ಅವಧಿಯಲ್ಲಿ ಈ ಸಹಾಯ ದೀರ್ಘ ಕಾಲ ಉಳಿಯುವದು. ಕಾಯಂ ಲಾಭದ ಇಲ್ಲವೆ ಹಿತದ ಯಾವದೊಂದು ಸಂಗತಿಯು ಖಾತ್ರಿಯಿಂದ ಸಾಧ್ಯವಾಗುವದು ಆಸ್ತಿ ಮತ್ತು ರೋಖ ಹಣದ ಸಂಗ್ರಹವೂ ಆಗುವದು. ಜನ್ಮಕುಂಡಲಿಯಲ್ಲಿ ಹೆಚ್ಚು ಬಲಿಷ್ಠ ಗ್ರಹಗಳಿದ್ದರೆ ನೀವು ಆಸ್ತಿ ಮತ್ತು ಹೊಲ ಮನೆ ಮಾಡುವಿರಿ. ೯ ನೇ ಶನಿ ಬಂದಬಳಿಕ ಪೂಜ್ಯನೀಯ ಸ್ಥಳದ ಇಲ್ಲವೆ ದೇವತೆಯ ದರ್ಶನವಾಗುವದು. ಪೂಜ್ಯಜನರ ಸಹವಾಸವುಂಟಾಗುವದು. ಅವರಿಂದ ನಿಮ್ಮ ಭವಿಷ್ಯದ ಮಾರ್ಗದರ್ಶನವಾಗುವುದು. ನಿಮ್ಮ ಯೋಗ್ಯತೆ ತಕ್ಕಂತೆ ವಾಹನ ಸುಖ ಸಿಕ್ಕುವದು ಮತ್ತು ೯ ನೇ ಶನಿ ಮತ್ತು ೧೦ ನೇ ಗುರುವಿದ್ದಾಗಲೇ ಪ್ರಿಯ ಆಪ್ತರ ಉತ್ಕರ್ಷವಾಗುವದು. ದಾವೆ ಫಿರ್ಯಾದಿ ಇಲ್ಲವೆ ಖಾಸಗಿ ಸ್ಪರ್ಧೆಯಲ್ಲಿ ಬಹಳಷ್ಟು ಕೆಲಸ ೯ ನೇ ಶನಿ ಬಂದಂದಿನಿಂದ ಯಶಸ್ವಿಯಾಗಹತ್ತುವದು. ಮತ್ತು ೧೧ ನೇ ಗುರು ಬಂದ ಬಳಿಕ ನಿಮ್ಮನ್ನು ಬಹಳಷ್ಟು ವಿರೋಧಿಸುವ ಬಲಿಷ್ಠ ಶತ್ರು ದಿವಂಗತನಾಗುವನು ಇಲ್ಲವೆ ಆತನ ಪರಿಸ್ಥಿತಿ ಬಹಳ ಕೆಡುವದು.

ಈ ರಾಶಿಯ ಸ್ತ್ರೀಯರು ದಶಮಗುರು ಇರುವಾಗ ಹಡೆದರೆ ಸುಖಕಾರಕವಾಗದೆ ಕಷ್ಟವೆನಿಸುವದು ಅನಂತರ ಏಕಾದಶ ಗುರು ಬಂದನಂತರ ಹಡೆದವರು ಕಷ್ಟವನ್ನನುಭವಿಸುವದಿಲ್ಲ ಮತ್ತು ಗಂಡು ಮಗುವನ್ನು ಹೆರುವರು.

ಜನೆವರಿ ೨೮ ರ ನಂತರ ಪರೀಕ್ಷೆ ಕಟ್ಟಿದವರು ಪಾಸಾಗಿಯೇ ತೀರುವರು. ಆದರೆ ಮಾರ್ಚ ೧ರಿಂದ ೨೯, ಎಪ್ರಿಲ ೨೯ ರಿಂದ ಜೂನ ೨೪ ಮತ್ತು ಸಪ್ಟಂಬರ ೨೮ ರಿಂದ ಅಕ್ಟೋಬರ ೨೪ ಈ ಅವಧಿಯಲ್ಲಿ ಪರೀಕ್ಷೆ ಕಟ್ಟಿದವರು ವರ್ಗವನ್ನೂ ಸಂಪಾದಿಸುವರು.

## ಕರ್ಕ

ಈ ರಾಶಿಯವರಿಗೆ ಈ ವರ್ಷ ಶಾರೀರಿಕ ಮತ್ತು ಪ್ರಾಪಂಚಿಕ ವಿಷಯಗಳಲ್ಲಿ ಅಲ್ಪ ಸ್ವಲ್ಪ ಕಿರಿಕಿರಿಯೇ. ಆದರೆ ಔದ್ಯೋಗಿಕ ವಿಕಾಸ ಮತ್ತು ಆರ್ಥಿಕ ಅಭಿವೃದ್ಧಿಯ ದೃಷ್ಟಿಯಿಂದ ಒಳ್ಳೆ ಅನುಕೂಲವಿದೆ. ಬಹಳ ಜನರಿಗೆ ಈ ಬಗೆಯ ಅನುಭವಬರುವದು.

ಈ ರಾಶಿಯವರಿಗೆ ಜನೆವರಿ ೨೮ ರಿಂದ ಬರುವ ಅಷ್ಟಮ ಶನಿಯಿಂದ ದಮ್ಮು ಗ್ಯಾಸಿನ ಉಪದ್ರವವಾಗಹತ್ತಿದರೂ ಅವನು ಸ್ವರಾಶಿಯಾದ ಕುಂಭಕ್ಕೆಯೇ ಬರುವದರಿಂದ ಆಯುಷ್ಯಹಾನಿಕಾರಕವೆನಿಸಲಾರನು. ಆದರೆ ಈ ಗ್ರಹ ತನ್ನ ಸ್ವಭಾವಕ್ಕನುಸಾರವಾಗಿ ಯಾವಾಗಾದರೂ ವಿಪರೀತ ಔದಾಸೀನ್ಯವನ್ನುಂಟುಮಾಡುವನು. ಆ ಸಮಯದಲ್ಲಿ ಜೀವಕ್ಕೆ ಕೂಡ ಅಪಾಯಮಾಡಿಕೊಳ್ಳಬೇಕೆಂದು ಅನಿಸಹತ್ತುವುದು. ಅಂತೆಯೇ ಅಂಥ ದುರ್ವಿಚಾರಗಳು ಬರಹತ್ತಿದರೆ ಮನಸ್ಸನ್ನು ಸಂಯಮದಲ್ಲಿಟ್ಟುಕೊಂಡು ವಿಶೇಷವಾಗಿ ಏಕಾಂತದಲ್ಲಿರದೆ ನಾಲ್ಕು ಜನರಲ್ಲಿಯೆ ಸದಾ ಇರತಕ್ಕದು. ಇಂಥ ದುರ್ವಿಚಾರಗಳು ಫೆಬ್ರುಅರಿ ೧೨ ರಿಂದ ಮಾರ್ಚ ೧೩ ಮತ್ತು ಜೂನ ೧೪ರಿಂದ ಜುಲೈ೧೬ ಈ ಅವಧಿಯಲ್ಲಿಬರುವ ಸಂಭವ ಹೆಚ್ಚಿಗಿದೆ. ಕ್ಲೇಶ ಪರಿಹಾರಾರ್ಥವಾಗಿ ಶನಿಯ ೨೩ ಸಾವಿರ ಮತ್ತು ಮಹಾಮೃತ್ಯುಂಜಯದ ೧೧ ಸಾವಿರ ಜಪಮಾಡಬೇಕು. ಉಳಿದ ವಿಷಯಗಳಲ್ಲಿ ದೇಹಸುಖ ಮಾರ್ಚ ೧೪ ರ ವರೆಗೆ ಇರುವ ೯ ನೇ ಮತ್ತು ಅನಂತರ ಬರುವ ದಶಮ ಗುರುವಿನಿಂದ ಬಹಳ ಉತ್ತಮಸಿಕ್ಕುವುದು ಮತ್ತು ಗೋಚರಿ ಚಂದ್ರನು ಯಾವಾಗ ಗುರುವಿನ ಕೂಡ ಭ್ರಮಣ ಮಾಡಹತ್ತುವನೊ ಆ ಕಾಲದಲ್ಲಿ ಒಳ್ಳೇ ಹಾಗು ವಿಶೇಷ ಸಮಾಧಾನಕಾರಕ ಸಂಗತಿಗಳು ಸಂಭವಿಸುವವು.

ಸ್ತ್ರೀಸುಖ ಈ ವರ್ಷ ಒಟ್ಟಾರೆ ಒಳ್ಳೇ ಉತ್ತಮವಿದೆ. ಜನವರಿ ೪ ರಿಂದ ಫೆಬ್ರುಅರಿ ೧೧ರ ವರೆಗೆ ಮತ್ತು ಅಕ್ಟೋಬರ ೨೮ ರ ನಂತರದ ಕಾಲ ಅವಳಿಗೆ ಸ್ವಲ್ಪ ಕ್ಲೇಶದ್ದೆನಿಸುವದು. ೭ನೇ ಶನಿ ಇರುವ ವರೆಗೆ ಅಂದರೆ ಜನವರಿ ೨೮ರ ವರೆಗೆ ಉಭಯತರಲ್ಲಿ ಮೇಲಿಂದಮೆಲೆ ಆಗುವ ಮತಭೇದದ ಪರಿಣಾಮವಾಗಿ ಅಲ್ಪಸ್ವಲ್ಪ ದುಸುಮುಸಿಯುಂಟಾಗುವುದು. ಆದರೆ ಅನಂತರ ಅಂದರೆ ಅವನು ೮ನೇಯವನಾದಾಗಒಳ್ಳೇ ಮತ್ಯೈಕ್ಯವಾಗುವದು. ಆದರೆ ಅದೇ ಕಾಲಕ್ಕೆ ಮನೆಯ ಇತರ ಜನರೊಡನೆ ಮಾತ್ರ ಕಲಹಕ್ಕೆ ಪ್ರಾರಂಭವಾಗುವದು. ಅದರಂತೆಯೇ ಈ ವರ್ಷ ಯಾರಿಗೆ ಲಗ್ನಮಾಡಿಕೊಳ್ಳುವದಿದೆಯೊ ಅವರಿಗೆ ಇಡಿ ವರ್ಷ ಬಾಶಿಂಗಬಲ ಇರುವದರಿಂದ ಸಹಜಾಸಹಜವಾಗಿ ಕೂಡಿಬರುವುದು. ವಧೂ ಮತ್ತು ವರ ಬಹಳ ವಿಷಯಗಳಲ್ಲಿ ಅನುರೂಪ ಇರುವರು. ಆದರೆ ಮಾರ್ಚ ೧೪ರ ನಂತರ

ಅಂದರೆ ದಶಮಗುರು ಬಂದಬಳಿಕ ಜೀಗರಲ್ಲಿ ಮಾತ್ರ ಮತ್ತೈಕ್ಯವುಳಿಯುವದಿಲ್ಲ.

ಅದರಂತೆಯೇ ನಿಮ್ಮ ಮಕ್ಕಳ ಮದುವೆ ಈ ವರ್ಷ ಮಾಡುವದಿದ್ದರೆ ೯ನೇ ಗುರು ಇರುವ ವರೆಗೆ ಒಳ್ಳೇ ಬಾಸಿಂಗಬಲವಿದೆ. ಆದರೆ ಮುಂದೆ ೧೦ ನೇ ಗುರು ಬಂದಾಗ ಅಷ್ಟೊಂದು ಅನುಕೂಲವಿಲ್ಲ. ೯ನೇ ಗುರುವಿದ್ದಾಗ ಮದುವೆ ಒಳ್ಳೆ ಸಂಭ್ರಮದಿಂದ ಸಾಂಗವಾಗುವದು. ದಶಮಗುರುವಿನಲ್ಲಿ ನಿಮಗೇ ಹೆಚ್ಚುಬೇಕಾಗಿದೆಂಬ ಭಾವನೆಯುಂಟಾಗಿ ಎರಡನೆಯ ಪಕ್ಷದವರು ಹೇಳಿದಂತೆಯೇ ನಡೆದುಕೊಂಡು ಕಾರ್ಯವನ್ನು ಮುಗಿಸಬೇಕಾಗುವುದು. ಸೊಸೆ ಅಥವಾ ಅಳಿಯ ನೋಡಲಿಕ್ಕೆ ಬಹಳ ಸುಂದರ, ಬಹಳ ಉತ್ಸಾಹಿ. ಆದರೆ ಅಷ್ಟೇ ಸಿಡುಕರು ಇರುವರು. ಮಕ್ಕಳಿಂದ ೯ನೇ ಗುರುವಿದ್ದಾಗ ಒಳ್ಳೆ ಅನುಕೂಲವಿದೆ. ವಿಶೇಷವಾಗಿ ಜನವರಿ ೪ ರಿಂದ ಫೆಬ್ರುಅರಿ ೧೧, ಜೂನ ೭ ರಿಂದ ಜುಲೈ ೨೦ ಮತ್ತು ಸಪ್ಟಂಬರ ೫ ರಿಂದ ಮುಂದಿನ ಅವಧಿಯಲ್ಲಿ ವಿಶೇಷ ಉತ್ಕರ್ಷವಾಗುವುದು. ಕನ್ಯಾ ಇಲ್ಲವೆ ಮಕ್ಕಳಲ್ಲಿ ಒಬ್ಬರು ಅಂತಾರಾಷ್ಟ್ರೀಯ ಕೀರ್ತಿಯನ್ನೂ ಸಂಪಾದಿಸುವರು.

ಧಂದೆ—ಕೂಲಿಯವರಿಗೆ ಈ ವರ್ಷ ಬಹಳ ಉತ್ಕರ್ಷದ್ದು ಮತ್ತು ಒಳ್ಳೆ ಭಾಗ್ಯೋದಯವನ್ನುಂಟು ಮಾಡುವಂತಹದು. ೯ನೇ ಗುರುವಿದ್ದಾಗ ಒಳ್ಳೇ ಪ್ರಗತಿ ಮತ್ತು ತುಂಬ ಕೀರ್ತಿಬರುವಂಥ ಕೃತ್ಯಗಳು ಘಟಿಸುವವು. ಆದರೆ ೧೦ನೇ ಗುರು ಬಂದಬಳಿಕ ಜನರ ಕಣ್ಣೊಳಗೆ ಒತ್ತುವಷ್ಟು ಪ್ರತಿಷ್ಠೆ ಹೆಚ್ಚುವುದು. ಅದರಂತೆ ಅನೇ ಶನಿ ಬಂದಾಗಿನಿಂದ ಲಾಭ ಹೆಚ್ಚುತ್ತ ನಡೆಯುವುದು, ಅಲ್ಲದೆ ಸ್ವರಾಶಿಯಾದ ಕುಂಭದಲ್ಲಿಯೇ ಅವನಿರುವದರಿಂದ ಅನೇಕರಿಗೆ ದೊಡ್ಡ ಪ್ರಮಾಣದಲ್ಲಿ ಅಕಸ್ಮಿಕ ಗುಪ್ತ ಧನಲಾಭವಾಗುವದು. ಶ್ರಮಜೀವಿಗಳಿಗಿಂತ ಬುದ್ಧಿಜೀವಿಗಳಿಗೆ ಪ್ರತಿಷ್ಠೆ ಮತ್ತು ಲಾಭದ ದೃಷ್ಟಿಯಿಂದ ಈ ವರ್ಷ ಹೆಚ್ಚು ಅನುಕೂಲವಿದೆ.

ನವಕರರಿಗೆ ದಶಮಗುರು ಬಂದಾಗ ಮೇಲಿನ ಗ್ರೇಡು ಖಾತ್ರಿಯಿಂದ ಸಿಕ್ಕುವುದು. ಬದಲಿಯಾದರೆ ದೂರಸ್ಥಳಕ್ಕಾದರೂ ಒಳ್ಳೇ ಸುಖ-ಸೌಕರ್ಯಗಳ ಸ್ಥಳಕ್ಕಾಗುವುದು. ವರಿಷ್ಠರು ಸದಾಸಂತುಷ್ಟರಾಗಿದ್ದು ವಿಶೇಷ ಹೊಣೆಗಾರಿಕೆಯ ಕೆಲ್ಸದಲ್ಲಿ ನಿಮನ್ನು ನೇಮಿಸುವರು ಮತ್ತು ಸುದೈವದಿಂದ ಅದು ಪೂರ್ಣವಾಗಿ ಯಶಸ್ವಿಯಾಗುವದರಿಂದ ನಿಮ್ಮ ಕರ್ತೃತ್ವದ ಛಾಪು ಎಲ್ಲರ ಮೇಲೆ ಬೀಳುವುದು. ವಿಶೇಷವಾಗಿ ನವಂಬರ ೨೫ರ ವರೆಗೆ ಮತ್ತು ಮುಂದೆ ಡಿಸೆಂಬರ ೧೪ ರಿಂದ ಮಾರ್ಚ ೨೯ ಮತ್ತು ಸಪ್ಟಂಬರ ೧೧ರಿಂದ ಅಕ್ಟೋಬರ ೨೪. ಈ ಕಾಲ ಹೆಚ್ಚು ಲಾಭದ್ದೆನಿಸುವದು. ಬೇರೆಬೇರೆ ವಸ್ತುಗಳ ಸಂಗ್ರಹ ಕೂತಲ್ಲಿಯೇ ಆಗುವದು. ಈ ಬಗೆಯ ಯೋಗವಿದೆ. ಆದರೆ ರೋಖ ಹಣಸಂಗ್ರಹ ಮಾತ್ರ ಎಣಿಸಿದಷ್ಟು ಆಗುವದಿಲ್ಲ. ವಾಹನಸುಖ ಉತ್ತಮ ಸಿಕ್ಕುವದು ಮತ್ತು ಅನೇಕರಿಗೆ ಹೊಸ ವಾಹನಗಳನ್ನುಕೊಳ್ಳುವ ಅವಕಾಶ ಸಿಕ್ಕುವುದು. ೯ನೇ ಗುರು ಇರುವಾಗ ಮುಖ್ಯ ಯಾತ್ರೆ ಒಂದಾದರೂ ಒದಗಿಬರುವುದು. ಅಲ್ಲದೆ ಮಂಗಲ ಮತ್ತು ಧಾರ್ಮಿಕಕೃತ್ಯಗಳು ಒದಗುವವು. ಅನೇಕರಿಗೆ ಪರಮಪೂಜ್ಯ ವ್ಯಕ್ತಿಯ ಸಹವಾಸ ದೊರೆಯುವುದು. ದಶಮಗುರು ಇರುವಾಗ ಆಪ್ತೇಷ್ಟರಲ್ಲಿ ಆದರ ಮತ್ತು ಸೌಹಾರ್ದಭಾವನೆ ಹೆಚ್ಚುವವು ಮತ್ತು ಸಹಜವಾಗಿ ಆಡಿದ ಮಾತು ಭವಿಷ್ಯವಾಣಿಯಂತೆ ನಿಜವಾಗಿ ಪರಿಣಮಿಸಿದ್ದು ಅನೇಕರ ನಿದರ್ಶನಕ್ಕೆ ಬರುವದು. ಮಿತ್ರಸುಖವೂ ೧೦ ನೇ ಗುರುವಿದ್ದಾಗಲೇ ಹೆಚ್ಚಾಗಿ ದೊರೆಯುವುದು, ಮಹತ್ವದ ಭೆಟ್ಟಿಯ ಕೆಲಸಗಳು ದಶಮ ಗುರು ಇದ್ದಾಗ ಹೆಚ್ಚು ಒದಗಿಬರುವವು.

ದಾವೆ ಫಿರ್ಯಾದಿ ಮತ್ತು ಇತರ ಸ್ಪರ್ಧೆಯ ಕೆಲಸಗಳಲ್ಲಿ ಇಡೀ ವರ್ಷ ಇರುವ ಆರನೇ ಕೇತುವಿನಿಂದ ಒಳ್ಳೆ ಯಶಸ್ಸು ಸಿಕ್ಕುವದು. ಅದರಲ್ಲಿಯೂ ನವಂಬರ ೨೬ ರಿಂದ ಜನವರಿ ೪, ಮಾರ್ಚ ೨೦ ರಿಂದ ಎಪ್ರಿಲ ೨೪ ಮತ್ತು ಜೂನ ೭ ರಿಂದ ಜುಲೈ ೨೦ ಈ ಅವಧಿಯಲ್ಲಿ ಹೊರಬೀಳುವ ತೀರ್ಪು ಒಳ್ಳೆ ಪ್ರಭಾವಶಾಲಿಯೆನಿಸಿ ಪ್ರತಿಪಕ್ಷಿಗಳು ಪೂರ್ಣವಾಗಿ ನಿಃಪಾತರಾಗುವಂತಹದಿರುವದು.

ಗರ್ಭವತಿ ಸ್ತ್ರೀಯರು ೯ನೇ ಗುರು ಇದ್ದಾಗ ಹಡೆದರೆ ಅವರಿಗೆ ಯಾವದೇ ಬಗೆಯ ಕಷ್ಟವೆನಿಸದೆ ಗಂಡು ಮಗುವೂ ಹುಟ್ಟುವದು. ಅನಂತರ ಅಂದರೆ ದಶಮಗುರು ಬಂದ ನಂತರ ಹಡೆದರೆ ಅವರಿಗೆ ಸ್ವಲ್ಪ ಕಷ್ಟದ ಯೋಗವಿದ್ದರೂ ಬಹುತರ ಜನರಿಗೆ ಗಂಡು ಹುಟ್ಟುವದು. ಅದರಲ್ಲಿಯೂ ವಿಶೇಷವೆಂದರೆ ಯಾರು ೮ ನೇ ಶನಿ ಮತ್ತು ೯ ನೇ ಗುರು ಇದ್ದಾಗ ಹಡೆಯುವರೋ ಅವರ ಮಗು ದೀರ್ಘಾಯು ಮತ್ತು ಜಗದ್ವಿಖ್ಯಾತವೆನಿಸುವದು. ಅದು ಗಂಡು ಇದ್ದರೂ, ಅಷ್ಟೇ ಹೆಣ್ಣು ಇದ್ದರೂ ಅಷ್ಟೆ.

ಮಾರ್ಚ ೧೪ ಕ್ಕಿಂತ ಮೊದಲು ಪರೀಕ್ಷೆಯಾದ ವಿದ್ಯಾರ್ಥಿಗಳು ವರ್ಗವನ್ನು ದೊರಕಿಸುವರು. ಅನಂತರ ಪರೀಕ್ಷೆ ಕಟ್ಟಿದವರು ಸಹಸಾ ಅಯಶಸ್ವಿಯಾಗದೆ ಪಾಸಾಗುವ ಗುಣ ಪಡೆಯುವರು.

# ಸಿಂಹ

ಒಟ್ಟಿಗೆ ಈ ರಾಶಿಯವರಿಗೆ ಈ ವರ್ಷ ಪ್ರಾಪಂಚಿಕ ಮತ್ತು ಪ್ರಕೃತಿಯ ದೃಷ್ಟಿಯಿಂದ ಮಾರ್ಚ ೧೪ರ ವರೆಗೆ ಅಲ್ಪ ಸ್ವಲ್ಪ ಕಷ್ಟದ್ದೆನಿಸಿದರೂ ಅನಂತರ ಮಾತ್ರ ಎಲ್ಲ ವಿಷಯಗಳಲ್ಲಿ ಭಾಗ್ಯವೃದ್ಧಿಯ ಮತ್ತು ಸುಯಶಸ್ಸಿನದಾಗಿದೆಂಬುದು ನಿಶ್ಚಿತ.

ಅಷ್ಟಮ ಗುರು ಇರುವ ವರೆಗೆ ಅಂದರೆ ಮಾರ್ಚ ೧೪ರ ವರೆಗೆ ಈ ರಾಶಿಯವರ ಆರೋಗ್ಯದ ಬಗ್ಗೆ ಸ್ವಲ್ಪಿಲ್ಲ ಸ್ವಲ್ಪ ತಕರಾರು ಇದ್ದದ್ದೇ. ವಿಶೇಷವಾಗಿ ಗ್ಯಾಸ ಇಲ್ಲವೆ ಬೆನ್ನು ನೋವು ಇದ್ದವರಿಗೆ ಹೆಚ್ಚು ತ್ರಾಸು. ಆದರೆ ಮೇಲಿನ ದಿನಾಂಕದಿಂದ ನವಮಗುರು ಬರುವದರಿಂದ ಅದೊಳ್ಳೆ ಆರೋಗ್ಯಕಾಗಿ ಉಳಿಯುವದು. ಉಳಿದ ಆವಶ್ಯಕ ವಿಷಯಗಳಲ್ಲಿ ದೇಹಸುಖ ನವಮ ಗುರು ಇರುವಾಗಲೆ ಅಷ್ಟಮ ಗುರುವಿದ್ದಾಗಿನಕಿಂತ ಹೆಚ್ಚೆಚ್ಚಾಗಿ ದೊರೆಯುವದು. ಇದು ನಿಜವಾಗಿದ್ದರೂ ಹರ್ಶಲ್‌ನು ಈ ವರ್ಷ ಪ್ರಥಮ ಅಂದರೆ ದೇಹಸ್ಥಾನದಲ್ಲಿಯೇ ಇರುವದರಿಂದ ಮನಸ್ಸು ಸದಾ ಒಳಿತು ಕೆಟ್ಟ ವಿಚಾರಗಳಲ್ಲಿದ್ದು ಯಾವದೊಂದು ಮಾತಿನ ಬಗ್ಗೆ ಹುರಹುರಿ ಇದ್ದದ್ದೆ.

ಸ್ತ್ರೀ ಸುಖಕ್ಕೆ ಈ ವರುಷ ಜನೆವರಿ ೨೮ರ ವರೆಗೆ ಅಷ್ಟೊಂದು ಅನುಕೂಲವಿಲ್ಲದಿದ್ದರೂ ಅನಂತರ ಭಾಗ್ಯೇಶ ಶನಿ ತನ್ನ ರಾಶಿಯಾದ ಕುಂಭದಲ್ಲಿಯೇ ಭಾರ್ಯಾಸ್ಥಾನದಲ್ಲಿ ಅಂದರೆ ಸಪ್ತಮದಲ್ಲಿ ಬರುವದರಿಂದ ಅವಳ ಆರೋಗ್ಯ ಸರಿಯಾಗಿ ಉಳಿದು ಅಂದಿನಿಂದ ಸಣ್ಣ ದೊಡ್ಡ ಪ್ರತಿಯೊಂದು ವಿಷಯದಲ್ಲಿ ಅವಳಿಂದ ಸಿಕ್ಕತಕ್ಕ ಸಲಹೆ ಬಹಳ ಅಮೌಲ್ಯವೆನಿಸುವದು. ಆದರೆ ಅವಳ ಸ್ವಭಾವದಲ್ಲಿ ಮಾತ್ರ ತನ್ನ ಜಾಣತನದ ಬಗ್ಗೆ ಬಹಳ ದುರಹಂಕಾರವುಂಟಾದದ್ದು ಕಂಡುಬರುವದು. ಅವಳ ಮಾತಿನಲ್ಲಿ ದರ್ಪೋಕ್ತಿ ತೋರುವದು; ಕೆಲ ಸಂದರ್ಭಗಳಲ್ಲಿ ಬಹಳ ಅತಿರೇಕವೆನಿಸುವದು. ಆದರೂ ಉಭಯತರಲ್ಲಿಯು ಐಕ್ಯ, ಪ್ರೇಮ ಗುರು

ನವಮಕ್ಕೆ ಬಂದ ನಂತರವೇ ಉತ್ತಮಗೊಳ್ಳು ವವು. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ವನ್ನು ಸಪ್ತಮ ಶನಿ ಮತ್ತು ನವಮ ಗುರು ಬಹಳ ಚೆನ್ನಾಗಿ ಕೊಡುವರು. ಅವಶ್ಯಕ ಯಾವದೇ ವಿಷಯದ ಕೊರತೆ ಎಂದೂ ಎನಿಸಲಾರದು. ಅದ ರಂತೆಯೇ ಈ ರಾಶಿಯವರಲ್ಲಿ ಯಾರದಾದರೂ ಈ ವರ್ಷ ಮದುವೆಯಾಗತಕ್ಕದ್ದಿದ್ದರೆ ಅದು ಕೂಡಿ ಬರಲಿಕ್ಕೆ ಅಷ್ಟಮ ಗುರು ಮತ್ತು ಪ್ರತ್ಯಕ್ಷ ಲಗ್ನ ಸಮಾರಂಭವಾಗಲಿಕ್ಕೆ ನವಮ ಗುರು ಬಹಳ ಅನು ಕೂಲ. ವಧೂ ಇಲ್ಲವೆ ವರ ರೂಪ ಗುಣಗಳಿಂದ ಸಾಮಾನ್ಯವಾಗಿ ಅನುರೂಪ ಇರುವರು. ಆದರೆ ಮೈಕಟ್ಟು ಮತ್ತು ಎತ್ತರ ದೃಷ್ಟಿಯಿಂದ ಮಾತ್ರ ಸ್ವಲ್ಪ ಇಜ್ಜೋಡು ಎನಿಸಬಹುದು.

ಆದರೆ ನಿಮ್ಮ ಮಕ್ಕಳ ಲಗ್ನ ಈಸಲ ಮಾಡುವ ದಿದ್ದರೆ ಅದಕ್ಕೆ ಮಾರ್ಚ ೧೪ ರ ನಂತರ ಅಂದರೆ ನವಮ ಗುರು ಬಂದಬಳಿಕವೇ ಒಳ್ಳೇ ಅನುಕೂಲ ಬಾಶಿಂಗಬಲವಿದೆ. ಇದನ್ನು ಮನದಂದು ಪ್ರ ಯತ್ನ ಪ್ರಾರಂಭಿಸಬೇಕು. ಅಂದರೆ ಅಪೇಕ್ಷೆ ಗಿಂತ ಹೆಚ್ಚು ಅನುಕೂಲ ಸ್ಥಳದೊಡನೆ ಒಳ್ಳೇ ಸಮಾರಂಭದಿಂದ ಲಗ್ನವಾಗುವದು. ಸೊಸೆ ಇಲ್ಲವೆ ಅಳಿಯನ ಚೆಹರೆಯನ್ನು ನೋಡಿದಾಗ ಬಹಳ ಗರ್ವಿಷ್ಠರು ಎನಿಸಿದರೂ ಪ್ರತ್ಯಕ್ಷ ನಡೆವ ಳಿಕೆಯಲ್ಲಿ ಬಹಳ ಆನಂದದಲ್ಲಿ ಇರುವದು ಕಂಡು ಬರುವದು. ವಿವಾಹೋತ್ತರ ಒಂದು ವರುಷದಲ್ಲಿ ಒಬ್ಬನ ಉತ್ಕರ್ಷವಾದರೂ ಆಗುವದು. ಅವರ ಕಾಲ್ಗುಣ ಆ ಬಗೆಯದಾಗಿರುವದು. ಅವರಂ ತೆಯೇ ಮಕ್ಕಳು ನವಮಗುರು ಬಂದಾಗ ಒಳ್ಳೊಳ್ಳೆ ಕೃತ್ಯಗಳನ್ನು ಮಾಡುವರು ಮತ್ತು ಜನ್ಮದಾತರಲ್ಲಿ ಏಕನಿಷ್ಠ ಪ್ರೇಮದಿಂದಿದ್ದುದಕ್ಕೆ ಸಾಕ್ಷಿಕೊಡಬಲ್ಲರು ಆದರೆ ವರ್ಷವಿಡೀ ಮಕ್ಕಳ ಸ್ಥಾನದಲ್ಲಿರುವ ಪಂ ಚಮ ಕೇತುವಿನಿಂದಾಗಿ ಒಬ್ಬನಿಂದಾದರೂ ಇಡೀ ಜನ್ಮದ ವರೆಗೆ ಉಳಿಯುವಂಥ ಅಧಾರ್ಮಿಕ ಇಲ್ಲವೆ ಸಂಪ್ರದಾಯ ವಿರುದ್ಧ ಅಪಕೃತ್ಯ ಜರುಗುವ ಸಂಭವ ಹೆಚ್ಚು. ವಿಶೇಷವಾಗಿ ಸಪ್ಟಂಬರ ೫ ರಿಂದ ಅಕ್ಟೋಬರ ೨೮ರ ಅವಧಿಯಲ್ಲಿ ಈ ಬಗೆಯ ಅಪ ಕೃತ್ಯ ಘಟಿಸುವುದು.

ಧಂದೆ ಕೂಲಿಕಾರರಿಗೆ ಈ ವರ್ಷ ಒಳ್ಳೆ ಯಶಸ್ಸು. ಅದರ ಪ್ರತ್ಯಕ್ಷ ಅನುಭವದ ಮೊದಲನೇ ಮೆಟ್ಟಲು ಸಪ್ತಮ ಶನಿ ಬಂದ ನಂತರ ಏರುತ್ತ ಹೋಗು ವದು. ನವಮಗುರು ಬಂದನಂತರವಂತೂ ಅದು ಮತ್ತಷ್ಟು ಹೆಚ್ಚುವದು. ಅದರಂತೆ ಅಷ್ಟಮ ಗುರು ತನ್ನ ರಾಶಿಯಾದ ಮೀನದಲ್ಲಿಯೇ ಇರುವದ ರಿಂದ ಗುಪ್ತ ಇಲ್ಲವೆ ಅಕಲ್ಪಿತ ಧನಲಾಭವನ್ನು ಅವಶ್ಯವಾಗಿ ಮಾಡುವನು. ಆದರೆ ಯಾರ ಕುಂಡ ಲಿಯಲ್ಲಿ ಅಷ್ಟಮೇಶನಾಗಿದ್ದ ಯಾವದೊಂದು ಗ್ರಹ ಅಷ್ಟಮ, ಏಕಾದಶ, ದ್ವಿತೀಯ ಇಲ್ಲವೆ ಚತುರ್ಥ ಸ್ಥಾನದಲ್ಲಿದ್ದರೆ ಅವರ ಪರಿಸ್ಥಿತಿಯಲ್ಲಿ ಬಹಳಷ್ಟು ಅಂತರ ಬೀಳುವಷ್ಟು ಖಾತ್ರಿಯಿಂಧ ಪ್ರಗತಿ ಯಾಗುವುದು. ನವಮ ಗುರು ಬಂದ ಬಳಿಕ ಉದ್ಯೋಗ ಧಂದೆ ಬಹಳ ಜೋರಿನಿಂದ ಹೆಚ್ಚುತ್ತ ಹೋಗುವದು. ವರ್ಷಾಂತ್ಯದಲ್ಲಿ ಒಳ್ಳೇ ಉತ್ಕರ್ಷಕವಾದದ್ದು ಕಂಡುಬರುವದು. ಆಗಲೆ ನಿಮ್ಮ ಪ್ರಾವೀಣ್ಯದ ಬಗ್ಗೆ ನಿಮಗೆ ಬೇಕಾ ದವರಷ್ಟೇ ಅಲ್ಲ ವಿರುದ್ಧವಿದ್ದವರು ಕೂಡ ಪ್ರಶಂಸೆ ಮಾಡಹತ್ತುವರು. ಹಳೆಯ ಉದ್ಯೋಗಸ್ಥರಿಗೆ ಬಹಳ ಲಾಭವಾಗುವದಿಷ್ಟೇ ಅಲ್ಲ, ಅವರ ಪತ್ತು ವರ್ಚಸ್ಸು ಬಹಳ ಹೆಚ್ಚುವವು. ಮತ್ತು ಅನೇಕರು ಬೇರೆ ಬೇರೆ ಕಡೆಗಳಲ್ಲಿ ತಮ್ಮ ಉದ್ಯೋಗದ ಶಾಖೆ ಗಳನ್ನು ತೆರೆಯುವರು.

ನೋಕರರಿಗೂ ಈ ವರ್ಷ ಭಾಗ್ಯೋದಯಕಾ ರಕವಿದೆ. ಅಶಕ್ಯ ಇಲ್ಲವೆ ದುರ್ಲಭ ವಿಷಯಗಳಲ್ಲಿ ಕೂಡ ಯಶಸ್ಸು ಸಿಕ್ಕುವದು. ನವಮ ಗುರುವಿ ನಲ್ಲಿ ವರಿಷ್ಠರ ಮರ್ಜಿ ಉಳಿಯುವುದು. ಮತ್ತು ಬಹುತರ ಜನರಿಗೆ ಮೇಲಿನ ಗ್ರೇಡು ಜೂನ ೭ ರಿಂದ ಸಪ್ಟಂಬರ ೫ ರ ಅವಧಿಯಲ್ಲಿ ಇಲ್ಲವಾದರೆ ಅಕ್ಟೋ ಬರ ೨೮ ರ ನಂತರ ನಿಶ್ಚಯವಾಗಿ ಸಿಕ್ಕುವುದು. ವಿಶೇಷವಾಗಿ ಫೆಬ್ರುಅರಿ ೨೫ ರಿಂದ ಮಾರ್ಚ ೧೩, ಜೂನ ೩ ರಿಂದ ಜುಲೈ ೪ ಮತ್ತು ಜುಲೈ ೨೩ ರಿಂದ ಅಕ್ಟೋಬರ ೧೫ ಈ ಅವಧಿಯಲ್ಲಿಯ ದಿನಗಳು ಹೆಚ್ಚು ಉನ್ನತಿಯವೆನಿಸುವವು. ಬದಲಿಯಾಗುವ ಖಾತೆಯಲ್ಲಿದ್ದರೆ ಈ ವರ್ಷ ನಿಶ್ಚಯವಾಗಿ ಬದಲಿ ಯಾಗುವದು. ಆದರೆ ೮ ನೇ ಗುರುವಿದ್ದಾಗ ಬದ ಲಿಯಾದರೆ ಬಹಳ ಸುಖ ಸೌಕರ್ಯಗಳ ಸ್ಥಳಕ್ಕಾ ಗುವದು. ಆದರೆ ನವಮದಲ್ಲಿ ಗುರುವಿದ್ದಾಗ ಬದ ಲಿಯಾದರೆ ಅಷ್ಟೊಂದು ಅನುಕೂಲ ಸ್ಥಳಕ್ಕೆ ಆಗ ಲಾರದು. ನವಮ ಗುರು ಒಂದೆರಡು ಯಾತ್ರೆ ಮಾಡಿಸುವನು. ಮನೆಯಲ್ಲಿ ಒಂದೆರಡು ಮಂಗಳ ಕೃತ್ಯ ಮತ್ತು ಧಾರ್ಮಿಕಕೃತ್ಯಗಳಾದರೂ ಸಂಭವಿಸು

ವವು. ಅದರಂತೆ ನಿಮ್ಮ ಕೀರ್ತಿ ಹೆಚ್ಚಾಗಿ ಹೊಳಗುವ ಕಾರ್ಯಗಳನ್ನು ನಿಮ್ಮಿಂದ ಮಾಡಿಸುವನು. ಸಾಲ, ಕೊಡಕೊಳ್ಳುವಿಕೆ ಇದ್ದರೆ ಅದೆಲ್ಲ ಮುಟ್ಟಬಹುದು. ಪೂರ್ಣವಾಗದಿದ್ದರೂ ಬಹಳ ಹೆಚ್ಚು ಮುಟ್ಟುವದು. ಯಾರಿಗೆ ಸಾಲ ಮುಂತಾದ್ದು ಇರುವುದಿಲ್ಲವೊ ಅವರು ಒಳ್ಳೆ ಸ್ಥಾವರ ಜಂಗಮ ಸಂಗ್ರಹ ಮಾಡುವರು. ವಾಹನ ಸುಖ ೯ನೇ ಗುರುವಿನಗಿಂತ ಅಷ್ಟಮಗುರು ಇದ್ದಾಗ ಹೆಚ್ಚಾಗಿ ದೊರೆಯುವುದು. ಅದರಂತೆ ಅಷ್ಟಮಗುರುವಿದ್ದಾಗ ಶುಭಸೂಚಕ ಸ್ವಪ್ನ ಬಹಳ ಬೀಳುವವು. ಮಿತ್ರಸುಖ ಇಡೀ ವರ್ಷ ಚೆನ್ನಾಗಿ ಸಿಕ್ಕುವುದು.

ಈ ವರ್ಷ ಪ್ರಾರಂಭದಿಂದ ಜನೆವರಿ ೨೮ ರ ವರೆಗೆ ಮತ್ತು ಮಾರ್ಚ ೧೪ ರಿಂದ ಸಪ್ಟಂಬರ ೫ ರ ವರೆಗೆ ಹೊರಬೀಳುವ ದಾವೆ ಖಟ್ಲೆ ಇಲ್ಲವೆ ಖಾಸಗಿ ಸ್ಪರ್ಧೆಗಳ ತೀರ್ಪು ನಿಮಗೆ ಅನುಕೂಲವಾಗುವವು.

ಜನೆವರಿ ೨೮ರೊಳಗಾಗಿ ಹಡೆಯುವ ಸ್ತ್ರೀಯರಿಗೆ ಸ್ವಲ್ಪ ಕಷ್ಟ. ಮುಂದೆ ಮಾರ್ಚ ೧೪ರ ನಂತರ ಹಡೆದವರಿಗೆ ಸ್ವಲ್ಪೂ ಕಷ್ಟವೆನಿಸುವದಿಲ್ಲ. ಆದರೆ ೮ನೇ ಗುರುವಿದ್ದಾಗ ಅನೇಕರಿಗೆ ಹೆಣ್ಣು ಹುಟ್ಟುವ ಸಂಭವ ಹೆಚ್ಚು. ಆದರೆ ನವಮ ಗುರು ಬಂದ ಬಳಿಕ ಹಡೆದವರಿಗೆ ಕಷ್ಟವೆನಿಸುವದಿಲ್ಲ ಮತ್ತು ಅನೇಕರಿಗೆ ಗಂಡು ಹುಟ್ಟುವವು. ಈ ಬಗೆಯ ಯೋಗವಿದೆ.

ಯಾವ ವಿದ್ಯಾರ್ಥಿಗಳ ಪರೀಕ್ಷೆ ಮಾರ್ಚ ೧೪ರಕ್ಕಿಂತ ಮೊದಲು ಆಗುವದೋ ಅವರ ಯಶಸ್ಸಿನ ಬಗ್ಗೆ ನಿಶ್ಚಿತವಾಗಿ ಹೇಳಲಿಕ್ಕೆ ಬರದಿದ್ದರೂ ಅನಂತರ ಪರೀಕ್ಷೆ ಕಟ್ಟಿದವರು ಪಾಸಾಗುವರು. ಇಷ್ಟೇ ಅಲ್ಲ ಅನೇಕರು ವರ್ಗಗಳನ್ನೂ ಪಡೆಯುವರು.

## ಕನ್ಯಾ

ಒಟ್ಟಿಗೆ ಈ ರಾಶಿಯವರಿಗೆ ಈ ವರ್ಷ ಪ್ರಾಪಂಚಿಕ ವಿಷಯದಲ್ಲಿ ಬಹಳ ತ್ರಾಸದ್ದೆನಿಸಿದರೂ ಧಂದೆ ಕೂಲಿ ಮೊದಲಾದ್ದರಲ್ಲಿ ಬಹಳ ಲಾಭದಾಯಕವಾಗಿದೆ. ಇದನ್ನು ಮನದಟ್ಟು ಮಾಡಿಕೊಳ್ಳಬೇಕು.

ಸಪ್ತಮ ಗುರುವಿರುವವರೆಗೆ ಈ ರಾಶಿಯವರ ಆರೋಗ್ಯಬಹಳ ಚೆನ್ನಾಗಿ ಉಳಿಯುವದು. ಅಂದರೆ ಮಾರ್ಚ ೧೪ ರ ವರೆಗೆ ಅದು ಅನುಕೂಲ. ಅನಂತರ ಅಷ್ಟಮ ಗುರು ಬಂದಬಳಿಕ ಪ್ರಕೃತಿ ಸ್ವಲ್ಪ ಕೆಡುವ ಯೋಗವಿದೆ. ಎಪ್ರಿಲ ೨೮ ರಿಂದ ಜೂನ ೭ರ ಅವಧಿಯಲ್ಲಿ ಈ ಯೋಗವಿದೆ. ಅಕ್ಟೋಬರ ೨೮ರ ನಂತರ ಹೆಚ್ಚು ಕೆಡುವ ಯೋಗವಿದೆ. ವಿಶೇಷವಾಗಿ ಯಾರಿಗೆ ಆಮವಾತ, ಸಂಗ್ರಹಣಿ, ತಲೆನೋವು, ಹೊಟ್ಟೆನೋವು ಇರುವದೊ ಅವರು ಹೆಚ್ಚಾಗಿ ಜಪ್ಪಿಸಬೇಕು. ಮಾರ್ಚ ೨೮ ರಿಂದ ಬರುವ ಷಷ್ಠ ಶನಿ ಯಾವುದೊಂದು ಕ್ಲೇಶವನ್ನು ಹೆಚ್ಚಿಗೆ ಬೆಳೆಯಗೊಡದೆ ಅಲ್ಪೋಪಚಾರದಿಂದಲೆ ಕಡಮೆ ಮಾಡಿಬಿಡುವನು. ಉಳಿದ ವಿಷಯಗಳಲ್ಲಿ ದೇಹಸುಖ ತೋರಿಕೆಗೆ ಅನುಕೂಲ ಕಂಡು ಬಂದರೂ ಇಡೀ ವರ್ಷ ಇರುವ ಚತುರ್ಥ ಕೇತು ಆಪ್ತರು ಇಲ್ಲವೆ ನೆರೆಯವರಿಂದ ಒಂದಿಲ್ಲೊಂದು ಬಗೆಯ ತೊಂದರೆ ಕೊಡಿಸುವನು. ಅದರಂತೆಯೆ ಏಕತ್ರ ಕುಟುಂಬವಿದ್ದರೆ ಅಷ್ಟಮಗುರು ಬಂದಾಗ ಗೃಹಕಲಹವನ್ನೆದುರಿಸಬೇಕಾದ ಪ್ರಸಂಗ ಮೇಲಿಂದ ಮೇಲೆ ಬರುವದು. ಒಮ್ಮೊಮ್ಮೆ ವಿಭಕ್ತವಾಗುವ ಸರತಿಯೂ ಬರಬಹುದು. ಆದರೆ ೬ನೇ ಶನಿ ಪ್ರತಿಯೊಂದು ಕ್ಲೇಶವನ್ನು ಇಲ್ಲವೆ ಸಂಕಟವನ್ನು ಮತ್ತು ಶತ್ರುವನ್ನು ಪರಾಜಯಗೊಳಿಸಿ ನಿಶ್ಚಯವಾಗಿ ವಿಜಯವನ್ನು ದೊರಕಿಸಿಕೊಡುವನು.

ಹೆಂಡತಿಯ ಆರೋಗ್ಯ ಒಟ್ಟಾರೆ ಅನುಕೂಲವಿದ್ದರೂ ಜುಲೈ ೨೦ ರಿಂದ ಸಪ್ಟಂಬರ ೫ ರ ಅವಧಿಯಲ್ಲಿ ಯಾವದೊಂದು ಸಣ್ಣ ದೊಡ್ಡ ಅಪಘಾತದಿಂದ ಅವಳ ಆರೋಗ್ಯ ಕೆಡುವ ಯೋಗವೂ ಇದೆ. ಉಳಿದ ವಿಷಯಗಳಲ್ಲಿ ಇಬ್ಬರಲ್ಲಿ ಮತೈಕ್ಯ ಉಳಿದು ಒಬ್ಬರ ವಿಚಾರ ಮತ್ತೊಬ್ಬರಿಗೆ ತತ್ಕಾಲ ಮನವರಿಕೆಯಾಗುವದು. ಮತ್ತು ಅಷ್ಟಮ ಗುರು ಬಂದಾಗ ಅವಳ ತವರುಮನೆಯವರ ಉನ್ನತಿ ಬಹಳಾಗುವದು. ಪರಸ್ಪರರಲ್ಲಿ ಮೊದಲಿಗಿಂತ ಹೆಚ್ಚು ತನ್ಮಯತನ ಬೆಳೆಯುವದು. ಅದರಂತೆಯೇ ಈ ರಾಶಿಯ ಸ್ತ್ರೀ ಪುರುಷರ ವಿವಾಹವನ್ನು ಮಾಡುವದಿದ್ದರೆ ಅದಕ್ಕೆ ಸಪ್ತಮ ಗುರು ಇರುವಾಗಲೆ ಒಳ್ಳೆ ಬಾಸಿಂಗ ಬಲವಿದೆ. ಹಾಗೆ ಭಾವಿಸಿ ಲಗ್ನ ಕೂಡಿಸಲಿಕ್ಕೆ ಪ್ರಯತ್ನಿಸಬೇಕು. ಅಂದರೆ ಅದು ಸಹಜವಾಗಿ ಕೂಡಿ ಬರುವದು. ಆದರೆ ಮುಂದೆ ಅಷ್ಟಮ ಗುರು ಬಂದ ಬಳಿಕ ಲಗ್ನ ಕೂಡಿ ಬರುವದು ಕಠಿಣವೇ. ವಧೂ-ವರ ಪೂರ್ಣ ಅನುರೂಪ ಮತ್ತು ಬುದ್ಧಿ ಮತ್ತು ದೈವದಿಂದ ಒಳ್ಳೆ ಉತ್ತಮ ಇದ್ದದ್ದು ಕಂಡುಬರುವದು. ಆದರೆ ಅಷ್ಟಮಗುರುವಿದ್ದಾಗ ಮದುವೆಯೊಂದನ್ನು ಬಿಟ್ಟು ಉಳಿದ ಮಂಗಳ ಇಲ್ಲವೆ ಕೌಟುಂಬಿಕ ಲೌಕಿಕ ಕೆಲಸಗಳು ನಡೆಯುವವು.

ಅದರಂತೆಯೇ ನಿಮ್ಮ ಮಕ್ಕಳ ಮದುವೆ ಈ ವರ್ಷ ಮಾಡುವದಿದ್ದರೆ ಅದಕ್ಕೆ ಇಡೀ ವರ್ಷ ಬಾಸಿಂಗಬಲದ ಅನುಕೂಲವಿದೆ. ೬ ನೇ ಶನಿ ಬಂದ ಬಳಿಕವಂತೂ ತೀರ ಅನಾಯಾಸವಾಗಿ ಲಗ್ನ ಕೂಡಿ ಬರುವದು. ಸೊಸೆ ಇಲ್ಲವೆ ಅಳಿಯ ರೂಪಗುಣಗಳಿಂದ ಒಳ್ಳೆ ಅಪರೂಪವಿದ್ದರೂ ೪ ನೇ ಕೇತು ಮತ್ತು ೮ ನೇ ಗುರುವಿನಂಥ ವಿಕಲ ಮತ್ತು ಬುದ್ಧಿಭೇದವನ್ನು ಹುಟ್ಟಿಸುವಂಥ ಗ್ರಹಗಳ ಯೋಗದಿಂದ ಸ್ವತಃ ನಿಮಗೆ ಮಾತ್ರ ಅವರ ಬಗ್ಗೆ ಅಷ್ಟೊಂದು ಸಮಾಧಾನವುಳಿಯುವುದಿಲ್ಲ. ಮಕ್ಕಳ ಉನ್ನತಿಗೆ ೬ ನೇ ಶನಿಯಿಂದಲೇ ಬಹಳ

ಅನುಕೂಲ. ಅದರಲ್ಲಿಯೂ ಮಾರ್ಚ ೨೦ ರಿಂದ ಎಪ್ರಿಲ ೨೮ ಮತ್ತು ಜೂನ ೭ ರಿಂದ ಜುಲೈ ೨೦ ಮತ್ತು ಸಪ್ಟಂಬರ ೫ ರಿಂದ ಅಕ್ಟೋಬರ ೨೮, ಈ ಅವಧಿಯಲ್ಲಿ ಅದು ಉತ್ಕರ್ಷ ಹೊಂದಿದ್ದು ಕಂಡುಬರುವದು. ಎಲ್ಲರಿಂದ ನಿಮಗೆ ವ್ಯವಸ್ಥಿತವಾಗಿ ಸುಖ ಸಿಕ್ಕುವಂತೆ ವರ್ತನೆಯಿದ್ದಾಗ್ಯೂ ನಿಮಗೆ ಮಾತ್ರ ತದ್ವಿರುದ್ಧ ಭಾಸವಾಗುವದು. ೬ ನೇ ಶನಿ ಮತ್ತು ೭ ನೇ ಗುರುವಿದ್ದಾಗ ಅಂದರೆ ಜನೆವರಿ ೨೮ ರಿಂದ ಮಾರ್ಚ ೧೪ ರ ಅವಧಿಯಲ್ಲಿ ಅವರಲ್ಲಿ ಒಬ್ಬನು ಪ್ರಶಂಸನೀಯ ರೀತಿಯಲ್ಲಿ ಉನ್ನತಿ ಹೊಂದುವನು.

೫ ನೇ ಶನಿ ಇರುವವರೆಗೆ ಧಂದೆ ಕೂಲಿಕಾರರಿಗೆ ಸ್ವಲ್ಪ ಮಂದವೇ. ಆದರೆ ಜಾನೆವರಿ ೨೮ ರಿಂದ ೬ನೇ ಶನಿ ಬರುವದರಿಂದ ದಿನದಿನಕ್ಕೆ ಪ್ರಗತಿ ಹೆಚ್ಚುತ್ತ ಹೋಗುವದು. ೭ ನೇ ಗುರು ಕಷ್ಟಾರ್ಜಿತ ಲಾಭಕ್ಕೆ ಅನುಕೂಲನಾಗಿದ್ದರೆ ೮ ನೇ ಗುರು ಗುಪ್ತ ಇಲ್ಲವೆ ಅಕಸ್ಮಾತ್ ಲಾಭಕ್ಕೆ ಬಹಳ ಉತ್ತಮನಿರುವನು. ಯಾರ ಜನ್ಮಕುಂಡಲಿಯಲ್ಲಿ ಗುರು ಚತುರ್ಥ ಇಲ್ಲವೆ ಅಷ್ಟಮ ಸ್ಥಾನದಲ್ಲಿರುವನೋ ಅವರಿಗೆ ಯಾವದೇ ಬಗೆಯ ಅಕಲ್ಪಿತ ರೀತಿಯಿಂದ ದ್ರವ್ಯ ಪ್ರಾಪ್ತಿಯಾಗುವದು; ಸ್ವಲ್ಪೇ ಶ್ರಮದಿಂದ ಬಹಳ ಹಣಸಿಕ್ಕುವದು. ಆಕಸ್ಮಿಕವಾಗಿ ಆಸ್ತಿ ಸಿಕ್ಕುವದು. ಈಗ ಇರುವ ೧೦ ನೇ ರಾಹು ಮತ್ತು ೪ ನೇ ಕೇತು ತಮ್ಮತಮ್ಮ ಉಚ್ಚ ರಾಶಿಯಲ್ಲಿರುವದರಿಂದ ಅವರೂ ಅಕಲ್ಪಿತ ದ್ರವ್ಯಲಾಭಕ್ಕೆ ಬಹಳ ಪೂರಕ ಇರುವರು. ವಿಶೇಷವಾಗಿ ನವೆಂಬರ ೨೫ ರ ವರೆಗೆ ಮತ್ತು ಡಿಸೆಂಬರ ೧೮ ರಿಂದ ಜನೆವರಿ ೧೧ ಮತ್ತು ಫೆಬ್ರುಅರಿ ೫ ರಿಂದ ಮಾರ್ಚ ೧, ಜೂನ ೨೪ ರಿಂದ ಸಪ್ಟೆಂಬರ ೨೮ ಈ ಕಾಲದಲ್ಲಿ ಧಂದೆ ಮಾಡುವವರಿಗೆ ಬಹಳ ಲಾಭವಾಗುವದು. ಕಲಾವಿಷಯಕ ಉದ್ಯೋಗ ಮಾಡುವವರಿಗೆ ಮೇಲಿನ ಅವಧಿಯಲ್ಲೂ ವಿಪುಲ ದ್ರವ್ಯ ಲಾಭವಾಗುವದು.



ನೋಕರರಿಗೆ ೬ ನೇ ಶನಿ ಮತ್ತು ೭ ನೇ ಗುರು ಇರುವ ಕಾಲದಲ್ಲಿ ಅಂದರೆ ಜನವರಿ ೨೮ ರಿಂದ ಮಾರ್ಚ ೧೪ರ ವರೆಗೆ ಮೇಲಿನ ಗ್ರೇಡು ಸಿಕ್ಕುವುದು. ಆದರೂ ಈ ಅವಧಿಯಲ್ಲಿ ಒಂದು ವೇಳೆ ಸಿಕ್ಕದಿದ್ದರೆ ಜೂನ ೩ ರಿಂದ ಸಪ್ಟಂಬರ ೨೯. ಈ ಅವಧಿಯಲ್ಲಂತೂ ಅದು ಸಿಕ್ಕೇ ಸಿಕ್ಕುವುದು.

೭ ನೇ ಗುರು ಬಂದಾಗ ಬದಲಿಯಾದರೆ ಗೈರ ಸೋಯಿ ಸ್ಥಳಕ್ಕೆ ಹೋಗುವುದು. ೮ ನೇ ಗುರು ಬಂದ ಬಳಿಕ ವರ್ಗವಾದರೆ ಒಳ್ಳೇ ಸುಖ-ಸೌಕರ್ಯಗಳಿದ್ದ ಸ್ಥಳ ಸಿಕ್ಕುವುದು. ಈ ಬಗೆಯ ತಿರುವು ಮುರುವು ಅನುಭವ ಉಂಟಾಗುವುದು. ೧೦ ನೇ ರಾಹುವಿನಿಂದ ಜವಾಬದಾರಿ ಕೆಲಸದ ಮೇಲೆ ನಿಮ್ಮ ನೇಮಕವಾಗಬಹುದು. ಅದು ವ್ಯವಸ್ಥಿತ ನಡೆಯುವದೋ ಇಲ್ಲವೋ ಎಂಬ ಬಗ್ಗೆ ನಿಮ್ಮ ಮನಸ್ಸು ವ್ಯಗ್ರವಾಗುವುದು. ವರಿಷ್ಠರ ಮರ್ಜಿ ನಿಮ್ಮ ಇದ್ದರೆ ಮತ್ತೊಮ್ಮೆ ಕಡಮೆಯಾಗುವುದು. ಇದರಿಂದಲೂ ಯಾವ ಬಗೆಯಿಂದ ನಡೆಯಬೇಕೆಂಬುದು ನಿಮಗೆ ತಿಳಿಯದಂತಾಗುವುದು. ಆದರೂ ೬ನೇ ಶನಿ ಇರುವುದರಿಂದ ನಿಮಗೆ ಯಾವ ರೀತಿಯಿಂದಲೂ ಸ್ವಲ್ಪೂ ಹಾನಿಯಾಗುವುದಿಲ್ಲ. ಆ ಬಗ್ಗೆ ಅಂಜಿಕೆ ಬೇಡ. ಫೆಬ್ರುಅರಿ ೧೧ ರಿಂದ ಮಾರ್ಚ ೨೦ರ ವರೆಗೆ ಮತ್ತು ಅಕ್ಟೋಬರ ೨೮ರ ನಂತರ ಅನೇಕರಿಗೆ ಪ್ರತಿಸ್ಪರ್ಧಿಯ ಮೇಲೆ ಪ್ರತ್ಯಕ್ಷವಾಗಿ ಕೈತೋರಿಸಬೇಕಾದ ಸರತಿ ಬರುವುದು. ಈ ವರ್ಷ ಅಲ್ಪಸ್ವಲ್ಪ ದ್ರವ್ಯಸಂಗ್ರಹ ಮಾಡುವ ಇಲ್ಲವೆ ಹಳೆ, ಹೊಸ, ಉಚ್ಚ ವಸ್ತುಗಳ ಸಂಗ್ರಹ ಮಾಡುವ ಯೋಗವಿದ್ದರೂ ಅವುಗಳಲ್ಲಿ ಕೆಲವು ಮಾಯವಾಗುವ ಇಲ್ಲವೆ ಕಳವಾಗಿ ಹೋಗುವ ಅಂಜಿಕೆ ಇದ್ದೇ ಇದೆ. ಆದರೆ ಮಾರ್ಚ ೧ ರಿಂದ ೨೯ ಇಲ್ಲವೆ ಸಪ್ಟಂಬರ ೨೮ ರಿಂದ ಅಕ್ಟೋಬರ ೨೪, ಈ ಅವಧಿಯಲ್ಲಿ ಇದು ಸಂಭವಿಸುವುದು. ವಾಹನಗಳಿದ್ದವರಿಗೆ ಅವುಗಳಿಂದ ದೊರೆಯುವ ಸುಖಕ್ಕಿಂತ ಅವುಗಳ ದುರಸ್ತಿಗಾಗಿ ಆಗುವ ವೆಚ್ಚ ಮತ್ತು ತೊಂದರೆ ಹೆಚ್ಚು. ಕೈಕೆಳಗಿನವರು ೭ ನೇ ಗುರು ಇದ್ದಾಗಿನಕ್ಕಿಂತ ೮ ನೇ ಗುರು ಬಂದಬಳಿಕ ಹೆಚ್ಚು ಅನುಕೂಲರಾಗಿ ನಡೆಯುವರು. ಅದರಂತೆ ೮ನೇ ಗುರು ಬಂದಾಗ ಶುಭಸೂಚಕ ಸ್ವಪ್ನಗಳು ಮೇಲಿಂದ ಮೇಲೆ ಬೀಳುವವು. ಪ್ರವಾಸ ಸ್ವಲ್ಪೇ ಸಂಭವಿಸಿದರೂ ಸುಖಪ್ರವಾಸವೆನಿಸುವುದು. ಉಳಿದೆಲ್ಲ ಸಂಗತಿಗಳಿಗಿಂತ ಮಿತ್ರಸುಖ ಹೆಚ್ಚು ಅನುಕೂಲ ಮತ್ತು ಈ ವರ್ಷ ಅವರ ಉನ್ನತಿಯೇ ಬಹಳಾಗುವುದು.

ದಾವೆ, ಫಿರ್ಯಾದಿ ಇಲ್ಲವೆ ಖಾಸಗಿ ಸ್ಪರ್ಧೆಯಲ್ಲಿ ೬ನೇ ಶನಿ ಬಂದಂದಿನಿಂದ ಯಶಸ್ಸಿಗೆ ಬಹಳ ಅನುಕೂಲ. ಈ ಬಗೆಯ ವಾತಾವರಣ ಜೋರಿನಿಂದ ಉಂಟಾಗುವುದು ಮತ್ತು ಜೂನ ೭ ರಿಂದ ಜುಲೈ ೨೦ ಮತ್ತು ಸಪ್ಟಂಬರ ೫ ರಿಂದ ಅಕ್ಟೋಬರ ೨೮ರ ಮಧ್ಯಂತರ ಅವಧಿಯಲ್ಲಿ ಹೊರಬೀಳುವ ತೀರ್ಪು ಶತ್ರುಗಳಿಗೆ ಇಲ್ಲವೆ ಪ್ರತಿಸ್ಪರ್ಧಿಗಳಿಗೆ ಪೂರ್ಣ ಫಜೀತಿಯಾಗುವ ರೀತಿಯಲ್ಲಿ ಇರುವುದು.

ಈ ರಾಶಿಯ ಗರ್ಭಿಣಿ ಸ್ತ್ರೀಯರು ೭ನೇ ಗುರು ಇದ್ದಾಗ ಸುಲಭವಾಗಿ ಆದರೆ ೮ನೇ ಗುರು ಬಂದನಂತರ ಅಲ್ಪಸ್ವಲ್ಪ ಕಷ್ಟದಿಂದ ಹಡೆಯುವರು. ಆದರೆ ೬ನೇ ಶನಿ ಬಂದಬಳಿಕ ಹಡೆದವರು ಗಂಡು ಮಗುವನ್ನೇ ಹೆರುವರು.

೭ನೇ ಗುರುವಿದ್ದಾಗ ಪರೀಕ್ಷೆ ಕಟ್ಟುವ ವಿದ್ಯಾರ್ಥಿಗಳು ಪಾಸಾಗುವರು. ಇಷ್ಟೇ ಅಲ್ಲ ಅದರಲ್ಲಿಯೂ ಯಾರು ೬ನೇ ಶನಿ ಬಂದಬಳಿಕ ಮೇಲಿನ ಅವಧಿಯ ವರೆಗೆ ಅಂದರೆ ಜನವರಿ ೨೮ ರಿಂದ ಮಾರ್ಚ ೧೪ರ ವರೆಗೆ ಪರೀಕ್ಷೆ ಕಟ್ಟುವರೊ ಅವರು ವರ್ಗವನ್ನು ಸಂಪಾದಿಸುವರು. ಇದು ನಿಶ್ಚಿತ.

## ತುಲಾ

ಈ ರಾಶಿಯವರಿಗೆ ಈ ವರ್ಷ ಮಾರ್ಚ ೧೪ರ ವರೆಗೆ ಸಾಮಾನ್ಯವೇ ಇದ್ದರೂ ಮುಂದೆ ಬಹುತರ ವಿಷಯಗಳಲ್ಲಿ ಒಳ್ಳೇ ಪ್ರಭಾವಿಯಾಗುವುದೆಂಬುದು ನಿಮ್ಮ ಗಮನಕ್ಕೆ ಬರದಿರಲಾರದು.

ಈ ರಾಶಿಯವರಿಗೆ ಜನವರಿ ೨೮ ರ ವರೆಗೆ ೪ ನೇ ಶನಿ ಮತ್ತು ೬ ನೇ ಗುರು ಹೀಗೆ ಮುಖ್ಯ ಗ್ರಹಗಳೆ ಪ್ರತಿಕೂಲರಾಗಿರುವದರಿಂದ ಪ್ರಕೃತಿಗೆ ಸ್ವಲ್ಪ ತೊಂದರೆಯೇ ಎಂದು ತಿಳಿದುಕೊಳ್ಳತಕ್ಕದ್ದು. ಆದರೆ ಅಲ್ಲಿಂದ ಮುಂದೆ ಪಂಚಮ ಶನಿ ಬರುವದರಿಂದ ಅವನು ಕ್ರಮಶಃ ಕ್ಲೇಶವನ್ನು ಕಡಮೆ ಮಾಡುತ್ತ ಹೋಗುವನು ಮತ್ತು ಮುಂದೆ ಮಾರ್ಚ ೧೪ ರಿಂದ ೭ ನೇ ಗುರು ಬಂದ ಬಳಿಕ ನೀವು ಪೂರ್ಣವಾಗಿ ನಿರೋಗಿಗಳಾಗುವಿರಿ. ಆದರೆ ವರ್ಷವಿಡೀ ಉಚ್ಚ ಕೇತು ಮನಸ್ಸಿನಲ್ಲಿ ಸದಾ ಉತ್ಸಾಹವನ್ನು ಇಡುವನು ಮತ್ತು ಯಾವುದೊಂದು ಸಂಗತಿಯನ್ನು ಮಾಡಬೇಕಾದರೆ ಒಳ್ಳೇ ತಳಗಲ್ಲು ಹಾಕಿಯೇ ಪ್ರಾರಂಭಿಸುವಿರಿ ಮತ್ತು ವ್ಯವಸ್ಥಿತವಾಗಿ ಅದನ್ನು ಮುಗಿಸುವಿರಿ. ದೇಹಸುಖ ಆವಶ್ಯಕ ವಿಷಯಗಳಲ್ಲಿ ಮೊದಲಿನಿಂದಲೇ ಚೆನ್ನಾಗಿ ಸಿಕ್ಕುವುದು ಮತ್ತು ಸಪ್ತಮಗುರು ಬಂದ ನಂತರ ಮನಸ್ಸು ಅತ್ಯಂತ ಪ್ರಸನ್ನವುಳಿಯುವುದು.

ಹೆಂಡತಿಯ ಆರೋಗ್ಯ ಮಾತ್ರ ಪಂಚಮ ಶನಿ ಮತ್ತು ಷಷ್ಠಗುರುವಿದ್ದಾಗ ಅಂದರೆ ಜನವರಿ ೨೮ ರಿಂದ ಮಾರ್ಚ ೧೪ರ ಅವಧಿಯಲ್ಲಿ ಒಮ್ಮೆಲೆ ಬಹಳ

ಕೆಡುವ ಅಂಜಿಕೆ ಇದೆ. ಅದಾದರು ಕೂಡ ವಿಶಿಷ್ಟ ಬೇನೆಯಿಲ್ಲದೆ, ಕಾಲು ಒಳಿಯುವದು ನೊದ-ಲಾದ ಆಗಂತುಕ ಕಾರಣಗಳಿಗಾಗಿಯೇ. ಆದರೆ ಉಳಿದ ಸಮಯದಲ್ಲಿ ಅವಳು ನಿರೋಗಿಯಾಗಿ ಉಳಿಯುವಳು ಮತ್ತು ಸಪ್ತಮ ಗುರು ಬಂದ ಮೇಲೆ ಉಭಯತರಲ್ಲಿಯ ಪ್ರೇಮ ಮತ್ತು ಮನಃ ಸಮ್ಮಿಳನ ಅಭೇದ್ಯವುಳಿಯುವುದು. ನಿಮ್ಮ ವಿವಾಹವಿನ್ನೂ ಆಗಿರದಿದ್ದರೆ ಮತ್ತು ಈ ವರ್ಷ ಆಗುವದಿದ್ದರೆ ೬ ನೇ ಗುರುವಿಗಿಂತ ೭ ನೇ ಗುರು ಬಂದ ಬಳಿಕ ಬಾಸಿಂಗಬಲ ಬರುವದರಿಂದ ಅನಾ-ಯಾಸವಾಗಿ ಮತ್ತು ಅಪೇಕ್ಷೆಗಿಂತ ಹೆಚ್ಚು ಒಳ್ಳೇ ಸ್ಥಳ ಸಿಕ್ಕುವದು. ನಿರ್ವಿಘ್ನವಾಗಿ ಸಾಂಗವಾಗು-ವದು. ವಧು ಇಲ್ಲವೆ ವರ ಬಹಳ ಸುಂದರ ಮತ್ತು ಜಾಣ ಇದ್ದರೂ ಅಷ್ಟೇ ಶೀಘ್ರಕೋಪಿ ಎನಿಸುವರು.

ಅದರಂತೆಯೇ ನಿಮ್ಮ ಮಕ್ಕಳ ಮದುವೆಮಾಡುವದಿದ್ದರೆ ಇಡೀ ವರ್ಷ ಅನುಕೂಲ ಕಾಲವಿದೆ. ೭ನೇ ಗುರುವಿಗಿಂತ ೬ನೇ ಗುರುವಿದ್ದಾಗಲೆ ವಿವಾಹ ಬೇಗ ಕೂಡಿಬರುವದು. ಸೊಸೆ ಇಲ್ಲವೆ ಅಳಿಯ ಎಲ್ಲ ವಿಷಯಗಳಲ್ಲಿ ಅಪೇಕ್ಷೆಗಿಂತ ಹೆಚ್ಚು ಅನುರೂಪ ಇರುವರು. ಆದರೆ ಆರನೇ ಶನಿ ಬಂದಾಗ ಕೂಡಿ ಬಂದರೆ ಯಾವದೊಂದು ಕಾರಣದಿಂದ ಉಭಯ ಪಕ್ಷಗಳಲ್ಲಿ ತ್ವೇಷ ಬೆಳೆಯುಹತ್ತುವ ಅಂಜಿಕೆ ಇದೆ. ಅಷ್ಟೇ. ಮಕ್ಕಳ ಉನ್ನತಿಗೆ ಪಂಚಮ ಶನಿ ಬಂದ ಬಳಿಕವೇ ಒಳ್ಳೇ ಚಾಲನ ಸಿಕ್ಕುವುದು. ಮತ್ತು ಸಪ್ತಮಗುರು ಬಂದ ನಂತರ ಅವರಲ್ಲಿ ಕೆಲ ಜನರ ಲೌಕಿಕ ಹೆಚ್ಚಿಗೆ ಬೆಳೆಯುವುದು. ಅದಕ್ಕೆ ಅನುಕೂಲ, ಮಹತ್ವದ ಘಟನೆಗಳು ಸಂಭವಿಸುವವು. ಎಲ್ಲರಿಂದ ಮನದ ಇಚ್ಛೆಯಂತೆ ಸುಖ ಸಿಕ್ಕಹತ್ತುವುದು. ಆದರೆ ೪ನೇ ಶನಿ ಇರುವ ವರೆಗೆ ಕನ್ಯಾ ಇಲ್ಲವೆ ಪುತ್ರರಲ್ಲಿ ಯಾರಾದರೊಬ್ಬರಿಗೆ ಶಾರೀರಿಕ ಇಲ್ಲವೆ ಮಾನಸಿಕ ಕ್ಲೇಶ ಬಹಳವಾಗುವ ಸಂಭವವಿದೆ. ಅವರ ಉನ್ನ-ತಿಗೆ ಫೆಬ್ರುಅರಿ ೬ ರಿಂದ ೨೫, ಮಾರ್ಚ ೨೯ ರಿಂದ ಜೂನ ೩ ಮತ್ತು ಜೂನ ೨೦ ರಿಂದ ಜುಲೈ ೭ ಈ ಕಾಲ ಬಹಳ ಅನ್ನುಕೂಲವಾಗಿ ಪರಿಣಮಿಸುವುದು.

ನಾಲ್ಕನೇ ಶನಿ ಇರುವ ವರೆಗೆ ಧಂದೆಗಾರರಿಗೆ, ಕೂಲಿಕಾರರಿಗೆ ಬಹಳ ಅಡಚಣಿಗಳು ಬರುವವು, ಮತ್ತು ಗುರು ಕೂಡ ಅಲ್ಲಿಯ ವರೆಗೆ ಅಷ್ಟೊಂದು ಅನುಕೂಲವಿಲ್ಲದ್ದರಿಂದ ಬಹಳ ಖಾತ್ರಿಯಿಂದ ಆಗುವ ಕೆಲಸಗಳು ಕೂಡ ಪೂರ್ಣವಾಗದೆ ಅರ್ಧ ಮರ್ಧ ಸ್ಥಿತಿಯಲ್ಲಿಯೇ ಕೊಳೆಯುತ್ತಬೀಳುವವು-ಆದರೆ ಜನೆವರಿ ೨೮ಕ್ಕೆ ಪಂಚಮ ಗುರು ಬಂದನೆಂದರೆ ಒಂದೊಂದು ಸಂಗತಿ ನಿಮ್ಮ ಮನಸ್ಸಿನಂತೆ ಆಗಲು ಪ್ರಾರಂಭಿಸುವದು ಮತ್ತು ಮಾರ್ಚ ೧೮ ಕ್ಕೆ ೭ ನೇ ಗುರು ಬಂದ ಬಳಿಕಂತೂ ಪ್ರತಿಯೊಂದು ಕೆಲಸದಲ್ಲಿ ಅಂದಾಜಿಗಿಂತ ಹೆಚ್ಚು ಯಶಸ್ಸು ಮತ್ತು ತುಂಬ ಲಾಭ ನಿಶ್ಚಯವಾಗಿ ಸಿಕ್ಕುವವು. ವಿಶೇಷವಾಗಿ ಮಾರ್ಚ ೨೦ ರಿಂದ ಜೂನ ೭ರ ವರೆಗಿನ ಅವಧಿಯು ಮತ್ತು ಸಪ್ಟಂಬರ ೫ರ ನಂತರದ ಕಾಲ ಒಳ್ಳೇ ಲಾಭದ್ದಾಗಿ ಪರಿಣಮಿಸುವುದು. ಕೆಲಸದ ಹವ್ಯಾಸವೂ ಬಹಳ ಬೆಳೆವುದು; ಮುಗಿಸಲು ಕೂಡ ಆಗದಷ್ಟು ಅದು ಬೆಳೆಯುವದು. ೭ ನೇ ಗುರು ಇದ್ದಾಗ ಮಿತ್ರರ ಇಲ್ಲವೆ ಪರಿಚಿತರ ಆಶ್ರಯ ಇಲ್ಲವೆ ಸಹಾಯ ಬಹಳ ಸಿಕ್ಕಹತ್ತುವದು. ಮುಖ್ಯ ಸಪ್ಟಂಬರ ೫ ರಿಂದ ಅಕ್ಟೋಬರ ೨೮ ರ ಅವಧಿಯಲ್ಲಿ ಉದ್ಯೋಗದಲ್ಲಿಯ ಪ್ರಾವೀಣ್ಯ ಮತ್ತು ಸರಳತೆಯ ಬಗ್ಗೆ ಎಲ್ಲೆಲ್ಲಿಯೂ ಪ್ರಶಂಸೆಯ ಉದ್ಗಾರಗಳು ಕೇಳಬರಹತ್ತುವವು.

ನೋಕರರಿಗೆ ೬ನೇ ಗುರು ವರಿಷ್ಠರ ಮರ್ಜಿಗೆ ಒಳ್ಳೇ ಅನುಕೂಲ. ೭ ನೇ ಗುರು ಮೇಲಿನ ಗ್ರೇಡು ಸಂಪಾದಿಸಿ ಕೊಡಲಿಕ್ಕೆ ಅನುಕೂಲ. ಈ ಗುರು ಬಂದಾಗ ಬಗೆಬಗೆಯ ದ್ರವ್ಯ ಲಾಭದ ಅವಕಾಶ ಸಿಕ್ಕುವದು. ಲೋಕಮತವೂ ಒಳ್ಳೇ ಅನುಕೂಲ ಉಳಿಯುವದು ಮತ್ತು ಮನಸ್ಸಿನಲ್ಲಿಯ ಬಹುತರ ಎಲ್ಲ ಮಾತುಗಳು ಅಂದಾಜಿನಂತೆ ಆಗಹತ್ತುವವು. ನೋಕರಿಯಲ್ಲಿ ಬದಲಿಯಾಗುವದಿದ್ದರೆ ೪ನೇ ಶನಿ ಇದ್ದಾಗ ಆದರೆ ಬಹಳ ಅನನುಕೂಲ ಸ್ಥಳಕ್ಕೆ ಆಗುವದು. ಆದರೆ ಪಂಚಮ ಶನಿ ಬಂದ ಬಳಿಕ ಒಳ್ಳೇ ಅನುಕೂಲ ಹಾಗೂ ಅಪೇಕ್ಷಿತ ಸ್ಥಳಕ್ಕೆ ಆಗುವದು. ೭ನೇ ಗುರುವಿದ್ದಾಗ ಪತ್ತು ಪ್ರತಿಷ್ಠೆ ಹೆಚ್ಚುವವು. ವಿಶೇಷವಾಗಿ ಮಾರ್ಚ ೫ ರಿಂದ ಸೆಪ್ಟಂಬರ ೧೬ ಮತ್ತು ಅಕ್ಟೋಬರ ೧೭ ರಿಂದ ಮುಂದಿನ ಅವಧಿ ವಿಶೇಷ ಲಾಭದ್ದಾಗಿ ಪರಿಣಮಿಸುವದು. ಸಾಲವಿದ್ದರೆ ೭ನೇ ಗುರುವಿದ್ದಾಗ ಅದು ಬಹಳಷ್ಟು ಮುಟ್ಟುವದು ಮತ್ತು ಕೂಡ

ತಕ್ಕೊಳ್ಳುವದರಲ್ಲಿ ಏನಾದರೂ ಗೊಂದಲವಿದ್ದರೆ ಅಥವಾ ಪೇಚಪ್ರಸಂಗ ಬಂದರೆ ಏಪ್ರಿಲ ೨೦ ರಿಂದ ಜೂನ ೨೪ ಇಲ್ಲವೆ ಜುಲೈ ೨೯ ರಿಂದ ಸಪ್ಟಂಬರ ೧೪ರ ಅವಧಿಯಲ್ಲಿ ನಿವಾರಿಸಲ್ಪಡುವವು. ೩ ನೇ ಕೇತುವಿನಿಂದಾಗಿ ಅಡಚಣಿಯಕಾರ್ಯಗಳಲ್ಲಿ ಕೂಡಾ ಖಾತ್ರಿಯಿಂದ ಯಶಸ್ಸು ಸಿಕ್ಕುವದು. ಕೈಕೆಳಗಿನವರು ಪಂಚಮ ಶನಿ ಇದ್ದಾಗ ೪ ನೆಯವನ ಕಾಲಕ್ಕಿಂತ ಹೆಚ್ಚು ಚೆನ್ನಾಗಿ ನಡೆದುಕೊಳ್ಳುವರು. ೪ನೇ ಶನಿ ಇದ್ದಾಗ ಹೊಸ ವಾಹನಗಳು ಬಹಳ ಕೆಡುವವು. ಮುಂದೆ ೫ನೇ ಶನಿ ಬಂದಾಗ ಹೊಸ ವಾಹನಗಳು ಒಳ್ಳೇ ಕೆಲಸ ಕೊಡುವವು. ಇಷ್ಟೇ ಅಲ್ಲ ಹಳೆಯ ವಾಹನಗಳೂ ಒಳ್ಳೇ ಉಪಯುಕ್ತವೆನಿಸುವವು. ಶನಿ ೬ನೇಯವನಾದಾಗ ಮಿತ್ರರ ಮತ್ತು ಬಂಧುಗಳ ಉನ್ನತಿಯಾಗುವದು ಮತ್ತು ಬಗೆಬಗೆಯ ಸುವಾರ್ತೆಗಳು ಕಿವಿಗೆ ಬೀಳುವವು. ಅತಿ ದೂರದ ಪ್ರವಾಸ ಸಂಭವಿಸುವ ಯೋಗ ಈ ವರ್ಷ ಕಡಮೆ ಇದ್ದರೂ ಸಮೀಪದ ಪ್ರವಾಸ ಮಾತ್ರ ಮೇಲಿಂದ ಮೇಲೆ ಘಟಿಸಿ ಸುಖ ಪ್ರವಾಸವೆನಿಸುವದು. ಆದರೆ ಸಪ್ಟಂಬರ ೨೯ ರಿಂದ ಅಕ್ಟೋಬರ ೧೫ ರ ಅವಧಿಯಲ್ಲೂ ಮಹತ್ವದ ಲೇಖನ ಕೆಲಸಗಳನ್ನು ಸ್ವಲ್ಪ ಜಪ್ಪಿಸಿಯೇ ಮಾಡಬೇಕು. ಏಕೆಂದರೆ ಆಗ ಮೋಸವಾಗುವ ಸಂಭವವಿದೆ.

ದಾವೆ ಫಿರ್ಯಾದಿ ಖಾಸಗಿ ಸ್ಪರ್ಧೆಯ ಕಾರ್ಯಗಳಲ್ಲಿ ಪಂಚಮಗುರುವಿರುವವರೆಗೆ ತೊಂದರೆ ಮತ್ತು ವೆಚ್ಚ ಹೆಚ್ಚಿಗೆ ಆಗಿಯೂ ಅಪಯಶಸ್ಸು ಬರುವ ಅಂಜಿಕೆ ಇದೆ. ಆದರೆ ೬ ನೇ ಗುರು ಬಂದ ಬಳಿಕ ಮತ್ತು ವಿಶೇಷವಾಗಿ ಯಾವ ಖಟ್ಲೆಯ ತೀರ್ಪು ಏಪ್ರಿಲ ೨೮ ರಿಂದ ೭ ಜೂನ ಮತ್ತು ಜುಲೈ ೨೦ ರಿಂದ ಸಪ್ಟಂಬರ ೫ ರೊಳಗಾಗಿ ಹೊರಬೀಳುವದೋ ಅದರಲ್ಲಿ ಪೂರ್ಣ ಯಶಸ್ಸು ಸಿಕ್ಕುವದು.

ಗರ್ಭಿಣಿ ಸ್ತ್ರೀಯರು ಜನೆವರಿ ೨೮ ಕ್ಕಿಂತ ಮೊದಲು ಅಂದರೆ ೪ನೇ ಶನಿ ಇರುವಾಗ ಹಡೆದರೆ ಅವರಿಗೆ ಬಹಳ ಕಷ್ಟವೆನಿಸುವದು. ಅನಂತರ ಮಾರ್ಚ ೧೪ ರೊಳಗಾಗಿ ಹಡೆದರೆ ಅವರಿಗೆ ಕಷ್ಟವೇನೊ ಕಡಿಮೆ ಎನಿಸುವದು ಆದರೆ ಹುಟ್ಟುವ ಮಕ್ಕಳು ಮಾತ್ರ ಬಹಳ ಅಶಕ್ತರಾಗುವರು. ಆದರೆ ಸುದೈವದಿಂದ ಮಾರ್ಚ ೧೪ ರ ನಂತರ ಅಂದರೆ ಸಪ್ತಮ ಗುರು ಬಂದಾಗ ಹಡೆದವರಿಗೆ ಕಷ್ಟವಾಗುವದಿಲ್ಲ ಇಷ್ಟೇ ಅಲ್ಲ ಅನೇಕರಿಗೆ ಗಂಡು ಹುಟ್ಟಿದ ಸಂತೋಷವೂ ಆಗುವದು.

ಜನವರಿ ೨೮ಕ್ಕಿಂತ ಮೊದಲು ಪರೀಕ್ಷೆ ಕಟ್ಟಿದರೆ ಅವರಿಗೆ ಯಶಸ್ಸಿನ ಖಾತ್ರಿ ಬಹಳ ಕಡಮೆ ಇದೆ. ಅನಂತರ ಮಾರ್ಚ ೧೪ ರ ವರೆಗೆ ಯಾರು ಪರೀಕ್ಷೆ ಕಟ್ಟುವರೊ ಅವರು ಕನಿಷ್ಠ ಗುಣಗಳನ್ನಾದರೂ ಪಡೆದು ಪಾಸಾಗುವರು. ಆದರೆ ಅನಂತರ ಪರೀಕ್ಷೆ ಕಟ್ಟಿದರೆ ಪ್ರಥಮ ಅಥವಾ ದ್ವಿತೀಯ ವರ್ಗಗಳನ್ನು ಪಡೆಯುವರು.

## ವೃಶ್ಚಿಕ

ಈ ಸಲ ಒಟ್ಟಾರೆ ಈ ರಾಶಿಯವರಿಗೆ ಶಾರೀರಿಕ ಮಾನಸಿಕ ದೃಷ್ಟಿಯಿಂದ ಸ್ವಲ್ಪ ಕಷ್ಟದ್ದಾಗಿದ್ದರೂ ಉದ್ಯೋಗ ಕೂಲಿ ಮೊದಲಾದವುಗಳಲ್ಲಿ ಒಳ್ಳೆ ಯಶಸ್ಸು ಸಿಕ್ಕುವದು. ವ್ಯಕ್ತಿಮತ್ವವೂ ಬೆಳೆಯುವದು.

ಆರೋಗ್ಯ ದೃಷ್ಟಿಯಿಂದ ಮಾರ್ಚ ೧೪ ರ ವರೆಗೆ ಈ ವರ್ಷ ೫ನೇ ಗುರುವಿನಿಂದಾಗಿ ಬಹಳ ಉತ್ತಮವಿದೆ. ೬ನೇ ಗುರು ಬಂದನಂತರವೂ ಅದಷ್ಟೊಂದು ಕೆಡಲಾರದು. ಆದರೆ ಈ ವರ್ಷವಿಡಿ ೮ ನೇ ರಾಹುವಿನಿಂದಾಗಿ ಆರೋಗ್ಯ ಕೆಟ್ಟಂತೆ ಮೇಲಿಂದ ಮೇಲೆ ಎನಿಸಹತ್ತುವದು. ಅಂದರೆ ಒಂದು ಕ್ಷಣ ತಲೆನೊಯ್ಯಹತ್ತಿದೆಂದೆನಿಸಿದರೆ, ಮತ್ತೊಂದು ಕ್ಷಣಕ್ಕೆ ಹೊಟ್ಟೆಕಡಿಯಹತ್ತಿದಂತೆನಿಸುವುದು. ಮಧ್ಯಂತರದಲ್ಲಿಯೇ ಕೈಕಾಲು ಒಜ್ಜೆಯಾದಂತೆ ಇಲ್ಲವೆ ಕಳೆ ಬರುವಂತೆ ಎನಿಸುವುದು. ಅದರಂತೆಯೇ ಅನೇಕರಿಗೆ ಪಿಶಾಚಬಾಧೆಯೆನಿಸಿದರೆ ಬೇರೆ ಕೆಲವರಿಗೆ ಮಾಟಮಂತ್ರಮಾಡಿಸಿದಂತೆ ಎನಿಸುವುದು. ಈ ಬಗೆಯ ಎನಿಸಿಕೆ ವಿಶೇಷವಾಗಿ ಜುಲೈ ೨೦ ರಿಂದ ಸಪ್ಟಂಬರ ೫ ಮತ್ತು ಅಕ್ಟೋಬರ ೨೦ರ ನಂತರದ ಅವಧಿಯಲ್ಲಿ ಹೆಚ್ಚಿಗೆನಿಸುವುದು. ಆದುದರಿಂದ ಅದರ ಪರಿಹಾರ್ಥ ೧೮ ಸಾವಿರ ರಾಹು ಜಪ ಮತ್ತು ೧೯ ಸಾವಿರ ಗುರುಜಪ ಮಾಡಬೇಕು. ಅಂದರೆ ಮೊದಲು ಹಾಗೆ ಎನಿಸುವುದಿಲ್ಲ. ಒಂದುವೇಳೆ ಹಾಗೆ ಭಾಸವಾಗಹತ್ತಿದರೆ ಬೇಗನೆ ಅದರ ನಿರಸನವಾಗುವುದು. ಉಳಿದ ವಿಷಯಗಳಲ್ಲಿಯ ದೇಹಸುಖಕ್ಕೆ ಈ ವರ್ಷ ಜನವರಿ ೨೮ರ ವರೆಗೆ ಬಹಳ ಉತ್ತಮ ಮತ್ತು ಅನಂತರ ಮಧ್ಯಮ. ಜನವರಿ ೨೮ ರಿಂದ ಬರುವ ೪ನೇ ಶನಿ ಸಾಂಪತ್ತಿಕ ದೃಷ್ಟಿಯಿಂದ ಉತ್ತಮವಾಗಿದ್ದರೂ ಮಾನಸಿಕ ದೃಷ್ಟಿಯಿಂದ ಸುಳ್ಳೊಂದು ಸೊಟ್ಟೊಂದು ವಿವಂಚನೆಯುಂಟುಮಾಡುವನು.

ಹೆಂಡತಿಯ ಆರೋಗ್ಯ ಅನುಕೂಲವಾಗಿದ್ದರೂ ದ್ವಿತೀಯ ಅಂದರೆ ಕುಟುಂಬಸ್ಥಾನದ ಕೇತುವಿನಿಂದಾಗಿ ನಿಮ್ಮನಿಮ್ಮಲ್ಲಿ ಬಹಳಷ್ಟು ಕೂಡಿ ನಡೆಯಲಾರದು. ೬ನೇ ಗುರುವಿದ್ದಾಗ ಗೃಹಕಲಹ ಹೆಚ್ಚುವುದು, ಆದರೆ ಅದೇ ಗುರು ಕುಟುಂಬದಲ್ಲಿಯ ಪ್ರತಿಯೊಂದು ವ್ಯಕ್ತಿಯ ವಯಸ್ಸು ಮತ್ತು ಕರ್ತೃತ್ವಾನುಸಾರವಾಗಿ ಒಳ್ಳೇ ಉತ್ಕರ್ಷವನ್ನುಂಟುಮಾಡುವನು. ಆದರೆ ನಿಮ್ಮನಿಮ್ಮಲ್ಲಿ ಮತ್ತೈಕ್ಯ ಎಂದೂ ಉಳಿಯಲಾರದು. ೪ನೇ ಶನಿ ಇದ್ದಾಗ ತಂದೆಯೊಡನೆ ಬಹಳ ದ್ವೇಷವುಂಟಾಗುವುದು, ಇಲ್ಲವೆ ಅವನಿಗೆ ಬಹಳ ದೊಡ್ಡ ಶರೀರಪೀಡೆಯಾಗುವುದು. ಒಂದೊಮ್ಮೆ ನಿಮ್ಮ ಮದುವೆ ಆಗಿರದಿದ್ದರೆ ಮತ್ತು ಈ ವರ್ಷ ಮಾಡಿಕೊಳ್ಳುವದಿದ್ದರೆ ವರ್ಷವಿಡಿ ಅದಕ್ಕೆ ಬಾಶಿಂಗಬಲವಿದ್ದರೂ ೫ನೇ ಗುರು ಇರುವವರೆಗೆ ಏನೂ ತಕರಾರು ಇಲ್ಲದೆ ಅದು ನಡೆದುಹೋಗುವುದು. ೬ನೇ ಗುರು ಬಂದನಂತರ ಮೊದಲು ಕೂಡುವುದಕ್ಕೆ ಅನಂತರ ಪ್ರತ್ಯಕ್ಷವಾಗಿ ಲಗ್ನಸಮಾರಂಭ ನೆರವೇರುವುದಕ್ಕೆ ಅನೇಕ ಅಡ್ಡಿ ಅಡಚಣಿ ನಿರ್ಮಾಣವಾಗುವುವು. ವಧೂ ಮತ್ತು ವರ ಬಹಳ ಜಾಣ ಮತ್ತು ಪೂರ್ಣ ಅನುರೂಪ ಮತ್ತು ಬಹಳ ಸುದೈವಿಗಳಾಗಿದ್ದುದು ಅಲ್ಪಾವಧಿಯಲ್ಲಿಯೇ ಗೊತ್ತಾಗುವುದು.

ಅದರಂತೆಯೇ ನಿಮ್ಮ ಮಕ್ಕಳ ಮದುವೆ ಈ ವರ್ಷ ಮಾಡುವದಿದ್ದರೆ ಅದಕ್ಕೆ ೫ನೇ ಗುರುವಿರುವಾಗಲೆ ಹೆಚ್ಚು ಅನುಕೂಲ. ೬ನೇ ಗುರು ಬಂದನಂತರ ಅಷ್ಟೊಂದು ಅನುಕೂಲವಿಲ್ಲ. ಒಂದುವೇಳೆ ಆದರೂ ಪ್ರತ್ಯಕ್ಷ ಕಾರ್ಯದಲ್ಲಿ ಅನೇಕ ಅಡಚಣಿಗಳು ಬಂದು ಮನೋಭಂಗವಾಗುವದು. ೫ ನೇ ಗುರುವಿದ್ದಾಗ ನಡೆದ ಲಗ್ನ ಸಮಾರಂಭ ಬಹಳ ವಿಜೃಂಭಣೆಯಿಂದ ಮತ್ತು ಅತ್ಯಂತ ಸಮಾಧಾನದಿಂದ ಸಾಂಗವಾಗಿ ಎಲ್ಲರಿಗೂ ಆಶ್ಚರ್ಯವೆನಿಸುವದು. ಸೊಸೆ ಇಲ್ಲವೆ ಅಳಿಯ ರೂಪದಿಂದ ಎಷ್ಟು ಮನಸ್ಸಿಗೆ ಬರುವರೋ ಅಷ್ಟು ಗುಣ ಮತ್ತು ಸ್ವಭಾವದಿಂದ ಇರುವದಿಲ್ಲ. ಮಕ್ಕಳ ಉನ್ನತಿಗೆ ಈ ವರ್ಷ ಬಹಳ ಉತ್ತಮವಿದೆ. ಗುರು-ಶನಿ ಮತ್ತು ರಾಹುಗಳು ಯಾವ ಸ್ಥಾನದಲ್ಲಿದ್ದರೂ ಇದಕ್ಕೇನು ವ್ಯತ್ಯಯ ಬರುವದಿಲ್ಲ. ಪ್ರತಿಯೊಬ್ಬರು ತಮ್ಮ ಬುದ್ಧಿ ಮತ್ತು ಕರ್ತೃತ್ವದಿಂದ ಮುಂದೆ ಬರುವರು. ಆದರೆ ೬ ನೇ ಗುರು ಬಂದಾಗ ಕೆಲವರು ನಿಮ್ಮೊಡನೆ ಅಷ್ಟೊಂದು ಸರಳ ರೀತಿಯಿಂದ ನಡೆಯಲಾರರು.

ಈ ವರ್ಷ ಧಂದೆ ಮಾಡುವವರಿಗೆ ೫ ನೇ ಗುರು

ವಿದ್ದಾಗ ಮತ್ತು ನೋಕರರಿಗೆ ೬ನೇ ಗುರು ಬಂದಾಗ ಅನುಕೂಲ. ೪ನೇ ಶನಿ ಬಂದನಂತರ ಅಂದರೆ ಜನೆವರಿ ೨೮ ರ ನಂತರ ಸ್ಥಾವರ ಜಂಗಮ ಸಂಗ್ರಹದ ಯೋಗ ಅತ್ಯಂತ ಅಲ್ಪಾಯಾಸದಿಂದ ಒದಗಿಬರುವದು. ಅಷ್ಟರಲ್ಲಿ ಅಷ್ಟೊಂದು ಆದರ ಉಳಿಯದಿದ್ದರೂ ನಿಮ್ಮ ಕರ್ತೃತ್ವದ ಛಾಪು ಎಲ್ಲರ ಮೇಲೆ ಬೀಳುವದು. ಉದ್ಯೋಗಸ್ಥರಿಗೆ ಪಾಲುಗಾರರು ಇಲ್ಲವೆ ಸಹಾಯಕರು ಅನುಕೂಲ ದೊರಿತು ಬಹಳಷ್ಟು ಲಾಭವಾಗುವದು. ಸಾರ್ವಜನಿಕ ಕಾರ್ಯಗಳಲ್ಲಿಯೂ ವರ್ಚಸ್ಸು ಹೆಚ್ಚಿ ಕೀರ್ತಿ ಮೊಳಗುವದು.

ನೋಕರರಿಗೆ ೪ನೇ ಶನಿ ಇದ್ದಾಗ ವರಿಷ್ಠರು ಸ್ವಲ್ಪ ಪ್ರತಿಕೂಲರಾಗುವ ಸಂಭವವಿದ್ದರೂ ನಿಮ್ಮ ಕರ್ತೃತ್ವದ ಪ್ರಭಾವದಿಂದಾಗಿ ೬ನೇ ಗುರು ಬಂದಾಗ ಮೇಲಿನ ಗ್ರೇಡು ಸಿಕ್ಕುವುದು ನಿಶ್ಚಿತ. ಆ ಬಗೆಯ ಯೋಗ. ಬಹುಶಃ ಜೂನ ೭ ರಿಂದ ಜುಲೈ ೨೦ ಇಲ್ಲವೆ ಸಪ್ಟಂಬರ ೫ ರಿಂದ ಅಕ್ಟೋಬರ ೨೮ ರೊಳಗಾಗಿ ಬರುವುದು. ಬದಲಿ ಸಹಸಾ ಆಗುವದಿಲ್ಲ, ಒಂದುವೇಳೆ ಬದಲಿ ಆದುದಾದರೆ ಕೆಲಸದ ದೃಷ್ಟಿಯಿಂದ ಆರಾಮವಿದ್ದ ಆದರೆ ವಾಸ್ತವ್ಯದ ದೃಷ್ಟಿಯಿಂದ ಸ್ವಲ್ಪ ಅನಾನುಕೂಲವಿದ್ದ ಸ್ಥಳಕ್ಕೆ ಆಗುವುದು. ಡಿಸೆಂಬರ ೧ ರಿಂದ ಫೆಬ್ರುಅರಿ ೬, ಫೆಬ್ರುಅರಿ ೨೫ ರಿಂದ ಮಾರ್ಚ ೧೩, ಜೂನ ೨೦ ರಿಂದ ಜುಲೈ ೪ ಮತ್ತು ಸಪ್ಟಂಬರ ೨೯, ರಿಂದ ಅಕ್ಟೋಬರ ೧೫. ಈ ಕಾಲ ದ್ರವ್ಯಲಾಭಕ್ಕೆ ಬಹಳ ಅನುಕೂಲವಿದೆ. ಅಲ್ಲದೆ ಉಚ್ಚವಿದ್ದ ಅನೇ ರಾಹು ಅನೇಕರಿಗೆ ಗುಪ್ತ ಅರ್ಥಾತ್. ಆಕಸ್ಮಿಕ ಲಾಭವನ್ನುಂಟುಮಾಡುವ ಯೋಗವೂ ಇದೆ. ೫ನೇ ಗುರು ಬಂದಾಗ ಯಾತ್ರೆಯೂ ಒದಗಿಬರುವುದು. ಇಲ್ಲವೆ ಧಾರ್ಮಿಕ ಕೃತ್ಯಮಾಡುವಿರಿ. ಈ ಗುರುವಿದ್ದಾಗ ಮಿತ್ರಸುಖ ಚೆನ್ನಾಗಿ ಸಿಕ್ಕುವುದು. ಅದರಂತೆಯೆ ಪೂಜ್ಯವ್ಯಕ್ತಿಯ ಸಹವಾಸವೂ ದೊರೆಯುವುದು.

ದಾವೆ, ಫಿರ್ಯಾದಿ ಇಲ್ಲವೆ ಸ್ಪರ್ಧೆಯ ಕೆಲಸಗಳಲ್ಲಿ ೫ನೇ ಗುರು ಒಳ್ಳೇ ಯಶಸ್ಸನ್ನು ದೊರಕಿಸಿ ಕೊಡುವನು. ಆದರೆ ೬ನೇ ಗುರು ಪ್ರತಿಯೊಂದು ಕೆಲಸವನ್ನು ಅನಿರ್ಣೀತ ಮತ್ತು ಸಂಶಯದಲ್ಲಿ ಇಡುವನು. ಆದರೂ ಎಪ್ರಿಲ ೨೮ ರಿಂದ ಜೂನ ೭ ರ ಅವಧಿಯಲ್ಲಿ ಶತ್ರುಗಳು ಇಲ್ಲವೆ ವಿರೋಧಿಗಳಲ್ಲಿ ಒಬ್ಬಿಬ್ಬರು ಈ ಜಗತ್ತನ್ನೇ ಬಿಟ್ಟುಹೋಗುವ ಸಂಭವವಿದೆ.

ಗರ್ಭಿಣಿ ಸ್ತ್ರೀಯರಲ್ಲಿ ೫ನೇ ಗುರುವಿದ್ದಾಗ ಹಡೆಯುವವರಿಗೆ ಅಷ್ಟೊಂದು ಕಷ್ಟವೆನಿಸದು. ಆದರೆ ೬ನೇ ಗುರು ಬಂದನಂತರ ಹಡೆದರೆ ಆ ಬಗೆಯ ಕಷ್ಟವೆನಿಸಬಹುದಾದರೂ ಗಂಡು ಹುಟ್ಟುವವು.

೫ನೇ ಗುರುವಿದ್ದಾಗ ಪರೀಕ್ಷೆ ಕಟ್ಟಿದ ವಿದ್ಯಾರ್ಥಿಗಳು ನಿಶ್ಚಯವಾಗಿ ಪಾಸಾಗುವರು. ಆದರೆ ೬ನೇ ಗುರು ಬಂದನಂತರ ಪರೀಕ್ಷೆ ಕಟ್ಟಿದವರ ಬಗ್ಗೆ ಅಷ್ಟೊಂದು ನಿಶ್ಚಿತವಾಗಿ ಪಾಸಾಗಿಯೇ ತೀರುವರೆಂದು ಹೇಳಲಿಕ್ಕೆ ಬರುವದಿಲ್ಲ.

ರೂಪ ಮತ್ತು ಗುಣದಿಂದ ಸಾಮಾನ್ಯರೇ ಇರುವರು. ಆದರೆ ಒಳ್ಳೆ ಸುದೈವಿಗಳು ೫ನೇ ಗುರುವಿದ್ದಾಗಲಿ ಮಕ್ಕಳ ಉನ್ನತಿ ಬಹಳ ಭರದಿಂದ ಆಗಹತ್ತುವದು ಮತ್ತು ಅವರೆಲ್ಲರಿಂದ ನಿಮಗೊಳ್ಳೆ ಸುಖ ಸಿಕ್ಕಹತ್ತುವದು.

ಧಂದೆ ಕೂಲಿಕಾರರಿಗೆ ಜನವರಿ ೨೮ ರಿಂದ ೩ನೇ ಶನಿ ಬಂದ ಬಳಿಕ ಬಹಳ ಉತ್ಕರ್ಷವಾಗಹತ್ತುವದು. ೫ನೇ ಗುರು ಬಂದ ಬಳಿಕವಂತೂ ನ ಭೂತೋ ನ ಭವಿಷ್ಯತಿ ಅನುಭವ ಬರುವದು. ಧಂದೆಗಾರರಿಗೆ ಫೆಬ್ರುಅರಿ ೫ ರಿಂದ ಮಾರ್ಚ ೨೯, ೨೪ ಜುಲೈಯಿಂದ ಸಪ್ಟಂಬರ ೧೧ ಮತ್ತು ಸಪ್ಟಂಬರ ೨೮ ರಿಂದ ಮುಂದಿನ [illegible]ಲ್ಲಿ ಕಾಲ ಅತ್ಯಂತ ಪ್ರಗತಿಯದು ಮತ್ತು ತುಂಬ ಲಾಭದಾಯಕವೆನಿಸುವುದು. ಸಾಡೇಸಾತಿಯ ಕಾಲಕ್ಕೆ ನಷ್ಟವಾದ ಹಕ್ಕುಗಳೆಲ್ಲ ಮತ್ತೆ ದೊರೆಯುವವು. ವಿರುದ್ಧವಿದ್ದ ಜನರೆಲ್ಲ ಪುನಃ ಮಿತ್ರರಾಗುವುದು. ಸರಕಾರದಲ್ಲಿ ನೆನೆಗುದಿಗೆ ಬಿದ್ದ ಕೆಲಸಗಳು ಕೂಡಲೆ ಮನಸ್ಸಿನಂತೆ ಆಗುವವು. ಸಹಾಯಕರ್ತರು ಮತ್ತು ಆಶ್ರಯದಾತರು ನಿಮ್ಮ ಹಿತಾರ್ಥ ಮನಃಪೂರ್ವಕವಾಗಿ ಪ್ರಯತ್ನಿಸುವರು. ನಾಲ್ಕನೇ ಗುರು ಇರುವವರೆಗೆ ಧಂದೆಯಲ್ಲಿ ಬಹಳ ಸ್ಪರ್ಧೆ ನಡೆಯುವುದು. ಆದರೆ ೫ನೇ ಗುರು ಬಂದ ಬಳಿಕ ನಿಮ್ಮ ಕೈಯ ಮೇಲಾಗಿ ಜನಪ್ರಿಯತೆ ಹೆಚ್ಚುವುದು. ನಿಮ್ಮ ಉದ್ಯೋಗ ಪಾಲುಗಾರಿಕೆಯದಾಗಿದ್ದರೆ ೫ನೇ ಗುರು ಬಂದಾಗ ನಲಿಯುತ್ತ ಕಲಿಯುತ್ತ ಪಾಲುಗಾರರು ಪಾಲುಗಾರಿಕೆ ಹಿಂತೆಗೆದು

## ಧನು

ಈ ವರ್ಷದಲ್ಲಿ ಹಿಂದಿನ ಕಷ್ಟ-ದುಃಖ ಮತ್ತು ಅಡಚಣಿಗಳು ನಿವಾರಣೆಯಾಗಿ ಭಾವೀ ಉತ್ಕರ್ಷದ ತಳಹದಿಯನ್ನು ಗಟ್ಟಿ ಮಾಡುವಂತಹ ಯೋಗವಿದೆ ಎಂಬುದು ಸುಸ್ಪಷ್ಟವಾಗಿದೆ.

ವರ್ಷವಿಡಿ ದೇಹಸ್ಥಾನದಲ್ಲಿರುವ ಕೇತು ಪ್ರಕೃತಿಗೆ ಅಷ್ಟೊಂದು ಅನುಕೂಲವಾಗಿಲ್ಲವಾದರೂ ಕಳೆದ ಏಳು-ಏಳುಕಾಲು ವರ್ಷಗಳಿಂದ ಈ ರಾಶಿಯವರಿಗಿದ್ದ ಸಾಡೇಸಾತಿ ಜನವರಿ ೨೮ಕ್ಕೆ ಒಮ್ಮೆ ಕೊನೆಗೊಳ್ಳುವದರಿಂದ ಮಾನಸಿಕ ಸಮಾಧಾನ ಬಹಳ ವಿಷಯಗಳಲ್ಲಿ ಕಂಡುಬರುವುದು. ೪ನೇ ಗುರುವಿದ್ದಾಗ ಸ್ವಲ್ಪ ಶಾರೀರಿಕ ಕ್ಲೇಶವಾದರೂ ಮಾರ್ಚ ೧೪ ರಿಂದ ಗುರು ೫ನೆಯವನಾಗುವದರಿಂದ ಆರೋಗ್ಯ ಕೆಲಮಟ್ಟಿಗೆ ಸುಧಾರಿಸುವುದು. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಸಾಡೇಸಾತಿ ಬಿಟ್ಟಂದಿನಿಂದ ಅಂದರೆ ಜನವರಿ ೨೮ ರಿಂದ ಶನಿ ೩ನೆಯವನಾಗಿ ಬರುವದರಿಂದ ಒಳ್ಳೇ ಚೆನ್ನಾಗಿ ಸಿಕ್ಕಹತ್ತುವುದು ಮತ್ತು ೫ನೇ ಗುರು ಬಂದ ಮೇಲೆ ನಿಶ್ಚಿತಗೊಳಿಸಿದಂತೆ ಪ್ರತಿಯೊಂದು ಘಟನೆ ಸಂಭವಿಸಹತ್ತುವದು.

ಹೆಂಡತಿಯ ಆರೋಗ್ಯವಾದರೂ ಸಾಡೇಸಾತಿ ಮುಗಿದ ನಂತರವೇ ಸುಧಾರಿಸುವುದು. ಆದರೆ ಭಾರ್ಯಾಸ್ಥಾನದಲ್ಲಿದ್ದ ಉಚ್ಚರಾಹು ಪ್ರತಿಯೊಂದು ವಿಷಯದಲ್ಲಿ ತನ್ನ ವರ್ಚಸ್ಸನ್ನು ಕೂಡಿಸಲು ಪ್ರಯತ್ನಿಸುವನು. ಅದರಲ್ಲಿ ಆಗಾಗ ಪರಸ್ಪರರಲ್ಲಿ ವಾಗ್ವಾದವೇಳುವುದು. ಆದರೆ ನಿಮ್ಮ ವಿವಾಹವಿನ್ನೂ ಆಗಿರದಿದ್ದರೆ ಮತ್ತು ಈ ವರ್ಷ ಮಾಡಿಕೊಳ್ಳುವದಿದ್ದರೆ ೩ನೇ ಶನಿ ಬಂದ ಬಳಿಕವೇ ಒಳ್ಳೇ ವಾತಾವರಣ ಕೂಡಿಬರಲಿಕ್ಕೆ ಉಂಟಾಗುವುದು ಮತ್ತು ೫ನೇ ಗುರು ಬಂದಬಳಿಕವಂತೂ ಅಲ್ಪಾವಧಿಯಲ್ಲಿಯೇ ಮತ್ತು ಅತ್ಯಂತ ವ್ಯವಸ್ಥಿತವಾಗಿ ಲಗ್ನವಾಗಿಹೋಗುವುದು. ಜನ್ಮದ ಸಹಕಾರಿ. ವಧು ಇಲ್ಲವೆ ವರ ಸ್ವತಃಕ್ಕಿಂತ ಹೆಚ್ಚು ಸುಂದರ, ಹುಷಾರ ಮತ್ತು ಕರ್ತೃತ್ವಶಾಲಿ ಇರುವರು. ನಿಮ್ಮ ಮಕ್ಕಳ ಮದುವೆ ಮಾಡುವದಿದ್ದರೆ ೪ನೇ ಗುರುವಿಗಿಂತ ೫ನೇ ಗುರುವಿದ್ದಾಗ ಒಳ್ಳೆ ಬಾಶಿಂಗಬಲವಿದೆ. ಆಕಾಲಕ್ಕೆ ಅದು ಅಲ್ಪಾಯಾಸದಿಂದ ಯೋಗ್ಯ ಸ್ಥಳದೊಡನೆ ಆಗುವದು. ಆದರೆ ಪ್ರತ್ಯಕ್ಷ ಲಗ್ನ ಕಾರ್ಯದಲ್ಲಿ ಅಡಚಣಿ ಬರುವದರಿಂದ ಮುಹೂರ್ತವನ್ನು ಬದಲು ಮಾಡಬೇಕಾಗುವದು. ಸೊಸೆ ಇಲ್ಲವೆ ಅಳಿಯ

ಕೊಳ್ಳುವರು. ಅನಾಯಾಸವಾಗಿ ನಿಮಗೆ ಸ್ವತಂತ್ರ ರೀತಿಯಿಂದ ಧಂದೆ ಬೆಳೆಸಲು ಅವಕಾಶ ಸಿಕ್ಕುವುದು ಮತ್ತು ಪಾಲುಗಾರರು ಬಿಟ್ಟುಹೋದುದು ಅನುಕೂಲವೇ ಆಯಿತೆಂಬ ಅನುಭವ ಬರುವದು.

ಅದರಂತೆ ನೋಕರರಿಗೆ ೩ನೇ ಶನಿ ಬಂದಾಗ ವರಿಷ್ಠರ ಮರ್ಜಿಯಾಗಿ ಒಳ್ಳೆ ಕೆಲಸದ ಮೇಲೆ ನೇಮಕವಾಗುವರು. ೫ನೇ ಗುರು ಬಂದ ಬಳಿಕ ಲಾಭ ಹೆಚ್ಚುವುದು ಮತ್ತು ಜೂನ ೭ ರಿಂದ ೨೦ ಜುಲೈ ಇಲ್ಲವೆ ಆಕ್ಟೋಬರ ೨೮ ರಿಂದ ಮುಂದೆ ಮೇಲಿನ ಗ್ರೇಡು ಖಾತ್ರಿಯಿಂದ ಸಿಕ್ಕುವುದು. ಆದರೆ ಬದಲಿಯಾದರೆ ಇರುವಿಕೆಯ ದೃಷ್ಟಿಯಿಂದ ಅನುಕೂಲ. ಆದರೆ ಕೆಲಸದ ದೃಷ್ಟಿಯಿಂದ ದಗದಗಿಯ ಸ್ಥಳಕ್ಕೆ ಆಗುವುದು. ಕೈ ಕೆಳಗಿನವರು ಬೇಕೆಂತಲೆ ಇಲ್ಲವೆ ಅಜ್ಞಾನದಿಂದ ನಿಮಗೆ ತೊಂದರೆಯಾಗುವಂತೆ ವರ್ತಿಸುವರು. ಈ ವರ್ಷದ ಸುರುವಿಗೆ ನವಮ, ದಶಮ ಮತ್ತು ಏಕಾದಶ ಅಂದರೆ ಭಾಗ್ಯ, ಕರ್ಮ ಮತ್ತು ಲಾಭಸ್ಥಾನಗಳಲ್ಲಿ ಅನುಕ್ರಮವಾಗಿ ರವಿ, ಬುಧ, ಶುಕ್ರರು ದ್ವಾದಶ ಊರ್ಫ ವ್ಯಯಸ್ಥಾನದಲ್ಲಿ ಇದ್ದು ವ್ಯಯೇಶ ಮಂಗಳನೂ ಇದೇ ಸ್ಥಾನದಲ್ಲಿರುವದರಿಂದ ಎಷ್ಟೊಂದು ಜಪ್ಪಿಸಿ ಮತ್ತು ಕಾಟಕಸರಿಯಿಂದ ನಡೆದರೂ ಖರ್ಚು ಮಿತಿಮೀರಿಯೇ ಆಗುವದು. ಆದರೆ ಅದು ಯೋಗ್ಯ ಮತ್ತು ಅಪೇಕ್ಷಿತ ಕಾರ್ಯಗಳಲ್ಲಿ ಆಗುವದರಿಂದ ಮನಸ್ಸಿಗೆ ಹೆಚ್ಚು ಸಮಾಧಾನವೇ ಎನಿಸುವದು. ವಿಶೇಷವಾಗಿ ನವಂಬರ ೨೫ ರಿಂದ ಡಿಸೆಂಬರ ೧೮ ಜನೆವರಿ ೧೧ ರಿಂದ ಮಾರ್ಚ ೧, ಮಾರ್ಚ ೧೫ ರಿಂದ ಎಪ್ರಿಲ ೧, ಜುಲೈ ೨೪ ರಿಂದ ಸಪ್ಟಂಬರ ೧ ಮತ್ತು ಸಪ್ಟಂಬರ ೨೮ ರಿಂದ ಅಕ್ಟೋಬರ ೨೪ ಈ ಅವಧಿ ದ್ರವ್ಯಲಾಭಕ್ಕೆ ಬಹಳ ಅನುಕೂಲವಾಗಿದೆ. ಪೂಜ್ಯ ವ್ಯಕ್ತಿಗಳಲ್ಲಿ ಒಬ್ಬಿಬ್ಬರ ವಿಯೋಗವಾಗುವ ಸಂಭವವಿದೆ. ಜನೆವರಿ ೨೮ ರಿಂದ ಮಾರ್ಚ ೧೪ ರ ಮಧ್ಯಂತರ ಕಾಲದಲ್ಲಿ ಪ್ರವಾಸ ಸಂಭವಿಸಿದರೆ ಅದು ಬಹಳ ತೊಂದರೆಯದೆನಿಸುವದು. ಆದರೆ ಉಳಿದ ಕಾಲದಲ್ಲಿ ಅದು ಆದರೆ ಒಳ್ಳೆ ಸುಖಪ್ರವಾಸವಾಗುವದು. ವಾಹನ ಸುಖ ಯಾವಾಗಲೂ ಅನುಕೂಲ ಮತ್ತು ಲೇಖನ ಕೆಲಸಗಳಿಗಿಂತ ಪ್ರತ್ಯಕ್ಷ ಭೆಟ್ಟಿ ಹೆಚ್ಚು ಅನುಕೂಲ. ೩ ನೇ ಶನಿ ಇದ್ದಾಗ ಬಂಧುಗಳ. ೫ನೇ ಗುರು ಇದ್ದಾಗ ಮಕ್ಕಳ ಮತ್ತು ಮಿತ್ರರ ಉನ್ನತಿ ಚೆನ್ನಾಗಿ ಆಗುವುದು.

ದಾವೆ, ಫಿರ್ಯಾದಿ ಮತ್ತು ಸ್ಪರ್ಧೆಯ ಕೆಲಸಗಳಲ್ಲಿ ಸಾಡೇಸಾತಿ ಇರುವ ವರೆಗೆ ಯಶಸ್ಸು ಸಿಕ್ಕುವುದು ಕಠಿಣವೇ. ಆದರೆ ಅದು ಬಿಟ್ಟನಂತರ ಅರ್ಥಾತ್ ಶನಿ ೩ನೇ ಸ್ಥಾನಕ್ಕೆ ಬಂದಂದಿನಿಂದ ಅನುಕೂಲ ವಾತಾವರಣ ಉತ್ಪನ್ನವಾಗಹತ್ತುವುದು ಮತ್ತು ಫೆಬ್ರುಅರಿ ೫ ರಿಂದ ಮಾರ್ಚ ೨೯ ಮತ್ತು ಸಪ್ಟಂಬರ ೨೮ ರಿಂದ ಅಕ್ಟೋಬರ ೨೪ ರೊಳಗಾಗಿ ತೀರ್ಪು ಹೊರಬಿದ್ದರೆ ಅದು ನಿಮಗೆ ಅನುಕೂಲವಾಗುವುದು ಮತ್ತು ಹಾನಿ ತುಂಬಿ ಬರುವುದು. ಆದರೆ ಪ್ರತಿಪಕ್ಷಿಗಳು ಮಾತ್ರ ಖಾಸಗಿರೀತಿಯಿಂದ ಮೇಲಿಂದ ಮೇಲೆ ಉಪದ್ರವ ಕೊಡುವುದು ಇದ್ದೇ ಇರುವುದು.

ಈ ರಾಶಿಯ ಗರ್ಭಿಣಿ ಸ್ತ್ರೀಯರು ಹಡೆಯುವವರಿದ್ದರೆ ಅವರಿಗೆ ಪ್ರಸೂತಿ ಕಷ್ಟ ಸ್ವಲ್ಪಿಲ್ಲ ಸ್ವಲ್ಪ ಆಗೇತೀರುವದು. ಆದರೆ ೪ ನೇ ಗುರು ಇದ್ದಾಗ ಹಡೆದರೆ ಹೆಣ್ಣು ಹುಟ್ಟುವದು. ೫ ನೇ ಗುರು ಬಂದ ಬಳಿಕ ಹಡೆದರೆ ಗಂಡು ಹುಟ್ಟುವ ಯೋಗವಿದೆ. ಬಾಲಕ ಒಳ್ಳೆ ಸಶಕ್ತ ಮತ್ತು ದೀರ್ಘಾಯು ಇರುವನು.

ಸಾಡೇಸಾತಿ ಇದ್ದಾಗ ಅಂದರೆ ಜನವರಿ ೨೮ ಕ್ಕಿಂತ ಮೊದಲು ಯಾವ ವಿದ್ಯಾರ್ಥಿಗಳು ಪರೀಕ್ಷೆ ಕಟ್ಟುವರೋ ಅವರ ಪ್ರತಿಯೊಂದು ಪೇಪರ ಕಠಿಣವೆನಿಸಿ ಪಾಸಾಗುವ ಸಂಭವ ಕಡಿಮೆ. ಆದರೆ ೪ನೇ ಗುರುವಿರುವಾಗ ಅಂದರೆ ಜನವರಿ ೨೮ರಿಂದ ಮಾರ್ಚ ೧೪ ರ ಮಧ್ಯಂತರ ಅವಧಿಯಲ್ಲಿ ಪರೀಕ್ಷೆ ಕಟ್ಟಿದ ವಿದ್ಯಾರ್ಥಿಗಳು ಸಾಮಾನ್ಯ ರೀತಿಯಿಂದಲಾದರೂ ಪಾಸಾಗುವದು ನಿಶ್ಚಿತ. ಮಾರ್ಚ ೧೪ ರ ನಂತರ ಪರೀಕ್ಷೆ ಕಟ್ಟಿದವರು ೨ ನೇ ವರ್ಗದಲ್ಲಿಯಾದರೂ ಪಾಸಾಗಿಯೇ ತೀರುವರು. ಇದು ನಿಶ್ಚಿತ.

# ಮಕರ

ಒಟ್ಟಿಗೆ ಈ ರಾಶಿಯವರಿಗೆ ಬಹುತರ ವಿಷಯಗಳಲ್ಲಿ ಸಮ್ಮಿಶ್ರ ಯಶಾಪಯಶಸ್ಸು ಸಿಕ್ಕುವವಾದ್ದರಿಂದ ಜಪ್ಪಿಸಿ ಇರಬೇಕು.

ಕಳೆದ ಐದು ವರುಷಗಳಂತೆ, ಈ ವರುಷವನ್ನು ಸಾಡೇಸಾತಿಯಲ್ಲಿಯೇ ಕಳೆಯಬೇಕಾದ ಪ್ರಸಂಗ ವಿದ್ದರೂ ಕಲ್ಲಿಗಿಂತ ಮಣ್ಣು ಮಿದುವೆಂಬಂತೆ ಜನೆವರಿ ೨೮ ರಿಂದ ಶನಿ ೨ ನೆಯವನು ಬಂದ ಮೇಲೆ ಆರೋಗ್ಯ ಬಹಳ ಚೆನ್ನಾಗಿ ಉಳಿಯುವುದು ಹಿಂದಿನ ಚಿಂತೆಯೆಲ್ಲ ಬಹಳ ಮಟ್ಟಿಗೆ ಕಡಮೆಯಾಗುತ್ತ ಹೋಗುವುದು. ವರ್ಷವಿಡಿ ೬ ನೇ ಅಂದರೆ ರಿಪುಸ್ಥಾನದಲ್ಲಿದ್ದ ರಾಹು ಉಚ್ಚನಾಗಿರುವದರಿಂದ ಆತ್ಮವಿಶ್ವಾಸ ಹೆಚ್ಚಿ ಪ್ರತಿಯೊಂದರಲ್ಲಿ ಯಶಸ್ಸೇ ಸಿಕ್ಕುವುದು. ಬರುವ ೨ನೇ ಶನಿಯಿಂದ ಕೌಟುಂಬಿಕ ಕಲಹ ಸ್ವಲ್ಪ ಹೆಚ್ಚಾಗುವುದು ಆದರೆ ಅವನು ತನ್ನ ರಾಶಿಯಾದ ಕುಂಭದಲ್ಲಿಯೇ ಇರುವದರಿಂದ ಅದು ಸ್ಪಷ್ಟವಾಗಿ ಜನರ ಕಣ್ಣಿಗೆ ಎದ್ದು ತೋರುವಂತೆಹೆಚ್ಚದೆ,ಒಳಗೊಳಗೇ ನಡೆಯುವದು. ಅದರಿಂದ ಕುಟುಂಬದ ವರ್ಚಸ್ಸಿಗೆ ಯಾವುದೇ ಬಗೆಯಿಂದ ಬಾಧೆಯುಂಟಾಗದೆ ವಿರುದ್ಧವಾಗಿ ಮಾರ್ಚ ೨೦ ರಿಂದ ಎಪ್ರಿಲ ೨೮ ಮತ್ತು ಜುಲೈ ೨೦ ರಿಂದ ಸಪ್ಟಂಬರ ೫ ಅವಧಿಯಲ್ಲಿ ನಿಮ್ಮ ವರ್ಚಸ್ಸು ಹೆಚ್ಚುವುದು. ಉಳಿದ ವಿಷಯಗಳಲ್ಲಿಯ ದೇಹಸುಖ ಗುರು ೩ ನೆಯವನಿರುವಾಗ ಅಂದರೆ ಮಾರ್ಚ ೧೪ ರ ವರೆಗೆ ಎಷ್ಟು ಅನುಕೂಲ ದೊರೆಯುವುದೊ ಮುಂದೆ ೪ ನೇ ಯವನು ಬಂದನಂತರ ಸಿಕ್ಕಲಾರದು. ನಾಲ್ಕನೆಯವನಿದ್ದಾಗ ಆಪ್ತರು ನೆರೆಯವರು, ನೌಕರಚಾಕರರು ಮತ್ತು ಆಶ್ರಿತರು ಇವರಿಂದ ಒಂದಿಲ್ಲೊಂದು ಬಗೆಯ ಉಪದ್ರವವಾಗಹತ್ತುವುದು ಹಿಡಿದರೆ ಕಚ್ಚುತ್ತದೆ ಬಿಟ್ಟರೆ ಓಡುತ್ತದೆ ಎನ್ನುವ ರೀತಿಯಲ್ಲಿ ಇಬ್ಬಗೆಯ ಪರಿಸ್ಥಿತಿ ಅನೇಕ ಸಲ ಬರುವುದು.

೩ ನೇ ಗುರುವಿದ್ದಾಗ ಸ್ತ್ರೀ ಸುಖಕ್ಕೆ ಬಹಳ ಅನುಕೂಲ. ಅನಂತರವಾದರೂ ಅವಳ ಪ್ರಕೃತಿ ಚೆನ್ನಾಗಿ ಉಳಿದರೂ ಉಭಯತರಲ್ಲಿ ಅಷ್ಟೊಂದು ಮನಃಸಮ್ಮಿಳನ ಉಳಿಯುವದಿಲ್ಲ. ಇದಕ್ಕೆ ಕೆಲ ಸಂದರ್ಭಗಳಲ್ಲಿ ನಿಮ್ಮ ಹಟಮಾರಿತನವೇ ಕಾರಣವಾಗುವದು. ಅಕ್ಟೋಬರ ೨೮ ರ ನಂತರ ಅವಳಿಗೆ ಸಣ್ಣದೊಡ್ಡ ಅಪಘಾತದ ಅಂಜಿಕೆಯಿದೆ. ಆದರೆ ಗಂಡಾಂತರ ಸ್ವಲ್ಪೂ ಇಲ್ಲ ಆದರೂ ಈ ತೊಂದರೆಯೆಲ್ಲ ಸಾಡೇಸಾತಿಯ ದ್ಯೋತಕವಾಗಿರುವದರಿಂದ ಅದರ ಪರಿಹಾರಾರ್ಥ ೨೩ ಸಾವಿರ ಶನಿ ಜಪ ಮಾಡುವದೊಳಿತು. ನಿಮ್ಮ ಮದುವೆಯೇ ಇನ್ನೂ ಆಗುವದಿದ್ದರೆ ೨ ನೇ ಶನಿ ಮತ್ತು ೩ ನೇ ಗುರು ಇಬ್ಬರೂ ಏಕಕಾಲಕ್ಕಿದ್ದಾಗ ಅಂದರೆ ಜನೆವರಿ ೨೮ ರಿಂದ ಮಾರ್ಚ ೧೪ ರ ಮಧ್ಯಂತರ ಅವಧಿಯಲ್ಲಿ ಆಯಾಸವಿಲ್ಲದೆ ಬಾಶಿಂಗಬಲ ಒದಗಿಬರುವದು. ಆದರೆ ಉಳಿದ ವೇಳೆಯಲ್ಲಿ ಅಷ್ಟೊಂದು ಅನುಕೂಲವಿಲ್ಲ. ೪ ನೇ ಗುರು ಬಂದಾಗ ಮದುವೆ ಕೂಡಿಯೂ ಮುರಿಯಿತೆಂಬ ಅನುಭವ ಬರುವ ಸಂಭವವಿದೆ. ವಧೂ-ವರ ಕೂಡ ನೋಡಲಿಕ್ಕೆ ಬಹಳ ಇಜ್ಜೋಡು. ಸ್ವಭಾವದಿಂದ ಬಹಳಷ್ಟು ಅಂಜುಬುರುಕ ಇರುವರು ಮತ್ತು ಕ್ಷುಲ್ಲಕ ಕಾರಣಗಳಿಗಾಗಿ ಜೀಗಟೊಡನೆ ಬಹಳಷ್ಟು ದ್ವೇಷ ಬೆಳೆಯುವದು. ಬಹುತರ ಜನರಿಗೆ ಪರಸ್ಪರರಲ್ಲಿ ಸಹವಾಸವೂ ತಪ್ಪುವದು.

ನಿಮ್ಮ ಮಕ್ಕಳ ಮದುವೆ ಮಾಡುವದಿದ್ದರೆ ಅದಕ್ಕೂ ಈ ವರ್ಷ ಅಷ್ಟೊಂದು ಅನುಕೂಲ ಬಾಶಿಂಗಬಲವಿಲ್ಲ. ಒಂದು ವೇಳೆ ಕೂಡಿ ಬಂದರೆ ೩ ನೇ ಗುರು ಇದ್ದಾಗಲೆ ಶಕ್ಯವಾಗುವದು. ಸೊಸೆ ಇಲ್ಲವೆ ಅಳಿಯ ನೋಡಲಿಕ್ಕೆ ಸುಂದರ. ಆದರೆ ಸ್ವಭಾವದಿಂದ ಅಷ್ಟೊಂದು ಚೆನ್ನಾಗಿ ಇರಲಿಕ್ಕಿಲ್ಲ. ಮಕ್ಕಳಿಂದ ಸಿಕ್ಕುವ ಸುಖ ಕೂಡ ೩ ನೇ ಗುರು ಇದ್ದಾಗ ಸಿಕ್ಕಷ್ಟು ೪ ನೇ ಗುರು ಇದ್ದಾಗ ಸಿಕ್ಕಲಾರದು. ಮಕ್ಕಳಲ್ಲಿ ಕೆಲವರ ಉತ್ಕರ್ಷ ೩ ನೇ ಗುರು ಇದ್ದಾಗ ಆಗುವದು. ಆದರೆ ೪ ನೇ ಗುರು ಮತ್ತು ೭ ನೇ ಮಂಗಳ ಇದ್ದಾಗ ಅಂದರೆ ಸಪ್ಟಂಬರ ೫ರಿಂದ ಅಕ್ಟೋಬರ ೨೦ರ ಅವಧಿಯಲ್ಲಿ ಅವರಲ್ಲಿ ಒಬ್ಬಿಬ್ಬರ ಅಪಕರ್ಷವಾಗುವ ಸಂಭವ ಇದೆ.

ಧಂದೆಗಾರರಿಗೆ ಕೂಲಿಕಾರರಿಗೆ ಈ ವರ್ಷ ೨ ನೇ ಶನಿ ಬಂದ ಬಳಿಕ ಯಶಸ್ಸಿನ ಪ್ರಮಾಣ ಹೆಚ್ಚು ಹತ್ತುವದು. ಧಂದೆಯುವರಿಗೆ ೩ ನೇ ಗುರುವಿದ್ದಾಗ ನೋಕರರಿಗೆ ೪ ನೇ ಗುರು ಇದ್ದಾಗ ಹೆಚ್ಚು ಲಾಭ ವಾಗುವದು. ಪರೋಪಕಾರದ ಕೆಲವು ಕೃತ್ಯಗಳು ನಿಮ್ಮಿಂದ ಆಗುವವು. ಧಂದೆಗಾರರ ಕೀರ್ತಿ ಬಹಳ ಹೆಚ್ಚುವದು. ಅನೇಕರಿಗೆ ಆಯಾ ಕಠಿಣ ಪ್ರಸಂಗಗಳಲ್ಲಿ ಮಿತ್ರರ ಮತ್ತು ಆಶ್ರಯದಾತರ ಸಹಾಯ ಲಭಿಸುವದು.

ನೋಕರರಿಗೆ ೨ ನೇ ಶನಿ ೪ನೇ ಗುರು ಮೇಲಿನ ಗ್ರೇಡು ಸಿಕ್ಕಲಿಕ್ಕೆ ಬಹಳ ಅನುಕೂಲ. ಅನೇಕರಿಗೆ ಫೆಬ್ರುಅರಿ ೫ ರಿಂದ ಮಾರ್ಚ ೧ ಎಪ್ರಿಲ ೨೯ ರಿಂದ ಜೂನ ೨೪ ಮತ್ತು ಸಪ್ಟಂಬರ ೧ರಿಂದ ೨೮. ಈ ಅವಧಿಯಲ್ಲಿ ಗ್ರೇಡು ಸಿಕ್ಕುವ ಪ್ರಬಲ ಯೋಗವಿದೆ. ವರಿಷ್ಠರ ಮರ್ಜಿ ೪ನೇ ಗುರು ಇರುವಾಗ ಬಹಳ ಉತ್ತಮ. ಆದರೆ ಅವರು ನಿಮಗೆ ಮಾಡಲಿಕ್ಕೆ ಕೊಟ್ಟ ಕೆಲಸ ಕಾರ್ಯಗಳು ಸ್ವಲ್ಪ ಅಪಮಾನಕಾರಕವೆನಿಸುವವು, ಹಾಗಿಲ್ಲದಿದ್ದರೂ ನಿಮಗೆ ಹಾಗೆನಿಸುವದು. ಬದಲಿಯಾದರೆ ಎಲ್ಲ ಬಗೆಯಿಂದ ಅನನುಕೂಲವಿರುವ ಸ್ಥಳಕ್ಕೆ ಆಗುವ ಅಂಜಿಕೆ ಇದೆ. ಲೋಕಮತವೂ ೪ ನೇ ಗುರು ಇರುವಾಗ ಪ್ರತಿಕೂಲವೆನಿಸುವುದು. ಆದರೆ ವರ್ಷಾರಂಭದಲ್ಲಿ ಲಾಭಸ್ಥಾನದಲ್ಲಿ ಲಾಭೇಶ ಮಂಗಳನೊಡನೆ ಬೇರೆ ಅನೇಕ ಗ್ರಹಗಳಿರುವದರಿಂದ ದ್ರವ್ಯಲಾಭದಲ್ಲಿ ಸ್ವಲ್ಪವೂ ವ್ಯತ್ಯಯುವಾಗಲಾರದು. ತದ್ವಿರುದ್ಧ ಅನೇಕರಿಗೆ ವರ್ಷಾರಂಭದಿಂದ ಡಿಸೆಂಬರ ೧೫ ರ ವರೆಗೆ ಇಲ್ಲವೆ ಫೆಬ್ರುಅರಿ ೧೨ ರಿಂದ ಮಾರ್ಚ ೧೩ ಇಲ್ಲವೆ ಎಪ್ರಿಲ ೧೪ ರಿಂದ ಜೂನ ೧೪ ಇಲ್ಲವೆ ಆಗಷ್ಟ ೧೬ ರಿಂದ ಸಪ್ಟಂಬರ ೧೬ ಈ ಕಾಲದಲ್ಲಿ ಗುಪ್ತ ಇಲ್ಲವೆ ಆಕಸ್ಮಿಕ ಲಾಭವಾಗುವ ಯೋಗವೂ ಇದೆ. ಬಹಳಷ್ಟು ಸಂಗ್ರಹದ ಯೋಗವಿಲ್ಲದಿದ್ದರೂ ಹಿಂದಿನ ಕೊಡತಕ್ಕೊಳುವ ವ್ಯವಹಾರವನ್ನು ಪೂರ್ಣ ನಿಕಾಲೆ ಮಾಡಬಹುದಾಗಿದೆ. ೧೨ನೇ ಕೇತು ನಿಮ್ಮಲ್ಲಿ ಧರ್ಮಶ್ರದ್ಧೆಯನ್ನು ಹೆಚ್ಚಿಸುವನು. ಈ ವರ್ಷ ದೊಡ್ಡಯಾತ್ರೆ ಮಾಡುವ ಯೋಗವಿಲ್ಲದಿದ್ದರೂ ಸಣ್ಣ ಸಣ್ಣ ಸುಖಕರ ಪ್ರವಾಸ ಘಟಿಸುವವು. ಧಾರ್ಮಿಕ ಕೃತ್ಯಗಳು ನಡೆಯುವವು. ಭೆಟ್ಟಿ ಮತ್ತು ಲೇಖನಕೆಲಸ ಬಹಳಷ್ಟು ಮನಸ್ಸಿನಂತೆ ನಡೆಯುವವು. ಆದರೆ ನೀವು ಎಣಿಸಿದಷ್ಟು ಬೇಗ ಮಾತ್ರ ನಡೆಯಲಾರವು.

ದಾವೆ-ಖಟ್ಲೆ ಇಲ್ಲವೆ ಸ್ಪರ್ಧೆಯಲ್ಲಿ ೬ನೇ ರಾಹುವಿನಿಂದಾಗಿ ಅನುಕೂಲ ವಾತಾವರಣ ಸದಾ ಇದ್ದುದೆ. ಶತ್ರುಗಳಲ್ಲಿ ಇಬ್ಬರದಂತೂ ಪೂರ್ಣ ಫಜೀತಿಯಾಗುವುದು. ವಿಶೇಷವಾಗಿ ಫೆಬ್ರುಅರಿ ೬ ರಿಂದ ಮಾರ್ಚ ೧೩, ಜುಲೈ ೪ ರಿಂದ ೨೩ ಮತ್ತು ಸಪ್ಟಂಬರ ೨೯ ರಿಂದ ಅಕ್ಟೋಬರ ೧೫ ಈ ಅವಧಿಯಲ್ಲಿ ಹೊರಬೀಳುವ ತೀರ್ಪು ಸಂಪೂರ್ಣವಾಗಿ ಯಶಸ್ವಿಯಾಗಿರುವವು.

ಈ ರಾಶಿಯ ಗರ್ಭಿಣಿ ಸ್ತ್ರೀಯರಲ್ಲಿ ಮಾರ್ಚ ೧೫ ರೊಳಗಾಗಿ ಹಡೆಯುವವರಿಗೆ ಸ್ವಲ್ಪೂ ಕಷ್ಟವಾಗುವುದಿಲ್ಲ. ಆದರೆ ಅವರಿಗೆ ಹೆಣ್ಣು ಹುಟ್ಟುವ ಸಂಭವ ಹೆಚ್ಚಿಗೆ ಇದೆ. ಈ ತಾರೀಖಿನ ನಂತರ ಹಡೆದರೆ ಅವರಿಗೆ ಪ್ರಸೂತಿ ಕಷ್ಟ ಸ್ವಲ್ಪಿಲ್ಲ ಸ್ವಲ್ಪ ಅನಿಸುವುದು. ಆದರೆ ಅನೇಕರಿಗೆ ಗಂಡು ಹುಟ್ಟುವುದರಿಂದ ಸಂತೋಷ ಹೊಂದುವರು.

ಯಾರ ಪರೀಕ್ಷೆ ೩ನೇ ಗುರುವಿನಲ್ಲಿ ಆಗುವುದೋ ಅವರಿಗೆ ಯಶಸ್ಸುನಿಶ್ಚಿತ. ಆದರೆ ೪ನೇ ಗುರುವಿನಲ್ಲಿ ಪರೀಕ್ಷೆ ಕಟ್ಟಿದವರಿಗೆ ಯಶಸ್ಸಿನ ಅಷ್ಟೊಂದು ಖಾತ್ರಿ ಇಲ್ಲ.

## ಕುಂಭ

ಈ ರಾಶಿಯುವರಿಗೆ ೧೨ನೇ ಶನಿ ಇರುವ ವರೆಗೆ ಬಹಳ ತೊಂದರೆ. ಅನಂತರ ೨ನೇ ಗುರು ಇರುವ ವರೆಗೆ ಸಾಮಾನ್ಯ ಯಶದ್ದು. ಮುಂದೆ ೩ನೇ ಗುರು ಬಂದಬಳಿಕ ಬಹುತರ ಎಲ್ಲ ವಿಷಯಗಳಲ್ಲಿ ಸುಯಶಸ್ಸು ಸಿಕ್ಕ ಪ್ರತ್ಯಯ ಬರುವುದು.

ಈ ರಾಶಿಯುವರಿಗೆ ಹಿಂದಿನ ೨॥ ವರ್ಷಗಳಂತೆ ಈ ವರ್ಷವೂ ಸಾಡೇಸಾತಿ ಇದ್ದೇ ಇರುವದು. ಆದರೆ ಅಂತರವಿಷ್ಟೇ, ಈ ವರೆಗೆ ಶನಿ ೧೨ನೇ ಅಂದರೆ ವ್ಯಯಸ್ಥಾನದಲ್ಲಿದ್ದನು. ಇನ್ನು ಮುಂದೆ ಜನೆವರಿ ೨೮ ರಿಂದ ಅವನು ಜನ್ಮಸ್ಥನಾಗುವನು. ಅವನ ಈ ರಾಶಿಯು ಮಕರದಂತೆ ಅವನದೇ ಆಗಿದ್ದರೂ ಆ ರಾಶಿಗಿಂತ ಈ ರಾಶಿಯುವರಿಗೆ ಹೆಚ್ಚಿನ ಫಲವನ್ನು ಕೊಡಹತ್ತುವನು. ಅರ್ಥಾತ್ ಈ ರಾಶಿಗೆ ಅವನು ಬಂದ ನಂತರ ಪ್ರಕೃತಿ ಚೆನ್ನಾಗಿ ಉಳಿಯುವುದು. ಮೊದಲಿನಂತೆ ಅನುತ್ಸಾಹದ ವಿಚಾರವನ್ನು ಬಿಟ್ಟುಗೊಟ್ಟು ಉತ್ಸಾಹ ಹೆಚ್ಚುವದು. ಆದರೂ ಅಕ್ಟೋಬರ ೨೮ ರಿಂದ ಹೊಟ್ಟೆನೋವು ಇಲ್ಲವೆ ಕಾಲುನೋವಿನಿಂದ ಸ್ವಲ್ಪ ತೊಂದರೆಯಾಗುವ ಸಂಭವವಿದೆ. ಉಳಿದ ವಿಷಯಗಳಲ್ಲಿ ದೇಹಸುಖ ಅನುಕೂಲವೇ. ಆದರೆ ೨ನೇ ಗುರು ಇರುವಾಗ ಅಂದರೆ ಮಾರ್ಚ ೧೪ ರ ವರೆಗೆ ಕೌಟುಂಬಿಕ ಉತ್ಕರ್ಷದ ಒಂದೆರಡು ಘಟನೆಗಳು ಪ್ರತ್ಯಕ್ಷವಾಗಿ ಒದಗಿಬರುವವು. ಪರಿಣಾಮವಾಗಿ ಮನೆತನದ ಲೌಕಿಕ ಹೆಚ್ಚುವುದು. ಅದೇ ರೀತಿಯಾಗಿ ಬಗೆಬಗೆಯ ಸುವಾರ್ತೆಗಳು ಮೇಲಿಂದ ಮೇಲೆ ಕಿವಿಗೆ ಬೀಳುವವು. ೩ನೇ ಗುರು ಬಂದಾಗ ಬಂಧುಗಳು ಮತ್ತು ಮಿತ್ರರ ಉತ್ಕರ್ಷವಾಗಿ ಮುಂದೆ ಅದು ನಿಮ್ಮ ಹಿತಕ್ಕೆ ಸಹಾಯಕವಾಗಿ ಪರಿಣಮಿಸುವದು.

ಸ್ತ್ರೀಸುಖಕ್ಕೆ ಈ ವರ್ಷ ೧ನೇ ಶನಿ ಬಂದಂದಿನಿಂದ ೩ನೇ ಗುರು ಬರುವ ವರೆಗೆ ಅಂದರೆ ಜನವರಿ ೨೮ ರಿಂದ ಮಾರ್ಚ ೧೪ರ ವರೆಗಿನ ಅವಧಿಯಲ್ಲಿ ಅಷ್ಟೊಂದು ಅನುಕೂಲವಿಲ್ಲ. ಏಕೆಂದರೆ ಅವಳ ಆರೋಗ್ಯವಾದರೂ ಚೆನ್ನಾಗಿರುವುದಿಲ್ಲ. ಅವಳು ಪರಸ್ಥಳಕ್ಕೆ ಹೋಗುವುದರಿಂದ ಅವಳ ಸಹವಾಸ ಸುಖವಾದರೂ ತಪ್ಪುವುದು. ಅದರಂತೆಯೇ ೨ ನೇ ಗುರುವಿಗಿಂತ ೩ ನೇ ಗುರು ಬಂದಾಗ ಉಭಯತರಲ್ಲಿ ಹೆಚ್ಚು ಮತ್ತೈಕ್ಯವುಂಟಾಗುವುದು. ಆದರೆ ಈ ವರ್ಷ ಭಾರ್ಯಾಸ್ಥಾನದಲ್ಲಿರುವ ೭ ನೇ ಹರ್ಶಲ್ ಪರಿಣಾಮವಾಗಿ ಅವಳ ಸ್ವಭಾವ ಬಹಳ ಲಹರಿಯದಾಗಿ ಅವಳಲ್ಲಿ ಸಿಟ್ಟು ಹೆಚ್ಚುವುದು. ಕೆಲ ಸಲ ತೀರ ಕ್ಷುಲ್ಲಕ ಕಾರಣಗಳಿಗಾಗಿಯೂ ಈ ದುರ್ಗುಣ ಅವಳಲ್ಲಿ ಜಾಗ್ರತವಾಗುವುದು. ನಿಮ್ಮ ವಿವಾಹ ಇನ್ನೂ ಆಗಬೇಕಿದ್ದರೆ ೨೮ ಜನವರಿಗಿಂತ ಮೊದಲು ಇಲ್ಲವೆ ಮಾರ್ಚ ೧೪ ರ ನಂತರ ಅಲ್ಪಾಯಾಸವಾಗಿ ಮದುವೆಯಾಗುವುದು. ಆದರೆ ೨ನೇ ಗುರುವಿಗಿಂತ ೩ನೇ ಗುರು ಬಂದಾಗ ಆಗುವ ಲಗ್ನದಲ್ಲಿ ವಧೂವರರು ಎಲ್ಲ ರೀತಿಯಿಂದ ಸಮಾನರಾಗಿರುವಂತೆ ತೋರಿದರೂ ಪ್ರತಿಯೊಬ್ಬರು ಸ್ವತ: ನಡೆವಳಿಕೆಯಲ್ಲಿ ಹೆಚ್ಚು ಸ್ವಚ್ಛ ಮತ್ತು ಟಾಪಟೀಪ ಹಾಗು ವಕ್ರಶೀರ ಇದ್ದದ್ದು ಕಂಡುಬರುವುದು.

ನಿಮ್ಮ ಮಕ್ಕಳ ಮದುವೆಯಾಗುವುದಿದ್ದರೆ ಅದಕ್ಕೆ ೧ ನೇ ಶನಿ ಬಂದಂದಿನಿಂದ ಒಳ್ಳೆ ಬಾಶಿಂಗ ಬಲ ಬರುವುದರಿಂದ ಅನಾಯಾಸವಾಗಿ ಲಗ್ನವಾಗಿ ಹೋಗುವುದು. ಆದರೆ ಮಕ್ಕಳ ಸ್ಥಾನದ ಸಪ್ತಮದಲ್ಲಿ ಇರುವ ಕೇತುವಿನಿಂದ ಸಿಕ್ಕುವ ಸ್ಥಳ ಬಹಳ ದೂರದ್ದಿರುವುದು. ೨ ನೇ ಕ್ಕಿಂತ ೩ ನೇ ಗುರು ಬಂದಾಗ ಲಗ್ನ ಬಹಳ ವಿಜೃಂಭಣೆಯಿಂದ ಆಗುವುದು. ಸೊಸೆ ಇಲ್ಲವೆ ಅಳಿಯ ಪ್ರಥಮ ದರ್ಶನದಲ್ಲಿ ಆಕರ್ಷಕವಾಗಿ ತೋರದಿದ್ದರೂ ಸ್ವಲ್ಪ ಸಮಯದ ಸಹವಾಸದ ನಂತರ ಪೂರ್ಣ ಒಪ್ಪಿಗೆಯಾಗುವದು. ಮತ್ತು ಮೊದಲಿನ ತಪ್ಪು ತಿಳುವಳಿಕೆ ದೂರವಾಗುವದು. ಕಾಯಂವಾಗಿ ಸಂತತಿಯ ಉನ್ನತಿಗೆ ಉಚ್ಚ ರಾಹು ಒಳ್ಳೆ ಉತ್ಕರ್ಷಕಾರಕನಿರುವನು. ಆದರೆ ಅವರಲ್ಲೂ ಕೆಲವರು ಶಿಕ್ಷಣ ಇಲ್ಲವೆ ವ್ಯವಸಾಯಕ್ಕಾಗಿ ಅತಿ ದೂರ ಇಲ್ಲವೆ ಪರದೇಶಕ್ಕೆ ಹೋಗುವದರಿಂದ ಆಗುವ ವಿರಹದುಃಖ ಮೇಲಿಂದ ಮೇಲೆ ಮನಸ್ಸನ್ನುಬಾಧಿಸಹತ್ತುವದು. ಅದರಂತೆಯೇ ೧೨ ನೇ ಶನಿಗಿಂತ ೧ನೇ ಶನಿ ಬಂದ ಬಳಿಕ ಅವರ ವರ್ತನೆ ಹೆಚ್ಚು ಸುಖಕರವೆನಿಸುವದು.

ಧಂದೆ ಕೂಲಿಕಾರರಿಗೆ ವರ್ಷಾರಂಭದಿಂದ ೨ನೇ ಗುರು ಇದ್ದರೂ ೧೨ ನೇ ಶನಿ ಇರುವವರೆಗೆ ಬಹಳ ತೊಂದರೆಯನ್ನನುಭೋಗಿಸಬೇಕಾಗುವದು. ನಿಶ್ಚಿತ ಪಡಿಸಿದ ಕೆಲಸವನ್ನು ಪೂರ್ಣಗೊಳಿಸುವಲ್ಲಿ ಅಡಚಣಿಗಳೂ ಬರುವವು. ಸಾಲಗಾರರಿಗೆ ಸಾವಕಾರರ ತೊಂದರೆ ಅಸಹ್ಯವಾಗುವದು. ಪ್ರತಿಯೊಂದರಲ್ಲಿ ವೆಚ್ಚದ ಪ್ರಮಾಣ ಅಳತೆಮೀರಿ ಹೋಗುವದು. ಅದರಿಂದ ಆ ಕಾರ್ಯಮಾಡುವುದರ ಉದ್ದೇಶ ಸಾಧ್ಯವಾದರೂ ಮನಸ್ಸಿನಲ್ಲಿ ಹುರಹುರಿ ಕಾಯಂವೇ. ಆದರೆ ೧ನೇ ಶನಿ ಬಂದ ಬಳಿಕ ಯಕ್ಷಿಣಿಕಡ್ಡಿ ತಿರುವಿದಂತೆ ನಿಮ್ಮ ವಿರುದ್ಧ ಹೊರಳಿದ ತಕ್ಕಡಿ ಕೂಡಲೆ ನಿಮಗೆ ಅನುಕೂಲವಾಗಿ ಪರಿಣಮಿಸುವದು ಮತ್ತು ದುರ್ಘಟ ಕಾರ್ಯಗಳು ಕೂಡ ಒಂದರ ಹಿಂದೊಂದರಂತೆ ಯಶಸ್ವಿಯಾಗಹತ್ತುವವು. ೨ ನೇ ಗುರು ಇಲ್ಲವೆ ೩ ನೇ ಗುರು ಯಾರೇ ಇದ್ದರೂ ದ್ರವ್ಯದಝರಿ ದೊಡ್ಡ ಪ್ರಮಾಣದಲ್ಲಿ ಹರಿಯುಹತ್ತುವದು. ಲಾಭಸ್ಥಾನದಲ್ಲಿದ್ದ ಉಚ್ಚ ಕೇತುವಿನಿಂದಾಗಿ ಉದ್ದಿಮೆದಾರರಿಗೆ ರೊಕ್ಕದ ಗಿಡ ಮನೆಯಲ್ಲಿಯೇ ಇದ್ದಂತೆ ಭಾಸವಾಗುವದು.

ನೋಕರರಿಗೆ ಕೂಡ ೧೨ನೇ ಶನಿ ಇರುವ ವರೆಗೆ ಗ್ರಹಬಲ ಪ್ರತಿಕೂಲವಾಗಿ ವರಿಷ್ಠರು ವಿನಾಕಾರಣ ಸಿಟ್ಟಿನಿಂದಿದ್ದು ತುಚ್ಛತೆಯಿಂದ ನಡೆಸಿಕೊಳ್ಳುವರು. ಅನೇಕರಿಗೆ ವಿಪರೀತ ಪರಿಸ್ಥಿತಿಯನ್ನೆದುರಿಸಬೇಕಾದ ಭೀತಿಯೂ ಇದೆ. ಆದರೆ ಒಮ್ಮೆ ಶನಿ ಮಹಾರಾಜ ಮೊದಲನೆಯ ಅಂದರೆ ಜನ್ಮಸ್ಥಾನಕ್ಕೆ ಬಂದನೆಂದರೆ ಹಿಂದಿನ ಪರಿಸ್ಥಿತಿ ಎಲ್ಲ ಬದಲಾಗಿ ನಿಮ್ಮ ಸಹಾಯದ ಹೊರತು ಅವರ ಕಡ್ಡಿ ಕೂಡ ಅಗಳಾಡದಂತಹ ಪರಿಸ್ಥಿತಿ ಬರುವುದು. ಪರಿಣಾಮವಾಗಿ ಅವರ ಕೃಪೆ ಮೇಲಿಂದ ಮೇಲೆ ಆಗುವುದು. ೧ನೇ ಶನಿ ಮತ್ತು ೨ನೇ ಗುರು ಹೀಗೆ ಯೋಗವಿದ್ದಾಗ ಅಂದರೆ ಜನವರಿ ೨೮ ರಿಂದ ಮಾರ್ಚ ೧೪ ಈ ಮಧ್ಯಂತರ ಅವಧಿಯಲ್ಲಿ ಅನೇಕರಿಗೆ ಮೇಲಿನ ಗ್ರೇಡು ಸಿಕ್ಕುವುದು. ಇನ್ನು ಅನೇಕರಿಗೆ ಅನಂತರ ಅಂದರೆ ೩ನೇಗುರು ಬಂದಾಗ ಸಂಬಳವಂತೂಏರುವುದು. ವಿಶೇಷವಾಗಿ ಫೆಬ್ರುಅರಿ ೫ ರಿಂದ ಮಾರ್ಚ ೨೯ ಇಲ್ಲವೆ ಎಪ್ರಿಲ ೨೯ ರಿಂದ ಜುಲೈ ೨೪ ಮತ್ತು

ಸಪ್ಟಂಬರ ೨೮ ರಿಂದ ಅಕ್ಟೋಬರ ೨೪ ಈ ಅವಧಿ ಲಾಭಕ್ಕೆ ವಿಶೇಷ ಅನುಕೂಲದ್ದಾಗಿದೆ. ಲೌಕಿಕ ದಲ್ಲಿಯೂ ಬಹಳ ಅನುಕೂಲವಾಗುವ ಘಟನೆ ಗಳು ಸಂಭವಿಸುವವು. ಸರಕಾರಿ ಕೆಲಸಗಳಿದ್ದರೆ ಫೆಬ್ರುವರಿ ೧೨ ರಿಂದ ಮಾರ್ಚ ೨೦ ಇಲ್ಲವೆ ಎಪ್ರಿಲ ೨೮ ರಿಂದ ಜೂನ ೬ ಇಲ್ಲವೆ ಅಕ್ಟೋಬರ ೨೮ ರಿಂದ ಮುಂದಿನ ಅವಧಿಯಲ್ಲಿ ಒಳ್ಳೇ ಯಶಸ್ಸು ಸಿಕ್ಕು ವುದು. ೩ನೇ ಗುರುವಿದ್ದಾಗ ಯಾವದೊಂದು ಯಾತ್ರೆಯನ್ನು ಮಾಡುವಿರಿ. ೨ನೇ ಗುರು ಇದ್ದಾಗ ಶುಭಸೂಚಕ ಸ್ವಪ್ನಗಳು ಅನೇಕ ಸಲ ಬೀಳು ವವು.

ದಾವೆ, ಫಿರ್ಯಾದಿ ಇತರ ಸ್ಪರ್ಧೆಯ ಕೆಲಸ ಗಳಲ್ಲಿ ೧ನೇ ಶನಿ ಬಂದಬಳಿಕ ಅನುಕೂಲ ಗಾಳಿ ಬೀಸಹತ್ತುವುದು ಮತ್ತು ೩ನೇ ಗುರು ಬಂದಾಗ ಹೊರಬೀಳುವ ತೀರ್ಪು ನಿಮಗೆ ಯಶಸ್ಸನ್ನು ಬೀರು ವದು.

೧೨ನೇ ಶನಿ ಇದ್ದಾಗ ಹಡೆಯುವ ಸ್ತ್ರೀಯರು ಬಹಳ ಕಷ್ಟವನ್ನನುಭೋಗಿಸಬೇಕಾಗುವುದು. ಮತ್ತು ಹುಟ್ಟುವ ಕೂಸು ಕೂಡ ಬಹಳ ಅಶಕ್ತ ಆದರೆ ೧ನೇ ಶನಿ ಬಂದಬಳಿಕ ಮತ್ತು ೨ನೇ ಗುರು ಇರುವ ವರೆಗೆ ಹಡೆಯುವವರಿಗೆ ಹೆಣ್ಣು ಹುಟ್ಟಿ ದರೂ ಅಲ್ಪಾಯಾಸದಿಂದ ಹಡೆಯುವರು. ೩ನೇ ಗುರು ಬಂದಬಳಿಕ ಹಡೆದವರಿಗೆ ಪ್ರಸೂತಿಕಷ್ಟ ಬಹಳ ಕಡಿಮೆಯಾಗಿ ಗಂಡುಹುಟ್ಟಿದ ಸಂತೋ ಷವೂ ಲಭಿಸುವುದು.

ಜನವರಿ ೨೮ರ ನಂತರ ಪರೀಕ್ಷೆ ಕಟ್ಟುವ ವಿದ್ಯಾ-ರ್ಥಿಗಳಲ್ಲಿ ಅನೇಕರು ಪಾಸಾಗುವರು. ಆದರೆ ಯಾರ ಪರೀಕ್ಷೆ ಫೆಬ್ರುಅರಿ ೨೫ ರಿಂದ ಮಾರ್ಚ ೧೩, ಮಾರ್ಚ ೨೯ ರಿಂದ ಜೂನ ೩, ಜೂನ ೨೦ ರಿಂದ ಜುಲೈ ೪ ಮತ್ತು ಜುಲೈ ೨೩ ರಿಂದ ಸಪ್ಟಂಬರ ೨೯ ಈ ಅವಧಿಯಲ್ಲಿ ಇರುವದೋ ಅವರು ವರ್ಗವನ್ನೂ ಸಂಪಾದಿಸುವರು.

## ಮೀನ

ಒಟ್ಟಾರೆ ಈ ವರ್ಷ ಪ್ರತಿಯೊಂದು ವಿಷಯದಲ್ಲಿ ಕಷ್ಟಸಾಧ್ಯವಾದ ಯಶಸ್ಸು ಇಲ್ಲವೆ ಸುಖವನ್ನು ಕೊಡುವಂತಹದೆಂಬು ದಾಗಿ ತಿಳಿದುಕೊಳ್ಳತಕ್ಕದ್ದು.

ಈ ರಾಶಿಯವರ ಆರೋಗ್ಯ, ರಾಶಿಸ್ವಾಮಿ ಗುರು ಈ ಸಲ ಮಾರ್ಚ ೧೪ರ ವರೆಗೆ ಜನ್ಮಸ್ಥ ಅಂದರೆ ೧ನೇ ಸ್ಥಾನದಲ್ಲಿಯೇ ಇದ್ದು ಅನಂತರ ೨ನೇ ಸ್ಥಾನಕ್ಕೆ ಬಂದು ಅನುಕೂಲನಾಗುವದರಿಂದ ಒಳ್ಳೇ ಸದೃಢವುಳಿಯುವದು. ಆದರೆ ಜನವರಿ ೨೮ ರಂದು ೧೨ನೇ ಶನಿ ಬರುವುದರಿಂದ ಅಂದಿನಿಂದ ಸಾಡೇಸಾತಿ ಸುರುವಾಗುವುದು. ಅದರಿಂದ ಪ್ರಕೃತಿ ಕೆಟ್ಟಿದೆ, ಕೆಡುವುದು ಎಂಬ ಭಾಸ ಮೇಲಿಂದಮೇಲೆ ಆಗಹತ್ತುವುದು. ಆದರೂ ೧೨ನೇ ಶನಿ ತನ್ನದೇ ಆದ ಕುಂಭ ರಾಶಿಯಲ್ಲಿ ಬರುವುದರಿಂದ ಮೊದಲಿನ ೨॥ ವರುಷಗಳಲ್ಲಿ ಪ್ರತ್ಯಕ್ಷ ಕ್ಲೇಶ ಇಲ್ಲವೆ ಹಾನಿ ಯನ್ನು ಸ್ವಲ್ಪೂ ಉಂಟುಮಾಡಲಾರನು ಎಂದು ಚೆನ್ನಾಗಿ ಮನವರಿಕೆ ಮಾಡಿಕೊಂಡು ಕೆಟ್ಟ ಕೆಟ್ಟ ವಿಚಾರ ಮಾಡದೆ ಪೂರ್ಣ ನಿರ್ಧಾಸ್ತರಾಗಿರತಕ್ಕದ್ದು ಪ್ರಕೃತಿಗೆ ಏನಾದರೂ ಕ್ಲೇಶವಾದರೆ ಅದು ಬಹುಶಃ ಸಪ್ಟಂಬರ ೫ ರಿಂದ ಅಕ್ಟೋಬರ ೨೮ ರ ಅವಧಿ ಯಲ್ಲಿ ಆಗುವುದು. ಉಳಿದ ವಿಷಯಗಳಲ್ಲಿ ದೇಹ ಸುಖ ಬಹುತರ ವಿಷಯಗಳಲ್ಲಿ ಅನುಕೂ-ಲವೇ ಇದೆ. ಆದರೆ ವರ್ಷವಿಡಿ ಇರುವ ೪ ನೇ ರಾಹು ಮತ್ತು ಅವನಿಗೆ ಪೂರಕನಾಗಿ ಜನವರಿ ಕೊನೆಗೆ ಬರುವ ೧೨ ನೇ ಶನಿಯಿಂದ ಒಳ್ಳೆ ಸುಖ ಸಿಕ್ಕಲಾರದು ಎಂಬ ತಪ್ಪು ತಿಳವಳಿಕೆಯಾಗಿ ಮನಸ್ಸು ನಿಷ್ಕಾರಣವಾಗಿ ವ್ಯಗ್ರ ಮತ್ತು ಉದಾ-ಸೀನಗೊಳ್ಳುವುದು. ಇದು ಅನಿವಾರ್ಯ. ಆದರೂ ಸಾಡೇಸಾತಿಯ ಕ್ಲೇಶ ಪರಿಹಾರಕ್ಕಾಗಿ. ಶನಿ ೧೨ ನೆಯವನು ಬಂದ ಕೂಡಲೇ ಅವನ ೨೩ ಸಾವಿರ ಜಪ ಮಾಡಬೇಕು. ಮತ್ತು ಯಥಾಶಕ್ತಿ ಎಳ್ಳು ದಾನ ಮಾಡಬೇಕು.

ಹೆಂಡತಿಯ ಆರೋಗ್ಯವೂ ಎರಡನೇ ಗುರು ವಿದ್ದಾಗ ಸ್ವಲ್ಪ ಕೆಡುವುದು. ಜುಲೈ ೨೦ ರಿಂದ ಸಪ್ಟಂಬರ ೫ ರ ಮಧ್ಯಂತರ ಅವಧಿಯಲ್ಲಿ ಸ್ವಲ್ಪ ಹೆಚ್ಚು ತೊಂದರೆಯೆನಿಸುವುದು. ಇತರ ವಿಷ ಯಗಳಲ್ಲಿ ಪರಸ್ಪರರಲ್ಲಿ ಒಳ್ಳೆ ಮತ್ಯೈಕ್ಯ ಉಳಿದು ಅವಳ ವಿಚಾರ ಮತ್ತು ಅವಳು ಕೊಟ್ಟ ಸಲಹೆ ನಿಮ್ಮ ಮನಸ್ಸಿಗೆ ಬರುವದು. ನಿಮ್ಮ ಮದುವೆ ಇನ್ನು ಆಗುವದಿದ್ದರೆ ಇಡೀ ವರ್ಷ ಅದಕ್ಕೆ ಬಾಶಿಂಗಬಲವಿದೆ. ಆದರೆ ಫೆಬ್ರುವರಿ ೨೮ ಕ್ಕಿಂತ ಮೊದಲು ಮದುವೆಯಾದರೆ ಅದು ಅಂದಾಜು ಮಾಡಿದಷ್ಟು ಖರ್ಚಿನಲ್ಲಿಯೇ ಅಡಚಣಿಗಳು ಬರದೆ ಆಗುವುದು ಆದರೆ ಅನಂತರ ಮದುವೆಯಾದರೆ ಇಷ್ಟೊಂದು ಸರಳ ರೀತಿಯಿಂದ ಆಗಲಾರದು. ವೆಚ್ಚ ಹೆಚ್ಚಿಗೆ ಆಗಿಯೂ ಅನಪೇಕ್ಷಿತ ಅಡಚಣಿ

ಗಳನ್ನೆದುರಿಸಬೇಕಾಗುವುದು. ವಧು ಇಲ್ಲವೆ ವರ ಸ್ವಭಾವದಿಂದ ಸಿಡುಕಿನವರು. ಆದರೆ ಮನಸ್ಸಿನಿಂದ ಬಹಳ ದಯಾಳು ಹಾಗೂ ಸತ್ಯಪ್ರಿಯರಿರುವರು.

ಅದರಂತೆಯೇ ಮಕ್ಕಳ ವಿವಾಹ ಮಾಡುವದಿದ್ದರೆ ಅದಕ್ಕೂ ಇಡೀ ವರ್ಷ ಅನುಕೂಲ. ವಿಶೇಷವಾಗಿ ೨ನೇ ಗುರುವಿದ್ದಾಗ ಅನಾಯಾಸವಾಗಿ ಮತ್ತು ಆಶ್ಚರ್ಯಕಾರಕ ಯೋಗಾಯೋಗದಿಂದ ಆಗುವದು ಮತ್ತು ಸ್ಥಳವು ಎಣಿಸಿದ್ದಕ್ಕಿಂತ ಹೆಚ್ಚು ವರ್ಚಸ್ಸುಳ್ಳದ್ದು ಮತ್ತು ಸಾಮಾಜಿಕ ಪ್ರತಿಷ್ಠೆಯುಳ್ಳದ್ದು ಸಿಕ್ಕುವುದು. ಸೊಸೆ ಮತ್ತು ಅಳಿಯ ಕೂಡ ಒಳ್ಳೆ ವಿದ್ವಾನ್, ಬುದ್ಧಿಮಾನ್, ಕ್ರೀಡಾ ಮನೋವೃತ್ತಿಯವರು ಮತ್ತು ವಿನೋದಪ್ರಿಯರು ಇರುವರು. ಅಲ್ಲದೆ ಒಳ್ಳೇ ಸುದ್ಧಿಗಳಿದ್ದುದರ ಅನುಭವವೂ ಬೇಗ ನಿದರ್ಶನಕ್ಕೆ ಬರುವದು. ಮಕ್ಕಳೆಲ್ಲ ತಮ್ಮ ತಮ್ಮ ಕೆಲಸಗಳಲ್ಲಿ ಲೌಕಿಕವನ್ನು ಸಂಪಾದಿಸುವರು. ಮತ್ತು ನಿಮಗ ನಿಷ್ಠರಾಗುಳಿಯುವರು. ಆದರೆ ೧೨ನೇ ಶನಿ ಬಂದ ಬಳಿಕ ಮತ್ತು ವಿಶೇಷವಾಗಿ ಫೆಬ್ರುಅರಿ ೧೧ ರಿಂದ ಮಾರ್ಚ ೨೧ರ ಮಧ್ಯಂತರ ಅವಧಿಯಲ್ಲಿ ಗಂಡುಮಕ್ಕಳು ಇಲ್ಲವೆ ಹೆಣ್ಣು ಮಕ್ಕಳಲ್ಲಿ ಯಾರಾದರೊಬ್ಬ ನಿಮ್ಮ ಅಪಮಾನ ಇಲ್ಲವೆ ಉಪಹಾಸ ಮಾಡುವ ತಪ್ಪನ್ನು ಮಾಡುವ ಸಂಭವವಿದೆ.

ಧಂದೆ ಕೂಲಿಕಾರರಿಗೆ ಈ ವರ್ಷ ಒಳ್ಳೆ ಉತ್ಕರ್ಷದ್ದಾಗಿದೆ. ಆದರೂ ೧೨ ನೇ ಶನಿ ಬಂದಬಳಿಕ ಪ್ರತಿ ಕೆಲಸದಲ್ಲಿ ವಿಪರೀತ ಜಿಕೇರಿ ಆಗಹತ್ತುವದು. ಅನೇಕರೊಡನೆ ನಿಷ್ಕಾರಣವಾಗಿಯೆ ತಿಕ್ಕಾಟಕ್ಕೆಳಸಬೇಕಾಗುವದು. ಒಂದೊಮ್ಮೆ ಬಾಯಿಗೆ ಬಾಯಿ ಹತ್ತುವ ಪ್ರಸಂಗವೂ ಬರುವದು. ದ್ರವ್ಯಲಾಭ ಅಂದಾಜಿಗಿಂತ ಹೆಚ್ಚಿಗೆ ಆದರೂ ಅದರಲ್ಲಿ ಸ್ವಲ್ಪೂ ಶಿಲ್ಲಕ ಉಳಿಯದಂತೆ ವೆಚ್ಚ ಹೆಚ್ಚುವದು. ಮತ್ತು ವ್ಯವಹಾರದಲ್ಲಿ ಕೊಟ್ಟ ವಚನವನ್ನು ಪಾಲಿಸುವದು ಕೂಡ ಕಠಿಣವಾಗುವದು. ಶುಭಕಾರ್ಯದಲ್ಲಿಯೇ ಆದರೂ ಸಹಿಸಲಾರದಷ್ಟು ವೆಚ್ಚವಾಗುವದರಿಂದ ಮನಸ್ಸು ಬಹಳ ತ್ರಸ್ತಗೊಳ್ಳುವದು. ಪಾಲುಗಾರಿಕೆಯ ಧಂದೆ ನಿಮಗೆ ಒಗ್ಗದ್ದರಿಂದ ಅದು ಮುರಿಯುವದು. ಅದರಂತೆ ಮಿತ್ರರು ಬೇಕೆಂತಲೆ ಇಲ್ಲವೆ ತಿಳಿಯದೆ ನಿಮ್ಮನ್ನು ಮೋಸಗೊಳಿಸುವರು.

ನೋಕರದಾರರಿಗೆ ಮೇಲಿನ ಗ್ರೇಡು ಖಾತ್ರಿಯಿಂದ ಸಿಕ್ಕುವದು ನಿಜ; ಆದರೆ ೧೨ನೇ ಶನಿ ಬಂದ ಬಳಿಕ ಕೆಲಸದ ಭಾರ ಮತ್ತು ತೊಂದರೆ ಬಹಳ ಹೆಚ್ಚುವದು. ಗ್ರೇಡು ಸಿಗದಿದ್ದರೇ ಒಳಿತಾಗುತ್ತಿತ್ತೆಂದೆನಿಸುವದು! ವರಿಷ್ಠರು ಕೂಡ ಮೇಲೆ ಮೇಲೆ ಸದ್ವರ್ತನೆಯಿಂದಿದ್ದರೂ ಒಳಗೊಳಗೆ ದುಷ್ಟತನದಿಂದ ನಡೆದುಕೊಳ್ಳುವರು—ಬದಲಿಯಾದರೆ ಒಳ್ಳೆ ಹವೆಯ ಆದರೆ ಇತರ ದೃಷ್ಟಿಯಿಂದ ಅನಾನುಕೂಲ ಸ್ಥಳಕ್ಕೆ ಆಗುವದು. ಪ್ರತಿಯೊಂದು ವಿಷಯದಲ್ಲಿ ಯಶಸ್ಸು ಖಾತ್ರಿಯಿಂದಸಿಕ್ಕುವಂತೆ ಗುರುವಿನಅನುಕೂಲ ಭ್ರಮಣದಿಂದ ದೈವಿಕ ಕೃಪೆ ಕೂಡ ಬಹಳ ಬಲಿಷ್ಠ ಉಳಿಯುವದು. ಅದರ ಪ್ರತೀತಿ ಅನೇಕ ಸಲ ಬರುವದು. ಲಾಭದ ದೃಷ್ಟಿಯಿಂದ ನೋಡಿದರೆ ವರ್ಷಾರಂಭದಿಂದ ಫೆಬ್ರುಅರಿ ೧೧ ರ ವರೆಗೆ ಅನಂತರ ಎಪ್ರಿಲ ೨೮ ರಿಂದ ಜುಲೈ ೨೦ ಮತ್ತು ಸಪ್ಪಂಬರ ೫ ರ ನಂತರದ ಕಾಲ ಹೆಚ್ಚು ಅನುಕೂಲ. ೧ ನೇ ಗುರುವಿದ್ದಾಗ ಯಾತ್ರೆ ಇಲ್ಲವೆ ವಿಶೇಷ ಧಾರ್ಮಿಕ ಕಾರ್ಯಕ್ಕಾಗಿ ಸಂಭವಿಸಿದರೆ ೨ ನೇ ಗುರು ಬಂದಾಗ ಪ್ರಪಂಚದಲ್ಲಿಯ ಮಹತ್ವದ ಕಾರ್ಯಕ್ಕಾಗಿ ಪ್ರವಾಸ ಸಂಭವಿಸುವದು. ಲೇಖನ ಕೆಲಸ ಬಹಳ ಉತ್ತಮ. ಆದರೆ ಭೆಟ್ಟಿಯ ಕೆಲಸ ೧೧ ನೇ ಶನಿ ಇರುವವರೆಗೆ ಅಂದರೆ ಜನೆವರಿ ೨೮ ರ ವರೆಗೆ ಹೆಚ್ಚು ಒಳಿತು. ವಾಹನಗಳಿದ್ದರೂ ಅದರ ಸುಖ ಸಾಕಷ್ಟು ಸಿಕ್ಕುವದಿಲ್ಲ. ಕೈಕೆಳಗಿನವರು ವರಿಷ್ಠರಂತೆ ಮೇಲೆ ಸವಿ ಮಾತಾಡಿದರೂ ಒಳಗೊಳಗೆ ಉರಿದು ಬೀಳುವರು. ೨ ನೇ ಗುರು ಇದ್ದಾಗ ಭಾವೀಸೂಚಕ ಸ್ವಪ್ನ ಬಹಳ ಬೀಳುವವು. ತಂದೆ-ತಾಯಿ ಇದ್ದರೆ ಅವರಿಂದ ಉಪೇಕ್ಷೆಯ ಮಾತುಗಳನ್ನೇ ಕೇಳಬೇಕಾಗುವದು.

ವಾದ ಇಲ್ಲವೆ ಸ್ಪರ್ಧೆಗಳಲ್ಲಿ ೧೧ನೇ ಶನಿ ಇರುವದರ ದೆಶೆಯಿಂದ ಸಿಕ್ಕುವ ಯಶಸ್ಸು ಬಹಳ. ಅನಂತರ ೨ ನೇ ಗುರು ಬರುವ ವರೆಗೆ ಸಿಕ್ಕುವ ಯಶಸ್ಸು ಲೌಕಿಕಕ್ಕೆ ಅನುಕೂಲ. ಆದರೆ ಲಾಭಕ್ಕೆ ಕಷ್ಟ-ಸಾಧ್ಯ. ಆದರೆ ೨ ನೇ ಗುರು ಬಂದಬಳಿಕ ಅಪಯಶಸ್ಸಿನ ಸಂಭವವೆ ಹೆಚ್ಚು. ಒಂದುವೇಳೆ ಯಶಸ್ಸುಸಿಕ್ಕರೂ ಅದನ್ನು ಅಮಲಿನಲ್ಲಿ ತರಬೇಕಾದರೆ ಬಹಳ ಭಾನಗಡಿ ಮಾಡಬೇಕಾಗುವುದು. ಗಂಡಾಂತರವನ್ನು ಎದುರಿಸಬೇಕಾಗುವುದು.

ಈ ರಾಶಿಯ ಗರ್ಭಿಣಿ ಸ್ತ್ರೀಯರು ೧೧ ನೇ ಶನಿಯಿದ್ದಾಗ ಅಥವಾ ೨ನೇ ಗುರು ಬಂದನಂತರ ಹಡೆದರೆ ಸ್ವಲ್ಪ ಕಷ್ಟವೇ ಎನಿಸುವದು. ಆದರೆ ೧೨ ನೇ ಶನಿ ಮತ್ತು ೧ನೇ ಗುರು ಇದ್ದಾಗ ಅಂದರೆ ಜನೆವರಿ ೨೮ ರಿಂದ ಮಾರ್ಚ ೧೪ ಈ ಅವಧಿಯಲ್ಲಿ ಹಡೆದರೆ ಪ್ರಸೂತಿ ಅತ್ಯಂತ ಸುಲಭವಾಗಿ ಕೂಸು ಕೂಡ ಒಳ್ಳೆ ಸಶಕ್ತ ಮತ್ತು ವಿಶೇಷ ಸುಂದರ ಹುಟ್ಟುವದು. ಆದರೆ ಈ ವರ್ಷ ಈ ರಾಶಿಯವರಿಗೆ ಬಹುತರವಾಗಿ ಹೆಣ್ಣು ಹುಟ್ಟುವ ಸಂಭವವೇ ಹೆಚ್ಚು.

ಯಾವ ವಿದ್ಯಾರ್ಥಿಗಳ ಪರೀಕ್ಷೆ ೧ ನೇ ಗುರುವಿದ್ದಾಗ ಅಂದರೆ ಮಾರ್ಚ ೧೪ ರ ವರೆಗೆ ಆಗುವದೋ ಅವರು ಖಾತ್ರಿಯಿಂದ ಪಾಸಾಗುವರು. ಅನಂತರ ಪರೀಕ್ಷೆ ಕಟ್ಟಿದವರು ಹುಷಾರವಿದ್ದರೂ ಯಶಸ್ಸು ಸಿಕ್ಕುವದರ ನಿಯಮವಿಲ್ಲ.

— ಶುಭಂ ಭವತು —



ಲೇಖಿಕೆ :

ಡಾ. ಸರೋಜಿನಿ ಮಹಿಷಿ,

ಎಂ. ಪಿ.




ವೆಲೆಂಟಿನಾ ಟೆರೆಷ್ಕೋವಾ ಮಹಿಳಾಜಗತ್ತಿಗೆ ಕೀರ್ತಿ ತಂದ ಧೀರೆ. ತುಂಬ ಕಿರಿವಯಸ್ಸಿನಿಂದಲೇ ಅವಳು ಇಂಥದೊಂದು ಸಾಹಸಕ್ಕಾಗಿ ತನ್ನ ಜೀವನವನ್ನು ಅಣಿಗೊಳಿಸುತ್ತಿದ್ದಳು. ಸಾಹಸದ ಕೃತಿಗಳನ್ನೇ ಅವಳು ಯಾವಾಗಲೂ ಮೆಚ್ಚುತ್ತಿದ್ದಳು. ಅದರಿಂದ ಎಷ್ಟೋ ತೊಂದರೆಯಾಗುತ್ತಿದ್ದರೂ ಹಿಂಜರಿಯುವವಳಲ್ಲ. ಗಗನಯಾನದಲ್ಲಿ ಸ್ತ್ರೀ ಹಿಂದುಳಿಯುವದಿಲ್ಲ ಎಂಬುದನ್ನು ತೋರಿಸಿಕೊಟ್ಟ ಟೆರೆಷ್ಕೋವಾ ಈ ಸಾಧನೆಯ ಬಗ್ಗೆ ತುಂಬಾ ಹೆಮ್ಮೆಪಟ್ಟುಕೊಂಡಿದ್ದಾಳೆ. ಅವಳ ಈ ಸಾಧನೆಯನ್ನು ಲೇಖಿಕೆ ಇಲ್ಲಿ ಹೃದಯಂಗಮವಾಗಿ ಚಿತ್ರಿಸಿದ್ದಾರೆ.

---

೧೯೬೩ ಜೂನ ೧೬ ರಂದು ಭಾರತೀಯ ಸಮಯ ಮಧ್ಯಾಹ್ನ ಮೂರು ಗಂಟೆಗೆ ಅಂತರಿಕ್ಷಯಾನ, "ವೋಸ್ತೋಕ ೬" ರಲ್ಲಿ ತನ್ನ ಅಂತರಿಕ್ಷ ಉಡ್ಡಾಣವನ್ನು ಪ್ರಾರಂಭಿಸಿದ ಕುಮಾರಿ ವೆಲೆಂಟನಾ ನಾಲ್ವತ್ತೊಂಬತ್ತು ಸಲ ಪೃಥ್ವಿಯ ಪ್ರದಕ್ಷಿಣೆ ಮಾಡಿ, ಜೂನ ೨೦ ರಂದು ಸಕುಶಲೆಯಾಗಿ ಭೂಮಿಗೆ ಬಂದಿಳಿದಳು. 'ವೋಸ್ತೋಕ ೫' ರಲ್ಲಿ ಉಡ್ಡಾಣವನ್ನು ಕೈಕೊಂಡಿದ್ದ ಬೈಕೋವಸ್ಕಿಯೂ ಅಗಲೇ ಬಂದಿಳಿದನು! ವಿಮಾನನಿಲ್ದಾಣದಲ್ಲಿ ಪ್ರಚಂಡ ಜನಸ್ತೋಮ ಅವರನ್ನು ಸ್ವಾಗತಿಸಲು ಕೂಡಿತ್ತು! ವಿಮಾನವು ತಳವೂರಿದ ಸ್ಥಳದಿಂದ ಕೆಲ ಅಡಿಗಳ ವರೆಗೆ ಗಗನಯಾತ್ರಿಗಳು ನಡೆಯಲೆಂದು ಕೆಂಪು ಜಮಖಾನೆಯನ್ನು ಹಾಸಲಾಗಿತ್ತು. ಯೂರಿ ಗಗಾರಿನ್, ಟಿಟೋವ್ಹ, ನಿಕೋಲಾಯ, ಪೋಪೋವಿಚರೂ ಇದೇ ಜಮಖಾನೆಯ ಮೇಲೆ ನಡೆದಿದ್ದರು!

ಭೂಮಿಗಿಳಿದ ವೆಲೆಂಟನಾ, 'ಯುರೋಸ್ಲಾವ್ಹ ನೂಲಿನ ಗಿರಣಿಯೊಂದರಲ್ಲಿ ದುಡಿಯುತ್ತಿದ್ದ ರಶಿಯನ್ ಮಹಿಳೆಯೊಬ್ಬಳಿಗೆ ಸುದೀರ್ಘ ಅಂತರಿಕ್ಷಯಾನದ ಅವಕಾಶವನ್ನು ಒದಗಿಸಿಕೊಟ್ಟುದಕ್ಕಾಗಿ' ರಶಿಯನ್ ಸರಕಾರಕ್ಕೆ ಕೃತಜ್ಞತೆಯನ್ನು ಸಲ್ಲಿಸಿದಳು. ಆಕೆಗೆ ಪ್ರಥಮ ಮಹಿಳಾ ಗಗನಯಾತ್ರಿಯೆಂದು ಉಡ್ಡಾಣ ಮಾಡಿಬಂದ ಸಮಾಧಾನವಷ್ಟೇ ಅಲ್ಲ, ಜೊತೆಗೆ ಉಡ್ಡಾಣದ ಸಮಯದಲ್ಲಿ ಮಾಡಬೇಕಾದ ವಿವಿಧ ಸಂಶೋಧನೆಯ ಕಾರ್ಯಕ್ರಮಗಳನ್ನು ಪೂರ್ಣವಾಗಿ ತಾನು ಮಾಡಿದುದಕ್ಕೆ ಇನ್ನೂ ಹೆಚ್ಚಿನ ಸಮಾಧಾನ! ಮನಬಿಚ್ಚಿ ಮಾತನಾಡುತ್ತ ವೆಲೆಂಟನಾ ನುಡಿದಳು: "ಈ ತರದ ಅಂತರಿಕ್ಷ ಉಡ್ಡಾಣದ ಅನುಭವ ಎಂದೂ ಇರದ ನನಗೆ ಮುಂಬರುವ ಉಡ್ಡಾಣದ ಬಗೆಗೆ ಉದ್ವೇಗ ಉಂಟಾಗಿತ್ತು! ಆದರೆ ನಮ್ಮ 'ಅಂತರಿಕ್ಷಯಾನ' ಗಳ ಬಗೆಗೆ ನನಗೆ ಸಂಪೂರ್ಣ ವಿಶ್ವಾಸವಿತ್ತು! ಅಲ್ಲದೆ ಆ ಬಗ್ಗೆ ನನಗೆ ಪ್ರತ್ಯೇಕ ತರಬೇತಿಯನ್ನೂ ಕೊಡಲಾಗಿತ್ತು. ನನ್ನ ದೇಶಕ್ಕಾಗಿ ನಾನು ಕೈಕೊಳ್ಳಬೇಕಾಗಿದ್ದ ಹೊಣೆಯ ಕರೆ, ಹಾಗೂ ಸಾಮ್ಯವಾದಿಯಾಗಿ ವಹಿಸಿಕೊಟ್ಟದ್ದನ್ನು ನಿರ್ವಹಿಸುವ ಹೊಣೆ, ನನ್ನ ಎಲ್ಲ ಶಕ್ತಿಯನ್ನೂ ಕೇಂದ್ರೀಕರಿಸಲು ನನ್ನನ್ನು ಪ್ರೇರೇಪಿಸಿದವು. ಈ ಅಂತರಿಕ್ಷಯಾನದಲ್ಲಿ ನನಗೆ ಪ್ರಥಮ ಜಾಗತಿಕ ಮಹಿಳೆಯೆನ್ನಿಸಿಕೊಳ್ಳಲು ತುಂಬ ಅಭಿಮಾನ! ರಶಿಯಾದ ಅಂತರಿಕ್ಷಯಾತ್ರಿಕರ ಜೊತೆಗೆ ನಾನೂ ಒಬ್ಬಳೆಂಬುದು ನನಗೆ ಹೆಮ್ಮೆ! ನಮ್ಮ ಪುರುಷರು ಇನ್ನು ಅಂತರಿಕ್ಷದಲ್ಲಿ ತಾವು ಏಕಾಕಿಗಳೆಂದು ಭಾವಿಸದಿರಲಿ! ಮಹಿಳೆಯ ಸ್ನೇಹಮಯಬೆಂಬಲ ಅಲ್ಲಿಯೂ ಅವರಿಗೆ ದೊರೆಯುತ್ತಿದೆ.

ನಾವು ಮಹಿಳೆಯರು ಯಾವಾಗಲೂ ಶಾಂತಿಯನ್ನು ಮೆಚ್ಚುತ್ತೇವೆ. ನಮಗೆ ಯುದ್ಧ ಬೇಕಾಗಿಲ್ಲ. ಸೋವ್ಹಿಯಟ್ ಜನರು ಶಾಂತಿಯುತ ವಿಧಾಯಕ ದುಡಿಮೆಯಲ್ಲಿ ತೊಡಗಿದ್ದಾರೆ ಆದಕ್ಕೆಂದೇ ಅಂತರಿಕ್ಷದಲ್ಲಿ ಪ್ರಯೋಗಗಳನ್ನು ನಡೆಸಲು, ವೈಜ್ಞಾನಿಕ ಹಾಗೂ ಸ್ಥಾಪತ್ಯಶಾಸ್ತ್ರದ ವಿಕಾಸಕ್ಕಾಗಿ ಹೋರಾಡಲು, ಮಾನವನ ಪ್ರಗತಿಗಾಗಿ ಶ್ರಮಿಸಲು ನಮ್ಮ ದೇಶಕ್ಕೆ ಸಾಧ್ಯವಾಗುತ್ತಿದೆ".

ಬೈಕೋವಸ್ಕಿ ಹಾಗೂ ವೆಲೆಂಟನಾ ಅವರು ಯಶಸ್ವಿಯಾಗಿ ಉಡ್ಡಾಣವನ್ನು ಮುಗಿಸಿದಾಗ ಕ್ರುಶ್ಚೇವರು ಅವರನ್ನು ಅಭಿನಂದಿಸಿ ವೈಜ್ಞಾನಿಕ ಪ್ರಗತಿಯನ್ನು ರಾಷ್ಟ್ರಗಳ ಸುಖಶಾಂತಿಗಾಗಿ ಉಪಯೋಗಿಸುವಾ ಎಂದು ಹೇಳಿ ಇಬ್ಬರಿಗೂ ಸೋವ್ಹಿಯೆಟ್ ಒಕ್ಕೂಟದ ವೀರರೆಂಬ ಪ್ರಶಸ್ತಿಯನ್ನು ದಯಪಾಲಿಸಿದರು. ವೆಲೆಂಟನಾಳ ಶಾಶ್ವತ ನೆನಪಿಗಾಗಿ ಮಾಸ್ಕೋದಲ್ಲಿ ಅವಳ ಒಂದು ವಿಗ್ರಹವನ್ನು ನಿಲ್ಲಿಸುವದಾಗಿಯೂ ಸಾರಿದರು!

ನಾಲ್ಕು 'ವೋಸ್ತೋಕ'ಗಳಲ್ಲಿ ಪಡೆದ ಉಡ್ಡಾಣದ ಅನುಭವವನ್ನೆಲ್ಲ ಉಪಯೋಗಿಸಿ 'ವೋಸ್ತೋಕ ೫' ಹಾಗೂ 'ವೋಸ್ತೋಕ ೬'ನ್ನು ತಯಾರಿಸಲಾಗಿತ್ತು! ಈ ಎರಡರಲ್ಲಿ ಉಡ್ಡಾಣದ ಅವಧಿ ಹೆಚ್ಚಾಗಿತ್ತು. ವೋಸ್ತೋಕ ೫ ಹಾಗೂ ೬ ರ ಉಡ್ಡಾಣದಲ್ಲಿ ಬಂದ ಅನುಭವವನ್ನು, ಮತ್ತೆ ಮುಂದಿನ ಅಂತರಿಕ್ಷಯಾನಗಳನ್ನು ತಯಾರಿಸುವಲ್ಲಿ ಉಪಯೋಗಿಸಬಹುದಾಗಿದೆ. ಅಂತರಿಕ್ಷಯಾನಗಳ ವಿಶೇಷಜ್ಞರು, 'ಮಂಗಳಗ್ರಹದ ವರೆಗಿನ ನಮ್ಮ ನಿಲ್ದಾಣವು ಕೆಲದಿನಗಳ ವರೆಗೆ ಇದ್ದುದೇನೋ ನಿಜ. ಆದರೆ ಚಂದ್ರಗ್ರಹದ ಸುತ್ತಲೂ ಪ್ರಯಾಣ ಮಾಡಬೇಕೆಂದರೆ ಮೊದಲು ಏಳೆಂಟು ದಿನಗಳು ಬೇಕಾಗಬಹುದು' ಎಂದು ಅಭಿಪ್ರಾಯಪಟ್ಟರು. "ಅಂತರಿಕ್ಷದಲ್ಲಿಯ ಮೊದಲಿನ ೨೪ ಗಂಟೆಗಳಲ್ಲಿ ಮನುಷ್ಯನು ದೈಹಿಕವಾಗಿ ಹಾಗೂ ಮಾನಸಿಕವಾಗಿ ಭಾರರಾಹಿತ್ಯಕ್ಕೆ ಹೊಂದಿಕೊಳ್ಳುತ್ತಾನೆ. ಆದರೆ ಪುರುಷರು ಜೆಟ್ ವಿಮಾನಗಳನ್ನು ನಡೆಸಿದವರು, ಅತಿವೇಗದ ಅನುಭವವುಳ್ಳವರು. ಆದರೆ ಭಾರರಾಹಿತ್ಯ ಹಾಗೂ ಅತಿವೇಗದ ಅನುಭವವಿಲ್ಲದ ವೆಲೆಂಟನಾ ಅದೆಲ್ಲವನ್ನೂ ಸಹಿಸಿಕೊಂಡದ್ದು ಅತ್ಯಂತ ಆಶ್ಚರ್ಯಕರವಾಗಿದೆ. ಇನ್ನು ಗಗನಯಾತ್ರಿಗಳನ್ನು ತರಬೇತಿಗೊಳಿಸುವದು ನಮಗೊಂದು ಸಮಸ್ಯೆಯಾಗಬೇಕಾಗಿಲ್ಲ. ಪರಸ್ಪರ ಸಂಪರ್ಕವನ್ನಿಟ್ಟುಕೊಂಡು ಅಂತ

ರಿಕ್ಷಯಾನಗಳಲ್ಲಿಯೂ ಉಡ್ಡಾಣ ಮಾಡ ಬಹುದೆಂದು ವೋಸ್ತೋಕ '೫' ಮತ್ತು '೬' ರಿಂದ ಸಿದ್ಧವಾದುದರಿಂದ ಅಂತರಿಕ್ಷ ಉಡ್ಡಾಣದ ಇನ್ನೂ ಅನೇಕ ಸಮಸ್ಯೆಗಳೂ ಅದರಿಂದ ಬಿಟ್ಟಿವೆ.

ಈ ಪ್ರಯೋಗಗಳಿಂದ ಪಡೆದ ಅನುಭವವು ಚಂದ್ರಲೋಕದ ಪ್ರಯಾಣದಲ್ಲಿಯೂ ತುಂಬ ಉಪಯುಕ್ತವಾಗುವದು. ಚಂದ್ರಲೋಕಕ್ಕೆ ಪ್ರಯಾಣ ಮಾಡುವ ವಿಚಾರವು ತುಂಬ ಆಕರ್ಷಕವಾಗಿ ಕಂಡರೂ ಅದರಲ್ಲಿ ಅನೇಕ ತೊಂದರೆಗಳಿವೆ. ಚಂದ್ರಗ್ರಹಕ್ಕೆ ಹೋಗುವದಿಷ್ಟೇ ಅಲ್ಲ, ಅಲ್ಲಿಂದ ತಿರುಗಿ ಭೂಮಿಗೆ ಬರುವದೂ ಒಂದು ಸಮಸ್ಯೆಯೇ! ಈ ಸಮಸ್ಯೆಯನ್ನು ಬಿಡಿಸಲು ನಾವು ಒಂದು ವರುಷದವರೆಗೆ ಪ್ರಯೋಗ ಮಾಡಬೇಕಾಗುವದೇನೋ! ಅದರೂ ಅಷ್ಟರಲ್ಲಿ ಮನುಷ್ಯನು ಚಂದ್ರಲೋಕಕ್ಕೆ ಹೋಗುವದು ಸುಗಮವಾಗಬಹುದಾಗಿದೆ–" ಅಂತರಿಕ್ಷಯಾನಗಳ ನಕ್ಷೆಯ ಮುಖ್ಯ ತಯಾರಕರು ತಮ್ಮ ಅನುಭವದ ಕೆಲ ಮಾತುಗಳನ್ನು ಹೇಳಿದರು.

ವೆಲೆಂಟಿನಾ ಟೆರೆಷ್ಕೋವಾ ಅಂತರಿಕ್ಷಯಾತ್ರೆಯನ್ನು ಕೈಕೊಂಡಾಗ ಜಗತ್ತಿನ ಜನರೆಲ್ಲ ಕುತೂಹಲಿಗಳಾಗಿದ್ದರು. ಅಂತರಿಕ್ಷಯಾನದಲ್ಲಿ ಅಮೇರಿಕೆಗಿಂತ ಮುಂದುವರಿದು ರಶಿಯಾ ಪ್ರಯೋಗಗಳನ್ನುಮಾಡಿತು. ಇಷ್ಟೇ ಅಲ್ಲ, ಒಂದು ನಾಯಿಮರಿಯನ್ನಿಟ್ಟು ಪ್ರಯೋಗ ನಡೆಸಿದ ರಶಿಯನ್ನರು ಕೊನೆಗೂ ಮನುಷ್ಯನೇ ಯಶಸ್ವಿಯಾಗಿ ಹೋಗಿ ಬರುವ ಮಟ್ಟಿಗೆ ಪ್ರಯೋಗ ನಡೆಸಿದರಲ್ಲ! ಎಂದು ಜಗತ್ತಿನ ಜನ ಆಶ್ಚರ್ಯವನ್ನು ವ್ಯಕ್ತಮಾಡುತ್ತಿರುವಷ್ಟರಲ್ಲಿ, 'ವೋಸ್ತೋಕ ೬' ರಲ್ಲಿ ಒಬ್ಬ ಮಹಿಳೆಯನ್ನೇ ಅಂತರಿಕ್ಷಯಾನಕ್ಕೆ ಕಳಿಸಿಬಿಟ್ಟರು. ಜಗತ್ತಿನ ಜನ ಕಣ್ಣೆವೆ ಅಲುಗಿಸದೇ ನೋಡಿದರು, ಕಿವಿಗೊಟ್ಟು ಕೇಳಿದರು. ಮಹಿಳೆಯರು, "ಮಹಿಳೆಯೊಬ್ಬಳು ಅಂತರಿಕ್ಷಯಾನದಲ್ಲಿ ಬಹು ಸಾಹಸದ ಪ್ರಯಾಣವನ್ನು ಕೈಕೊಂಡಳಲ್ಲ!" ಎಂದು ಅಭಿಮಾನಪಟ್ಟರು.

ವೆಲೆಂಟಿನಾ ಟೆರೆಷ್ಕೋವಾ ಒಂದು ಸಾಮಾನ್ಯ ಮನೆತನದಲ್ಲಿ ೧೯೩೭ ರಲ್ಲಿ ಜನ್ಮತಾಳಿದಳು. ಯಾರೊಸ್ಲೇವ್ಲ ಕ್ಷೇತ್ರದ ಒಂದು ಸಣ್ಣ ಹಳ್ಳಿ ಆಕೆಯ ಹುಟ್ಟೂರು. ಅವಳ ತಂದೆ ವ್ಲಾಡಿಮೀರ ಟೆರೆಷ್ಕೋವಾ ಟ್ರ್ಯಾಕ್ಟರ ಚಾಲಕರಾಗಿದ್ದರು. ಮಗಳು ಪಡೆದ ವಿಜಯವನ್ನು ನೋಡಲು ಅವರಿರಲಿಲ್ಲ, ಯುದ್ಧದಲ್ಲಿ ಮೃತರಾಗಿದ್ದರು. ಅವಳ ತಾಯಿ ಎಲೆನಾ ಟೆರೆಷ್ಕೋವಾ ಬಟ್ಟೆಯ ಗಿರಣಿಯೊಂದರಲ್ಲಿ ಕೆಲಸಮಾಡುತ್ತಿದ್ದರು. ಅನೇಕ ಕಷ್ಟಗಳನ್ನು ಸಹಿಸಿ ಅವರು ಮಕ್ಕಳನ್ನು ಬೆಳೆಸಿದರು. ತಾಯಿಯೊಡನೆ ಆಗಾಗ ಗಿರಣಿಗೆ ಹೋಗುತ್ತಿದ್ದ ವೆಲೆಂಟಿನಾ, ಬಟ್ಟೆಯ ಗಿರಣಿಯ ಪರಿಚಯವನ್ನು ಬಹು ಚಿಕ್ಕವಳಿದ್ದಾಗಲೇ ಮಾಡಿಕೊಂಡಿದ್ದಳು. ಏಳನೆಯ ಕ್ಲಾಸಿನವರೆಗೆ ಓದಿ ಅವಳು ಅದೇ ಊರಲ್ಲಿ ಟಾಯರ ಫ್ಯಾಕ್ಟರಿಯೊಂದರಲ್ಲಿ ಕೆಲಸಕ್ಕೆ ಸೇರಿದಳು. ಜೊತೆಗೆ ರಾತ್ರಿಶಾಲೆಗೂ ಹೋಗತೊಡಗಿದಳು. ೧೯೫೫ ರಲ್ಲಿ ಲಘು ಉದ್ಯೋಗಗಳಲ್ಲಿ ತರಬೇತಿಯನ್ನು ಕೊಡುವ ಶಾಲೆಗೆ ಹೋಗಿ ಆ ಜ್ಞಾನವನ್ನು ಪಡೆದುಕೊಂಡಳು. ಆ ಸಂದರ್ಭದಲ್ಲಿ ಒಂದು ಸಿನೇಮಾ ನೋಡಲು ಅಥವಾ ಒಂದು ಗಂಟೆ ಹೆಚ್ಚು ಮಲಗಲು ಕೂಡ ಆಕೆಗೆ ವೇಳೆ ದೊರೆಯುತ್ತಿರಲಿಲ್ಲವಂತೆ. ಟೆಕ್ನಿಕಲ್ ಶಾಲೆಯಲ್ಲಿ ಆಕೆ ಡಿಪ್ಲೋಮಾ ಪಡೆದಾಗ ತಾಯಿ ಹೇಳಿದಳಂತೆ: "ಈಗ ನಿನ್ನ ರೆಕ್ಕೆ ಬಲಿತಿವೆ, ನೀನು ಹಾರಬಲ್ಲೆ" ಎಂದು! ಅದನ್ನೇ ನೆನೆದುಕೊಂಡು ವೆಲೆಂಟಿನಾ ಹಾರುವದನ್ನೇ ಪ್ರಾರಂಭಿಸಿದಳು. ಪ್ಯಾರಾಶೂಟ್ - ವಿಮಾನು ಕೊಡೆ-ಯಿಂದ ಹಾರುವದನ್ನು ಕಲಿಸುವ ಕ್ಲಾಸಿಗೆ ಸೇರಿದಳು. ತನ್ನ ಸುತ್ತು ನೇಕಾರರ ಅಂತಹ ಒಂದು ವರ್ಗವನ್ನೇ ನಿರ್ಮಾಣ ಮಾಡಿದಳು. ೧೯೬೧ ರಲ್ಲಿ ಯುವಕರೆಲ್ಲ ಯೂರಿ ಗಗರಿನ್ನನ ಸಾಹಸವನ್ನು ಕೇಳುತ್ತಿದ್ದರು. ಪೃಥ್ವಿಯ ಸುತ್ತು ಏನಿದೆಯೆಂಬುದರ ಬಣ್ಣ ಬಣ್ಣದ ವರ್ಣನೆಯನ್ನು ಲಕ್ಷ್ಯಗೊಟ್ಟು ಓದುತ್ತಿದ್ದರು. ಇವೆಲ್ಲವುಗಳಿಂದ ಪ್ರೇರಿತಳಾದ ವೆಲೆಂಟಿನಾ, ಗಗರಿನ್ನನ ಹಾಗೆ ತಾನೂ ಹಾರಿದರೆ-? ಎಂದು ಯೋಚಿಸಿದಳು. ಆದರೆ ಮಹಿಳೆಗೆ ಈ ಅವಕಾಶ ಸಿಗಬಹುದೇ ಎಂದು ಮತ್ತೊಂದು ಯೋಚನೆ ಅವಳ ತಲೆಯಲ್ಲಿ ಸುಳಿದುಹೋಯ್ತು. ಆದರೂ ಸಾಹಸ ಮಾಡಿ ಅಂತರಿಕ್ಷ ಉಡ್ಡಾಣವನ್ನು ಕಲಿಸುವ ಸಂಸ್ಥೆಗೆ ತನ್ನ ಇಚ್ಛೆಯನ್ನು ಸುದೀರ್ಘವಾಗಿ ವಿವರಿಸಿ ಪತ್ರವೊಂದನ್ನು ಬರೆದಳು. ರಾಷ್ಟ್ರಕ್ಕೆ ಸೇವೆಸಲ್ಲಿಸಬೇಕೆಂಬ ತನ್ನ ಇಚ್ಛೆಯನ್ನು ಪ್ರಕಟಗೊಳಿಸಿದಳು. ಸುದೈವದಿಂದ ಆಕೆಯ ಪತ್ರಕ್ಕೆ ಆಶಾದಾಯಕ ಉತ್ತರಬಂತು. ಗಗನಯಾತ್ರಿಕರ ಪಙ್ತಿಯಲ್ಲಿ ಅವಳಿಗೂ ಸ್ಥಾನ ದೊರೆಯಿತು. ತಜ್ಞರಾದ ಶಿಕ್ಷಕರ ಬಳಿಯಲ್ಲಿ ತರಬೇತಿಯನ್ನು ಪಡೆಯುತ್ತಿದ್ದ ವೆಲೆಂಟಿನಾಳಿಗೆ ಹೊಸ ಅನುಭವವೇ ಆಯ್ತು! ತುಂಬ ಸಹನೆ, ಹಾಗೂ ಧೈರ್ಯದಿಂದ ಆಕೆ ತರಬೇತಿ ಪಡೆಯುತ್ತಿದ್ದಳು. ಎಷ್ಟೋ ವಿಷಯಗಳಲ್ಲಿ ಅವಳ ಹಿಡಿತ, ಪುರುಷನು ಗ್ರಹಿಸಿದುದಕ್ಕಿಂತ ಚೆನ್ನಾಗಿರುತ್ತಿತ್ತು.

ಅವಳ ಜೊತೆಗಗನಯಾತ್ರಿ ಬೈಕೋವ್ಸ್ಕಿ ಉಡ್ಡಾಣವನ್ನು ಪ್ರಾರಂಭಿಸಿದಾಗ ಜನ ಅಪೂರ್ವ ರೀತಿಯಲ್ಲಿ ಅವನನ್ನು ಬೀಳ್ಕೊಟ್ಟರು. ಅದನ್ನು ಕಂಡ ವೆಲೆಂಟಿನಾಳ ಹೃದಯ ಉಬ್ಬಿತು! ರಾಷ್ಟ್ರಕ್ಕಾಗಿ ತಾವು ಸಲ್ಲಿಸುವ ಸೇವೆಯನ್ನು ಜನ ಯಾವ ರೀತಿಯಲ್ಲಿ ಕಾಣುತ್ತಾರೆ ಎಂಬುದನ್ನು ತಿಳಿದುಕೊಂಡಳು. ಅಲ್ಲದೆ ಜನತೆಯ ಪ್ರೀತಿಗೆ ಪ್ರತಿಯಾಗಿ ತಮ್ಮ ಮೇಲೆ ಯಾವ ಹೊಣೆಯಿದೆಯೆಂಬುದನ್ನು ಯೋಚಿಸಿದಳು. ಆಗಲೇ ಅಂತರಿಕ್ಷಯಾನಗಳ ಮುಖ್ಯ ತಯಾರಕರು ಅವಳನ್ನು ಎಚ್ಚರಿಸಿದರು, "ಸೋದರಿಯರೇ, ಈಗ ನಿಮ್ಮ ಸರದಿ ಬಂತು."

ವೆಲೆಂಟನಾಳ ಪರಿಭ್ರಮಣ ಮಾರ್ಗವು ಸುಗಮವಾಗಲೆಂದು ಹಾರೈಸಿ, ಜನ ಅಪೂರ್ವ ರೀತಿಯಲ್ಲೇ ಅವಳನ್ನು ಬೀಳ್ಕೊಟ್ಟರು! ಜಗತ್ತಿನ ಜನರೆಲ್ಲ ಅವಳ ಯಾನವನ್ನು ನೋಡಲು, ಅವಳ ಧ್ವನಿಯನ್ನು ಆಕಾಶವಾಣಿಯ ಮೂಲಕ ಕೇಳಲು ಕಾತುರಪಟ್ಟರು!

೧೯೬೩ ರ ಜೂನ ೧೬ ನೆಯ ತಾರೀಖು ಮಧ್ಯಾಹ್ನ ೧೨-೩೨ ಕ್ಕೆ ಅಖಿಲ ಭಾರತ ಆಕಾಶವಾಣಿಯ ತೋಡಾಪುರ ರಿಸೀವ್ಹಿಂಗ ಸ್ಟೇಶನ್ನಿನಲ್ಲಿ ವೆಲೆಂಟನಾಳ ಧ್ವನಿಯನ್ನು ಹಿಡಿದಿಡುವ ಪ್ರಯತ್ನ ನಡೆಯಿತು. ಇನ್ನುಳಿದ ಗಗನಯಾತ್ರಿಗಳು ಪ್ರಯಾಣ ಕೈಕೊಂಡಾಗ ಧ್ವನಿಯನ್ನು ಹಿಡಿಯಲು ಈ ಕೇಂದ್ರವು ಪ್ರಯತ್ನಿಸಿದ್ದರೂ ಸಾಧ್ಯವಾಗಿರಲಿಲ್ಲ. ಜೂನ ೧೬ ರಂದು ವೆಲೆಂಟನಾ ಉಡ್ಡಾಣ ಕೈಕೊಂಡಾಗಿನಿಂದಲೇ ಈ ಪ್ರಯತ್ನ ಪ್ರಾರಂಭ



ತುಂಟ ಮೈದುನನಿದ್ದಾನೆ– ಭಾವಂದಿರು ಜಾಗ್ರತೆ!

ವಾಗಿತ್ತು. ಆದರೆ ಹಿಡಿದ ಧ್ವನಿ ಅಸ್ಪಷ್ಟವಾಗಿತ್ತು. ಆದರೆ ವ್ಹೆಲೆಂಟಿನಾ ಪೃಥ್ವಿಗೆ ೩೦ನೆಯ ಸುತ್ತು ಹಾಕುವಾಗ ಈ ಧ್ವನಿಗ್ರಹಣ ಸಾಧ್ಯವಾಯ್ತು; ಅಖಿಲ ಭಾರತ ಆಕಾಶವಾಣಿ, ಅಂತರಿಕ್ಷದಿಂದ ಧ್ವನಿಯನ್ನು ಹಿಡಿದು, "From over the globe the seagull talking" ಎಂದು ಅಂದೇ ಸಂಜೆಗೆ ಬಿತ್ತರಿಸಿತು. ಆಕಾಶವಾಣಿಯ ಇತಿಹಾಸದಲ್ಲಿಯೇ ಇದೊಂದು ಹೆಮ್ಮೆಯ ಸಂಸ್ಮರಣೀಯ ಸಿದ್ಧಿ!

ವೆಲೆಂಟನಾಳ ಪರಿಭ್ರಮಣಮಾರ್ಗವು ಪೃಥ್ವಿಗೆ ಅತಿ ಸಮೀಪವೆಂದರೆ, ೧೮೩ ಕಿಲೋಮೀಟರುಗಳ ಮೇಲೂ, ದೂರವೆಂದರೆ ೨೩೩ ಕಿಲೋಮೀಟರುಗಳ ಮೇಲೂ ಇರುತ್ತಿತ್ತು. ಅವಳ ಅಂತರಿಕ್ಷಯಾನವು ೮೮.೩ ಮಿನಿಟುಗಳಿಗೆ ಒಂದು ಸಲದಂತೆ ಪೃಥ್ವಿಯ ಪ್ರದಕ್ಷಿಣೆಯನ್ನು ಪೂರೈಸಿತು.

ವೆಲೆಂಟನಾ ಸಕುಶಲೆಯಾಗಿ ಭೂಮಿಗಿಳಿದಾಗ ಮಕ್ಕಳಿಗೂ ಸಂತೋಷ, ಮಹಿಳೆಯರಿಗೂ ಸಂತೋಷ; ಜಗತ್ತಿನ ಜನಕ್ಕೆಲ್ಲ ಸಂತೋಷ! ಕುತೂಹಲ!! ಹಲವರು ವೈಜ್ಞಾನಿಕ ಪ್ರಗತಿಯನ್ನು ಮೆಚ್ಚಿ ಮಾನವನ ಕಲ್ಯಾಣಕ್ಕಾಗಿ ಅದು ಉಪಯೋಗವಾಗಬೇಕು ಎಂದು ಆಶಿಸಿದರು! ಹಲವರು 'ಮಹಿಳೆಯರಲ್ಲಿಯೂ ಇಷ್ಟು ಬುದ್ಧಿಶಕ್ತಿ, ದೈಹಿಕ ಸಹಿಷ್ಣುತೆ, ಚಾಕಚಕ್ಯತೆಗಳಿವೆಯೆ?' ಎಂದು ಆಶ್ಚರ್ಯಪಟ್ಟರು. 'ಮಹಿಳೆಯರಿಗೆ ಅಂತರಿಕ್ಷ ಉಡ್ಡಾಣವನ್ನೂ ಕಲಿಸಿದರೆ, ಒಂದು ವೇಳೆ ಅವರು ಪುರುಷರಿಗಿಂತ ಮುಂದು ಹೋಗಬಹುದಲ್ಲ' ಎಂದು ಹಲವರು ಸಂಶಯಪಟ್ಟರು! "ಮಹಿಳೆ ಭೂಮಿಯ ಮೇಲಿನ ಪುರುಷನ ಜೀವನದಲ್ಲಷ್ಟೇ ಅಲ್ಲ, ಅಂತರಿಕ್ಷ ಜೀವನದಲ್ಲಿಯೂ ಸಹಭಾಗಿಯಾಗಿದ್ದಾಳೆ," ಎಂದು ವೆಲೆಂಟನಾಳ ಸಾಹಸವನ್ನು ಕಂಡ ಹಲವರು ಮಹಿಳಾವರ್ಗವನ್ನೇ ಅಭಿನಂದಿಸಿದರು. ರಶಿಯಾದ ಚಿಕ್ಕ ಮಕ್ಕಳು, 'ಮುಂದಿನ ಸಲ ನಾವು ಉಡ್ಡಾಣ ಕೈಕೊಳ್ಳುತ್ತೇವೆ,' ಎಂದು ವೆಲೆಂಟನಾಳನ್ನು ಅಭಿನಂದಿಸಿ ಪತ್ರಬರೆದರಂತೆ!

ಮಹಿಳೆ ಯಶಸ್ವಿಯಾಗಿ ಉಡ್ಡಾಣವನ್ನು ಕೈಕೊಂಡು ಜೊತೆಗೆ ಪ್ರಯೋಗಗಳನ್ನು ನಡೆಸಿಕೊಂಡು ಬಂದುದು ಅಂತರಿಕ್ಷಪ್ರಯೋಗಗಳಲ್ಲಿ ಮುಂದುವರಿದ ರಶಿಯದ ವಿಜ್ಞಾನಿಗಳಿಗೇ, ವಿಜ್ಞಾನದ ಪ್ರಗತಿಯಲ್ಲಿ ಒಂದು ಮೈಲಿಗಲ್ಲಾಗಿದೆ. ಅದು ಮಹಿಳಾವರ್ಗಕ್ಕೆ ಅಭಿಮಾನದ ವಿಷಯವಲ್ಲವೇ! "ಹೆಂಗಸು ಏನು ಮಾಡಬಲ್ಲಳು?" ಎಂದು ಅಸಡ್ಡೆ ತೋರುವ ಜನಕ್ಕೆಲ್ಲ ವೆಲೆಂಟನಾ ಸಮರ್ಥ ಉತ್ತರವಾಗಿದ್ದಾಳೆ. ಪುರುಷರಲ್ಲಿ ಎಲ್ಲರೂ ಮಹಾತ್ಮಾ ಗಾಂಧೀಯಂಥವರೇ ಆಗುತ್ತಾರೆಯೇ? ಹಾಗೆ ಮಹಿಳೆಯರೆಲ್ಲ ವೆಲೆಂಟನಾಳ ಸಾಹಸಗುಣವನ್ನು ಪಡೆಯಲು ಸಾಧ್ಯವೆ? ಆದರೆ ಯೋಗ್ಯ ಅವಕಾಶದೊರೆತರೆ ಸಾಹಸದ ಪರಾಕಾಷ್ಠೆಯನ್ನು ಮುಟ್ಟಬಲ್ಲ ಶಕ್ತಿ ಮಹಿಳೆಯಲ್ಲಿದೆಯೆಂಬುದಕ್ಕೆ ವೆಲೆಂಟನಾ ಜೀವಂತ ಉದಾಹರಣೆಯಾಗಿದ್ದಾಳೆ. ಜಾಗತಿಕ ಮಹಿಳಾ ಸಮಾಜಕ್ಕೇ ಅದೊಂದು ಹೆಮ್ಮೆ!!



ತಾಯಿಯನ್ನು ಕಳೆದುಕೊಂಡ ಲೂಸಿಯನ್ನು ಲಾಲಾನ ಹೆಂಡತಿ ಬೆಳೆಸಿದಳು. ಆದರೆ ಆದರ ಪರಿಣಾಮವಾಗಿ ತನ್ನ ಸ್ವಂತ ಮಗಳು ಲೆಹರಾನಳ ಲಗ್ನಕ್ಕೆ ವಿಘ್ನ ಬಂದಿತು. ಅವಳ ಮೇಲೆ ಗಂಭೀರ ಆರೋಪವನ್ನು ತಂದಿತು. ಲಾಲಾನಿಗೆ ಮಗಳ ಮದುವೆ ಬಗೆಹರಿಯದ ಸಮಸ್ಯೆ ಆಯಿತು. ಅವನ ಮಕ್ಕಾಯಾತ್ರೆ ನಿಂತಿತು. ರೋಗದಿಂದ ಬಳಲತೊಡಗಿದ. ಈ ವಿಪತ್ತಿನಿಂದ ಆ ಕುಟುಂಬ ಪಾರಾದ ಬಗೆ ಒಂದು ದಿವ್ಯವೇ ಆಗಿರುವುದು. ಅದೇನೆಂಬುದನ್ನು ಈ ಕತೆ ಓದಿದಾಗಲೇ ಅರಿಯುವಿರಿ.

# ಲೆಹರಾನಳ ಲಗ್ನ ತಪ್ಪಿತೇ...?

ಗೋವಿಂದಮೂರ್ತಿ ದೇಸಾಯಿ

"ಲಾಲಾ, ನಿನ್ನನ್ನಗಲಿ ಅದು ಹೇಗೆ ಏಕಾಕಿಯಾಗಿ ಸ್ವದೇಶಕ್ಕೆ ಹೋಗಲಿ? ಹಿಂದುಸ್ತಾನದಲ್ಲಿ ಹುಟ್ಟಿ ಬೆಳೆದ ಈ ದೇಹವನ್ನು ನಿನ್ನಪ್ರೀತಿ ಇಲ್ಲಿಯೇ ಬಂಧಿಸಿ, ನನ್ನನ್ನು ನಿನ್ನ ಸೆರೆಯಾಳಾಗಿ ಮಾಡಹತ್ತಿದೆ. ಓ ...ಲಾ...ಲಾ...!" ಎಂದವಳೇ ಲೂಸಿ ಲಾಲಾನನ್ನು ಬಿಗಿದಪ್ಪಿದಳು.

"ಅಳಬೇಡ ಲೂಸಿ. ಎಂದಾದರೂ ಒಂದು ದಿವಸ ನೀನು ಇಂಗ್ಲಂಡಕ್ಕೆ ಹೋಗುವವಳೇ ಇದ್ದಿ. ಮುದ್ದು ಲೂಸಿ. ಒಮ್ಮೆ ನಗು ನೋಡೋಣ. ನೀನು ನಕ್ಕದ್ದನ್ನು ನೋಡಿ ನಾನು ಬೀಳ್ಕೊಡಬೇಕೆಂದಿದ್ದೇನೆ" ಎಂದು ಲಾಲಾನು ಲೂಸಿಯ ಅರಿಷಣ ವರ್ಣದ ಗಲ್ಲಗಳೆರಡನ್ನು ಹಿಡಿದು ಕೇಳಿದನು.

ಲೂಸಿ ಅರ್ಧ ನಗೆ, ಅರ್ಧ ಕಣ್ಣೀರುಗಳಿಂದ "ಲಾ...ಲಾ! ನಾನು ಇಂಗ್ಲಂಡಕ್ಕೆ ಹೋದ ಮೇಲೆ ನನ್ನನ್ನು ಮರೆತುಬಿಡುವಿಯೇನು?" ಎಂದು ಲಾಲಾನನ್ನು ಮತ್ತೊಮ್ಮೆ ಅಪ್ಪಿ ಲಾಲಾನಿಗೆ ಕೇಳಿದಾಗ, ಲಾಲಾನ ಕಣ್ಣು ತುಂಬಾ ನೀರು ಬಂದವು.

"ಲೂಸಿ, ಈ ಜೀವನದಲ್ಲಿ ನಾನು ನಿನ್ನನ್ನು ಮರೆಯುವುದು ಸಾಧ್ಯವಿಲ್ಲ. ನೀನು ಇಂಗ್ಲಂಡಕ್ಕೆ ಹೋದರೂ ಈ ಲಾಲಾನ ಲೂಸಿಯೇ!" ಎಂದು ಅವಳ ಕೈಹಿಡಿದು ಹೇಳಿದನು. ಲಾಲಾ ಮತ್ತು ಲೂಸಿ ತಾವು ಮುಂಬಯಿ ಬಂದರದ ಕಟ್ಟೆಯ ಮೇಲೆ ನಿಂತಿರುವೆವೆಂಬುದನ್ನು ಮರೆತೇ ಮಾತನಾಡುತ್ತಿದ್ದರು. ಲೂಸಿಯ ಅಪೂರ್ವವಾದ ಲಾವಣ್ಯ, ಮನೋಮೋಹಕವಾದ ಮಾತುಗಳು, ಬಂದರದಲ್ಲಿ ನೆರೆದ ಆಂಗ್ಲರ ಮನಸ್ಸಿನಲ್ಲಿ ಅಸೂಯೆಯ ರೇಖೆಯನ್ನು ಎಳೆದವು.

ಗುಲಾಬಿಮಿಶ್ರಿತ ಬಿಳಿವರ್ಣದ ಸುಂದರ ಲೂಸಿ, ಸವಣೂರ ಸಂಸ್ಥಾನದಿಂದ ಅದೇ ತಾನೇ ನಿವೃತ್ತರಾದ ರೆಸಿಡೆಂಟ್ ಸರ್ ಹೆನ್ರೀ ರಾಬರ್ಟಸನ್‌ರ ಏಕಮೇವ ಪುತ್ರಿ, ಬಿಳಿಗಡ್ಡದ, ಹಸಿರು ರುಮಾಲದ ಸುಕ್ಕುಗಟ್ಟಿದ ಮುಖವುಳ್ಳ ಸೇವಕನಾದ ಲಾಲಾನೊಡನೆ ಈ ರೀತಿ ಮಾತನಾಡುವದು ನಿವೃತ್ತ ರೆಸಿಡೆಂಟ್‌ರನ್ನು ಇಂಗ್ಲಂಡಕ್ಕೆ ಬೀಳ್ಕೊಡಲು ಬಂದ ಬಿಳಿಯ ಸ್ನೇಹಿತರಿಗೆ ಸರಿಬರಲಿಲ್ಲ. ಸರ್ ರಾಬರ್ಟ್ಸನ್‌ರು ಸವಣೂರ ಸಂಸ್ಥಾನದಲ್ಲಿ ಹದಿನೆಂಟು ವರುಷ ರೆಸಿಡೆಂಟರೆಂದು ಕೆಲಸಮಾಡಿ, ತಮ್ಮ ಸೇವಾನಿವೃತ್ತ ಜೀವನವನ್ನು ಇಂಗ್ಲಂಡದಲ್ಲಿ ಕಳೆಯಲು ತಮ್ಮ ಪುತ್ರಿಯೊಡನೆ ಇಂದು ಅವರು ಸ್ವದೇಶಕ್ಕೆ ಮರಳಲಿದ್ದರು. ಅಂತಲೇ ಅವರ ಅನೇಕ ಸ್ನೇಹಿತರು ಬಿಲಾರ್ಡ ಪೀಯರ್ಸಕ್ಕೆ ಇಂದು ಬಂದಿದ್ದರು. ಅವರಲ್ಲಿ ಸವಣೂರಿನಿಂದ ಬಂದ ಲಾಲಾನೂ ಒಬ್ಬನಾಗಿದ್ದನು. ಹದಿನೆಂಟು ವರುಷಕಾಲ ಅವರ ಸೇವೆ ಮಾಡಿದ ಲಾಲಾನು ಅವರ ಸ್ನೇಹಿತರಲ್ಲಿ ಒಬ್ಬನಾಗಿದ್ದನು!

ಲೂಸಿಯ ವರ್ತನೆಯಿಂದ ಬಿಳಿಯ ಸ್ನೇಹಿತರ ಮುಖಗಳಲ್ಲಾದ ಪರಿವರ್ತನೆಯನ್ನು ಕಂಡ ರಾಬರ್ಟಸನ್ನರು "ನನ್ನ ಲೂಸಿ ಈ ಹದಿನಾರು ವರುಷಗಳ ಕಾಲ ಈ ನನ್ನ ಸೇವಕನಾದ ಲಾಲಾನಲ್ಲಿಯೇ ಬೆಳೆದುಬಂದಿದ್ದಾಳೆ. ಈ ಲೂಸಿಯನ್ನು ಹಡೆದು ಇಲ್ಲಿಯೇ ಅವಳ ತಾಯಿ ಕಣ್ಮುಚ್ಚಿದಾಗ, ಲಾಲಾನ ಹೆಂಡತಿ ರೆಹಮಾನ ತನ್ನ ಎದೆಹಾಲನ್ನು ಕೊಟ್ಟು ಈ ಲೂಸಿಯನ್ನು ಬದುಕಿಸಿದಳು. ಆಗ ರೆಹಮಾನ ತನ್ನ ಮಗಳಾದ ಲೇಹರಾನಳನ್ನು ಹಡೆದು ಅದೇ ಎರಡು ತಿಂಗಳಾಗಿದ್ದವು. ರೆಹಮಾನಳು ಈ ಲೂಸಿ ಮತ್ತು ಲೆಹರಾನಳಲ್ಲಿ ಯಾವ ಭೇದವನ್ನೂ ಕಲ್ಪಿಸದೇ ಬೆಳೆಸಿಕೊಂಡು ಬಂದಳು. ಹಾಗೆಯೇ ಈ ಲಾಲಾನ ಮಗಳಾದ ಲೇಹರಾನಳೂ ನನ್ನನ್ನು ತಂದೆಯೆಂದೇ ಭಾವಿಸಿದ್ದಾಳೆ. ಈ ಲೂಸಿ ಮತ್ತು ಲೇಹರಾನಳಿಗೆ ನಾನೂ ಒಂದೇ ಮತ್ತು ಲಾಲಾನೂ ಒಂದೇ! ಲಾಲಾ ನಮ್ಮ ಸೇವಕವರ್ಗಕ್ಕೆ ಸೇರಿದ್ದರೂ ಅವನು ನಮ್ಮ ಕುಟುಂಬಕ್ಕೆ ಸೇರಿದವನಂತಿದ್ದನು. ಹಿಂದುಸ್ತಾನದಿಂದ ಆಯ್ದುಕೊಂಡ ಹೊರಟ ಮುತ್ತಾದ ಈ ಲೂಸಿಯ ಬದುಕಿಗೆ ಲಾಲಾ ಮತ್ತು ರೆಹಮಾನಳು ಕಾರಣರು. ಒಬ್ಬ ಮಗಳಾದ ಈ ಲೂಸಿಯನ್ನು ನಾನು ಕರಕೊಂಡು ಹೊರಟಿದ್ದರೂ ಇನ್ನೊಬ್ಬ ಮಗಳಾದ ಲೆಹರಾನಳನ್ನು ನಾನಿಲ್ಲಿಯೇ ಬಿಟ್ಟು ಹೊರಟಿದ್ದೇನೆಂದು ನನಗೆ ವ್ಯಥೆಯಾಗಿದೆ..." ಎಂದು, ಕಣ್ಣಲ್ಲಿ ನೀರನ್ನು ತಂದು ಆ ಕರುಣೆಯ ಕಥೆಯನ್ನು ಹೇಳಿದಾಗ ಆ ಬಿಳಿಯರಿಗೆ ಲಾಲಾನಲ್ಲಿ ಗೌರವವು ಮೂಡಿತು. ಲಾಲಾನನ್ನು ನೋಡುವ ಅವರ ದೃಷ್ಟಿಯಲ್ಲಿ ಮಹದಂತರವಾಯಿತು!

ಅಷ್ಟರಲ್ಲಿ ಹೆನ್ರೀ ಸಾಹೇಬರು ಹಡಗು ಏರುವ ಸಮಯವಾದೊಡನೆಯೇ ಅವರ ಸ್ನೇಹಿತರು ಸಾಹೇಬರನ್ನು ಕೈಕುಲಕಿ ಬೀಳ್ಕೊಟ್ಟರು. ಲಾಲಾ ಮಾತ್ರ ದೂರ ನಿಂತು ಒಂದು ಸಲಾಮನ್ನು ಮಾಡಿದನು. ಆಗ ಸಾಹೇಬರೇ ಮುಂದೆ ಬಂದು ಅವನ ಭುಜಗಳೆರಡನ್ನೂ ಹಿಡಿದು, "ಲಾಲಾ, ಲೆಹರಾನಳ ಮದುವೆಯ ವಿಷಯವನ್ನು ನನಗೆ ತಿಳಿಸಲು ಮರೆಯಬೇಡ. ಆಗ, ನಿನಗೆ ನಾನು ಸಹಾಯವನ್ನು ಮಾಡುತ್ತೇನೆ. ನಿನ್ನ ಹೆಂಡತಿಯಿಂದಲೇ ನನ್ನ ಲೂಸಿ ಬದುಕಿದ್ದಕ್ಕೆ ನಾನು ತುಂಬಾ ಕೃತಜ್ಞನಾಗಿದ್ದೇನೆ. ನಾನೆಂದೂ ಲೂಸಿ ಮತ್ತು ಲೆಹರಾನಳ ಮಧ್ಯದಲ್ಲಿ ಅಂತರವಿದೆ ಎಂದು ಭಾವಿಸಿಲ್ಲ ಮತ್ತು ಇನ್ನು ಭಾವಿಸುವದೂ ಸಾಧ್ಯವಿಲ್ಲ. ನೀನು ನಮ್ಮ ಸೇವಕನಾದರೂ ಸೋದರನಂತೆ ವರ್ತಿಸಿದೆ. ಈ ಪೂರ್ವಪಶ್ಚಿಮಗಳ ಪುಣ್ಯದ ಸಂಕೇತವೇ ಈ ಲೂಸಿ. ಹಿಂದುಸ್ತಾನ ಮತ್ತು ಅದರಲ್ಲಿಯೂ ನೀನು ಎಂದೆಂದಿಗೂ ನನ್ನಿಂದ ಮರೆಯಲಾಗದ ವಸ್ತುಗಳು" ಎಂದು ಹೇಳಿ ಅಪ್ಪಿಕೊಂಡು ಕೈಕುಲಕಿ ಬೀಳ್ಕೊಟ್ಟರು. ಲೂಸಿ "ಲಾಲಾ, ಲೆಹರಾನ ದೀದಿಯ ಮದುವೆಗೆ ನನ್ನನ್ನು ಕರೆಯದಿರಬೇಡ. ಸವಣೂರಿಗೆ ಹೋದೊಡನೆಯೇ ರೆಹಮಾನ ಮತ್ತು ಲೆಹರಾನಳಿಗೆ ನನ್ನ ಶುಭಾಶಯಗಳನ್ನು ತಿಳಿಸು" ಎಂದು ಹೇಳಿ ಲಾಲಾನನ್ನು ಕಣ್ಣು ತುಂಬಾ ನೋಡಿ ಬೀಳ್ಕೊಟ್ಟಳು. ಹಡಗದ ಹಗ್ಗಗಳನ್ನು ಬಿಚ್ಚಿ ಹಡಗವು ತೇಲಹತ್ತಿದ್ದರೂ ಲಾಲಾ ಇನ್ನೂ ಕೈಮಾಡುತ್ತಲೇ ನಿಂತಿದ್ದನು. ಅವರನ್ನು ಬೀಳ್ಕೊಟ್ಟ ನೋವಿನಿಂದ ಲಾಲಾ ಯಾವಾಗ ಸವಣೂರಿಗೆ ಬಂದನೋ ಅವನಿಗೇ ಅರಿವಾಗಲಿಲ್ಲ! ಲಾಲಾ ಮನೆಗೆ ಬಂದಾಗ ಅವನ ದುಃಖವು ಇಮ್ಮಡಿಸಿತು. ರೆಹಮಾನ ಮತ್ತು ಲೆಹರಾನಳು ಅಳುತ್ತಲೇ ಕುಳಿತಿದ್ದರು. ಅವರೆಲ್ಲರೂ ಏನನ್ನೋ ಕಳಕೊಂಡವರಂತೆ ವ್ಯಥೆಪಡುತ್ತಿದ್ದರು. ಲಾಲಾ ಬಂದ ಮೇಲೆ ಮುಂಬಯಿ ಸುದ್ದಿಯನ್ನು ವಿವರವಾಗಿ ಹೇಳಿದನು.

ಲಾಲಾ ಸವಣೂರಿಗೆ ಬಂದ ಮೇಲೆ ತನ್ನ ಶೇಷಾಯುಷ್ಯವನ್ನು ಕುರಾನ ಓದುವದರಲ್ಲಿ ಕಳೆಯಬೇಕೆಂದು ನಿರ್ಧರಿಸಿದನು. ಮೊದಲಿನಿಂದಲೂ ಲಾಲಾನಿಗೆ ಅಲ್ಲಾನಲ್ಲಿ ಅಪಾರ ವಿಶ್ವಾಸ. ಅವನಷ್ಟು ಕುರಾನ ಅರಿತು ನಡೆಯುವವರು ಸವಣೂರಲ್ಲಿಯೇ ಇದ್ದಿರಲಿಲ್ಲ. ನಮಾಜನ್ನು ಮಾಡದೆ ಅವನೆಂದಿಗೂ ಬಾಯಲ್ಲಿ ನೀರನ್ನು ಹಾಕುತ್ತಿರಲಿಲ್ಲ. ಧರ್ಮದಲ್ಲಿ ಅವನಿಗೆ ಎಷ್ಟು ಶ್ರದ್ಧೆಯೋ ಅಷ್ಟೇ ಶ್ರದ್ಧೆ ಅವನಿಗೆ ಅವನ ಸೇವಾಕಾರ್ಯದಲ್ಲಿ ಇರುತ್ತಿತ್ತು. ಅಂತಲೇ ಅವನು ಸಾಹೇಬರ ಪ್ರೀತಿಯ ಪ್ರತೀಕವಾಗಿ ಬೆಳೆದನು.

ಸಾಹೇಬರು ಇಂಗ್ಲಂಡಕ್ಕೆ ಹೋದಮೇಲೆ ಲಾಲಾನಿಗೆ ಒಂದು ಕಾಗದವನ್ನು ಬರೆದರು. ಆ ಕಾಗದವನ್ನು ಓದಿಸಲು ಲಾಲಾ ನನ್ನಬಳಿಗೆ ಬಂದಾಗ ರೆಸಿಡೆಂಟ್ ಸಾಹೇಬರು ಅವನಲ್ಲಿಟ್ಟ ವಿಶ್ವಾಸದ ಕಲ್ಪನೆ ನನಗಾಯಿತು. ಆ ವರ್ಷದ ಕ್ರಿಸ್‌ಮಸ್ ಹಬ್ಬವಾದ ಮೇಲೆ ಲಾಲಾನಿಗೆ ಕ್ರಿಸ್‌ಮಸ್ ಕಾಣಿಕೆಯೆಂದು ಎರಡು ನೂರು ರೂಪಾಯಿ ಕಳಿಸಿದ್ದರು. ಲೂಸಿ ಕೂಡ ಆಗೀಗ ಲೆಹರಾನಳಿಗೆ ಕಾಗದಗಳನ್ನು ಬರೆಯುತ್ತಿದ್ದಳು. ಅವುಗಳನ್ನು ಓದುವದಾಗಲಿ ಅಥವಾ ಅವುಗಳಿಗೆ ಉತ್ತರ ಬರೆಯುವದಾಗಲಿ ನನ್ನ ಪಾಲಿಗೇ ಬರುತ್ತಿತ್ತು. ಸಾಹೇಬರ ಪತ್ರಗಳು ಬಂದರೆ ಲಾಲಾನಿಗೆ ಆಗುತ್ತಿದ್ದ ಆನಂದವನ್ನು ನೋಡಿಯೇ ಅರಿಯಬೇಕು. ಲೂಸಿಯ ಪತ್ರಕ್ಕಂತೂ ಮುದ್ದನ್ನು ಕೊಡುತ್ತಿದ್ದನು. ರೆಸಿಡೆಂಟರು ನಿವೃತ್ತರಾಗಿ ಇಂಗ್ಲಂಡಕ್ಕೆ ಹೋಗಿದ್ದರೂ ಲಾಲಾ ಅವರನ್ನು ರೆಸಿಡೆಂಟರೆಂದೇ ಕರೆಯುತ್ತಿದ್ದನು. ಅವನು ಪಾಕೀಟನ್ನು ಕೋಟಿನಿಂದ ತೆಗೆಯುವ ರೀತಿ, ಆ ಪಾಕೀಟಿನಿಂದ ಕಾಗದವನ್ನು ಹಿರಿಯುವ ಪಾಂಗು ಅವನಿಗೇ ಮೀಸಲಾದದ್ದು. ಸಾಹೇಬರ ಕಾಗದಗಳಿಗೆ ಉತ್ತರವನ್ನು ಬರೆಯುವಾಗ "ಬರೆಯಿರಿ; ಮುದ್ದು ಲೂಸಿಗೆ ಗಂಡನನ್ನು ನೋಡಿದ್ದೀರಾ? ನೋಡಿದ್ದರೆ ಅವನ ಸಂಬಳವೆಷ್ಟು? ಲೂಸಿಯನ್ನು ನಾವು ಹೂವಿನಂತೆ ಬೆಳಿಸಿದ್ದೇವೆ ಎಂದು ಹೇಳಿರಿ. ಲೂಸಿಯನ್ನು ಇಂಗ್ಲಂಡದ ರಾಣಿಯ ಹಾಗೆ ನಡೆಸಿಕೊಳ್ಳಬೇಕೆಂದು ಕರಾರನ್ನು ಹಾಕಿರಿ" ಎಂದು ನನ್ನನ್ನೇ ಸಾಹೇಬರೆಂದು ಭಾವಿಸಿ ಹೇಳುತ್ತಿದ್ದನು. ಹೆನ್ರೀ ಮತ್ತು ಲೂಸಿಯವರ ಬಗ್ಗೆ ಅವನು ತೋರಿಸುತ್ತಿದ್ದ ಗೌರವಾದರಗಳಿಂದ ನನಗೂ ಅವರಲ್ಲಿ ಅಭಿಮಾನವು ಮೂಡಿನಿಂತಿತ್ತು.

ಹೀಗೆ ಐದಾರು ವರ್ಷಗಳಿಂದ ತಿಂಗಳೆರಡು ತಿಂಗಳಲ್ಲಿ ಒಂದು ಸಲ ಲಾಲಾನು ನನ್ನನ್ನು ಹುಡುಕಿಕೊಂಡು ಬರುತ್ತಿದ್ದನು. ನಾನೇ ಅವನಿಗೆ ಕಾಗದಗಳನ್ನು ಓದಿ ಹೇಳಬೇಕು ಮತ್ತು ನನ್ನ ಕೈಯಿಂದಲೇ ಸಾಹೇಬರಿಗೆ ಉತ್ತರವು ಹೋಗಬೇಕೆಂದು ಅವನಿಚ್ಛೆ. ನನಗೂ ಈ ಐದಾರು ವರ್ಷಗಳಲ್ಲಿ ಹೆನ್ರೀ, ಲೂಸಿ, ಲೆಹರಾನಳ ಪರಿಚಯವಾದಂತೆಯೇ ಆಗಿತ್ತು. ಅವರನ್ನು ಪ್ರತ್ಯಕ್ಷ ನೋಡುವದಾಗದಿದ್ದರೂ ಅವರ ಸುಖದುಃಖಗಳಿಂದ ಅವರ ಸ್ವಭಾವದ ಪರಿಚಯವಾಗಿ ಹೋಗಿತ್ತು. ಲೆಹರಾನಳು ಸವಣೂರಿನಲ್ಲಿಯೇ ಇದ್ದರೂ ನೋಡುವದಾಗಿರಲಿಲ್ಲ. ಕಾರಣ ಅವಳು ಘೋಷಾದಲ್ಲಿದ್ದಳು. ಆದರೆ ಒಂದು ಸಲ ಲಾಲಾ ಜಡ್ಡಾಗಿ ಮಲಗಿದಾಗ ಅವನ ಮನೆಗೆ ಹೋಗುವ ಭಾಗವೇ ಬಿತ್ತು. ನಮ್ಮಿಬ್ಬರಲ್ಲಿ ಒಂದು ರೀತಿಯ ಆತ್ಮೀಯತೆ ಬೆಳೆದುಬಂದಿದ್ದರಿಂದ, ನಾನು ಅವನ ಮನೆಗೆ ಹೋಗುವಲ್ಲಿ ಅನ್ಯಥಾ ಭಾವಿಸಲಿಲ್ಲ. ನಾನು ಅವನ ಮನೆಯ ಪರದೆಯನ್ನು ಸರಿಸಿ ಒಳಕ್ಕೆ ಹೋದಾಗ ಲಾಲಾ ಪಲ್ಲಂಗದ ಮೇಲೆ ಮಲಗಿದ್ದನು. ಅವನ ಬಳಿ ರೆಹಮಾನಳು ಕುಳಿತಿದ್ದಳು. ಅದೆಂತಹ ರೂಪ ರಾಶಿ! ಆಗಲೇ ಐವತ್ತರ ಹೊಸ್ತಿಲವನ್ನುದಾಟಿದ್ದರೂ ಇನ್ನೂ ಕನ್ನೆಯಂತೆ ಕಾಣುತ್ತಿದ್ದಳು. ನಾನು




ಬಂದೊಡನೆ ಅವಳು ಏಳಲು ಪ್ರಯತ್ನಿಸಿದಾಗ "ಏಳಬೇಡ. ರೆಹಮಾನ ಅವರೇನು ನಮಗೆ ಅಪರಿಚಿತರಲ್ಲ. ಬೇಟೀ ಲೆಹರಾನ ಲೂಸಿಯ ಆ ಕಾಗದವನ್ನು ತೆಗೆದುಕೊಂಡು ಬಾ" ಎಂದು ಹೇಳಿದನು. ಪ್ರಾಯಶಃ ಲೆಹರಾನಳು ಹೊರಕ್ಕೆ ಬರಲು ನಾಚಿದಳೇನೋ! ಮತ್ತೆ ಲಾಲಾನು "ಬಾ, ಲೆಹರಾನ್! ಅವರು ನಿನಗೆ ಭಯ್ಯಾ ಆಗಬೇಕು" ಎಂದನು. ಆಗ ಲೆಹರಾನಳು ನಾಚುತ್ತ ಬಂದು ಕಾಗದವನ್ನು ನನಗೆ ಕೊಟ್ಟಳು. ಅವಳ ಸೌಂದರ್ಯವನ್ನು ನೋಡಿ ನಾನು ನಿಬ್ಬೆರಗಾದೆ. ಲಾಲಾನು ಬ್ರಹ್ಮನಲ್ಲಿ ವರವನ್ನು ಪಡೆಯದೆ ಮನ್ಮಥನಲ್ಲಿ ವರಪಡೆದು ಈ ಊರ್ವಶಿಯನ್ನು ಹಡೆದಿರಬೇಕು ಎಂದು ಮನಸ್ಸಿನಲ್ಲಿ ಅಂದುಕೊಂಡೆ. ನಾನು ಅವರಿಬ್ಬರನ್ನೂ ಅದೇ ಮೊದಲ ಸಲ ನೋಡುತ್ತಿದ್ದರೂ ಅವರ ಸ್ವಭಾವ, ರುಚಿ ಅಭಿರುಚಿಗಳ ಕಲ್ಪನೆ ಅದಾಗಲೇ ಆಗಿಹೋಗಿತ್ತು. ಹೀಗಾಗಿ ನನಗೆ ಅಲ್ಲಿ ಏನೂ ಹೊಸದೆನಿಸಲಿಲ್ಲ. ಲೆಹರಾನಳ ಹೆಸರಿಗೆ ಬಂದ ಲೂಸಿಯ ಕಾಗದವನ್ನು ಬಿಚ್ಚಿ "ದೀದೀ ಲೆಹರಾನ, ನಿನಗೊಂದು ವಿಷಯ ತಿಳಿಸಲು ಸಂತೋಷವೆನಿಸುತ್ತದೆ. ಸಂತೋಷದ ಜೊತೆ ನಾಚಿಕೆಯೂ ಬರುತ್ತಿದೆ. ನನ್ನ ಮದುವೆ ಗೊತ್ತಾಗಿದೆ. ವಿವರವಾಗಿ ನಮ್ಮ ತಂದೆ ಕಾಗದವನ್ನು ಬರೆಯುವರು. ಇನ್ನು ನಿನ್ನ ಗಂಡನು ಎಂದು ಬರುವನೆಂದು ಲಾಲಾನಿಗೆ ಕೇಳಿ ತಿಳಿಸು. ರೆಹಮಾನಳಿಗೆ ಈ ವಿಷಯವನ್ನು ತಿಳಿಸು. ನಿಮಗೆಲ್ಲ ಸಲಾಮುಗಳು, ನಿಮ್ಮವಳೇ ಆದ ಲೂಸಿ" ಎಂದು ಓದಿ ಅರ್ಥಮಾಡಿ ಹೇಳಿದೆ. ಈ ಕಾಗದದಿಂದ ಮೂವರಿಗೂ ಅತ್ಯಂತ ಸಂತೋಷವಾಯಿತು.

ಆಗಲೇ ಲೆಹರಾನಳು ಹೇಳಿದಂತೆ ಲೂಸಿಗೆ ಒಂದು ಕಾಗದವನ್ನು ಬರೆದೆ. ಲೆಹರಾನಳು ತನಗಾದ ಆನಂದವನ್ನು ಎಷ್ಟು ಹೃದಯಂಗಮವಾಗಿ ಬಣ್ಣಿಸಿದಳೋ ಅಷ್ಟು ಸುಂದರವಾಗಿ ನನಗೆ ಉತ್ತರ ಬರೆಯಲು ಬರಲಾರದೆಂದು ಅವಳಿಗೆ ಹೇಳಿದಾಗ ಅವಳು ನಕ್ಕಳು. ಆ ಒಂದೇ ಪರಿಚಯದಲ್ಲಿ ನಾನು ಲಾಲಾನ ಮನೆಯವನೇ ಆಗಿಹೋಗಿದ್ದೆ. ಮುಂದೆ ಹೆನ್ರೀ ಸಾಹೇಬರ ವಿವರವಾದ ಕಾಗದವೂ ಮೂವರಿಗೂ ಇಂಗ್ಲಂಡಕ್ಕೆ ಬರಲು ಆಮಂತ್ರಣವೂ ಬಂದಿತು. ಇಂಗ್ಲಂಡಕ್ಕೆ ಮದುವೆಗೆ ಹೋಗುವದು ಅಸಾಧ್ಯದ ಮಾತಾಗಿದ್ದರಿಂದ ಆಹೇರಿನ ಒಂದು ದೊಡ್ಡ ಗಂಟು ಪಾರ್ಸಲ್ ಆಗಿ ಇಂಗ್ಲಂಡಕ್ಕೆ ಹೋಯಿತು. ಲೆಹರಾನ, ರೆಹಮಾನ ಆರಿಸಿ ಕಳಿಸಿದ ಶೀರೆಗಳಿಂದ ಲೂಸಿಗೆ ಸಮಾಧಾನವಾದರೂ ಅವಳ ಗಂಡನಿಗೆ ಅಷ್ಟು ಮೆಚ್ಚುಗೆಯಾಗಲಿಲ್ಲವಂತೆ. ಲೂಸಿ ಹೇಳುತ್ತಿದ್ದ ಲಾಲಾ. ರೆಹಮಾನ, ಲೆಹರಾನಳಬಗ್ಗೆ ಅವನು ಅಷ್ಟು ಗಮನ ಕೊಡದೆ, ಸುಮ್ಮನೆ ನಗುತ್ತಿದ್ದನಂತೆ. ಒಮ್ಮೆಯಂತೂ ಲೂಸಿ ಸಿಟ್ಟಿಗೆ ಬಂದು "ಲಾಲಾ, ರೆಹಮಾನ, ಲೆಹರಾನಳ ಬಗ್ಗೆ ಸವಣೂರಿನ ಒಂದೊಂದು ಕಲ್ಲಿಗೆ ಹೇಳುತ್ತಿದ್ದರೂ ತಿಳಿಯುತ್ತಿತ್ತು. ನಿನಗೇನೂ ಅವರಬಗ್ಗೆ ತಿಳಿಯದು"

ಎಂದು ಗಂಡನನ್ನು ಆರೋಪಿಸಿದಳಂತೆ. ಮಧು ಚಂದ್ರಕ್ಕಾಗಿ ಇಬ್ಬರೂ ಅಲೆದು ಬಂದಮೇಲೆ ಲೂಸಿ ವಿವರವಾಗಿ ಕಾಗದ ಬರೆದು ಅನೇಕ ಭಾವ ಚಿತ್ರಗಳನ್ನು ಕಳಿಸಿದ್ದಳು. ಅವುಗಳನ್ನು ನೋಡಿ ಮೂವರಿಗೂ ಹಿಡಿಸಲಾರದ ಹಿಗ್ಗು!

ಲಿಹರಾನಾಳ ಲಗ್ನದ ಬಗ್ಗೆ ಹೆನ್ರೀಸಾಹೇಬರಿಂದ ಕಾಗದಗಳು ಬರುತ್ತಲು ಲಾಲಾ ಲಿಹರಾನಳಿಗೆ ವರವನ್ನು ಶೋಧಿಸಹತ್ತಿದನು. ಲಿಹರಾನಳ ರೂಪವನ್ನು ಕಂಡ ನನಗೆ ಅವಳ ಮದುವೆಗೆ ಲಾಲಾ ಯಾವ ತೊಂದರೆಯನ್ನೂ ವಹಿಸಬೇಕಾಗಲಿಕ್ಕಿಲ್ಲವೆಂದು ಅನಿಸಿತು. ಅದಲ್ಲದೆ ಅವಳೋರ್ವಳೇ ಮಗಳಾಗಿದ್ದರಿಂದ ಲಾಲಾನ ಸಕಲ ಸಂಪತ್ತೂ ಅವನಿಗೆ ಬಂದೇ ಬರುತ್ತಿತ್ತು. ಲಾಲಾನು ಶ್ರೀಮಂತನಲ್ಲದಿದ್ದರೂ ದರಿದ್ರನಿರಲಿಲ್ಲ. ಅವನಿಗೆ ಒಂಪೂವರೆ ಎಕರೆಯ ವಿಳೆದೆಲೆಯ ತೋಟವಿತ್ತು. ಅಲ್ಲದೆ ಕೈಯಲ್ಲಿ ಹಣವನ್ನೂ ಮಾಡಿಟ್ಟುಕೊಂಡಿದ್ದನು. ಲಾಲಾನು ಮದುವೆಯ ಪ್ರಸ್ತಾಪವನ್ನು ಅಲ್ಲಲ್ಲಿ ಪ್ರಾರಂಭಿಸಿದ. ಆದರೆ ಆರು ತಿಂಗಳಕಾಲ ಲಾಲಾನು ಅಲೆದರೂ ಲಾಲಾನಿಗೆ ನಿರಾಶೆಯೇ ಕಾಣಹತ್ತಿತು. ಲಿಹರಾನಳು ಹೆನ್ರೀಸಾಹೇಬರ ಪುಣ್ಯದ ಕೂಸೆಂದು ಸವಣೂರಿನವರು ಮಾತನಾಡಹತ್ತಿದರು. ಕೆಲವರು ಅದಕ್ಕೂ ಒಂದು ಹೆಜ್ಜೆ ಮುಂದೆ ಹೋಗಿ "ಇಂತಹ ಮುತ್ತನ್ನು ಲಾಲಾನು ಪಡೆಯಬೇಕಾದರೆ, ರಿಹಮಾನಳಿಗೂ ಸಾಹೇಬರಿಗೂ ಅನೈತಿಕ ಸಂಬಂಧವು ಇರಲೇಬೇಕು" ಎಂದು ಅಲ್ಲಲ್ಲಿ ಆಡಿಕೊಳ್ಳಹತ್ತಿದರು. ಯಾರೋ ಒಬ್ಬಿಬ್ಬರು "ಲಿಹರಾನಳು ನಿನ್ನ ಮಗಳೆ!......" ಎಂದು ಲಾಲಾನಿಗೆ ಕೇಳಿದಾಗ, ಲಾಲಾನಿಗೆ ಅಲ್ಲಿಯೇ ಇರಿದುಕೊಂಡು ಪ್ರಾಣಾರ್ಪಣೆಯನ್ನು ಮಾಡುವಷ್ಟು ವ್ಯಥೆಯಾಯಿತು. ಈ ವಿಷಯವು ನನ್ನ ಕಿವಿಯ ವರೆಗೆ ಬಂದಾಗ ನನಗೂ ತುಂಬಾ ದುಃಖವೆನಿಸಿತು. ನಿಜವಾಗಿಯೂ ನನಗೆ ಲಾಲಾನ ಯಾವ ಸಂಬಂಧವೂ ಇರಲಿಲ್ಲ ಆದರೆ ಅವನ ಪ್ರಾಮಾಣಿಕತೆಯ ಬಗ್ಗೆ, ನಿಷ್ಠೆಯ ಬಗ್ಗೆ ನನಗೆ ಅಚಲವಾದ ನಂಬಿಕೆಯಿತ್ತು. ಈ ಕಾಲ ಅವನು ಕಟ್ಟಿಕೊಂಡುಬಂದ ಅವನ ಧರ್ಮದ ವೃಕ್ಷಕ್ಕೆ ಇದೊಂದು ಕೊಡಲಿಯ ಪೆಟ್ಟಾಯಿತು. ಈ ಮಾತು ರಿಹಮಾನಳಿಗೆ ತಿಳಿದಾಗ ಅವಳು ಅಳಹತ್ತಿದಳು. ಅವಳೆಲ್ಲಿಯಾದರೂ ನಿಂತು ತಾನು ಪವಿತ್ರಳು ಎಂದು ಹೇಳಲು ಪ್ರತಿಜ್ಞೆ ಮಾಡಲು ಸಿದ್ಧಳಿದ್ದಳು. ಲಿಹರಾನಳು ಲಾಲಾನಿಗೆ "ಲಾಲಾ, ನನಗೆ ಮದುವೆಯೇ ಬೇಡ. ನಾನು ಏಕಾಕಿಯಾಗಿಯೇ ಕಾಲವನ್ನು ಕಳೆಯುವೆನು. ನನ್ನ ತಾಯಿಯ ಪಾವಿತ್ರ್ಯವನ್ನು ಪ್ರಶ್ನಿಸುವ ಈ ಸಮಾಜದವರ ಕೈಯನ್ನಾದರೂ ಹಿಡಿದು ನಾನೇಕೆ ವ್ಯಥಾ ಈ ಕೈಯನ್ನು ಮಲಿನವಾಗಿ ಮಾಡಿಕೊಳ್ಳಲಿ." ಎಂದು ಹೇಳಿದಳು. ಆದರೆ ಲಾಲಾನಿಗೆ ಶಲ್ಯವನ್ನು ತಿವಿದಷ್ಟು ಆಘಾತವಾಯಿತು. ಮುಂದೆ ಈ ಮಾತೇ ಸವಣೂರಿನಲ್ಲಿ ಮನೆಮನೆಗೆ ಹಬ್ಬಿವಾಗ ಯಾರೂ ಲಿಹರಾನಳ ಕೈಯನ್ನು ಹಿಡಿಯಲು ಸಿದ್ಧರಾಗಲಿಲ್ಲ. ಮುಂದೆ ಯಾರಾದರೂ ಬೇರೂರಿನವರು ಬಂದರೆ ಅವರಿಗೆ ಸವಣೂರಿನವರು ಈ ಮಾತನ್ನು ಹೇಳಿ ಅವರ ಮನಸಿನ ಮೇಲೆ ಒಂದು ದುಷ್ಟ ಚಿತ್ರವನ್ನು ಬರೆದುಬಿಡುತ್ತಿದ್ದರು.

ಮುಂದೆ ಈ ಮಾತು ಹೆನ್ರೀಸಾಹೇಬರಿಗೂ ಲೂಸಿಗೂ ತಿಳಿದಾಗ ಅವರು ಕ್ಷಣಕಾಲ ವಿಚಾರಮೂಢರಾದರು. ಅವರಿಂದೂ ಈ ಮಾತನ್ನು ನಿರೀಕ್ಷಿಸಿರಲಿಲ್ಲ. ಆಗ ಹೆನ್ರಿ ಅವರು ಲೂಸಿಗೆ "ಲೂಸಿ, ಲೀಹರಾನಳಿಗೆ ಬರೆದು ಅವಳು ಕ್ರಿಶ್ಚನ್ ಆಗುವಳೇನೋ ಕೇಳು. ಈಗಲೇ ನಾನು, ಹಿಂದುಸ್ತಾನದ ನನ್ನ ಸ್ನೇಹಿತರಿಗೆ ಬರೆಯುತ್ತೇನೆ. ಅವರು ಆನಂದದಿಂದ ಲಿಹರಾನಳನ್ನು ಮದುವೆ ಮಾಡಿಕೊಳ್ಳುವರು. ಲಿಹರಾನಳಂತಹ ಸುರಸುಂದರಿಯನ್ನು ಕಂಡರೆ ಯಾರು ತಾನೇ ನಿರಾಕರಿಸಬಹುದು! ಸವಣೂರಿನವರು ಏನನ್ನೇ ಅನ್ನಲಿ ಏನನ್ನೇ ಆಡಿಕೊಳ್ಳಲಿ. ಆದರೆ ಲಿಹರಾನಳ ಭವಿಷ್ಯವು ಹಾಳಾಗುವದೆಂದು ಅವರು ವಿಚಾರಿಸಬೇಡವೇ? ಈಗಲೇ ನೀನು ಲಿಹರಾನಳಿಗೆ ಈ ವಿಚಾರವನ್ನು ಬರೆ. ನನ್ನ ಹೆಸರಿನಲ್ಲಿ ಲಾಲಾನ ಸಂಸಾರವು ತೊಳಲುವದು ಬೇಡ. ಪರಮಾತ್ಮನೊಬ್ಬನೆ, ಈ ಪವಿತ್ರತೆಯ ಬಗ್ಗೆ ನಿರ್ಣಯವನ್ನು ಕೊಡಬಲ್ಲನು. ರಿಹಮಾನಳನ್ನು ನಾನು ತಂಗಿ ಎಂದು ತಿಳಿದೇ ಬೆಳೆಸಿಕೊಂಡು ಬಂದಿದ್ದೇನೆ" ಎಂದು ಹೇಳಿದರು. ಲೂಸಿಯು ಲಿಹರಾನಳಿಗೆ ವಿವರವಾದ ಕಾಗದವನ್ನು ಬರೆದು ಈ ಧರ್ಮಾಂತರದಲ್ಲಿ ದೋಷವಿಲ್ಲೆಂದು ಪ್ರತಿಪಾದಿಸಿ "ಹೆಣ್ಣಿಗೆ ಜೀವನದ ವಸಂತದಲ್ಲಿ ಬೇಕಾದದ್ದು ಒಂದೇ ಒಂದು! ಅದು ಆ ಗಂಡು. ಯಥಾಯೋಗ್ಯವಾದ ಗಂಡು ಎಲ್ಲಿಂದ ಬಂದರೂ ಅಷ್ಟೇ; ಯಾರಿದ್ದರೂ ಅಷ್ಟೇ!! ಲಿಹರಾನ, ನಿನ್ನ ಕಲ್ಯಾಣಕ್ಕಾಗಿ ತಂದೆ ಈ ಮಾತನ್ನು ಹೇಳುತ್ತಾರೆ ವಿನಾ ಬೇರಾವ ದುರುದ್ದೇಶದಿಂದಲ್ಲ" ಎಂದು ಬರೆದಿದ್ದಳು.

ಲೆಹರಾನ ಮತ್ತು ರೆಹಮಾನ ನಾಲ್ಕುದಿವಸಗಳ ಕಾಲ ಈ ಕಾಗದದ ಬಗ್ಗೆ ಯೋಚಿಸಿದರು. ಲೆಹರಾನ ಒಂಟಿಯಾಗಿ ಕಾಲಕಳೆಯುವದು ರೆಹಮಾನಳಿಗೆ ಬೇಕಿರಲಿಲ್ಲ. ಪರಿಣಿತಳಾದ ಲೆಹರಾನಳು ಆದಷ್ಟು ಬೇಗ ಗಂಡನ ಮನೆಗೆ ಹೋಗಬೇಕೆಂದು ತಾಯಿಯಾದ ರೆಹಮಾನಳ ಮನದಿಚ್ಛೆಯಾಗಿತ್ತು. ಹೆಣ್ಣಿನ ಹೃದಯವನ್ನು ಪಡೆದ ರೆಹಮಾನಳಿಗೆ ಮಗಳ ಆಶೆ-ಆಕಾಂಕ್ಷೆಗಳ ಕಲ್ಪನೆ ಆದಾಗಲೇ ಬಂದಿತ್ತು. ಜಾತಿಧರ್ಮಗಳ ಹೆಸರಿನಲ್ಲಿ ಅವಳನ್ನು ಏಕಾಕಿಯನ್ನಾಗಿ ಮಾಡಿ, ಅವಳ ಬಯಕೆಯ ಕಣ್ಣುಗಳಲ್ಲಿ ಅಂಗುಲಿಯನ್ನು ತಿವಿದು, ಅವಳ ಹೆಣ್ಣುಹೃದಯದ ಅಪೇಕ್ಷೆಯ ಮೇಲೆ ಬರೆಯನ್ನೆಳೆಯುವದು ರೆಹಮಾನಳಿಗೆ ಬೇಕಿರಲಿಲ್ಲ. ಅಂತಲೇ ಸಾಹೇಬರ ವಿಚಾರದ ಹೆಜ್ಜೆಗೆ ರೆಹಮಾನ ಕೂಡಲೇ ತಾಳವನ್ನು ಹಾಕಿದಳು. ಲೆಹರಾನಳಿಗು ಕೂಡ ತಾಯಿಯ ವಿಚಾರವು ಹಿಡಿಸಿತು. ಅದಲ್ಲದೆ, ಸಾಹೇಬರ ಮಾತುಗಳು ಕನ್ನಡಿಯಷ್ಟು ಸ್ಪಷ್ಟವಾಗಿ ಅವಳ ಚಿತ್ರವನ್ನು ತೋರಿದ್ದರಿಂದ ಅವರ ವಿಚಾರಗಳಲ್ಲಿ ಯಾವ ತಪ್ಪೂ ಇಲ್ಲವೆಂದು ಅನಿಸಿತು. ಯಾವ ಸವಣೂರಿನಲ್ಲಿ ವ್ಯಥಾ ಆಡಿಕೊಂಡು; ಮನೆತನದ ಮೇಲೆ ಕಪ್ಪು ಬಳೆಯಲು ಯಾರು ಸಿದ್ಧರಾಗಿದ್ದರೋ: ಅವರೆದುರೇ ಗಂಡನೊಡನೆ ಕೈ ಹಿಡಿದು ಅಲೆದಾಡಬೇಕೆಂಬ ಅವಳ ಛಲವು ಅವಳನ್ನು ಕ್ರಿಶ್ಚನ್‌ಳಾಗಲು ಒಪ್ಪಿಗೆಯನ್ನಿತ್ತಿತ್ತು. ರೆಹಮಾನಳು ಅದಕ್ಕೆ ಬೆಂಬಲವಿತ್ತಳು.

ತಾಯಿ ಮಗಳಿಬ್ಬರೂ ಸೇರಿ ಲಾಲಾನಿಗೆ ನಾಲ್ಕು ದಿವಸಗಳ ಮೇಲೆ ಈ ಮಾತನ್ನು ತಿಳಿಸಿದರು. ರೆಹಮಾನಳು ಮಗಳ ವಕಾಲತ್ತು ವಹಿಸಿ ಲಾಲಾನಿಗೆ ಹೇಳಿದಳು. ಸಾಹೇಬರ ವಿಚಾರಗಳೂ ಲಾಲಾನಿಗೆ ಮೊದಲು ಹಿಡಿಸಿದವು. ಆದರೆ ಅವನ ಧರ್ಮಬುದ್ಧಿ ಆ ಮಾತನ್ನು ಒಪ್ಪಲು ಸಿದ್ಧವಾಗಲಿಲ್ಲ. "ರೆಹಮಾನ ನಾನಿನ್ನೂ ಹಾಜಯಾತ್ರೆಯನ್ನು ಮಾಡಿಲ್ಲ. ಹಾಜಯಾತ್ರೆಯನ್ನು ಮಾಡದೆ ಸತ್ತರೆ ಮುಕ್ತಿ ಇಲ್ಲವೆಂದು ಧರ್ಮವು ಹೇಳುತ್ತಿದೆ. ಆದರೆ, ಲೆಹರಾನಳನ್ನು ಧರ್ಮ ಪರಿವರ್ತನೆ ಮಾಡಿ ಬೇರೆ ಜಾತಿಯವರಿಗೆ ಕೊಟ್ಟರೆ, ನಮ್ಮ ಮನೆತನವು ಪವಿತ್ರವಾಗಿ ಉಳಿಯಲಾರದು ಈ ರೀತಿ ಅಪವಿತ್ರವಾದ ಮನೆತನದವರು ಪವಿತ್ರವಾದ ಹಾಜಯಾತ್ರೆಯನ್ನು ಕೈಕೊಳ್ಳಬಾರದು. ರೆಹಮಾನ, ಕುರಾನನ್ನು ನಾನೇ ನನ್ನ ಕೈಯಿಂದ ಹರಿದು ಹಾಕಲೇ?" ಎಂದು ಕೇಳಿದಾಗ ರೆಹಮಾನಳಲ್ಲಿಯಾಗಲಿ, ಲೆಹರಾನಳಲ್ಲಾಗಲಿ ಇದಕ್ಕೆ ಯಾವ ಉತ್ತರವೂ ಇದ್ದಿರಲಿಲ್ಲ.

"ಲೆಹರಾನಳು ಅವಿವಾಹಿತಳಾಗಿದ್ದರೂ ಸರಿ; ಕುರಾನಿಗೆ ಅನ್ಯಾಯವನ್ನು ಬಗೆಯುವದು ನನ್ನಿಂದಾಗದು" ಎಂದು ಲಾಲಾನು ನಿರ್ಧಾರದ ಧ್ವನಿಯಲ್ಲಿ ಹೇಳಿಬಿಟ್ಟನು. ಆ ರೀತಿ ಹೆನ್ರಿ ಸಾಹೇಬರಿಗೂ ಕಾಗದವನ್ನು ಬರೆಸಿ ಹಾಕಿಬಿಟ್ಟನು. ಮುಂದೆ ಹೆನ್ರಿ ಮತ್ತು ಲೂಸಿಯವರು ಲಾಲಾನಿಗೆ ಪತ್ರಗಳನ್ನು ಬರೆದು ತಿಳಿಸಿಹೇಳಲು ಭಗೀರಥ ಪ್ರಯತ್ನವನ್ನು ಮಾಡಿದರು. ಒಂದು ಕಾಗದದಲ್ಲಿಯಂತೂ ಹೆನ್ರಿ ಸಾಹೇಬರು "ಲೆಹರಾನಳು ಪ್ರಮದೆ, ಪ್ರಾಪ್ತವಯಸ್ಕಳು. ಈಗ ಜೀವನದ ಜೊತೆಗಾರ ದೊರೆಯದೇ ಹೋಗಿ ಅವಳು ಕಾಲುಜಾರಿದರೆ, ಅದರ ಹೊಣೆಯಾರು ಲಾಲಾ? ನಿಸರ್ಗಸಿದ್ಧವಾದ ಬಯಕೆಯನ್ನು ಪೂರೈಸಿಕೊಳ್ಳುವಲ್ಲಿ ಲೆಹರಾನಳು ಇಟ್ಟ ಹೆಜ್ಜೆಯಲ್ಲಿ ನನಗಾವ ತಪ್ಪೂ ಕಾಣದಾಗಿದೆ. ನನ್ನ ಹಾಗೂ ಲೂಸಿಯ ಉದ್ದೇಶ ಲೆಹರಾನಳ ಧರ್ಮಪರಿವರ್ತನೆಯ ಉದ್ದೇಶವಾಗಿರದೆ ಅವಳ ಕಲ್ಯಾಣದ ಸಾಧನೆಯಾಗಿದೆ. ನಿನ್ನವರೇ ನಿನ್ನನ್ನು ಈ ರೀತಿ ಆಡಿಕೊಂಡ ಮೇಲೆ, ಅರಿಯದೆ ಅಪವಾದವನ್ನು ಹೊರಿಸಿದರೆ, ಅದಕ್ಕೆ ಕುರಾನವು ಏನನ್ನೂ ಹೇಳದೇ? ಅಲ್ಲಾ ಅವರನ್ನು ಶಿಕ್ಷಿಸಲಿಕ್ಕಿಲ್ಲವೇ? ಲೆಹರಾನಳ ಧರ್ಮಸೆರೆಯನ್ನು ಬಿಡಿಸುವದು ನಿನ್ನ ಹಾಜಯಾತ್ರೆಯಷ್ಟೇ ಮಹತ್ವದ ಕರ್ತವ್ಯವಾಗಿದೆ, ಎಂಬುದರ ಅರಿವು ನಿನಗಿರಲಿ! ಯಾವನೊಬ್ಬ ಮುಸಲ್ಮಾನನು ಲೆಹರಾನಳನ್ನು ಮದುವೆ ಮಾಡಿಕೊಳ್ಳಲು ಸಿದ್ಧನಾದರೆ ಈ ಹೆನ್ರಿಗಾಗುವಷ್ಟು ಸಂತೋಷವು ಬೇರಾರಿಗೂ ಆಗದೆಂಬ ಮಾತನ್ನು ನೆನಪಿನಲ್ಲಿಡು ಲಾಲಾ!!" ಎಂದು ಬರೆದಿದ್ದರು.

ಆದರೂ ಲಾಲಾನಿಗೆ ಕುರಾನದ ಪಾವಿತ್ರ್ಯ ಹಾಜಯಾತ್ರೆಯ ಫಲ ಇವುಗಳ ಮುಂದೆ ಲೆಹರಾನಳ ಮದುವೆಯ ಸಮಸ್ಯೆ ಅಷ್ಟು ದೊಡ್ಡದಾಗಿ ಕಾಣಿಸಲಿಲ್ಲ. ಆದರೆ ಲೆಹರಾನಳ ಮುಖವು ಮಾತ್ರ ದಿನದಿನಕ್ಕೂ ತನ್ನ ತೇಜವನ್ನು ಕಳೆದುಕೊಳ್ಳಹತ್ತಿತು. ರೆಹಮಾನಳು ಆದಾಗಲೇ ನೂರು ವರುಷಗಳ ವೃದ್ಧೆಯಾಗಿ ಕಾಣಹತ್ತಿದಳು. ನಗೆಯಿಂದ ಸದಾ ತುಂಬಿ ತುಳುಕುತ್ತಿದ್ದ ಲಾಲಾನ ಮನೆಯಲ್ಲಿ ಅದೇಕೋ ಅಶಾಂತಿ, ಅಸಮಾಧಾನ, ಅತೃಪ್ತಿ ತಮ್ಮ ತಲೆಗಳನ್ನೆತ್ತಿ ತಾಂಡವವಾಡಹತ್ತಿದ್ದವು. ಲೆಹರಾನಳ ಮದುವೆಯ ಪ್ರಶ್ನೆ ಲಾಲಾನಿಗೂ ಕುದಿಯುವ ತುಪ್ಪವಾದಂತಾಯಿತು. ದಿನವೂ ಯೋಚಿಸಿ, ಯೋಚಿಸಿ

ಲಾಲಾನು ಹಾಸಿಗೆಯನ್ನೇ ಹಿಡಿದನು. ಹಕೀಮರು ಬಂದು ಪ್ರತಿನಿತ್ಯ ಲಾಲಾನನ್ನು ನೋಡಿ ಹೋಗುತ್ತಿದ್ದರೂ ಯಾವ ಗುಣವೂ ಅವನಲ್ಲಿ ಕಂಡುಬರಲಿಲ್ಲ. ಒಂದು ದಿವಸ ಲೆಹರಾನಳು "ಲಾಲಾ, ನಿನ್ನ ಅಸ್ವಸ್ಥತೆ ಕಡಿಮೆಯಾಗಲಿ, ನೀನು ಪವಿತ್ರನಾಗಿಯೇ ಹಾಜಯಾತ್ರೆಯನ್ನು ಮಾಡಿಕೊಂಡು ಬಾ. ಅಲ್ಲಿಯವರೆಗೆ ನಾನು ನಿನ್ನ ಧರ್ಮಧೃತಿಯನ್ನು ಚ್ಯುತಿಪಡದಂತೆ ಕಾಪಾಡಿಕೊಂಡು ಬರುವೆನೆಂದು ಪ್ರತಿಜ್ಞೆ ಮಾಡುತ್ತೇನೆ. ಹಾಜಯಾತ್ರೆಯನ್ನು ಮಾಡದೆ ಹೋದರೆ ಅಲ್ಲಾನು ಅದೆಂದೂ ಮೆಚ್ಚನು. ನಿನ್ನ ಹಾಜಯಾತ್ರೆ ಮುಗಿಯುವ ತನಕ ನನಗೆ ಮದುವೆ ಬೇಡ. ವೃಥಾ ನೀನು ಚಿಂತೆ ಮಾಡಿ ವ್ಯಾಧಿಯನ್ನು ಬಲಿಸಿಕೊಳ್ಳಬೇಡ" ಎಂದು ಹೇಳಿದಳು. ರೆಹಮಾನಳು ಅತ್ತು ಅದೇ ಮಾತುಗಳನ್ನು ಮರಳಿ ಮರಳಿ ಲಾಲಾನಿಗೆ ಹೇಳಿದಳು. ಆದರೂ ಲಾಲಾನಲ್ಲಿ ಯಾವ ಪರಿವರ್ತನೆಯ ಲಕ್ಷಣಗಳೂ ಕಂಡುಬರಲಿಲ್ಲ.

ಸಾಹೇಬ ಮತ್ತು ಲೂಸಿಗೆ ಈ ವಿಷಯ ಲೆಹರಾನಳಿಂದ ತಿಳಿದಾಗ ಅವರು ತುಂಬಾ ವ್ಯಥೆಪಟ್ಟುಕೊಂಡು ಕಾಗದಗಳನ್ನು ಬರೆದರು. ವೃಥಾ ಚಿಂತೆಯನ್ನು ಮಾಡದಿರಲು ಲಾಲಾನಿಗೆ ಉಪದೇಶಿಸಿದರು. ಲಾಲಾನಿಗೆ ಅದೇಕೋ ಸಾಹೇಬರ ಕಾಗದಗಳ ಬಗ್ಗೆ ಅಷ್ಟು ಆಸ್ಥೆ ಉಳಿಯದಾಯಿತು. ಅವರ ಉಪದೇಶವು ಲಾಲಾನಿಗೆ ಕಹಿಯಾಗಿ ಕಾಣಹತ್ತಿತು. ಹಕೀಮರು ಬಂದು ಲಾಲಾನ ಪ್ರಕೃತಿಯನ್ನು ವೀಕ್ಷಿಸಿ ಮನೋರೋಗವೆಂಬುದನ್ನು ನಿರ್ಧರಿಸಿದರು. ಲಾಲಾನಿಗೆ ಹೆಚ್ಚು ವಿಚಾರವನ್ನು ಮಾಡದಿರಲು ಹೇಳಿದರು. ಆದರೂ ಲಾಲಾ ಒಂದೇ ರೀತಿಯಲ್ಲಿ ಚಿಂತೆಯನ್ನು ಮಾಡುತ್ತ ಮಲಗಿ ಬಿಡುತ್ತಿದ್ದನು. ಒಂದು ದಿವಸ ರೆಹಮಾನಳು ಕಣ್ಣು ತುಂಬಾ ನೀರನ್ನು ತಂದು "ನೀವು ಕುರಾನವು ಹೇಳಿದಂತೆ ನಡೆಯಿರಿ. ಹಾಜಯಾತ್ರೆಯನ್ನು ಮಾಡಿರಿ. ಆ ಮೇಲೆ ಲೆಹರಾನಳ ವಿವಾಹವನ್ನು ಕುರಿತು ಯೋಚಿಸಿದರಾಯಿತು. ಅವಳಿಗೆ ಈಗಾಗಲೇ ಮೂವತ್ತು ವರುಷಗಳೇನು ತುಂಬಿಲ್ಲ. ಸಾಹೇಬರು ತಮ್ಮ ಹಿತಕ್ಕಾಗಿ ಧರ್ಮಪರಿವರ್ತನೆಯ ವಿಚಾರವನ್ನು ಮುಂದಿಸಿದರೇ ವಿನಾ, ಬೇರಾವ ಸ್ವಾರ್ಥದ ದೃಷ್ಟಿಯಿಂದಲ್ಲ. ಅಲ್ಲ......ಅವರಿಂದ ಬಂದ ಮೊನ್ನಿನ ಕಾಗದವನ್ನು ಒಡೆಯದೇ ಹಾಸಿಗೆಯ ಕೆಳಕ್ಕೆ ಸರಿಸಿಬಟ್ಟಿದ್ದೀರಿ. ಸಾಹೇಬರನ್ನು ಬಿಟ್ಟು ನಮಗೆ ಬೇರಾರೂ ಸಂಬಂಧಿಕರು ಇರದಾಗ ನೀವು ಅವರನ್ನೇ ದ್ವೇಷಿಸಿದರೆ ಹೇಗೆ? ಅವರಿಗೆ ಉತ್ತರವನ್ನಾದರೂ ಬರೆಸಿ ಹಾಕಿರಿ" ಎಂದು ಹೇಳಿದಾಗ, ಲಾಲಾನ ಮುಖದ ಮೇಲೆ ಯಾವ ಬದಲಾವಣೆಯೂ ಕಂಡುಬರಲಿಲ್ಲ. ಈಗೀಗಂತೂ ಅಂಚೆಯಾಳು ಲಾಲಾನ ಮನೆಗೆ ಬಂದರೆ ಲಾಲಾನಿಗೆ ಕೋಪ ಬರತೊಡಗಿತು. ಮೊದಲು ಅಂಚೆಯಾಳು ಓಣಿಯಲ್ಲಿ ಬಂದಾಗ ಅವನು "ಲಾಲಾ ಹುಸೇನ ಮಿಯಾ ಲಾಲಮಹ್ಮದ ಪಠಾಣ" ಎಂದು ಕೂಗಬಹುದೆ? ಎಂದು ಕಿವಿಗೊಟ್ಟು ಕೇಳುತ್ತಿದ್ದನು. ಒಂದೊಂದು ಸಲ ಆತುರ ತಡೆಯದೆ ಅಂಚೆಯಾಳಿಗೆ ಕೇಳಿ ಅವನು "ನಿನ್ನ ಕಾಗದ ಬಂದಿಲ್ಲ; ಲಾಲಾ" ಎಂಬ ಉತ್ತರವನ್ನು ಪಡೆದು ನಿರಾಶೆಯನ್ನು ಹೊಂದಿದ್ದುಂಟು. ಲೂಸಿ, ಸವಣೂರಿನಿಂದ ಪತ್ರವೇ ಬರದಾಗ ಕಾತರಗೊಂಡು ಲೆಹರಾನಳಿಗೆ ಬರೆದರೆ, ಅವಳಿಂದಲೂ ಉತ್ತರವೇ ಬಾರದೆ ವಿವಂಚನೆಗೊಳಗಾಗಿ ತನ್ನ ಬೇರೆ ಸ್ನೇಹಿತೆಗೆ ಕಾಗದವನ್ನು ಬರೆದಳು. ಲೆಹರಾನಳು ಕೂಡ ಲಾಲಾನಿಗೆ ತನ್ನ ಮದುವೆಯ ಬಗ್ಗೆ ವಿಚಾರಿಸದಿರಲು ಮತ್ತೆ ಮತ್ತೆ ಪ್ರಾರ್ಥಿಸಿದಳು. ಹಕೀಮರು ಬಂದು ಮೇಲಿಂದ ಮೇಲೆ ದೇಹವನ್ನು ಪರೀಕ್ಷಿಸಿ "ಲಾಲಾ ನೀನು ಹಾಜಯಾತ್ರೆಯನ್ನು ಮಾಡಬೇಕಿದ್ದರೆ ಗಟ್ಟಿಯಾಗಬೇಡವೆ? ಅದಕ್ಕೆ ಈ ವಿಚಾರವನ್ನು ಬಿಡು" ಎಂದು ಹೇಳುತ್ತಿದ್ದರು. ಅವರಿಗೂ ಗೊತ್ತಿತ್ತು. ವ್ಯಾಧಿಗೆ ಲೆಹರಾನಳ ಮದುವೆಯೊಂದೇ ಮದ್ದೆಂದು. ಆದರೆ ಲೆಹರಾನಳ ಮದುವೆಯೊಂದು ಸಮಸ್ಯೆಯೆಂಬುದನ್ನು ಹಿಂದುಗಡೆ ಅಂದುಕೊಂಡು ಸುಮ್ಮನಾಗಿ ಬಿಡುತ್ತಿದ್ದರು. ಆಗ ಲೆಹರಾನಳು ಹಕೀಮರ ಮುಖನೋಡಿ "ಹಕೀಮಸಾಹೇಬ ಲೆಹರಾನಳ ಮದುವೆ ಮತ್ತೂ ಲಾಲಾನ ಹಾಜಯಾತ್ರೆ ನಿಲುಕದ ಕ್ಷಿತಿಜವೆಂದು ಭಾವಿಸಿ ನಿರಾಶಗೊಂಡಿರಾ?" ಎಂದು ಮನಸ್ಸಿನಲ್ಲಿ ಅಂದುಕೊಳ್ಳುತ್ತಿದ್ದಳು. ಒಮ್ಮೆ ಅವರನ್ನು ಕಳಿಸಲು ಬಾಗಿಲವರೆಗೆ ಬಂದು ಈ ಮಾತನ್ನೇ ಆಡಿದಾಗ ಹಕೀಮರು "ಹಾಗನ್ನಬಾರದು ಲೆಹರಾನ. ಕಾಲ ಕೂಡಿಬಂದರೆ, ಕ್ಷಿತಿಜವೇ ನಿನಗೆ ನಿಲುಕಬಹುದು. ಲಾಲಾನು ಧರ್ಮದಲ್ಲಿಟ್ಟ ವಿಶ್ವಾಸವನ್ನು ನೋಡಿದರೆ ನಿನ್ನ ಲೆಕ್ಕವು ತಪ್ಪುತ್ತಿದೆ ಎಂದು ನನಗೆ ಅನಿಸುತ್ತದೆ" ಎಂದರು.

ದಿನದಿನಕ್ಕೂ ಲಾಲಾನ ದೇಹಾರೋಗ್ಯವು ಕೆಡುತ್ತಲೇ ಹೋಯಿತು. ಮಲಗಿದಾಗಲೆಲ್ಲ "ಬೇಟಾ ಲೆಹರಾನಳ ಮದುವೆ ಆದೀತೆ? ನನ್ನ ಹಣೆಯಲ್ಲಿ ಹಾಜಯಾತ್ರೆ ಬರೆದಿರಬಹುದೆ?" ಎಂದು ಮಾತನಾಡುತ್ತಿದ್ದನು. ಲೆಹರಾನಳು ಎದುರಿಗೆ ನಿಂತಾಗ ಅವನಿಗೆ ಕಣ್ಣು ತುಂಬಾ ನೀರು ಬರುತ್ತಿತ್ತು. ಅವನ ಮನಸಿನಲ್ಲಿ, ಲೆಹರಾನಳ ಜೀವನದ ಭವಿಷ್ಯವನ್ನು ತಾನೇ ಹಾಳುಮಾಡಲು ಕಾರಣನಾದೆನಲ್ಲಾ ಎಂದು ವ್ಯಥೆಯಾಗುತ್ತಿತ್ತು. ಹಕೀಮರ ಮದ್ದು ಲಾಲಾನ ಮೇಲೆ ಯಾವ ಪರಿಣಾಮವನ್ನೂ ಮಾಡಲಿಲ್ಲ. ಈಗೀಗ ಪ್ರಜ್ಞೆ ತಪ್ಪಹತ್ತಿತು, ಪ್ರಜ್ಞೆ ತಪ್ಪಿದಾಗ ಪ್ರಾಯಶಃ ಲಾಲಾ ಬದುಕಲಾರನೆಂದೇ ಹಕೀಮರು ಭಾವಿಸುತ್ತಿದ್ದರು.

ಒಂದು ದಿವಸ ರೆಹಮಾನಳು ಒಳಗಿರುವಾಗ, ಲೆಹರಾನಳು ಅದೆಲ್ಲೋ ಹೊರಗೆ ಹೋದಾಗ ಅಂಚೆಯಾಳು ಲೆಹರಾನಳ ಹೆಸರಿಗಿದ್ದ ಒಂದು ರಜಿಸ್ಟರ ಪಾಕೀಟನ್ನು ತಂದನು. ಲಾಲಾನು ಮಲಗಿದಲ್ಲಿಂದಲೇ ಸನ್ನೆಮಾಡಿ ಅಂಚೆಯ ಇಮಾಮಖಾನನಿಗೆ ತನ್ನೆಡೆ ಬರಲು ಹೇಳಿದನು. ಅವನು ಬಂದು ಆ ಪಾಕೀಟನ್ನು ಕೊಟ್ಟಾಗ ಅದನ್ನು ಆಚೀಚೆ ಹೊರಳಿಸಿ ನೋಡಿ "ನಾವು ಇದನ್ನು ಸ್ವೀಕರಿಸಲು ನಿರಾಕರಿಸಿದ್ದೇವೆ" ಎಂದು ಬರೆದು ಕಳಿಸಿಬಿಡು ಎಂದು ಹೇಳಿದನು. ಇಮಾಮ ಕ್ಷಣಕಾಲ ಯೋಚಿಸಿ ತಲೆಯನ್ನು ಅಲಾಡಿಸುತ್ತ ಹೊರಕ್ಕೆ ಹೋಗಿಬಿಟ್ಟನು. ಲಾಲಾನಿಗೆ ಆ ರಜಿಸ್ಟರ ಕಾಗದದಿಂದ ಒಮ್ಮೆಲೆ ಕೋಪವು ತಾರಕಕ್ಕೆ ಏರಹತ್ತಿತು. ಸಾಹೇಬರ ಉಪದೇಶವು ಆ ಕಾಗದದಲ್ಲಿ ಇದೆ ಎಂದೇ ಲಾಲಾ ಲಾವಾರಸದಂತೆ ಕುದಿಯಹತ್ತಿದನು. ಹಿಂದೆ ಅವರ ಉಪದೇಶಾಮೃತವು ಲಾಲಾನಿಗೆ ಅದೆಂದೋ ವಿಷವಾಗಿತ್ತು. ಮೇಲಿಂದ ಮೇಲೆ ಅವರು ಕಾಗದ ಬರೆದು ಅವೇ ಮಾತನ್ನು ಹೇಳುತ್ತಿದ್ದುದನ್ನು ಕೇಳಿ ಲಾಲಾನಿಗೆ ಅವರಲ್ಲಿ ದ್ವೇಷವೇ ಉತ್ಪನ್ನವಾದಂತಾಯಿತು. ಆ ದ್ವೇಷಾಸೂಯೆಗಳ ಭರದಲ್ಲಿ ಅವರ ಕಾಗದಗಳನ್ನು ಕಂಡರೂ ಕೋಪಗೊಳ್ಳಹತ್ತಿದನು. ಆ ಕಾಗದವನ್ನು ಇಸಗೊಂಡು ಹಾಸಿಗಯ ಕೆಳಕ್ಕೆ ಇಡಬೇಕೆಂದರೆ ಅದು ಲೆಹರಾನಳ ಹೆಸರಿಗೆ ಬಂದುದರಿಂದ ಇಮಾಮ ಅದನ್ನು ಕೊಡುವಂತಿರಲಿಲ್ಲ. ಹೀಗಾಗಿ ಮತ್ತಲ್ಲಿ ಅವರು ಲೆಹರಾನಳ ಮನಸ್ಸನ್ನೊಲಿಸಲು ಕಾಗದವನ್ನು ಬರೆದರೋ ಎಂದು ಲಾಲಾನಿಗೆ ಸಂತಾಪವಾಯಿತು. ಆದರೆ ಅರೆಕ್ಷಣದಲ್ಲಿ ಮತ್ತೆ "ಸಾಹೇಬರ ಮೇಲೇಕೆ ನನ್ನ ಕೋಪ? ಮಗು ಲೆಹರಾನಳ ಕುತ್ತಿಗೆಯನ್ನು ನಾನೇ ಹಿಚುಕಹತ್ತಿರುವನೆ?" ಎಂದು ವಿಚಾರಿಸಿ ಪ್ರಜ್ಞೆತಪ್ಪಿ ಮಲಗಿಬಿಟ್ಟನು. ಅವನಿಗೆ ಎಚ್ಚರವಾದಾಗ ಸುತ್ತಲೂ ರೆಹಮಾನ, ಲೆಹರಾನ, ಹಕೀಮರು ಇದ್ದರು. ಮೆಲ್ಲನೆ ಕಣ್ಣು ತೆರೆದು "ಲೆಹರಾನ ನೀನು ಕ್ರಿಶ್ಚನ್ನಳಾಗಿ, ಸಾಹೇಬರು ಹೇಳಿದಂತೆ ಮದುವೆಯನ್ನು ಮಾಡಿಕೊಂಡು ಬಿಡು. ನನಗೆ ಮದುವೆಯನ್ನು ಮಾಡುವದಾಗದು. ಹಾಜಯಾತ್ರೆ ಇಲ್ಲದಿದ್ದರೂ ನಡೆಯುತ್ತದೆ" ಎಂದು ಅಂದನು. ಆಗ ಲೆಹರಾನಳು "ಬಾಬಾ ನಿನಗೆ ಗುಣಮುಖವಾಗಲಿ. ನಿನ್ನ ಹಾಜಯಾತ್ರೆಯಾದರೆ ನನ್ನ ಮದುವೆ ಆದಂತೆಯೇ!"

ಎಂದು ಅಂದಳು. ರೆಹಮಾನಳೂ ಅದನ್ನೇ ಲಾಲನಿಗೆ ಹೇಳಿದಳು: ಹಕೀಮರು ಯಾವುದೋ ಮದ್ದನ್ನು ಕೊಟ್ಟು ಲಾಲಾನಿಗೆ ನಿದ್ದೆ ಬರುವಂತೆ ಮಾಡಿ ಹೋದರು. ಅವನನ್ನು ವಿಚಾರದ ಸುಳಿಯಿಂದ ಪರಾವೃತ್ತಗೊಳಿಸುವದೇ ಹಕೀಮರ ಕಾರ್ಯವಾಗಿತ್ತು. ಲಾಲಾನಿಗೆ ಸ್ವಲ್ಪ ನಿದ್ದೆ ಹತ್ತಿದ ಮೇಲೆ ರೆಹಮಾನಳು ಲೆಹರಾನಳಿಗೆ ಮತ್ತೆ ಅಂಚೆಯಾಳು ಸಾಹೇಬರ ಕಾಗದವನ್ನು ತಂದುದರಿಂದ ಹೀಗಾಯಿತು ಎಂದು ಹೇಳಿದಳು. ಆಗ ಲೆಹರಾನಳಿಗೆ ಕಾಗದವಾದರೂ ಏನು ಬಂದಿದೆ ಎಂದು ತಿಳಿಯುವ ಉದ್ದೇಶದಿಂದ ಅಂಚೆಯಾಳಿಗೆ ಹೇಳಿಕಳಿಸಿದಳು. ಇಮಾಮನು ಓಡುತ್ತಲೇ ಕಾಗದವನ್ನು ತಂದನು. ಅವನಿಗೆ ಗೊತ್ತು. ಆ ಕಾಗದದಲ್ಲಿ ಕ್ರಿಸ್‌ಮಸ್ ಕಾಣಿಕೆ ಇದೆಯೆಂದೂ ಮತ್ತು ತನಗೇನಾದರೂ ಅದರಿಂದ ಲಾಭ ದೊರಕಬಹುದೆಂದೂ ಅವನ ನಾಲ್ಕಾರು ವರುಷದ ಅನುಭವ ಅವನಿಗೆ ಹೇಳುತ್ತಿತ್ತು. ಕ್ರಿಸ್‌ಮಸ್ ಆದೊಡನೆ ತಂದ ಲಕೋಟೆಗಳಿಂದ ಅವನು ಲಾಲಾನಿಂದ ಖುಷಿಪಡೆದುದುಂಟು. ಕಾಗದವನ್ನು ಲೆಹರಾನ ಒಡೆದು ಓದಿದಳು. ಓದಿ ರೆಹಮಾನಳಿಗೆ ತೋರಿಸಿದಳು. ಬೇಕಂತಲೇ ಸಾಹೇಬರು ಈ ಸಲ ಯಾರಿಂದಲೋ ಉರ್ದುವಿನಲ್ಲಿ ಕಾಗದವನ್ನು ಬರೆಸಿದ್ದರು. ರೆಹಮಾನ ಸಂತೋಷದಿಂದ ಓಡುತ್ತ ಬಂದು ಲಾಲಾನಿಗೆ "ಸಾಹೇಬರ ಕಾಗದ ಬಂದಿದೆ" ಎಂದು ಹೇಳಿದಳು. ಲಾಲಾನು ತನ್ನ ನಿಸ್ತೇಜ ಕಣ್ಣುಗಳೆರಡನ್ನು ತೆಗೆದು "ಮತ್ತೆ ಬಂದಿತೇ...!" ಎಂದು ನಿರಾಶನಾದವನಂತೆ ನುಡಿದನು. ರೆಹಮಾನ ಅದನ್ನು ಲೆಕ್ಕಿಸದೆ ಗಟ್ಟಿಯಾಗಿ "ಪ್ರಿಯ ಲಾಲಾ, ನಮ್ಮಿಬ್ಬರ ಮೇಲೆ ನೀನು ಕೋಪಗೊಂಡಿರುವಿ. ಲೆಹರಾನಳನ್ನು ಬೇರೆ ಧರ್ಮಕ್ಕೆ ಸೇರಿಸಿ ನಿನ್ನ ಕುರಾನಕ್ಕೆ ಅನ್ಯಾಯವನ್ನು ಬಗೆಯುವ ಇಚ್ಛೆ ನನಗಿಲ್ಲ. ನಿನ್ನ ಹಾಜಯಾತ್ರೆ ಆಗಬೇಕೆನ್ನುವವರಲ್ಲಿ ನಾನೊಬ್ಬ. ಆದರೆ ಲೆಹರಾನಳ ಭವಿಷ್ಯ ನಿನ್ನ ಹಾಜಯಾತ್ರೆಯಷ್ಟೇ ಮಹತ್ವದ್ದೆಂದು ಭಾವಿಸಿ ಆ ರೀತಿ ಹೇಳಿದ್ದಷ್ಟೇ; ಆ ಮಾತನ್ನು ಮರೆತು ಬಿಡು. ಮೊನ್ನೆ ಈ ದೇಶದಲ್ಲಿ ಈಗ ಸಂಚರಿಸುತ್ತಿರುವ ನಿಮ್ಮ ನವಾಬಸಾಹೇಬರ ಭೆಟ್ಟಿಯಾಗಿತ್ತು. ಅವರಿಗೆ ಈ ಮದುವೆಯ ಸುದ್ದಿಯನ್ನು ತಿಳಿಸಿದಾಗ ಅವರು ತಾವೇ ಲೆಹರಾನಳ ಮದುವೆಯನ್ನು ಮಾಡುವದಾಗಿ ಆಶ್ವಾಸನವನ್ನಿತ್ತಿದ್ದಾರೆ. ಸುಲ್ತಾನರು ಈ ಪ್ರಶ್ನೆಯನ್ನೆತ್ತಿದ ಮೇಲೆ ನಿನ್ನ ಭಾರವು ಇಳಿದಂತಾಯಿತು. ಅವರೇನೋ ಲೆಹರಾನಳನ್ನು ಕಂಡಿರುವರಂತೆ. ತಮ್ಮ ತಮ್ಮನ ಮಗನಿಗೇ ಲೆಹರಾನಳನ್ನು ತೆಗೆದುಕೊಳ್ಳುವದಾಗಿಯೂ ಹೇಳಿದ್ದಾರೆ. ಅದರ ಪೂರ್ವಭಾವಿ ಈ ಕ್ರಿಸ್‌ಮಸ್ ಕಾಣಿಕೆಯೆಂದು ನಾನು ಲೆಹರಾನಳಿಗೆ ೫ ಸಾವಿರದ ಚೆಕ್ಕನ್ನು ಕಳಿಸಿದ್ದೇನೆ. ಸ್ವೀಕರಿಸು. ಇಂತೀ ನಿನ್ನ—ಹೆನ್ರಿ" ಎಂದು ಓದಿದಾಗ,

ಪಟಾಕಿ, ಬಾಣಾ ಕೊಂಡುಕೊಂಡು ಬರುವಾಗ . . .

ಲಾಲಾನಿಗೆ ಹೊಸ ಜೀವ ಬಂದಂತಾಯಿತು. ಮತ್ತೊಮ್ಮೆ ಕಾಗದವನ್ನು ಓದಿಸಿ ಕೇಳಿದನು. ಆಗ ಅವನ ಕಣ್ಣಿಂದ ಆನಂದಬಾಷ್ಪಗಳು ಬಂದವು. "ಅಲ್ಲಾ ಸಾಹೇಬರನ್ನು ಚಿರಾಯುವಾಗಿ ಮಾಡಲಿ" ಎಂದನು. ಹಕೀಮರು ಲಾಲಾನನ್ನು ಮತ್ತೆ ನೋಡಲು ಬಂದಾಗ ಅದೇಕೋ ಲಾಲಾನ ಮನೆಯಲ್ಲಿ ಅವರಿಗೆ ಹೊಸ ಜಗತ್ತು ಕಾಣತೊಡಗಿತು. ಅವರಿಗೆ ಎಲ್ಲ ವಿಷಯವೂ ತಿಳಿಯಿತು. ಆಗ ಲೆಹರಾನಳಿಗೆ ಹಕೀಮರು "ಏನು ಲೆಹರಾನ, ನಿನ್ನ ಮದುವೆ ಮತ್ತು ಲಾಲಾನ ಹಾಜಯಾತ್ರೆ ನಿಲುಕಲಾರದ ಕ್ಷಿತಿಜವೆಂದು ಅಂದಿದ್ದೆಯಲ್ಲ, ನೋಡು ಎಲ್ಲದಕ್ಕೂ ಕಾಲ ಬರಬೇಕು" ಎಂದರು. ಆಗ ಲಾಲಾ ನಕ್ಕನು; ರೆಹಮಾನ ಸಂತೃಪ್ತಭಾವದಿಂದ ಸಾಹೇಬರ ಕಾಗದವನ್ನು ಹಿಡಿದು ಬೇಗನೆ ಮಗಳ ಮದುವೆಯಾಗಲಿ ಎಂದು ಅಲ್ಲಾನಿಗೆ ಪ್ರಾರ್ಥಿಸಿದಳು. ಲೆಹರಾನಳು ನಗುತ್ತ, "ಅಹುದು ಹಕೀಮ ಸಾಹೇಬ, ಈ ಲೆಹರಾನಳು ಲೆಕ್ಕ ತಪ್ಪಿದಳು......" ಎಂದು ಅಂದಳು. ಆರು ತಿಂಗಳು ನಗೆ ಕಾಣದ ಲಾಲಾನ ಮನೆಯಲ್ಲಿ ಇಂದು ನಗೆ ಕಂಡಿತು. ಹಕೀಮರು, "ಲೆಹರಾನಳು ಲೆಕ್ಕ ತಪ್ಪಿದಳು......" ಎನ್ನುತ್ತ ಲಾಲಾನ ಮನೆಯಿಂದ ನಗುತ್ತಲೇ ತಮ್ಮ ಮನೆಗೆ ಹೊರಟರು.



ಲೇಖಕರು :

**ಬಿ. ವ್ಹಿ. ಸುಬ್ಬರಾಯಪ್ಪ,**

( ಕೌನ್ಸಿಲ್ ಆಫ್ ಸ್ಯೆಂಟಿಫಿಕ್ ಅ್ಯಂಡ್ ಇಂಡಸ್ಟ್ರಿಯಲ್ ರಿಸರ್ಚ್, ನವದೆಹಲಿ. )

# ದೇಶದ ಪ್ರಗತಿಯಲ್ಲಿ ರಾಷ್ಟ್ರೀಯ ಪ್ರಯೋಗಮಂದಿರಗಳು

ಭಾರತವು ಆರ್ಥಿಕ ಔದ್ಯಮಿಕ ಪ್ರಗತಿಗಾಗಿ ಈಗ ಪಂಚವಾರ್ಷಿಕ ಯೋಜನೆಗಳ ಮೂಲಕ ತುಂಬ ಶ್ರಮಿಸುತ್ತಿದೆ. ವಿಜ್ಞಾನದ ನೆರವು ಇದಕ್ಕೆ ತುಂಬಾ ಅಗತ್ಯ. ನಾನಾ-ಬಗೆಯ ಸಂಶೋಧನೆಗಳಿಂದ ಔದ್ಯಮಿಕ ಅಭಿವೃದ್ಧಿಯನ್ನು ಸಾಧಿಸಬಹುದಾಗಿದೆ. ಇದಕ್ಕಾಗಿ ದೇಶದ ವಿಜ್ಞಾನಿಗಳು ಸೇವೆ ಸಲ್ಲಿಸಲು ಮುಂದೆ ಬಂದಿದ್ದಾರೆ. ಭಾರತದಾದ್ಯಂತ ಅನೇಕ ರಾಷ್ಟ್ರೀಯ ಪ್ರಯೋಗಮಂದಿರಗಳನ್ನು ಏರ್ಪಡಿಸಿದ್ದು ವಿವಿಧ ಉದ್ದಿಮೆಗಳಿಗೆ ಸಂಶೋಧನೆಗಳ ಮೂಲಕ ಅವು ಸಹಾಯ ಸಲ್ಲಿಸುತ್ತಿವೆ. ಈ ಪ್ರಯೋಗಮಂದಿರಗಳ ಕಾರ್ಯ, ರಾಷ್ಟ್ರೀಯ ಜೀವನದಲ್ಲಿ ಅವು ನಿರ್ವಹಿಸುತ್ತಿರುವ ಮಹತ್ವದ ಪಾತ್ರವನ್ನು ಲೇಖಕರಿಲ್ಲಿ ನಿರೂಪಿಸಿದ್ದಾರೆ.

---

ಇದು ಮೂರನೆಯ ಪಂಚವಾರ್ಷಿಕ ಯೋಜನೆಯ ಅವಧಿ. ನಮ್ಮ ದೇಶವು ಒಂದು ನಿಶ್ಚಿತ ಮಾರ್ಗದಲ್ಲಿ ಪ್ರಗತಿಯನ್ನು ಸಾಧಿಸಲು ಪಂಚವಾರ್ಷಿಕ ಯೋಜನೆಗಳನ್ನು ರೂಪಿಸಲಾಗಿದೆ. ದೇಶದ ಪ್ರಕೃತಿ ಸಂಪತ್ತನ್ನು ವೈಜ್ಞಾನಿಕವಾಗಿ ಜನರ ಹಿತದೃಷ್ಟಿಯಿಂದ ಪರಿವರ್ತಿಸಿಕೊಳ್ಳುವುದು ಮತ್ತು ಅದರಲ್ಲಿ ಎಲ್ಲ ಜನರೂ ಸಹಭಾಗಿಗಳಾಗುವಂತೆ ಮಾಡುವುದು, ಈ ಯೋಜನೆಗಳ ಮುಖ್ಯ ಗುರಿ. ವಿಜ್ಞಾನ ಮತ್ತು ತಂತ್ರಶಾಸ್ತ್ರಗಳಲ್ಲಿ ಅಡಗಿರುವ ಈ ಬಗೆಯ ಪರಿವರ್ತನಶಕ್ತಿಯನ್ನು ಪರಿಣಾಮಕರವಾಗಿ ಬಳಸಿಕೊಂಡು ನಮ್ಮ ದೇಶವು ಮುಂದುವರಿದಿರುವ ಕೆಲವು ಪಾಶ್ಚಿಮಾತ್ಯದೇಶಗಳಂತೆಯೇ ಪ್ರಗತಿಯನ್ನು ಹೊಂದಲೆಂದು ಯೋಜನಾಆಯೋಗದ ಸದಸ್ಯರ ಹಾಗೂ ಸರಕಾರದ ಪ್ರಯತ್ನವಾಗಿದೆ. ಈ ದೃಷ್ಟಿಯಿಂದ ಅವರು ವೈಜ್ಞಾನಿಕ ಹಾಗೂ ಕೈಗಾರಿಕಾ ಸಂಶೋಧನೆಗಳಿಗೆ ವಿಶಿಷ್ಟ ಮಹತ್ವವನ್ನು ನೀಡಿದ್ದಾರೆ. ಈ ಗುರಿಯತ್ತ ತಮ್ಮ ಪ್ರಯತ್ನಗಳಲ್ಲಿ ನೆರವಾಗುವಂತೆ ರಾಷ್ಟ್ರೀಯ ಪ್ರಯೋಗಮಂದಿರಗಳನ್ನೂ ಸ್ಥಾಪಿಸಿದ್ದಾರೆ.

ಈ ಪ್ರಯೋಗ ಮಂದಿರಗಳಾವುವೆಂದರೆ : (1) ರಾಷ್ಟ್ರೀಯ ರಸಾಯನಶಾಸ್ತ್ರ ಪ್ರಯೋಗ ಮಂದಿರ (ಪೂನಾ, 1950), (2) ರಾಷ್ಟ್ರೀಯ ಭೌತಶಾಸ್ತ್ರಪ್ರಯೋಗಮಂದಿರ (ನವದೆಹಲಿ, 1950), (3) ಕೇಂದ್ರ ಆಹಾರ ಸಂಶೋಧನಾಲಯ (ಮೈಸೂರು, 1950), (4) ಕೇಂದ್ರ ಇಂಧನ ಸಂಶೋಧನಾಲಯ (ಜಿಯಲ್‌ಗರ-ಬಿಹಾರ, 1950), (5) ಕೇಂದ್ರ ಗಾಜು ಮತ್ತು ಪಿಂಗಾಣಿ ಪರಿಶೋಧನ ಮಂದಿರ (ಕಲ್ಕತ್ತಾ, 1950), (6) ರಾಷ್ಟ್ರೀಯ ಲೋಹ ಪ್ರಯೋಗಮಂದಿರ (ಜಮಶೆಡಪುರ, 1950), (7) ಕೇಂದ್ರ ಔಷಧಿ ಸಂಶೋಧನಾಲಯ (ಲಖನೌ,1951), (8) ಕೇಂದ್ರ ರಸ್ತೆ ಸಂಶೋಧನಾಲಯ (ದೆಹಲಿ, 1952), (9) ಕೇಂದ್ರ ವಿದ್ಯುತ್-ರಾಸಾಯನಿಕ ಸಂಶೋಧನಾಲಯ (ಕಾರೈಕುಡಿ, 1953), (10) ಕೇಂದ್ರ ಚರ್ಮ ಸಂಶೋಧನಾಲಯ (ಮದರಾಸ್, 1953), (11) ಕೇಂದ್ರ ವಸತಿ ಸಂಶೋಧನಾಲಯ (ರೂರ್ಕಿ, 1953), (12) ರಾಷ್ಟ್ರೀಯ ಸಸ್ಯ ತೋಟಗಳು (ಲಖನೌ 1953), (13) ಕೇಂದ್ರ ವಿದ್ಯುತ್ ಯಂತ್ರ ಸಂಶೋಧನಮಂದಿರ (ಪಿಲಾನಿ 1953), (14) ಕೇಂದ್ರ ಉಪ್ಪು ಸಂಶೋಧನಾಲಯ (ಭಾವನಗರ, 1954), (15) ಕೇಂದ್ರಗಣಿ ಸಂಶೋಧನ ಸಂಸ್ಥೆ (ಧನಾಬಾದ್, 1955), (16) ಪ್ರಾದೇಶಿಕ ಪ್ರಯೋಗ ಶಾಲೆಗಳು (ಹೈದರಾಬಾದ್, 1956), (17) ಜೀವರಸಾಯನ ಶಾಸ್ತ್ರ ಮತ್ತುಪ್ರಾಯೋಗಿಕ ಔಷಧಗಳ ಸಂಸ್ಥೆ (ಕಲ್ಕತ್ತಾ, 1956), (18) ಕೇಂದ್ರಜನಾರೋಗ್ಯಸಂಶೋಧನ ಸಂಸ್ಥೆ(ನಾಗಪೂರ 1958), (19) ರಾಷ್ಟ್ರೀಯ ವೈಮಾನಿಕ ಪ್ರಯೋಗಮಂದಿರ (ಬೆಂಗಳೂರು, 1960). ಇವು ಮುಖ್ಯವಾದವು. ಅಲ್ಲದೆ, ಪೆಟ್ರೋಲಿಯಂ (ಡೇಹರಾಡೂನ, 1959), ಭೂಗರ್ಭ ವಿಜ್ಞಾನ (ಹೈದರಾಬಾದ್, 1961), ಪ್ರಾದೇಶಿಕ ಪ್ರಯೋಗಶಾಲೆ (ಜೊರ್‌ಹಾಟ್—ಅಸ್ಸಾಮ್, 1959), ವೈಜ್ಞಾನಿಕ ಯಂತ್ರಗಳು (ಚಂಡಿಗಡ, 1959), ಮೆಕ್ಯಾನಿಕಲ್ ಇಂಜಿನಿಯರಿಂಗ್ (ದುರ್ಗಾಪುರ್, 1958), ವನೌಷಧಿಗಳು (ಲಖನೌ, 1958)— ಇವುಗಳಿಗೆ ಸಂಬಂಧಿಸಿದಂತೆ ಪ್ರಯೋಗಮಂದಿರಗಳು ರೂಪುಗೊಳ್ಳುತ್ತಿವೆ.

ಈ ಸಂಸ್ಥೆಗಳೆಲ್ಲವೂ ಕೇಂದ್ರ ಸರಕಾರದ ವೈಜ್ಞಾನಿಕ ಹಾಗೂ ಸಾಂಸ್ಕೃತಿಕ ಮಂತ್ರಿಖಾತೆಯ ಅಧೀನದಲ್ಲಿ ಕೆಲಸ ಮಾಡುತ್ತಿರುವ ಕೌನ್ಸಿಲ್ ಆಫ್ ಸ್ಯೆಂಟಿಫಿಕ್ ಅಂಡ್ ಇಂಡಸ್ಟ್ರಿಯಲ್ ರಿಸರ್ಚ್ ಸಂಸ್ಥೆಯ (ನವದೆಹಲಿ-1942) ಆಡಳಿತಕ್ಕೊಳಪಟ್ಟಿದೆ.

## ರಾಷ್ಟ್ರೀಯ ಪ್ರಯೋಗ ಮಂದಿರಗಳ ಸಾಧನೆ

ರಾಷ್ಟ್ರೀಯ ಪ್ರಯೋಗಮಂದಿರಗಳಲ್ಲಿ ಸುಮಾರು 5,700 ವಿಜ್ಞಾನಿಗಳು ಕೆಲಸಮಾಡುತ್ತಿದ್ದಾರೆ. ಅಲ್ಲದೆ 1,300 ತರುಣ ಸಂಶೋಧಕರಿಗೆ ಕೆಲವು ನಿರ್ದಿಷ್ಟ ವೈಜ್ಞಾನಿಕ ಸಮಸ್ಯೆಗಳ ಬಗೆಗೆ ಪರಿಶೋಧನೆ ನಡೆಸಲು ಅವಕಾಶವನ್ನು ಕಲ್ಪಿಸಿಕೊಡಲಾಗಿದೆ. ಈಗಾಗಲೇ 7000ಕ್ಕೂ ಮೀರಿ ಸಂಶೋಧನಾ ಲೇಖನಗಳು ಪ್ರಕಟವಾಗಿವೆ. ಇವುಗಳಲ್ಲಿ ಕೆಲವು ಅಂತಾರಾಷ್ಟ್ರೀಯ ಖ್ಯಾತಿಯನ್ನು ಪಡೆದಿರುವ ವೈಜ್ಞಾನಿಕ ಪತ್ರಿಕೆಗಳಲ್ಲೂ ಪ್ರಕಟವಾಗಿವೆ. 700 ಪೇಟೆಂಟ್‌ಗಳನ್ನು ತೆಗೆದುಕೊಳ್ಳಲಾಗಿದೆ. ಇವುಗಳಲ್ಲಿ ಸುಮಾರು 300 ಪೇಟೆಂಟಗಳನ್ನು ಕೈಗಾರಿಕಾ ಮಟ್ಟದಲ್ಲಿ ಬಳಸಿಕೊಳ್ಳಲಾಗಿದೆ.

## ವಿದೇಶ ವಿನಿಮಯ ಉಳಿತಾಯ

ಇದುವರೆಗೂ ಹೊರದೇಶಗಳಿಂದ ತರಿಸಿಕೊಳ್ಳುತ್ತಿದ್ದ ಯಾಂತ್ರಿಕ ಜೋಡಣೆಗಳಿಗೆ ಸರಿಸಮಾನಾದಂತಹವುಗಳನ್ನು ಕೆಲವು ಪ್ರಯೋಗಮಂದಿರಗಳು ನಿಯೋಜಿಸಿವೆ. ಇವುಗಳನ್ನು ಕೈಗಾರಿಕೋದ್ಯಮಿಗಳು ಯಶಸ್ವಿಯಾಗಿ ಉಪಯೋಗಿಸಿಕೊಳ್ಳುತ್ತಿದ್ದಾರೆ. ಆಮದಾಗುತ್ತಿರುವ ಹಲವಾರು ಪ್ರಮುಖ

ವಸ್ತುಗಳಿಗೆ ಪ್ರತಿಯಾಗಿ ಉತ್ತಮ ದರ್ಜೆಯ ಉತ್ಪನ್ನಗಳನ್ನು ಪಡೆಯುವುದು ಹೇಗೆ ಎಂಬುದನ್ನು ಕೆಲವು ಸಂಶೋಧನ ಮಂದಿರಗಳು ತೋರಿಸಿಕೊಟ್ಟಿವೆ. ಕೈಗಾರಿಕೆಗಳಲ್ಲಿ ತಲೆದೋರುವ ಅನೇಕ ಸಮಸ್ಯೆಗಳನ್ನು ಪ್ರಯೋಗಗಳ ಮುಖಾಂತರ ಪರಿಹರಿಸಲಾಗಿದೆ. ದೇಶದಲ್ಲಿ ದೊರೆಯುವ ಅನುಪಯೋಗವೆಂದು ಪರಿಗಣಿತವಾಗಿರುವ ಕಚ್ಚಾ ವಸ್ತುಗಳಿಂದಲೇ, ಆಮದಾಗುತ್ತಿರುವ ವಸ್ತುಗಳಂತಹವನ್ನು ಸುಲಭ ವೆಚ್ಚದಲ್ಲಿ ಕೈಗಾರಿಕಾ ಪ್ರಮಾಣದಲ್ಲಿ ತಯಾರಿಸುವುದನ್ನು ಪರಿಶೀಲಿಸಿವೆ. ಇಂತಹ ಕೆಲವು ವಿಧಾನಗಳನ್ನು ದೇಶದ ಪ್ರಮುಖ ಕೈಗಾರಿಕೆಗಳು ಈಗಾಗಲೇ ಅನುಸರಿಸುತ್ತಿವೆ. ಇಂತಹ ಪರಿಶೋಧನೆಗಳಿಂದ ವಿದೇಶಿವಿನಿಮಯ ಹಣ ಉಳಿತಾಯವಾಗಿದೆ 1962ರ ಕೊನೆಯ ವೇಳೆಗೆ ಸುಮಾರು 19–20 ಕೋಟಿ ರೂಪಾಯಿಗಳಷ್ಟು ವಿದೇಶಿ ವಿನಿಮಯ ಹಣ ಉಳಿತಾಯವಾಯಿತು ಎಂದು ಅಂದಾಜು ಮಾಡಲಾಗಿದೆ.

### ಪ್ರತ್ಯಕ್ಷ ಹಾಗೂ ಪರೋಕ್ಷ ವಿದೇಶಿ ವಿನಿಮಯ ಹಣ ಉಳಿತಾಯ
(ಅಂದಾಜು)

| ಸಂಶೋಧನ ಮಂದಿರ | ಹಣ ಉಳಿತಾಯ |
|---|---|
| | ಲಕ್ಷ ರೂ. ಗಳು |
| ರಾಷ್ಟ್ರೀಯ ರಸಾಯನಶಾಸ್ತ್ರ ಪ್ರಯೋಗ ಮಂದಿರ | 10·6 |
| ರಾಷ್ಟ್ರೀಯ ಭೌತಶಾಸ್ತ್ರ ಪ್ರಯೋಗ ಮಂದಿರ | 204·6 |
| ಕೇಂದ್ರ ಆಹಾರ ಸಂಶೋಧನಾಲಯ | 533·5 |
| ಕೇಂದ್ರ ಇಂಧನ ಸಂಶೋಧನಾಲಯ | 379·0 |
| ಕೇಂದ್ರ ಗಾಜು, ಪಿಂಗಾಣಿ ಸಂಶೋಧನ ಸಂಸ್ಥೆ | 105·0 |
| ರಾಷ್ಟ್ರೀಯ ಲೋಹ ಪ್ರಯೋಗ ಮಂದಿರ | 519·5 |
| ಕೇಂದ್ರ ವಿದ್ಯುತ್-ರಸಾಯನ ಸಂಶೋಧನಾಲಯ | 3·5 |
| ಪ್ರಾದೇಶಿಕ ಪ್ರಯೋಗ ಶಾಲೆ ಹೈದರಾಬಾದ್ | 35·7 |
| ರಾಷ್ಟ್ರೀಯ ವೈಮಾನಿಕ ಪ್ರಯೋಗ ಮಂದಿರ | 32·3 |
| ಇತರ | 102·0 |
| ಒಟ್ಟು | **1,925·1** |

### ರಾಷ್ಟ್ರೀಯ ವರಮಾನವನ್ನು ಹೆಚ್ಚಿಸುವುದು

ನಮ್ಮ ದೇಶದ ಶಕ್ತಿಮೂಲಗಳಲ್ಲೊಂದಾದ ಕಲ್ಲಿದ್ದಲನ್ನು ಪರಿಣಾಮಕರವಾಗಿ ಉಪಯೋಗಿಸುವ ಬಗೆ, ಅದನ್ನು ತೊಳೆಯುವ ವಿಧಾನ, ಕಡಿಮೆ ದರ್ಜೆಯ ಅದಿರುಗಳನ್ನು ಉತ್ತಮಗೊಳಿಸುವುದು, ಅದಿರುಗಳನ್ನು ಸೂಕ್ತ ರೀತಿಯಲ್ಲಿ ಸಂಸ್ಕರಿಸುವುದು, ಚರ್ಮ ಹದ ಮಾಡುವ ಕೈಗಾರಿಕೆಗಳನ್ನು ಅಭಿವೃದ್ಧಿಗೊಳಿಸಿದುದು, ಪುಷ್ಟಿಕರ ಆಹಾರವಸ್ತುಗಳ ತಯಾರಿಕೆ, ವ್ಯರ್ಥವಾಗುವ ಆಹಾರವಸ್ತುಗಳನ್ನು ಸಂಸ್ಕರಿಸಿ ಪೋಷಿಸುವುದು, ರಾಸಾಯನಿಕ ಹಾಗೂ ಗಾಜು ಮತ್ತು ಪಿಂಗಾಣಿ ಕೈಗಾರಿಕೆಗಳಿಗೆ ಆಕರ್ಷಕ ಇಲ್ಲವೆ ಉಪಯುಕ್ತ ವಸ್ತುಗಳನ್ನು ಪಡೆಯಲು ಹೊಸ ಹೊಸ ವಿಧಾನಗಳನ್ನು ತೋರಿಸಿಕೊಟ್ಟಿರುವುದು, ದೇಶದಲ್ಲಿ ಸಮೃದ್ಧಿಯಾಗಿ ದೊರೆಯುವ ಅನೇಕ ಬಗೆಯ ಕಚ್ಚಾವಸ್ತುಗಳಿಂದ ಪ್ರಯೋಜನಕರ ವಸ್ತುಗಳನ್ನು ಪಡೆಯುವ ಮಾರ್ಗಗಳನ್ನು ಕಂಡುಹಿಡಿದಿರುವುದು, ಸರ್ವೆಗಳನ್ನು ನಡೆಸಿ ಇದುವರೆಗೂ ಗೋಚರವಾಗದಿದ್ದ ಕೆಲವು ಪ್ರಕೃತಿಸಂಪತ್ತನ್ನು ತೋರಿಸಿಕೊಟ್ಟಿರುವುದು— ಇವೇ ಮೊದಲಾದುವನ್ನು ಪರಿಗಣಿಸಿದರೆ, ಈ ಪ್ರಯೋಗಮಂದಿರಗಳು ರಾಷ್ಟ್ರೀಯ ವರಮಾನವನ್ನು ಗಮನಾರ್ಹವಾಗಿ ಹೆಚ್ಚಿಸಿವೆ ಎಂದು ಹೇಳಬಹುದು. ಕನಿಷ್ಠಪಕ್ಷ 200 ಕೋಟಿ ರೂಪಾಯಿಗಳಷ್ಟು ವರಮಾನವು ಈ ರೀತಿ ಹೆಚ್ಚುವರಿಯಾಗಿದೆ ಎಂದು ಅಂದಾಜುಮಾಡಲಾಗಿದೆ.

### ಕೆಲವು ಮುಖ್ಯ ಪರಿಶೋಧನೆಗಳು

ಈ ಸಣ್ಣ ಲೇಖದಲ್ಲಿ ರಾಷ್ಟ್ರೀಯ ಪ್ರಯೋಗ ಮಂದಿರಗಳು ಕೈಗೊಂಡಿರುವ ಇಲ್ಲವೆ ಸಂಪೂರ್ಣಗೊಳಿಸಿರುವ ಎಲ್ಲ ಸಂಶೋಧನೆಗಳ ವಿಷಯವನ್ನೂ ತಿಳಿಸುವುದು ಹೇಗೆ ಸಾಧ್ಯ? ಕೆಲವು ಮುಖ್ಯ ಪರಿಶೋಧನೆಗಳ ಸ್ಥೂಲ ಪರಿಚಯವನ್ನು ಕೆಳಗೆ ಮಾಡಿಕೊಡಲಾಗಿದೆ:

ನಮ್ಮ ದೇಶದಲ್ಲಿ ಕಲ್ಲಿದ್ದಲಿನ ಸಂಪತ್ತು ಗಮನಾರ್ಹ ಪ್ರಮಾಣದಲ್ಲಿದ್ದರೂ ಅದರಲ್ಲಿ ಬಹುಭಾಗ ಬೂದಿ ಅಂಶವನ್ನು ಒಳಗೊಂಡಿರುವುದರಿಂದ, ಕಬ್ಬಿಣ ಮತ್ತು ಉಕ್ಕಿನ ಕೈಗಾರಿಕೆಗಳಲ್ಲಿ ಅದರ ಉಪಯುಕ್ತತೆ ಕಡಿಮೆಯಾಗುತ್ತದೆ. ಇಂತಹ ಕೀಳು ದರ್ಜೆಯ ಕಲ್ಲಿದ್ದಲನ್ನು ಉತ್ತಮಗೊಳಿಸಲು ವಿಧಾನಗಳನ್ನು ಕಂಡುಹಿಡಿಯಲಾಗಿದೆ. ಅಲ್ಲದೆ, ಕೆಳಮಟ್ಟದ, ಬೆಲೆ ಕಡಿಮೆ ಎಂದು ಪರಿಗಣಿತವಾಗಿರುವ ಕಲ್ಲಿದ್ದಲಿನಿಂದಲೂ ಲೋಹ ತಯಾರಿಕೆಯಲ್ಲಿ ಬೇಕಾಗುವ ಕೋಕ್ ಎಂಬ ವಸ್ತುವನ್ನು ಪಡೆಯಲು ಯಶಸ್ವಿ ಪರಿಶೋಧನೆಗಳನ್ನೂ ನಡೆಸಲಾಗಿದೆ. ಕಡಿಮೆ ಉಷ್ಣತೆಯಲ್ಲಿ, ಕೋಕ್‌ಅನ್ನು ಹೊಗೆಯಾಡದ ಗುಣವನ್ನೂ ಹೊಂದಿರುವಂತೆ ಅಧಿಕ ಪ್ರಮಾಣದಲ್ಲಿ ತಯಾರಿಸುವ ವಿಧಾನವನ್ನೂ ಕಂಡುಹಿಡಿಯಲಾಗಿದೆ. ಈ ಇಂಧನಗಳು ಸುಲಭ ಬೆಲೆಯ ಶಕ್ತಿಮೂಲಗಳಾಗಿ ಪರಿಣಮಿಸಿವೆ.

ನಮ್ಮ ದೇಶವು ಕೆಲವು ಬಗೆಯ ಲೋಹ ಅದಿರುಗಳನ್ನು ರಫ್ತುಮಾಡುತ್ತಿದೆ. ಇದರಿಂದ ವಿದೇಶಿವಿನಿಮಯ ಹಣವು ಅಪಾರವಾಗಿ ದೊರೆಯುತ್ತದೆ. ಹೀಗೆ ರಫ್ತುಮಾಡಲು ಯೋಗ್ಯವಾಗಿರುವಂತೆ, ಸಂಸ್ಕರಿಸುವ ಪರಿಸ್ಥಿತಿಗಳನ್ನು ಕೆಲವು ರಾಷ್ಟ್ರೀಯ ಪ್ರಯೋಗ ಮಂದಿರಗಳು ನಿರ್ಧರಿಸಿವೆ. ಕಬ್ಬಿಣದ ತಯಾರಿಕೆಯಲ್ಲಿ, ಅದಿರು ಸರಿಯಾಗಿ ಕ್ರಿಯೆ ಹೊಂದುವಂತಾಗಲೂ ಕಡಿಮೆ ಪ್ರಮಾಣದಲ್ಲಿ ಇಂಧನವನ್ನು ಉಪಯೋಗಿಸಿಕೊಳ್ಳುವಂತಾಗಲೂ ವಿಧಾನಗಳನ್ನು ಕಂಡುಹಿಡಿಯಲಾಗಿದೆ. ಇದು ಕಬ್ಬಿಣದ ಹೆಚ್ಚು ಉತ್ಪಾದನೆಗೆ ಸಹಾಯಕವಾಗಿದೆ. ಪಾದರಕ್ಷೆ, ಆಟದ ಸಾಮಾನುಗಳು, ಅಲಂಕಾರವಸ್ತುಗಳು ಮತ್ತು ಕೆಲವು ಕೈಗಾರಿಕೆಗಳಲ್ಲಿ ಬೇಕಾಗುವ ಬಗೆಬಗೆಯ ಚರ್ಮಗಳನ್ನು ಪಡೆಯಲು ಸಂಸ್ಕರಣ ವಿಧಾನಗಳನ್ನೂ ಕಂಡುಹಿಡಿದಿದ್ದಾರೆ. ಹದಮಾಡಲು ಉಪಯೋಗಿಸುವ ದೇಶೀಯ ವಸ್ತುಗಳ ಬಗೆಗೂ ಪರಿಶೋಧನೆಗಳು ನಡೆದಿದೆ. ಕಡಿಮೆ ಗುಣವುಳ್ಳ, ಸತ್ತ ಹಸುಗಳ ಚರ್ಮವನ್ನು ಸಂಸ್ಕರಿಸಿ ಉತ್ತಮ ದರ್ಜೆಯ ಚರ್ಮವನ್ನು ಪಡೆಯುವ ಮಾರ್ಗವನ್ನೂ ತೋರಿಸಲಾಗಿದೆ. ಈ ಸಂಶೋಧನೆಗಳಿಂದ

ನಮ್ಮ ದೇಶದ ಚರ್ಮ ಕೈಗಾರಿಕೆಯು ಉಚ್ಛ್ರಾಯ ಸ್ಥಿತಿಯಲ್ಲಿರುವಂತಾಗಿದೆ.

ವಿಟಾಮಿನ್ 'ಸಿ' ತಯಾರಿಕೆ, ಎಮ್ಮೆಯ ಹಾಲಿನಿಂದ ಮಕ್ಕಳ ಆಹಾರ, ಕೆಲವು ವಿಶೇಷ ರೀತಿಯ ತಾರಸಿ ರಚನೆಗಳು, ರಸ್ತೆಗಳ ಮೇಲ್ಮೆಯನ್ನು ಸುಲಭವೆಚ್ಚದಲ್ಲಿ ಸುಭದ್ರವಾಗಿರುವಂತೆ ಮಾಡುವುದು, ಕೆಲವು ಔಷಧಗಳು, ಸಿಮೆಂಟಿನೊಡನೆ ಬಳಸುವಂತಹ ಮಣ್ಣಿನ ವಸ್ತುಗಳು, ಅಲ್ಯೂಮಿನಿಯಮ್ ಲೋಹವನ್ನು ಪಡೆಯಲು ಬೇಕಾಗುವ ಕ್ರಿಯೊಲೈಟ್ ಎಂಬ ಪ್ರಕೃತಿದತ್ತ ರಾಸಾಯನಿಕ ವಸ್ತುವನ್ನು (ಇದು ನಮ್ಮ ದೇಶದಲ್ಲಿ ದೊರೆಯುವುದಿಲ್ಲ.) ಕೃತಕವಾಗಿ ತಯಾರಿಸಿರುವುದು, ಚರ್ಮಕೈಗಾರಿಕೆಯಲ್ಲಿ ವ್ಯರ್ಥವೆಂದು ಬೀಸಾಡುವ ವಸ್ತುಗಳಿಂದ ಪ್ರಯೋಜನಕರ ಸಾಮಾನುಗಳ ತಯಾರಿಕೆ, ಪಾರದರ್ಶಕ ಗಾಜು-ಇವು ಕೈಗಾರಿಕಾಹಂತವನ್ನು ಮುಟ್ಟಿರುವ ಸಂಶೋಧನಾ ಫಲಿತಾಂಶಗಳಲ್ಲಿ ಕೆಲವು.

ಈಗ ಚೀಣಾ ಮತ್ತು ನಮ್ಮ ದೇಶದ ನಡುವೆ ಇರುವ ವಿಷಮ ಪರಿಸ್ಥಿತಿಯ ಪರಿಣಾಮವಾಗಿ, ರಾಷ್ಟ್ರೀಯ ಪ್ರಯೋಗ ಮಂದಿರಗಳೂ ದೇಶರಕ್ಷಣೆಯ ಕಾರ್ಯಕ್ರಮಗಳಲ್ಲಿ ಭಾಗವಹಿಸಿವೆ. ಈ ದಿಶೆಯಲ್ಲಿ, ಡಿಫೆನ್ಸ್ ಕೋಆರ್ಡಿನೇಷನ್ ಯುನಿಟ್ ಎಂಬ ಒಂದು ಅಂಗವನ್ನು ಕೌನ್ಸಿಲ್ ಆಫ್ ಸೈಂಟಿಫಿಕ್ ಆಂಡ್ ಇಂಡಸ್ಟ್ರಿಯಲ್ ರಿಸರ್ಚ್ ಸಂಸ್ಥೆಯ ಕೇಂದ್ರ ಕಛೇರಿಯಲ್ಲಿ ರಚಿಸಲಾಗಿದೆ. ಯಾವ ಯಾವ ಪ್ರಯೋಗಮಂದಿರಗಳು ಎಂತಹ ಕಾರ್ಯಕ್ರಮಗಳನ್ನು ಆದಷ್ಟು ಜಾಗ್ರತೆ ಕೈಕೊಂಡು ರಕ್ಷಣಾಖಾತೆಯೊಡನೆ ಸಹಕರಿಸಬೇಕು ಎಂಬುದನ್ನು ನಿರ್ಧರಿಸಲಾಗಿದೆ. ಈ ತುರ್ತು ಪರಿಸ್ಥಿತಿಯಲ್ಲಿ ಹಲವಾರು ಪ್ರಯೋಗಮಂದಿರಗಳು 30ಕ್ಕೂ ಮೇಲ್ಪಟ್ಟು ರಕ್ಷಣೆಗೆ ಅವಶ್ಯಕವಾದ ಕಾರ್ಯಕ್ರಮಗಳನ್ನು ಸಂಪೂರ್ಣಗೊಳಿಸಿವೆ. ಇನ್ನೂ ಅನೇಕ ಪರಿಶೋಧನೆಗಳು ನಡೆಯುತ್ತಿವೆ. ಆದರೆ, ಕಾಲಕ್ರಮೇಣ ದೇಶದ ರಕ್ಷಣೆಯು ಅದರ ಆರ್ಥಿಕಮಟ್ಟವನ್ನು ಅನುಸರಿಸುತ್ತದೆಯಾದ ಕಾರಣ, ರಾಷ್ಟ್ರೀಯ ಪ್ರಯೋಗಮಂದಿರಗಳು ಕೈಗಾರಿಕೆಗಳ ಮೂಲಕ ಆರ್ಥಿಕ ಅಭಿವೃದ್ಧಿಗಾಗಿಯೂ ಕೆಲಸಮಾಡುತ್ತಿವೆ.

## ಅಂದು—ಇಂದು

ಮೊದಲನೆಯ ಮಹಾಯುದ್ಧ ಕಾಲದಲ್ಲಿ (1914) ನಮ್ಮ ದೇಶದ ಕೈಗಾರಿಕೆಯು ಅಧೋಗತಿಯಲ್ಲಿದ್ದಿತು. ಮುಂದಿನ ಸುಮಾರು 25 ವರ್ಷಗಳಲ್ಲಿ, ಅಂದರೆ ಎರಡನೆಯ ಮಹಾಯುದ್ಧದ ಕಾಲದ ವರೆಗೆ ಕೈಗಾರಿಕೆಗಳ ಅಭಿವೃದ್ಧಿಗಾಗಿ ಅಲ್ಪ ಸ್ವಲ್ಪ ಪ್ರಯತ್ನಗಳು ನಡೆದವು. ಆದರೆ, ಒಂದು ನಿಯೋಜಿತ ರೀತಿಯಲ್ಲಿ ವೈಜ್ಞಾನಿಕ ಸಂಶೋಧನೆಗಳನ್ನು ನಡೆಸಲು ಸಾಕಷ್ಟು ಪ್ರೋತ್ಸಾಹವು ದೊರಕಿರಲಿಲ್ಲ. ಎರಡನೆಯ ಮಹಾಯುದ್ಧದ ಅವಧಿಯಲ್ಲಿ ನಮ್ಮ ದೇಶದ ಕೈಗಾರಿಕೆಗಳ ದುಃಸ್ಥಿತಿ ಹಾಗು ಅವುಗಳ ಅಭಿವೃದ್ಧಿಗೆ ಮೂಲವಾಗಿರುವ ವೈಜ್ಞಾನಿಕ ಮತ್ತು ತಂತ್ರಜ್ಞಾನದ ಅಭಾವ ಎದ್ದು ಕಾಣುತ್ತಿತ್ತು. ಇದನ್ನು ಮನಗಂಡು 1940 ರಲ್ಲಿ ಇಂಡಿಯಾ ಸರಕಾರವು ಬೋರ್ಡ್ ಆಫ್ ಸೈಂಟಿಫಿಕ್ ಆಂಡ್ ಇಂಡಸ್ಟ್ರಿಯಲ್ ರಿಸರ್ಚ್ ಎಂಬ ಸಮಿತಿಯನ್ನು ನೇಮಕಮಾಡಿತು. 1942 ರಲ್ಲಿ ಇಂಡಸ್ಟ್ರಿಯಲ್ ರಿಸರ್ಚ್ ಫಂಡ್ ಎಂಬ ಹೆಸರಿನಲ್ಲಿ ಕೈಗಾರಿಕಾ ಸಂಶೋಧನೆಗಳಿಗಾಗಿ ಬೇಕಾಗುವ ಹಣವನ್ನು ಸರ್ಕಾರವು ಮೀಸಲಾಗಿರಿಸಿ, ಈ ಹಣವನ್ನು ಸದುಪಯೋಗ ಪಡಿಸಲು ಕೌನ್ಸಿಲ್ ಆಫ್ ಸೈಂಟಿಫಿಕ್ ಆಂಡ್ ಇಂಡಸ್ಟ್ರಿಯಲ್ ರಿಸರ್ಚ್ ಎಂಬ ಸಂಸ್ಥೆಯನ್ನು ಸ್ಥಾಪಿಸಿತು. ಈ ಸಂಸ್ಥೆಯು ನಮ್ಮ ದೇಶದ ವೈಜ್ಞಾನಿಕ ಮತ್ತು ಕೈಗಾರಿಕಾ ಕ್ಷೇತ್ರಗಳಲ್ಲಿ ಪರಿಶೋಧನೆಗಳನ್ನು ದೇಶದ ಅಭ್ಯುದಯದೃಷ್ಟಿಯಿಂದ ನಡೆಸಲು ನಾನಾ ಮುಖ ಕಾರ್ಯಕ್ರಮಗಳನ್ನು ಕೈಕೊಂಡಿದೆ. ಇಂತಹ ಕಾರ್ಯಕ್ರಮಗಳಲ್ಲಿ ರಾಷ್ಟ್ರೀಯ ಪ್ರಯೋಗಮಂದಿರಗಳ ಸ್ಥಾಪನೆಯು ಬಹು ಮುಖ್ಯವಾದದ್ದು.

5 ವರ್ಷಗಳ ಹಿಂದೆ ನಮ್ಮ ಲೋಕಸಭೆಯು "ಸೈನ್ಸ್ ಪಾಲಿಸಿ ರೆಜಲ್ಯೂಶನ್" ಎಂಬ ವಿಜ್ಞಾನಕ್ಕೆ ಸಂಬಂಧಿಸಿದ ನಿರ್ಣಯವನ್ನು ಅನುಮೋದಿಸಿದೆ. ನಮ್ಮ ದೇಶದಲ್ಲಿ ವೈಜ್ಞಾನಿಕ ಪರಿಶೋಧನೆಗಳು ನಾನಾ ಪ್ರಕಾರವಾಗಿ ಉನ್ನತಮಟ್ಟದಲ್ಲಿ ನಡೆಯಬೇಕು, ವಿಜ್ಞಾನಿಗಳಿಗೆ ಹೆಚ್ಚು ಹೆಚ್ಚು ಪ್ರೋತ್ಸಾಹವನ್ನೀಡಬೇಕು, ತರುಣರಲ್ಲಿರುವ ಮೇಧಾಶಕ್ತಿಯನ್ನು ವೈಜ್ಞಾನಿಕ ಸಂಶೋಧನೆಗಳ ಕಡೆಗೆ ಅಳವಡಿಸಿಕೊಳ್ಳಬೇಕು, ಹೀಗೆ ಸಂಶೋಧನೆಗಳನ್ನು ನಡೆಸಲು ಅವರಿಗೆ ಸಂಪೂರ್ಣ ಸ್ವಾತಂತ್ರ್ಯವನ್ನು ಕೊಡಬೇಕು, ವೈಜ್ಞಾನಿಕ ಪರಿಶೋಧನೆಗಳು, ತಂತ್ರಜ್ಞಾನಗಳಿಂದ ನಮ್ಮ ಜನರ ಅಭಿವೃದ್ಧಿಯಾಗಬೇಕು, ಸಮಾಜದ ಏಳಿಗೆಯಾಗಬೇಕು ಎಂಬವು ಈ ನಿರ್ಣಯದ ಮುಖ್ಯಾಂಶಗಳು.

ಈಗ ನಮ್ಮ ದೇಶದಲ್ಲಿ ವೈಜ್ಞಾನಿಕ ಸಂಶೋಧನೆಗಳು ಭರದಿಂದ ಸಾಗುತ್ತಿವೆ. ಅವುಗಳ ಫಲಿತಾಂಶಗಳಿಂದ ದೇಶವು ಪ್ರಗತಿಮಾರ್ಗದಲ್ಲಿ ಮುಂದಿಡುತ್ತಿದೆ.



ಲೇಖಕರು :

ಕು. ಶಿ. ಹರಿದಾಸಭಟ್ಟ,
ಉಡುಪಿ

# ಇಟಲಿಯ ಆರ್ಥಿಕ, ಔದ್ಯಮಿಕ ಅಭಿವೃದ್ಧಿ (ಒಂದು ಸ್ಥಿತಿಚಿತ್ರ)

ಯುರೋಪ ಸಾಮಾನ್ಯಪೇಟೆಯ ಪ್ರಮುಖ ಸದಸ್ಯ ರಾಷ್ಟ್ರವಾದ ಇಟಲಿ ಯುದ್ಧೋತ್ತರ ಕಾಲದಲ್ಲಿ ಸಾಧಿಸಿದ ಆರ್ಥಿಕ ಪ್ರಗತಿ ಅಪೂರ್ವವಾಗಿದೆ; ತುಂಬ ಪ್ರಶಂಸನೀಯವಾಗಿದೆ. ಯುದ್ಧಕಾಲದಲ್ಲಿ ಉಧ್ವಸ್ತವಾಗಿದ್ದ ರಾಷ್ಟ್ರವೊಂದು ಕೆಲ ಕಾಲದಲ್ಲೇ ತಲೆಯೆತ್ತಿನಿಲ್ಲುವ ಸಾಹಸ ತೋರಿದ್ದಕ್ಕೆ ಇದು ಒಳ್ಳೇ ನಿದರ್ಶನ ವಾಗಿದೆ. ಈಚೆಗೆ ಈ ರಾಷ್ಟ್ರದಲ್ಲಿದ್ದು ನಾನಾ ಸಂಸ್ಥೆಗಳನ್ನು ಸಂದರ್ಶಿಸಿಬಂದಿರುವ ಲೇಖಕರು ಈ ಪ್ರಗತಿಯ ಒಂದು ನೋಟವನ್ನು ನಮ್ಮ ಓದುಗರಿಗೆ ಒದಗಿಸಿದ್ದಾರೆ. ಭಾರತೀಯರಿಗೆ ಇಟಾಲಿಯನ್ನರ ಈ ಸಾಹಸ ಮಾರ್ಗದರ್ಶಕವೂ ಆಗಿದೆ.

ದ್ವಿತೀಯ ಮಹಾಯುದ್ಧದ ತರುವಾಯ ಈ ಹದಿನೈದು ವರ್ಷಗಳಲ್ಲಿ ಇಟಲಿ ಕ್ಷಿಪ್ರವಾದ ಆರ್ಥಿಕ ಪ್ರಗತಿಯನ್ನು ಸಾಧಿಸಿದೆ. ಯಂತ್ರೋಪಕರಣಗಳ ನಿರ್ಯಾತ ವ್ಯಾಪಾರದಲ್ಲಿ ಯುರೋಪಿನ ಇತರ ಮುಂದುವರಿದ ದೇಶಗಳೊಡನೆ ಪೈಪೋಟಿಯಿಂದ ವರ್ತಿಸಿ ಜಯಭೇರಿಯನ್ನು ಹೊಡೆದಿದೆ. ೧೯೬೨ ನೇ ಸಾಲಿನಲ್ಲಿ ಐರೋಪ್ಯ ಸಾಮಾನ್ಯ ಮಾರುಕಟ್ಟೆ (Ecm) ಯ ಆರು ದೇಶಗಳ ಪೈಕಿ ೬·೧% ಔದ್ಯಮಿಕ ಅಭಿವೃದ್ಧಿಯನ್ನು ಹೊಂದಿ ಪ್ರಥಮಸ್ಥಾನವನ್ನು ಪಡೆದ ದೇಶ ಇಟಲಿ. ೧೯೫೦-೬೦ ದಶಕದಲ್ಲಿ ಇಟಲಿಯ ಆಂತರಿಕ ಗಿರಾಕಿ ಸರಾಸರಿ ವರ್ಷ ಒಂದರ ೫·೯% ನಷ್ಟು ಪ್ರಮಾಣದಲ್ಲಿ ಬೆಳೆಯುತ್ತ ಬಂದಿದೆ. ನಿರ್ಯಾತ ವ್ಯಾಪಾರವಂತೂ ವರ್ಷಕ್ಕೆ ೧೩·೨% ನಂತೆ ವರ್ಧಮಾನವಾಗಿದೆ.

ಯುದ್ಧಮುಗಿದಾಗ ಇಟಲಿಯ ಪರಿಸ್ಥಿತಿ ಬಹಳ ಗಂಭೀರವಾಗಿತ್ತು. ಮುಖ್ಯನಗರಗಳೆಲ್ಲ ವಿದೇಶೀಯ ಬಾಂಬುಗಳಿಗೆ ಆಹುತಿಯಾದುದರಿಂದ ಔದ್ಯಮಿಕ ಹಂದರವು ನೆಲಸಮವಾಗಿತ್ತು. ಹೆಚ್ಚು ಕಡಿಮೆ ದೇಶದ ಎಲ್ಲ ಸೇತುವೆಗಳೂ ಭಗ್ನವಾಗಿ ರಹದಾರಿ ಕಠಿಣವಾಗಿತ್ತು. ಜನರಿಗೆ ಉದ್ಯೋಗವನ್ನೊದಗಿಸುವುದು ಹೇಗೆಂಬ ಚಿಂತೆ ಅಧಿಕವಾಗಿತ್ತು. ಆದರೆ ಇಂಥ ಬಿಕ್ಕಟ್ಟಿನ ಕಾಲದಲ್ಲಿಯೇ ಇಟಲಿಯ ನೂತನ ಔದ್ಯಮಿಕ ಜಾಗೃತಿ ತೊಡಗಿತ್ತು. ಅಮೇರಿಕ ಒದಗಿಸಿದ ಬಂಡವಾಳದ ನೆರವು ಈ ಜಾಗೃತಿಗೆ ಮಹತ್ತ್ವಪೂರ್ಣವಾದ ಸ್ಫೂರ್ತಿಯನ್ನೊದಗಿಸಿದ್ದು ನಿಜ. ಆದರೆ ಈ ನೆರವಿನ ಸದುಪಯೋಗವನ್ನು ಮಾಡಿಕೊಳ್ಳಲು ಬೇಕಾದ ಔದ್ಯಮಿಕ— ವಾಣಿಜ್ಯ ಕಲಾಕೌಶಲವು ಯುದ್ಧದಿಂದ ಹ್ರಾಸವಾಗಿರಲಿಲ್ಲವಾಗಿ ಇಟಲಿಯ ಮುನ್ನಡೆ ಇಷ್ಟು ವೇಗದಲ್ಲಿ ನಡೆಯುವಂತಾಯಿತು. ವರಮಾನದ ದೃಷ್ಟಿಯಿಂದ ಇಂದಿಗೂ ಇಟಲಿ ಯುರೋಪಿನಲ್ಲಿ ಒಂದು ಹಿಂದುಳಿದ ರಾಷ್ಟ್ರವೆಂದು ಪರಿಗಣಿಸಲ್ಪಡುತ್ತಿದೆ (ವಾರ್ಷಿಕ ಸರಾಸರಿ ೨೨೦೦ ರೂಪಾಯಿ) ಆದರೂ ಏಶಿಯದ ಹಿಂದುಳಿದ ರಾಷ್ಟ್ರಗಳಿಗೂ ಇಟಲಿಗೂ ಹೋಲಿಸಿದರೆ ಇಟಲಿಯ ಚಿತ್ರ ಹೆಚ್ಚು ಆಶಾದಾಯಕವಾಗಿದೆ. ಕೇವಲ ಬಂಡವಾಳ ಮಾತ್ರ ಒದಗಿಸಿದರೆ ಸಾಲದು, ಈ ಬಂಡವಾಳನ್ನು ಲಾಭದಾಯಕವಾಗಿ ಹೂಡಬಲ್ಲ ಔದ್ಯಮಿಕ ಧುರೀಣತ್ವ ಸಮಾಜದಲ್ಲಿ ಬೆಳೆಯದೆ ಬಂಡವಾಳದ ಪೂರ್ತಿ ಪ್ರಯೋಜನ ದೊರೆಯಲಾರದೆನ್ನುವುದಕ್ಕೆ ಭಾರತವೇ ಸಾಕ್ಷಿ. ಔದ್ಯಮಿಕ ಉತ್ಪನ್ನದ ಮೇಲಿಂದ ಮಾತ್ರವೇ ಹೋಲಿಸಿದರೆ ಇಟಲಿ ನಮಗಿಂತಲೂ ಹೆಚ್ಚು ಬೆಲೆಬಾಳುವ ಯಂತ್ರಸಾಮಗ್ರಿಗಳನ್ನು ಉತ್ಪಾದನೆ ಮಾಡುತ್ತಿರುವುದಕ್ಕೆ ದೊಡ್ಡ ಉದ್ದಿಮೆದಾರರಲ್ಲದೆ ಅರ್ಥಮಂಡಲದಲ್ಲಿ ಸರ್ವತ್ರ ಹಬ್ಬಿರುವ ಸಣ್ಣಪುಟ್ಟ ಉದ್ದಿಮೆದಾರರೂ ಹೊಣೆಗಾರರಾಗಿದ್ದಾರೆ. ನಮ್ಮ ದೇಶದಲ್ಲಿ ಇಂಥ ಧುರೀಣತ್ವ ತಲೆ ಎತ್ತಲು ತೊಡಗಿರುವುದಷ್ಟೆ.

## ಯೋಜನೆ ಇಲ್ಲದೆಯೆ........

ಇಟಲಿಯ ಔದ್ಯಮಿಕ ಪ್ರಗತಿಗೆ ಯೋಜನೆಯ (Planning) ಆಧಾರವಿಲ್ಲ. ಇಟಲಿಯ ರಾಜಕೀಯ ಧೋರಣೆ ಇನ್ನೂ ಅನಿಶ್ಚಿತವಾಗಿರುವುದರಿಂದ ಆರ್ಥಿಕ ಧೋರಣೆಯೂ ಅಷ್ಟೇ ಅನಿರ್ದಿಷ್ಟ. ಪ್ರತಿಯೊಂದು ಉದ್ಯಮವೂ ತನ್ನ ಮಟ್ಟಿಗೆ ತನ್ನ ಬೆಳವಣಿಗೆಯ ಯೋಜನೆಯನ್ನು ರಚಿಸಿಕೊಂಡು ಮುಂದುವರಿಯಬಹುದಾದ ಸ್ವಾತಂತ್ರ್ಯ ಇಟಾಲಿಯನ್ ಅರ್ಥಮಂಡಲದ ಒಂದು ಲಕ್ಷಣ. ಸರ್ಕಾರದ ಉಸ್ತುವಾರಿಯಲ್ಲಿ ನಡೆಯುವ ತೈಲ, ಉಕ್ಕು ಮತ್ತು ಕೆಲವೊಂದು ಉದ್ಯಮಗಳನ್ನು ಬಿಟ್ಟರೆ ಉಳಿದ ಬಹ್ವಂಶ ಉದ್ಯಮಗಳು ನಿಯಂತ್ರಣರಹಿತವಾಗಿ ಕಾರ್ಯತತ್ಪರವಾಗಿರುವವು. ಕರಭಾರವೂ ವಿಶೇಷವಾಗಿಲ್ಲದಿರುವುದರಿಂದ ವಿದೇಶೀಯ ಮಾರುಕಟ್ಟೆಯಲ್ಲಿ ಇಟಾಲಿಯನ್ ಸರಕಿನ ಪೈಪೋಟಿಯ ಸಾಮರ್ಥ್ಯ ಅಸಾಧ್ಯವಾಗಿ ಬೆಳೆದಿದೆ. ಮುಖ್ಯವಾಗಿ ಆಯಾತದ ಕಚ್ಚಾ ಸರಕಿನ ಮೇಲೆ ತೆರಿಗೆ ಕೆಲವೊಮ್ಮೆ ಇಲ್ಲದಿರುವುದೂ ಉಂಟು, ಇದ್ದರೂ ಬಹಳ ಅಲ್ಪ. ಇಟಲಿ ಮೋಟರುವಾಹನ, ರಾಸಾಯನಿಕ ವಸ್ತುಗಳು, ಯಂತ್ರೋಪಕರಣಗಳು, ಖನಿಜ. ತೈಲ ಮತ್ತು ತೈಲೋತ್ಪತ್ತಿಗಳು—ಇಷ್ಟರಲ್ಲಿ ಕಳೆದ ದಶಕದಲ್ಲಿ ಅದ್ಭುತವಾದ ಪ್ರಗತಿಯನ್ನು ಪಡೆದಿವೆ. ೧೯೬೨ ರಲ್ಲಿ ಇಟಲಿಯ ರಾಸಾಯನಿಕ ವಸ್ತುಗಳ ಉದ್ಯಮವು ಇಂಗ್ಲೀಷ್ ಉದ್ಯಮಕ್ಕಿಂತಲೂ ಹೆಚ್ಚಿನ ವೇಗದಲ್ಲಿ ಬೆಳೆಯಿತೆನ್ನುವುದು ಇಟಾಲಿಯನ್ನರಿಗೆ ಹೆಮ್ಮೆಯ ವಿಷಯ. ಫಿಯಟ್, ಒಲಿವೆತ್ತಿ ಮೊಂತೆಕತೀನಿ, ಅನ್ಸಾಲ್ಡೋ ಮುಂತಾದ ಖಾಸಗೀ ವಲಯದ ದೊಡ್ಡ ದೊಡ್ಡ ಕಂಪನಿಗಳು ದೊಡ್ಡ ಜರ್ಮನ್ ಅಥವಾ ಅಮೇರಿಕನ್ ಕಂಪನಿಗಳಷ್ಟೇ ಪ್ರಗತಿಪರ ಸಂಘಟನೆಯನ್ನು ಹೊಂದಿವೆ. ಸರಕಾರದ ನಿಯಂತ್ರಣದಲ್ಲಿರುವ ಇಟಾಲ್ಸಿಡರ್ ಉಕ್ಕಿನ ಕಾರ್ಖಾನೆಗಳು ಅತ್ಯಾಧುನಿಕ ತಂತ್ರಗಳನ್ನೇ ಬಳಸುತ್ತವೆ. ಹೀಗೆ ಸಂಘಟನೆ ಮತ್ತು ತಂತ್ರಕೌಶಲ— ಇವೆರಡರ ದೃಷ್ಟಿಯಿಂದಲೂ ನೂತನ ಪ್ರಯೋಗಗಳಿಗೆ ಸ್ವಾಗತವನ್ನು ಬಯಸುತ್ತ ಇಟಲಿಯ ಔದ್ಯಮಿಕ ಮಂಡಲವು ಸದಾ ಜಾಗೃತವಾಗಿರುತ್ತದೆ.

## ಫಿಯಟ್, ಒಲಿವೆತಿ

ಅಂತಾರಾಷ್ಟ್ರೀಯ ಖ್ಯಾತಿಯನ್ನು ಪಡೆದ ಮೋಟಾರು ತಯಾರಿಕೆಯ ಫಿಯಟ್ ('ಫಾಬ್ರಿಕಾ ಇತಲಿಯಾನಾ ಅತೋಮೋಬಿಲಿ ತೋರಿನೋ' ಅಂದರೆ 'ಟ್ಯುರಿನಿನಲ್ಲಿರುವ ಮೋಟಾರು ತಯಾರಿಕೆಯ ಇಟಾಲಿಯನ್ ಕಾರ್ಖಾನೆ') ಮತ್ತು ಟೈಪ್ ರೈಟರ್ ಮತ್ತು ಕಾಲ್ಕುಲೇಟರ್‌ಗಳಿಗೆ ಪ್ರಸಿದ್ಧವಾದ ಒಲಿವೆತ್ತಿ ಸಂಸ್ಥೆಯ ಆಡಳಿತ ನಿರ್ವಹಣೆಯಲ್ಲಿ, ಔದ್ಯಮಿಕ ಧೋರಣೆಯಲ್ಲಿ ಇಟಾಲಿಯನ್ ಪ್ರಗತಿಯ ಕೆಲವು ರಹಸ್ಯಗಳು ಪ್ರಕಟವಾಗಬಹುದೆಂಬ ನಿರೀಕ್ಷೆಯಿಂದ ಈ ಎರಡು ಸಂಸ್ಥೆಗಳ ಕುರಿತು [illegible] ದಾಗಿದೆ. ಫಿಯಟ್ [illegible]

ಯಲ್ಲಿ ಸ್ಥಾಪಿತವಾದ ಸಂಸ್ಥೆ. ಮೊತ್ತಮೊದಲು ಫಿಯಟ್ ಕಾರ್ಖಾನೆ ಟ್ಯುರಿನ್ ನಗರದಲ್ಲಿ ಪೋ ನದಿಯ ದಂಡೆಯಲ್ಲಿ ೨½ ಎಕರೆ ಸ್ಥಳದಲ್ಲಿ ದ್ದಿತು. ಅಲ್ಲಿ ದುಡಿಯುತ್ತಿದ್ದ ನೌಕರರ ಸಂಖ್ಯೆ ೫೦. ಇಂದು ಫಿಯಟ್ ಅಖಿಲ ಯುರೋಪಿನ ಅತ್ಯಂತ ಪ್ರಬಲವಾದ ಒಂದು ಔದ್ಯಮಿಕ ಘಟಕ ವೆನಿಸಿದೆ. ನೌಕರರ ಸಂಖ್ಯೆ ೧,೧೨,೦೦೦ (ಇದರಲ್ಲಿ ೯೧,೦೦೦ ಕಾರ್ಖಾನೆಯ ಕೂಲಿಕಾರರು) ಉತ್ಪಾದನೆಯ ಪದ್ಧತಿಯ ಮೂಲ ವಸ್ತುವಿನಿಂದ ತೊಡಗಿ ಸರಕು ತಯಾರಿಯವರೆಗಿನ ಎಲ್ಲ ಹಂತಗಳನ್ನು ಒಳಗೊಂಡು ಸ್ವಯಂಪೂರ್ಣವಾಗಿದೆ. ಒಟ್ಟು ೨೦ ಕಾರ್ಖಾನೆಗಳನ್ನೊಳಗೊಂಡ ಈ ಬೃಹತ್ ಸಂಸ್ಥೆಯು ಇಂದು ಭೂ-ಜಲ-ವಾಯುಗಳಲ್ಲಿ ಸಂಚರಿಸುವ ಎಲ್ಲ ಬಗೆಯ ವಾಹನಗಳನ್ನು ಯಂತ್ರಗಳನ್ನು ಉತ್ಪಾದಿಸುವುದು. ಫಿಯಟ್ ಕಾರುಗಳನ್ನು, ಲಾರಿಗಳನ್ನು ಜೋಡಿಸುವ ಹಲವು ಕಾರ್ಖಾನೆಗಳು ಪ್ರಪಂಚದ ಇತರ ಅನೇಕ ದೇಶಗಳಲ್ಲಿ ಫಿಯಟ್ ನಾಮಧೇಯವನ್ನು ಜನಪ್ರಿಯಗೊಳಿಸಿವೆ. ಕಾರು, ಲಾರಿ ಮತ್ತು ಇತರ ಯಂತ್ರಗಳಿಗೆ ಬೇಕಾದ ಉಕ್ಕನ್ನು ಫಿಯಟ್ ಸಂಸ್ಥೆ ತಾನೇ ತಯಾರಿಸಿಕೊಳ್ಳುತ್ತದೆ. ಟ್ಯುರಿನನಲ್ಲಿರುವ ಒಂದು ಕಾರ್ಖಾನೆಯಲ್ಲಿ ವರ್ಷ ಒಂದಕ್ಕೆ ೧೮ ಲಕ್ಷ ಟನ್ ಉಕ್ಕನ್ನು ತಯಾರಿಸಿಕೊಳ್ಳಲಾಗುತ್ತಿದೆ. ಜತೆಗೆ ಈ ಕಾರ್ಖಾನೆಯಲ್ಲಿ ಹಲವು ಬಗೆಯ ಸ್ಟೈನ್‌ಲೆಸ್ ಸ್ಟೀಲ್ ಕೂಡ ತಯಾರಾಗುತ್ತಿದೆ. ಮೋಟಾರುವಾಹನಗಳಿಗೆ ಸಂಬಂಧಿಸಿದಂತೆ ಇರುವ ಫಿಯಟ್‌ನ ಐದು ಸ್ಥಾವರಗಳಲ್ಲಿ ನಾಲ್ಕು ಟ್ಯುರಿನನಲ್ಲಿವೆ. ಇವುಗಳಲ್ಲಿ ಅತಿ ಮುಖ್ಯವಾದದ್ದು ಮೋಟಾರು ಕಾರು ತಯಾರಿ. ಫಿಯಟ್ ಮಾದರಿಯ ಅತಿ ಚಿಕ್ಕ ಕಾರು ಫಿಯಟ್ ೫೦೦ ಎಂದು ಕರೆಯಲ್ಪಡುತ್ತದೆ. ಇದರ ತರುವಾಯ ೬೦೦, ೧೧೦೦, ೧೩೦೦, ೧೫೦೦, ೧೮೦೦, ೨೧೦೦, ೨೩೦೦— ಹೀಗೆ ಎಂಟು ಬಗೆಯ, ಪ್ರಮಾಣದ ಕಾರುಗಳಿವೆ. ಇಟಲಿಯಲ್ಲಿ ಅತ್ಯಂತ ಚಲಾವಣೆಯಲ್ಲಿರುವ ಕಾರೆಂದರೆ ಫಿಯಟ್ ೬೦೦. ಇದರ ಇಟಾಲಿಯನ್ ಬೆಲೆ ಸುಮಾರು ೫೦೦೦ ರೂಪಾಯಿ. ಇಟಲಿ ಪರ್ವತಗಳ ನಾಡು. ಈ ಪರ್ವತಗಳ ನಡುವಿನ ಕಡಿದಾದ ಮಾರ್ಗಗಳಲ್ಲಿ ಫಿಯಟ್ ೬೦೦ ಸುಲಭದಲ್ಲಿ ಓಡುವಂತೆ ಅದರ ಚಿಕ್ಕಯಂತ್ರವು ರಚಿತವಾಗಿದೆ. ಈ ಕಾರುಗಳನ್ನು ಟ್ಯುರಿನಿನ ಮಿರಾಫಿಯೋರಿ ಕಾರ್ಖಾನೆಯಲ್ಲಿ ಉತ್ಪಾದಿಸುತ್ತಾರೆ. ಈ ಕಾರ್ಖಾನೆಯು ಅಮೇರಿಕದ 'ಎಸೆಂಬ್ಲಿಲೈನ್ ಪ್ರೊಡಕ್ಷನ್' ಕ್ರಮವನ್ನು ರೂಢಿಸಿಕೊಂಡಿದೆ. ೨೦೭ ಎಕರೆ ವಿಶಾಲವಾದ ಈ ಕಾರ್ಖಾನೆಯಲ್ಲಿ ೩೦,೦೦೦ ಕೂಲಿಕಾರರೂ ೩೦೦೦ ಆಫೀಸ್ ನೌಕರರೂ ದುಡಿಯುತ್ತಿದ್ದಾರೆ. ಈ ಸ್ಥಾವರದಲ್ಲಿ ಒಟ್ಟು ೧೧,೦೦೦ ಯಂತ್ರೋಪಕರಣಗಳಿವೆ. ೬೮½ ಮೈಲುದ್ದದ ಕನ್ವೇಯರ್ ಬೆಲ್ಟ್ ಈ ಸ್ಥಾವರದಲ್ಲಿ ಹರಡಿಕೊಂಡಿದೆ. ಕನ್ವೇಯರ್ ಬೆಲ್ಟು ಕಚ್ಚಾಸರಕಿನ ಸಂಗ್ರಹಾಲಯದಲ್ಲಿ ತೊಡಗಿ ಪೂರ್ತಿಯಾದ ಕಾರನ್ನು ನೆಲಕ್ಕಿಳಿಸುವ ವರೆಗೂ ಅನುಸ್ಯೂತವಾಗಿ ಚಲಿಸುತ್ತದೆ. ಕಾರಿನ ಬೇರೆ ಬೇರೆ ಭಾಗಗಳನ್ನು ತಯಾರಿಸುವ ವರ್ಕಶಾಪಿನಲ್ಲಿ ತಲೆಯ ಮೇಲೆ ಕನ್ವೇಯರ್ ಬೆಲ್ಟು ಇರುತ್ತದೆ. ಅದು ಹೊತ್ತುತಂದ ಬಿಡಿ ಭಾಗಕ್ಕೆ ಆ ಶಾಪಿನಲ್ಲಿ ನಡೆಸಬೇಕಾದ ಸಂಸ್ಕಾರವನ್ನು ನಡೆಸಿದ ಮೇಲೆ ಮತ್ತೆ ಆ ಭಾಗವು ಅಲ್ಲಿಂದ ಮುಂದಿನ ಶಾಪಿಗೆ, ಜೋಡಣೆಗಾಗಿ ಪಯಣ ಬೆಳೆಸುತ್ತದೆ. ಈ ಶಾಪುಗಳನ್ನು ನೋಡಲು ಕಾಲ್ನಡಿಗೆಯಿಂದ ಹೋಗಲು ಪ್ರವಾಸವೆಂದು ಪ್ರೇಕ್ಷಕರ ಸಲುವಾಗಿ ಫಿಯಟ್ ಕಂಪನಿಯು ಬಸ್ಸುಗಳನ್ನೇ ಏರ್ಪಡಿಸುತ್ತದೆ. ಕಾರುಗಳಲ್ಲದೆ ಲಾರಿ, ಟ್ರಾಕ್ಟರು, ಡಿಸೆಲ್ ಯಂತ್ರಗಳೂ ವಾಯುಯಾನಕ್ಕೆ ಬೇಕಾದ ಯಂತ್ರಗಳು ಇವನ್ನು ಫಿಯಟ್ ಉತ್ಪಾದಿಸುತ್ತದೆ.

ಫಿಯಟ್ ಸಂಸ್ಥೆ ತನ್ನ ಆಶ್ರಿತರನ್ನು ಬಹಳ ಚೆನ್ನಾಗಿ ನೋಡಿಕೊಳ್ಳುತ್ತದೆ. ಸರಾಸರಿ ಕೂಲಿಯು ಇತರ ಹಲವು ಉದ್ಯಮಗಳಿಗಿಂತ ಹೆಚ್ಚಾಗಿರುತ್ತದೆ. (ಸರಾಸರಿ ೮೦೦ ರೂಪಾಯಿ) ಕೂಲಿಗಿಂತ ಹೆಚ್ಚಿನ ಮಹತ್ವ ಕೂಲಿಕಾರರಿಗೆ ಒದಗಿಸುವ ಇತರ ಸೌಲಭ್ಯಗಳಿಗೆ ಇದೆ. ವೈದ್ಯಕೀಯ, ಆರೋಗ್ಯ, ವಸತಿ, ಶಿಶು ಸಂಗೋಪನ ಮತ್ತು ಶಿಕ್ಷಣ ಸೌಕರ್ಯಗಳಲ್ಲಿ ಫಿಯಟ್ ಅತ್ಯಾಧುನಿಕ ಧೋರಣೆಯನ್ನು ಹೊಂದಿದೆ. ಫಿಯಟ್ ರುಗ್ಣಾಲಯ, ವಿಶ್ರಾಮಧಾಮಗಳಲ್ಲಿ ಫಿಯಟ್ ಕೆಲಸಗಾರ ಆರೋಗ್ಯವಂತನಾಗಬಲ್ಲನು. ೭೮೦ ವೈದ್ಯರು ೧೫೦ ನರ್ಸುಗಳು ಅವನ ಸೇವೆಗೆ ಅಣಿಯಾಗಿ ಫಿಯಟ್‌ನಿಂದ ನೇಮಿಸಲ್ಪಟ್ಟಿದ್ದಾರೆ. ಫಿಯಟ್ ಕಂಪನಿಯ ಮಾದರಿ ವಸತಿ ಕೇಂದ್ರದಲ್ಲಿ ೧೨,೦೦೦ ಜನ ವಾಸಮಾಡುತ್ತಿದ್ದಾರೆ. ಫಿಯಟ್ ಮನೆಗಳ ಪೈಕಿ ಮುಕ್ಕಾಲುವಾಸಿ ಮನೆಗಳು ಕೂಲಿಕಾರರಿಗೆ ಮೀಸಲು. ೧೯೫೫ ರಿಂದ ಈ ಗೃಹನಿರ್ಮಾಣ ಯೋಜನೆಗೆ ಫಿಯಟ್ ೧೦ ಕೋಟಿ ರೂಪಾಯಿ ವೆಚ್ಚ ಮಾಡಿದೆ. ಫಿಯಟ್ ಕೆಲಸಗಾರರಲ್ಲಿ ೨೫ ವರ್ಷ ನಿರಂತರವಾಗಿ ಫಿಯಟ್ ಸೇವೆ ಮಾಡಿದ "ಫಿಯಟ್ ಅನುಭವಿ" ಗಳ ಗುಂಪಿಗೆ ವಿಶೇಷ ಸೌಕರ್ಯಗಳು ಲಭಿಸುತ್ತಿವೆ. ೬೫ನೆಯ ವಯಸ್ಸಿಗೆ ಯಾರಾದರೂ ಫಿಯಟ್‌ನಲ್ಲಿ ೪೦ ವರ್ಷ ದುಡಿದಿರುವವನಾದರೆ ಅಂಥವನಿಗೆ ತಿಂಗಳೊಂದರ ೨೨೦ ರೂಪಾಯಿ ವಿಶೇಷ ವಿಶ್ರಾಂತಿ ವೇತನವನ್ನು ಫಿಯಟ್ ಕೊಡುತ್ತದೆ.

ಟೈಪರೈಟರ್ ಕ್ಯಾಲ್ಕುಲೇಟರ್‌ನಿಂದ ತೊಡಗಿ ಟೆಲಿಪ್ರಿಂಟರ್ ತಯಾರಿಕೆಯ ವರೆಗೂ ತನ್ನ ಉತ್ಪಾದನೆಯನ್ನು ವಿಸ್ತರಿಸಿ. ಅಮೇರಿಕದ ಪ್ರಸಿದ್ಧ ಅಂಡರವುಡ್ ಸಂಸ್ಥೆಯನ್ನು ತನ್ನೊಳಗೆ ವಿಲೀನೀಕರಿಸಿಕೊಂಡು ಪ್ರಬಲವಾಗಿ ಬೆಳೆಯುತ್ತಿರುವ ಒಲಿವೆತ್ತಿ ಇಟಾಲಿಯನ್ ನವಜಾಗೃತಿಯ ಒಂದು ಸಂಕೇತವೆನ್ನಬೇಕು. ಈ ಕಂಪೆನಿಯ ಒಟ್ಟು ಬಂಡವಾಳ ೫ ಕೋಟಿ ರೂಪಾಯಿ. ಈ ಸಂಸ್ಥೆಯಲ್ಲಿ ಇಟಲಿ ಮತ್ತು ವಿದೇಶಗಳಲ್ಲಿ ಸೇರಿ ೫೬,೦೦೦ ಮಂದಿ ದುಡಿಯುತ್ತಾರೆ. ಇಟಲಿಯಲ್ಲಿ ಎಂಟು ಕಾರಖಾನೆಗಳೂ ಪರದೇಶಗಳಲ್ಲಿ ೭ ಕಾರಖಾನೆಗಳೂ ಇವೆ. ಇಟಲಿಯಲ್ಲಿ ಈ ಸಂಸ್ಥೆಯ ಕೇಂದ್ರವು ಟ್ಯೂರಿನಿಗೆ ೨೦ ಮೈಲು ದೂರದ ಇವ್ರೆಯಾದಲ್ಲಿದೆ. ಇದು ಒಲಿವೆತ್ತಿ ನಗರವೆಂದು ಪ್ರಸಿದ್ಧವಾಗಿದೆ. ಏಕೆಂದರೆ ಇಲ್ಲಿನ ಜನರೆಲ್ಲ ಒಲಿವೆತ್ತಿಯ ನೌಕರರು ಅಥವಾ ಅವರ ಆಶ್ರಿತರು. ಕೆಲವು ಒಲಿವೆತ್ತಿ ಕಾರಖಾನೆಗಳಲ್ಲಿ ಕೆಲಸದ ವೇಳೆ ಸಂಗೀತವನ್ನು ಕೇಳಿಸುತ್ತಾರೆ. ಬಲು ಬೇಸರ ತರುವಂಥ ಟೈಪ್‌ರೈಟರ್ ಉತ್ಪಾದನೆಯು ಹೆಚ್ಚು ವೇಗವಾಗಿ ಸಾಗುವುದೆಂಬ ನಿರೀಕ್ಷೆ ಇರುವುದರಿಂದ ಇಂಥ ನೂತನ ಪ್ರಯೋಗಗಳನ್ನೂ ನಡೆಸುತ್ತಾರೆ. ವರ್ಷ ಒಂದಕ್ಕೆ ತಯಾರಾಗುವ ಒಲಿವೆತ್ತಿ ಯಂತ್ರಗಳ ಸಂಖ್ಯೆ ೨೦ಲಕ್ಷಕ್ಕೆ ಏರಿದೆ. ಈ ಪೈಕಿ ೭೦% ನಿರ್ಯಾತಮುಖವಾಗಿ ಹೊರಡುವುದಂತೆ.

## ಸರ್ಕಾರಿ ಸಾಹಸ

ಸರ್ಕಾರಿ ಸಾಹಸದ ದ್ಯೋತಕವಾಗಿ ಖಾಸಗೀ ರಂಗದ ಫಿಯಟ್ ಒಲಿವೆತ್ತಿಗಳಷ್ಟೇ ಹೆಸರು ಗಳಿಸಿದ ಎರಡು ದೊಡ್ಡ ಸಂಸ್ಥೆಗಳನ್ನು ಇಟಾಲಿಯನ್ನರು ಯುದ್ಧಾನಂತರ ಕಟ್ಟಿಕೊಂಡಿದ್ದಾರೆ. ಇವುಗಳಲ್ಲಿ ಒಂದರ ಹೆಸರು 'ಈರಿ' (IRI) (ದಿ ಇನ್‌ಸ್ಟಿತ್ಯೂತೊ ಪರ್ ಲಾ ರಿಕೋಸ್ತ್ರುಯಾನೆ ಇಂಡಸ್ಟ್ರಿಯಲ್) ಮತ್ತು ಇನ್ನೊಂದರ ಹೆಸರು 'ಏನಿ' (ENI). ಏನಿ ತೈಲ ಶುದ್ಧೀಕರಣ ರಾಸಾಯನಿಕಗಳ ತಯಾರಿಕೆಯ ಸಂಘಗಳನ್ನೂ ನಿಯಂತ್ರಿಸುತ್ತದೆ. 'ಈರಿ' ಇತರ ಹಲವಾರು ಉದ್ಯಮಗಳ ಅಭಿವೃದ್ಧಿಗೆ ಕಾರಣವಾಗಿದೆ. ಈರಿ ಗುಂಪಿಗೆ ಸೇರಿದ ಕಂಪನಿಗಳ ಕಾರ್ಯನಿರ್ವಹಣೆಯ ಒಂದು ಸ್ಥೂಲ ಚಿತ್ರ ಹೀಗಿದೆ:—




| | |
|---|---|
| ಈರಿ ಗುಂಪಿನ ಕೆಲಸಗಾರರ ಸಂಖ್ಯೆ ... | ೨.೭ ಲಕ್ಷ |
| ೧೯೬೦ ರಲ್ಲಿ 'ಈರಿ' ಗುಂಪಿಗೆ ಬೇಕಾದ ಬಂಡವಾಳ ... | ೨೦೦·೦ ಕೋಟಿ ರೂ. |
| ೧೯೬೧ ರಲ್ಲಿ ಈರಿ ಗುಂಪಿನ ಸೊತ್ತುಗಳ ಮೌಲ್ಯ ... | ೬೫೦·೦ ಕೋಟಿ ರೂ. |
| ೧೯೬೧ ರಲ್ಲಿ ಈರಿ ಗುಂಪಿನ ಸರಕುಗಳ ಮಾರಾಟದಿಂದ ಕೂಡಿದ ಮೊತ್ತ ... | ೧೧೦೦·೦ ಕೋಟಿ ರೂ. |

'ಈರಿ' ಗುಂಪಿನ ಕೈಕೆಳಗಿನ ನೂರಕ್ಕೂ ಮೇಲ್ಪಟ್ಟ ಔದ್ಯಮಿಕ ಕಂಪನಿಗಳಲ್ಲಿ ಕೆಲವು ಖಾಸಗಿ ವಲಯದಲ್ಲಿಯೂ ವರ್ತಿಸುವುದಾದರೂ ಅವುಗಳ ನಿಯಂತ್ರಣವು 'ಈರಿ'ಗೆ ಸಂದಿದೆ. ಈ ಕಂಪನಿಗಳ ಷೇರುಗಳ ಮೇಲೆ ೨೫ ರಿಂದ ೯೫—೧೦೦% ವರೆಗೆ ಒಡೆತನವನ್ನು ಪಡೆದರೂ ಈರಿ ಇವುಗಳ ಸಾಹಸಕ್ಕೆ ಅಡ್ಡಿಯಾಗುವುದಿಲ್ಲ. ಬದಲು ಬೇಕಷ್ಟು ಉತ್ತೇಜನವನ್ನು ನೀಡಿ ಅವುಗಳ ಬೆಳವಣಿಗೆಗೆ ನೆರವಾಗುತ್ತದೆ. ಇದೇ ರೀತಿ ಇಟಲಿಯ ದರಿದ್ರ ಭಾಗವೆನಿಸಿದ ದಕ್ಷಿಣ ಇಟಲಿಯ ಔದ್ಯಮಿಕ ನವಚೇತನದಲ್ಲಿಯೂ 'ಈರಿ' ಅಗ್ರಗಣ್ಯ ಪಾತ್ರವನ್ನು ವಹಿಸಿದೆ. ಇನ್ನು ಮುಂದೆ 'ಈರಿ' ತನ್ನ ಬಂಡವಾಳದ ೬೦%ನ್ನು ದಕ್ಷಿಣದಲ್ಲಿಯೇ ಬಳಸಬೇಕೆಂದು ನಿರ್ಣಯಿಸಲಾಗಿದೆ. ಹೀಗೆ ಸರಕಾರಿ ಕ್ಷೇತ್ರದ ಸಂಸ್ಥೆಗಳು ಸಾಹಸದಲ್ಲಿ, ಪ್ರಯೋಗ ಬುದ್ಧಿಯಲ್ಲಿ, ಖಾಸಗೀ ಕ್ಷೇತ್ರದಷ್ಟೇ ಪ್ರಗತಿಪರವಾಗಿ ಮುನ್ನಡೆಯಲು ಸಾಧ್ಯವಿದೆ ಎಂಬುದನ್ನು ಇಟಲಿಯ ಈ ಸರ್ಕಾರಿ ಸಂಘಗಳು ತೋರಿಸಿಕೊಡಬಲ್ಲವು.

### ದಾರುಣ ಆರ್ಥಿಕ ವೈಷಮ್ಯ

ಇಂಥ ಸಾಹಸಪರ, ಉದ್ಯಮಶೀಲ ಜನರುಳ್ಳ ಇಟಲಿ ದೇಶವು ಉತ್ತರ ದಕ್ಷಿಣವೆಂದೂ ಶ್ರೀಮಂತ- ಬಡವರೆಂದೂ ಎರಡು ವರ್ಗವಾಗಿ ವಿಂಗಡಿಸಲ್ಪಟ್ಟಿರುವುದು — ಅದು ಕೂಡ ಈ ಶತಮಾನದಲ್ಲಿ, ಈಗ- ಬಹಳ ವಿಚಿತ್ರ ಸನ್ನಿವೇಶವೆ ಸರಿ. ದಕ್ಷಿಣ ಇಟಲಿಯಿಂದ ಉತ್ತರ ಇಟಲಿಗೂ ಉತ್ತರ ಯುರೋಪಿಗೂ ಅಮೇರಿಕಕ್ಕೂ ವಲಸೆ ಹೋಗಲು ಸಿದ್ಧರಾದ ಜನರ ತಂಡಗಳನ್ನು ಇಟಲಿಯಲ್ಲಿ ಸರ್ವತ್ರ ಸಂಧಿಸಬಹುದು. ಏಶಿಯಾ ಮತ್ತು ಆಫ್ರಿಕದಲ್ಲಿರುವ ಮಟ್ಟದಲ್ಲಿ ಹಸಿವೆಯಿಂದ ಕಂಗಾಲಾದ ಹಳ್ಳಿಗರನ್ನೇ ದಕ್ಷಿಣ ಇಟಲಿಯಲ್ಲಿ ನೋಡಬಹುದು. ವಿಶ್ವದ ರಾಜಕೀಯ ಪ್ರಣಾಲಿಗೆ ನ್ಯಾಯ ಮತ್ತು ಶಾಸನದ ಪಾಠವನ್ನು ಕಲಿಸಿಕೊಟ್ಟ ಇಟಲಿಯಲ್ಲಿ ಇಂದಿಗೂ ಸಾಮಾಜಿಕ ನ್ಯಾಯಬುದ್ಧಿ (sense of social justice) ಬೆಳೆಯಲಿಲ್ಲವೇನೋ ಎಂಬ ಸಂದೇಹವನ್ನು ಅಲ್ಲಿನ ರಾಜಕೀಯ ವೈಷಮ್ಯವು ಸ್ಫುಟವಾಗಿ ತೋರಿಸುತ್ತದೆ. ಉತ್ಪಾದನೆಯಲ್ಲಿ ತುಂಬ ಕಸುವು, ಸಾಮರ್ಥ್ಯಗಳನ್ನು ಮತ್ತು ಸ್ಪರ್ಧೆಯಲ್ಲಿ ಶಕ್ತಿಯನ್ನು ಸಂಪಾದಿಸಿಕೊಂಡ ಇಟಲಿ ವಿತರಣೆಯಲ್ಲಿ ಇದುವರೆಗೆ ಸಾರ್ವತ್ರಿಕ ನ್ಯಾಯ್ಯವನ್ನು ಜನಗಳಿಗೆ ದೊರಕಿಸಿಲ್ಲವಾಗಿ ಇಟಾಲಿಯನ್ ರಾಜಕೀಯವು ಅರ್ಥಹೀನವಾಗಿ ಮಾತಿನ ಸುಳಿಗುಂಡಿಯಲ್ಲಿ ಸಿಲುಕಿಕೊಂಡಿದೆ. ಇದು ಇಟಲಿಯ ರಾಜಕೀಯ ಸಮಸ್ಯೆಯೂ ಹೌದು, ವಿತರಣೆಯ ದೃಷ್ಟಿಯಿಂದ ನೋಡಿದರೆ ಇನ್ನೂ ಬಗಿಹರಿಯದ ಅತ್ಯಂತ ಪ್ರಮುಖ ಆರ್ಥಿಕ ಸಮಸ್ಯೆಯೂ ಹೌದು.

---

ಲೇಖಿಕೆ :
ಶ್ರೀಮತಿ ಸುಶೀಲಾ ಕೊಪ್ಪರ
ಬೆಂಗಳೂರು

# ಮಹಿಳೆಯರು ಮತ್ತು ಧಾರ್ಮಿಕ ಶ್ರದ್ಧೆ

ಭಾರತದಲ್ಲಿ ಧರ್ಮವುಳಿದಿದ್ದರೆ, ಧಾರ್ಮಿಕ ಶ್ರದ್ಧೆ ಕಂಡು ಬರುತ್ತಿದ್ದರೆ, ಅದು ಮಹಿಳೆಯರಿಂದಲೇ ಎಂದು ಹಿರಿಯರು ಹೇಳುವ ಮಾತು ಬಹುಮಟ್ಟಿಗೆ ನಿಜ-ವಾಗಿದೆ. ಮೊದಲು ಪೂರ್ಣಶ್ರದ್ಧೆಯಿಂದ ಪಾಲಿಸುತ್ತಿದ್ದರೆ, ಈಗ ಆಧುನಿಕ ಮಹಿಳೆಯರು ವಿಜ್ಞಾನದ ಆಧಾರಗಳನ್ನು ಅವಲಂಬಿಸಿ, ಅದರ ಪಾಲನೆಯಲ್ಲಿ ನಿರತರಾಗಿರುವರು. ಆದರೆ ಕೆಲವೊಂದು ಘಟನೆಗಳಿಂದ ಅವಳಿಗೆ ಧರ್ಮದಲ್ಲಿ ವ್ರತಾಚರಣೆಗಳಲ್ಲಿ ನಂಬಿಗೆ ಕೆಲಮಟ್ಟಿಗೆ ಕಡಿಮೆಯಾಗಿರಬಹುದು; ಅವರಲ್ಲಿ ಇದರಿಂದ ಶ್ರದ್ಧೆ ಕಡಿಮೆಯಾಗಿದೆ ಎನ್ನಲಾಗದು ; ಅದರ ರೂಪ ಬದಲಾಗಿದೆ ಎಂದು ಲೇಖಿಕೆಯವರು ಇಲ್ಲಿ ವಿವರಿಸಿದ್ದಾರೆ.

---

"ಏನಾದರೂ ಧರ್ಮ ಎನ್ನುವುದು ಇಂದು ಉಳಿದಿದ್ದರೆ ಅದು ನಮ್ಮ ಸ್ತ್ರೀಯರಿಂದ ಮಾತ್ರ..." ಎಂದು ಕೆಲ ಹಿರಿಯರು ಉದ್ಗಾರ ತೆಗೆದರೆ—

"ನಾವಿರುವ ತನಕ ಬಿಡಲಾರದ ಕರ್ಮ ಅದು ಹೇಗೋ ನಡೆಸಿಕೊಂಡು ಬರುತ್ತೇವೆ... ಈಗಿನವರಿಗೆ ದೇವರು ಧರ್ಮ ಯಾತರಲ್ಲಿಯೂ ಆಸಕ್ತಿಯೇ ಇಲ್ಲ-.. ಎಲ್ಲ ಮುಳುಗಿ ಹೋಗಿದೆ—" ಎಂಬ ನಿರಾಸೆಯ ಮಾತುಗಳನ್ನು ಕೆಲ ಹಿರಿಯರಿಂದ ಕೇಳುತ್ತೇವೆ.

ಈ ಎರಡು ಮಾತುಗಳು ಭಿನ್ನ ಮುಖಪವುಗಳಾಗಿದ್ದರೂ ಸತ್ಯಕ್ಕೆ ಸಾವಿಲ್ಲವೆಂಬಂತೆ ಧರ್ಮ ಒಂದೇ ಮುಖದಿಂದ ಶಾಶ್ವತವಾಗಿ ನಡೆದುಬಂದಿದೆ. ಜನ ಆಚರಿಸದೆ ಅದರ ಮೇಲೆ ಮುಸುಕುಬಿದ್ದಿರಬಹುದು, ಹೊರತಾಗಿ ಅದು ಮಾಯವಾಗುವದು ಸಾಧ್ಯವಿಲ್ಲ.

## ಧರ್ಮವೊಂದೇ

ಯಾವುದೇ ದೇಶದಲ್ಲಿಯಾದರೂ ಯಾವುದೇ ವರ್ಣದ ಮನುಷ್ಯನಿಗೆ ಎರಡು ಕಾಲು ಎರಡು ಕೈ ಎರಡು ಕಣ್ಣು ಒಂದು ಮೂಗು ಬಾಯಿ ಎಂಬ ಒಂದು ನಿರ್ದಿಷ್ಟ ರೂಪವಿದ್ದಂತೆಯೇ ಆಯಾ ದೇಶದ ಮತ್ತು ಪಂಗಡದ ಪ್ರತಿಧರ್ಮದ ತತ್ತ್ವವೂ ಒಂದೇ ಆಗಿದ್ದು ಅವೆಲ್ಲವೂ ಮಾನವೀಯತ್ವವನ್ನು ಪ್ರತಿಪಾದಿಸಿ, ದೇವರೊಬ್ಬನಿದ್ದಾನೆ ಎಂಬದನ್ನು ಒಪ್ಪಿಕೊಂಡು ಸಾಕ್ಷಾತ್ಕಾರದ ಮಾರ್ಗದಲ್ಲಿ ಮುಂದುವರೆದು ಧರ್ಮವು ಪ್ರಚಾರಗೊಳಿಸಲ್ಪಟ್ಟಿತು.

ಸತ್ಯ, ಅಹಿಂಸೆ, ಪ್ರೇಮ, ನ್ಯಾಯ ಇವು ಮಾನವನ ಉನ್ನತಿಗೆ ದಾರಿದೀಪಗಳಾದವು. ಈ ದೀಪಗಳನ್ನು ಶಾಶ್ವತವಾಗಿ ಉರಿಸಲು ಮನುಷ್ಯನಿಗೆ ಕೆಲವು ನೀತಿ ನಿಯಮ ನಿರ್ಬಂಧ ತ್ಯಾಗಗಳು ಅವಶ್ಯವಿದ್ದುದರಿಂದ ಅವುಗಳನ್ನು ಕಟ್ಟುನಿಟ್ಟಾಗಿ ಪಾಲಿಸುವದೇ ಆಚಾರವಾಯಿತು.

ಮಹಿಳೆಯರ ಧಾರ್ಮಿಕ ಶ್ರದ್ಧೆಯನ್ನು ಎರಡು ವಿಧವಾಗಿ ವಿಂಗಡಿಸಬಹುದು. ಒಂದು ಆಂತರಿಕ ಇನ್ನೊಂದು ಬಾಹ್ಯ ಎಂದು. ಆಂತರಿಕ ಶ್ರದ್ಧೆಯಿಂದ ಆತ್ಮೋನ್ನತಿಯನ್ನು ಹೊಂದಿದ ಕೆಲ ಸ್ತ್ರೀಯರನ್ನು ಪ್ರಾಚೀನ ಕಾಲದಲ್ಲಿಯೂ ಇತ್ತೀಚಿನ ಕಾಲದಲ್ಲಿಯೂ ಕಾಣಬಹುದು. ಇಂಥವರಲ್ಲಿ ಲೋಪಾಮುದ್ರಾ, ಗಾರ್ಗಿ, ತಿಲೋತ್ತಮೆಯರನ್ನು —ಮೀರಾ ಬಾಯಿ ಅಕ್ಕಮಹಾದೇವಿಯರನ್ನೂ ಉದಾಹರಿಸಬಹುದು. ಸತಿಗೆ ಪಾತಿವ್ರತ್ಯವೇ ಧರ್ಮ ಎಂದು ಹೇಳಿದರೂ ಮೀರಾಬಾಯಿ ಅಕ್ಕ-ಮಹಾದೇವಿಯರು— ಸಾಂಸಾರಿಕ ಜೀವನವನ್ನು ನಡೆಸದೆ ಈಶ್ವರನನ್ನೇ ಮೆಚ್ಚಿಕೊಂಡು ಸಾಕ್ಷಾ-ತ್ಕಾರ ಪಡೆದರು. "ಸಾಕ್ಷಾತ್ಕಾರ ಪಡೆಯುವಷ್ಟು ಶ್ರೇಷ್ಠಮಟ್ಟವನ್ನು ಮುಟ್ಟುವ ಮಹಿಳೆ ಪತಿಯೊಂದಿಗೆ ಬಾಳಿ ಅದನ್ನು ಸಾಧಿಸಲು ಸಾಧ್ಯವಿರಲಿಲ್ಲವೆ? ಎಂದು ವಾದಿಸುವ ಜನರನ್ನೂ ನಾವು ಕಾಣುತ್ತೇವೆ. ಆದರೆ ಈ ಮಹಿಳೆಯರು ಕೇವಲ "ಮಹಿಳೆಯರು "ಎಂಬ ಒಂದು ಚೌಕಟ್ಟಿನಲ್ಲಿ ಸಾಲದ ವ್ಯಕ್ತಿಗಳಾಗಿದ್ದುದರಿಂದ ಅವರನ್ನು ಸಾಮಾನ್ಯ ಸ್ತ್ರೀಯರೊಂದಿಗೆ ಉದಾಹರಿಸದಿರುವದೇ ಉತ್ತಮ.

ಧಾರ್ಮಿಕಭಾವನೆ ಸ್ತ್ರೀ ಮತ್ತು ಪುರುಷರಿಗೆ ಒಂದೇ ಆಗಿದ್ದರೂ ಕೆಲ ನೈಸರ್ಗಿಕ ಕಾರಣಗಳಿಂದ ಸ್ತ್ರೀಯಭಾವನೆ ಪುರುಷರಿಗಿಂತ ಭಿನ್ನವಾಗಿ ಬೆಳೆದುಬಂದು ಅವಳಿಗಾಗಿಯೇ ಒಂದು ಧರ್ಮ ಪ್ರತ್ಯೇಕವಾಗಿ ಬೆಳೆದುಬಂದಿತು. ಅದೇ ಪತಿವ್ರತಾ ಧರ್ಮವಾಗಿದ್ದು ಅದನ್ನು ಆಚರಿಸುವವರಿಗೆ ಯಾವ ಇತರ ಧಾರ್ಮಿಕ ಆಚರಣೆಯನ್ನು ಪಾಲಿಸದಿದ್ದರೂ ಸರಿ ಎಂಬ ಒಂದು "ವಿನಾಯತಿ" ಅವರಿಗೆ ದೊರೆಯಿತು !

## ಪತಿವ್ರತಾಧರ್ಮ

ಈ ಪತಿವ್ರತಾಧರ್ಮವೆಂಬದನ್ನು ವಿಶಾಲಾರ್ಥ-ದಲ್ಲಿ ನೋಡಿದರೆ ಕೌಟುಂಬಿಕ ಸುವ್ಯವಸ್ಥೆಯೇ ಅದರಲ್ಲಿ ಕಂಡುಬರುವದು. ಪತಿಯನ್ನು ಪ್ರೇಮ ತ್ಯಾಗಗಳಿಂದ ಸೇವಿಸಿ ಸಂತುಷ್ಟನನ್ನಾಗಿರಿಸಿದರೆ ಅವಳು ಬಯಸಿದ್ದನ್ನು ಪಡೆದು (ಆತನಿಂದ) ಸಂ-ತುಷ್ಟಳಾಗಿ ಬಾಳಬಹುದು. ವ್ಯಕ್ತಿಯ ತೃಪ್ತ ಜೀವನವೇ ಕುಟುಂಬ ಮತ್ತು ಸಮಾಜಕ್ಕೆ ಸಹಾ-ಯಕವಾದದ್ದರಿಂದ ದೇಶ ಮತ್ತು ಧರ್ಮದ ಬೆಳವಣಿಗೆಗೆ ಅದು ಅತಿ ಮುಖ್ಯವೆಂದು ಒಂದು ಕಲ್ಪ-ನೆಯ ಅಂಗವೂ ಅದರಲ್ಲಿ ಸೇರಿರಬಹುದು. ಈ ಧರ್ಮದ ನಿರ್ಬಂಧ ಸ್ತ್ರೀಯ ಮೇಲೆಯೇ ಇದ್ದು ಪುರುಷರಿಗೇಕಿಲ್ಲ ಎಂದು ಕೆಲ ಆಧುನಿಕ ಸ್ತ್ರೀ-ಯರು ವಾದಿಸುತ್ತಾರೆ. ಅದನ್ನು "ನಿರ್ಬಂಧ" ಎನ್ನುವದಕ್ಕಿಂತ ಅವಳ ಸಹನೆ ಮತ್ತು ಸಂಯ-ಮಕ್ಕೆ ಮರ್ಯಾದೆಕೊಟ್ಟು ಅವಳ ಧರ್ಮದಿಂದಲೇ ದೇಶದ ರಕ್ಷಣೆ ಸಾಧ್ಯವೆಂಬದನ್ನು ಸತಿಧರ್ಮವನ್ನು ಸಾರಿದವರು ಮನಗಂಡಿರಬಹುದು. ಪುರುಷರಿಗೆ ಅದು ಸಾಧ್ಯವಾಗದಿರಬಹುದು. ನಿತ್ಯಸ್ಮರಣೀಯರೆನಿಸಿದ ಪಾವನೆಯರಾದ ಅಹಲ್ಯಾ, ದ್ರೌಪದಿ, ಸೀತಾ, ತಾರಾ, ಮಂಡೋದರಿಯರು ತಮ್ಮ ಆತ್ಮಬಲದಿಂದ ಸತಿಧರ್ಮದಲ್ಲಿ ಸತ್ಯದಆಧಾರದ ಮೇಲೆ ಮಾರ್ಗದರ್ಶಕರಾದರು.

ಮಹಿಳೆಯರು ಧಾರ್ಮಿಕವಾಗಿ ಆಚರಿಸುವ ಯಾವುದೇ ಕೃತಿಯನ್ನು ನೋಡಿದರೂ ಅದರಲ್ಲಿ ಕುಟುಂಬದ ಸಂರಕ್ಷಣೆ, ಸಮಾಜದ ಹಿತ-ವಾತ್ಸಲ್ಯಗಳನ್ನೇ ಕಾಣಬಹುದು. ಅದು ಮದುವೆಯೇ ಆಗಿರಲಿ ಅಥವಾ ಒಂದು ಚಿಕ್ಕಹಬ್ಬವೇ ಆಗಿರಲಿ ಅದರ ಆಚರಣೆಯಿಂದ ಸರ್ವರಿಗೂ ಒಳ್ಳೆಯದಾ-ಗುವದೆಂಬ ವಿಶ್ವಾಸವೇ ಅವಳ ಶ್ರದ್ಧೆಯನ್ನು ಉ-ಳಿಸಿಕೊಂಡು ಬಂದಿದೆ. ಉದಾಹರಣೆಗಾಗಿ ಹಬ್ಬಗಳನ್ನೇ ತೆಗೆದುಕೊಳ್ಳಬಹುದು. ಪ್ರತಿಹಬ್ಬವೂ ಅವಳ ಜೀವನವನ್ನು ವಿಕಾಸಗೊಳಿಸಲು ಸಹಾಯಕವಾಗಿರುವಂತಿರುವದು. ಪತಿ-ಪುತ್ರರು, ಅಣ್ಣ-

ತಮ್ಮಂದಿರು, ಹೆಣ್ಣುಮಕ್ಕಳು, ಅಳಿಯಂದಿರು, ಬಡ-ಬಗ್ಗರು, ನೆರೆ-ಹೊರೆಯುವರು ಎಲ್ಲರನ್ನೂ ಸಂತುಷ್ಟರನ್ನಾಗಿರಿಸುವದೇ ಅವಳ ಧಾರ್ಮಿಕ ಕರ್ತವ್ಯದ ಮುಖ್ಯ ಅಂಶವಾಗಿರುವದು. ಉದಾ: ಸತ್ಯವಾನ ಸಾವಿತ್ರಿಯರ ವ್ರತ ಪತಿಯು ಆಯುಷ್ಯಕ್ಕಾದರೆ— ಅಶ್ವತ್ಥನ ಪ್ರದಕ್ಷಿಣೆ ಮಕ್ಕಳು ಹುಟ್ಟುವದಕ್ಕೆ. ಮಕ್ಕಳಿಗೆ ವಿದ್ಯೆ ಬುದ್ಧಿಗಾಗಿ ಗಣಪತಿ—ಸರಸ್ವತಿಯರಾದರೆ, ತವರನ್ನು ಸುರಕ್ಷಿತವಾಗಿರಿಸಲು ನಾಗರಪೂಜೆ. ಮನಸ್ಸಿಗೊಪ್ಪುವ ಪತಿಯನ್ನು ಪಡೆಯಲು ಪಾರ್ವತೀ ಪೂಜೆಯಾದರೆ ದುಷ್ಟ ಶಕ್ತಿಗಳನ್ನು ದೂರವಿರಿಸಲು ಮಾರೀಪೂಜೆ. ಕುಟುಂಬದ ಹಿತಕ್ಕೆ ಕುಲದೇವತೆ, ಗ್ರಾಮದ ಹಿತಕ್ಕೆ ಗ್ರಾಮದೇವತೆ, ದೇಶಕ್ಕಾಗಿ ನಾಡದೇವತೆ, ಸಕಲರನ್ನು ಸುಖವಾಗಿಡಲು ಸಾಧನವಾದ ಸಂಪತ್ತಿಗಾಗಿ ಲಕ್ಷ್ಮಿಯ ಆರಾಧನೆ ಹೀಗೆ ಹಿಂದಿನ ಸ್ತ್ರೀ ಆ ಶಕ್ತಿದೇವತೆಗಳಲ್ಲಿ ಶ್ರದ್ಧೆಯನ್ನಿಟ್ಟು ಅವುಗಳನ್ನು ಪೂಜಿಸಿ ಆರಾಧಿಸುವದರಲ್ಲಿ ಚಿಕ್ಕ ಪುಟ್ಟ ತ್ಯಾಗಗಳನ್ನು ಮಾಡುತ್ತ ಹೆಜ್ಜೆ ಹೆಜ್ಜೆಯಾಗಿ ಅದರಲ್ಲಿ ಮುಂದುವರೆದು ಸರ್ವರೂ ಸಂತುಷ್ಟರಾಗಿ ಬಾಳಿದರೇ ಜೀವನದಲ್ಲಿ ಶಾಂತಿ ಎಂಬ ಒಂದು ಮಟ್ಟವನ್ನು ತಲುಪುತ್ತಾಳೆ. "ಸರ್ವೇಪಿ ಸುಖಿನಸ್ಸಂತು ಸರ್ವೇಸಂತು ನಿರಾಮಯಾಃ" ಎಂಬದನ್ನು ತನಗರಿಯದೇ ಅವಳು ಆಚರಿಸುತ್ತಿರುತ್ತಾಳೆ. ಉದಾ. ಅವಳ ಪೂಜೆಗಳಲ್ಲಿ ಅನ್ನಸಂತರ್ಪಣೆ—ಬಟ್ಟೆ ಬರೆಯ ದಾನ—ಮರದಬಾಗಿನ ಹೀಗೆ ಇತರರಿಗೂ ಅರ್ಪಿಸುವದನ್ನು ನೋಡಿದರೆ ಅವರೂ ಹಬ್ಬಗಳಲ್ಲಿ ಭಾಗಿಯಾಗಿ ಸಂತೋಷಪಡಬೇಕೆಂಬ ಭಾವನೆಯೊಂದಿಗೆ-ಆರ್ಥಿಕವಾಗಿ ಆಚರಿಸಲು ಸಾಧ್ಯವಾಗದವರಿಗೆ ಸಹಾಯಕವಾಗಿಯೂ ಅವಳ ಧಾರ್ಮಿಕ ಶ್ರದ್ಧೆ ಉಪಯೋಗವಾಗುತ್ತಿತ್ತು.

## ಧರ್ಮಕ್ಕಾಗಿ ಸಮರ್ಪಣೆ

ದೇಶದಲ್ಲಿ ಪರಕೀಯರು ಹೊಕ್ಕು ತಮ್ಮ ರಾಜ್ಯವನ್ನು-ಸ್ಥಾಪಿಸಿಕೊಂಡು ಅನ್ಯಾಯದಿಂದ ಸಂಪತ್ತನ್ನು ಸೂರೆಮಾಡಿಕೊಂಡು ಹೋದಾಗ ಅನಿವಾರ್ಯವಾಗಿ ಅನೇಕರು ಆಳುವವರ ಧರ್ಮವನ್ನು ಸ್ವೀಕರಿಸಿದರು. ಅಂಥ ಕಾಲದಲ್ಲಿಯೂ ಅಳಿದುಳಿದದ್ದನ್ನು ರಕ್ಷಿಸಿಕೊಂಡು ಬರಲು ಅನ್ಯಾಯದ ವಿರುದ್ಧ ಹೋರಾಡಲು ಚಿತ್ತೂರ ಪದ್ಮಿನಿಯಂಥ ಶೂರ ರಮಣಿಯರೂ ಇನ್ನೂ ಅನೇಕ ಸಾಮಾನ್ಯ ಸ್ತ್ರೀಯರೂ ಚಿತೆಯನ್ನೇರಿ ತಮ್ಮ ಜೀವನವನ್ನೆ ಧರ್ಮಕ್ಕಾಗಿ ಸಮರ್ಪಿಸಿದರು. ರಾಣಿ ಲಕ್ಷ್ಮೀಬಾಯಿ, ಕಿತ್ತೂರ ಚೆನ್ನಮ್ಮನಂಥವರು ತಮ್ಮ ಧಾರ್ಮಿಕ ಸಂಬಂಧದಲ್ಲಿ ಅಡ್ಡಬಂದು, ಸ್ವಾರ್ಥವನ್ನು ಸಾಧಿಸಿಕೊಂಡು ದೇಶ ಪಡೆಯಲು ಬಂದ ಪರಕೀಯರೊಡನೆ ಹೋರಾಡಿ ರಣಾಂಗಣದಲ್ಲಿ ಮಡಿದರು. ಶಿವಾಜಿ ಮಹಾರಾಜ ಹಿಂದೂಧರ್ಮವನ್ನು ಉಳಿಸಲು ರಾಜ್ಯವನ್ನು ಕಟ್ಟಲು ಮುಂದಾದುದು ಅವನ ತಾಯಿ ಜೀಜಾಮಾತೆಯ ಶಿಕ್ಷಣದಿಂದೆಂಬುದು ಸರ್ವರಿಗೂ ಗೊತ್ತಿದ್ದ ಮಾತು.




ನಿನಗೆ ನಾಳೆ ರಜೆ ಬೇಕಾದರೆ, ಬೆಳಿಗ್ಗೆ ಅರ್ಧ ಗಂಟೆ ಮಧ್ಯಾಹ್ನ ಮುಕ್ಕಾಲು ಗಂಟೆ; ಸಾಯಂಕಾಲ ಒಂದರ್ಧ ಗಂಟೆ, ಬಂದು ಕೆಲಸ ಮಾಡುತ್ತೀಯಾ?

ಎರಡು ಮಹಾಯುದ್ಧಗಳಾಗಿ ರಾಜಕೀಯ ಪರಿಸ್ಥಿತಿ ಬದಲಾಗಿ ವಿಜ್ಞಾನ ಮುಂದುವರೆದು ತೀರ ಕಡಿಮೆ ಸಮಯದಲ್ಲಿ ಜಗತ್ತಿನ ಯಾವ ಭಾಗವನ್ನೂ ತಲುಪುವಂತಾದಾಗಿನಿಂದ ಇತರರ ಅನುಕರಣೆಯಿಂದ ಧಾರ್ಮಿಕ ಆಚರಣೆಗಳ ಬಂಧನಗಳು ಸ್ವಲ್ಪ ಸಡಿಲಾದವು. ಧಾರ್ಮಿಕ ಶಿಕ್ಷಣದ ಅಭಾವ ಬೆಳೆಯುತ್ತಿರುವ ಜೀವನಮಟ್ಟದಿಂದ ಆರ್ಥಿಕ ಮುಗ್ಗಟ್ಟು ಹೆಚ್ಚಾಗಿ ಜನಸಂಖ್ಯೆಯ ಹೆಚ್ಚಳ ಮತ್ತು ವಿಜ್ಞಾನದ ಸಹಾಯದಿಂದ ಸಾವಿನ ಸಂಖ್ಯೆ ಕಡಿಮೆಯಾಗಿ ಜನಜೀವನ ನಿರ್ವಹಣೆಗಾಗಿ ಧಾರ್ಮಿಕ ಆಚರಣೆಗಳಿಗೆ ಸಮಯ ಸಾಲದಂತಾಗಿ ಪುರುಷರ ಹೆಚ್ಚು ಕಾಲ ಆಫೀಸು, ಫ್ಯಾಕ್ಟರಿಗಳಲ್ಲಿ ಕಳೆಯುವಾಗ ಸಂಪ್ರದಾಯವನ್ನು ಮುಂದುವರೆಸಿಕೊಂಡು ಬರುವ ಹೊಣೆ ಮಹಿಳೆಯರ ಮೇಲೆಯೇ ಬಂದಿತು.

## ಕರ್ತವ್ಯಭಾವನೆ

ಆದರೆ ಮಧ್ಯಕಾಲದ ಈ ಮಹಿಳೆಯರಿಗೆ ಅನೇಕ ರಾಜಕೀಯ ಮತ್ತು ಸಾಮಾಜಿಕ ಬಂಧನಗಳಿಂದ ಯೋಗ್ಯ ಶಿಕ್ಷಣ ದೊರೆಯದೆ ಧಾರ್ಮಿಕ ಆಚರಣೆಗಳನ್ನು ಅವಳು ಕೇವಲ ಒಂದು ಕರ್ತವ್ಯಭಾವನೆಯಿಂದ ಮುಂದುವರೆಸಿಕೊಂಡು ಬಂದಳು.

ಮುಂದೆ ಮಹಿಳೆಯರ ಪರಿಸ್ಥಿತಿ ಅಜ್ಞಾನ ಮತ್ತು ದಾಸ್ಯದಿಂದ ತೀರ ಶೋಚನೀಯವಾದಾಗ ಗಾಂಧೀಜಿ, ದಾದಾಭಾಯಿ ನವರೋಜಿ—ರಾಜಾ-ರಾಮಮೋಹನರಾಯರು, ಸ್ತ್ರೀ ಕರ್ತವ್ಯದ ಮಹತ್ವವನ್ನರಿತು ಅವರಿಗೆ ಸಮಾಜದಿಂದಾಗುವ ಅನ್ಯಾಯವನ್ನು ಸರಿಪಡಿಸಲು ಎಲ್ಲ ರಂಗಗಳಲ್ಲಿಯೂ ಅವಳಿಗೆ ಶಿಕ್ಷಣಕ್ಕೆ ಅವಕಾಶ ದೊರೆಯುವಂತೆ ಮಾಡಿದರು. ಅನೇಕ ವರ್ಷಗಳ ವರೆಗೆ ಪುರುಷಸಮಾಜದಿಂದ,ಅನ್ಯಾಯವನ್ನು ಸಹಿಸಿದ ಸ್ತ್ರೀ,ಪಾತಿವ್ರತ್ಯ ಧರ್ಮದ ವಿಶಾಲತ್ವದ ಕಡೆಗೆ ದುರ್ಲಕ್ಷ್ಯ ಮಾಡಿ ಸರಿಸಮಾನತೆಯ ತಳಹದಿಯ ಮೇಲೆ ತನ್ನ ಜೀವನವನ್ನು ರೂಪಿಸತೊಡಗಿದಳು. ತನ್ನ ಬದಲಾದ ವ್ಯಕ್ತಿತ್ವದೊಂದಿಗೆ ವಾಸಿಸುವ ಸ್ಥಳ— ಮಕ್ಕಳ ಮತ್ತು ಪತಿಯ ಶಾಲೆ-ಕಾಲೇಜುಗಳು ಇವುಗಳಿಗೆ ಹೊಂದಿಕೊಂಡು ತನ್ನ ವ್ಯಕ್ತಿವಿಕಾಸಕ್ಕೆ ಆತಂಕ ಬರದಂತೆ ಧಾರ್ಮಿಕ ಆಚರಣೆಗಳನ್ನು ಅಳವಡಿಸಿಕೊಂಡಳು. ಮೊದಲು ಧಾರ್ಮಿಕ ಆಚರಣೆಗಳೇ ಜೀವನವಿಕಾಸಕ್ಕೆ ಆಧಾರವಾದದ್ದು. ವಿಜ್ಞಾನ ಮತ್ತು ಉಚ್ಚ ಶಿಕ್ಷಣಗಳ ಕಾರಣದಿಂದ ಅನೇಕ ಸುಶಿಕ್ಷಿತರಿಗೆ ಜೀವನದಲ್ಲಿ ಈ ಆಚರಣೆಗಳು ಗೊಡ್ಡು ಸಂಪ್ರದಾಯ ಎನ್ನಿಸತೊಡಗಿ ಶ್ರದ್ಧೆ ಕಡಿಮೆಯಾಗತೊಡಗಿತು.

ಆದರೂ ಕೆಲ ಮಹಿಳೆಯರು ಆಚಾರವನ್ನು ಬಿಡದೆ ಅಂತರಂಗದಲ್ಲಿ ಶ್ರದ್ಧೆ ಇಲ್ಲದಿದ್ದರೂ ಕೇವಲ ಹೆದರಿಕೆಗಾಗಿ ಧರ್ಮವನ್ನು ಶ್ರದ್ಧೆಯಿಂದ ನಡೆಸುತ್ತ ಬಂದರು. ಹೀಗೆ ಉಳಿದು ನಡೆದುಬಂದ ಸಂಪ್ರದಾಯಗಳಿಗೆ ವಿಜ್ಞಾನದ ಆಧಾರಗಳು ಶಿಕ್ಷಣದಿಂದ ಆಗಾಗ ದೊರೆತಾಗ ಮತ್ತೆ ಧಾರ್ಮಿಕ ಶ್ರದ್ಧೆ ಚೇತರಿಸಕೊಳ್ಳಹತ್ತಿತು.

ಉದಾ :— ತುಳಸೀಪೂಜೆಯನ್ನು ಒಂದು ಸಂಪ್ರದಾಯವೆಂದು ಭಾವಿಸದ ಅನೇಕ ಆಧುನಿಕ ಮಹಿಳೆಯರು ಇಂದು ಅದರಲ್ಲಿಯ ಔಷಧೀ ಗುಣ ತಿಳಿದಾಗ ಅದನ್ನು ಶ್ರದ್ಧೆಯಿಂದ ಕಾಪಾಡಬೇಕು ಎಂದು ಅರಿತಿದ್ದಾರೆ.

ಪ್ರತಿ ಆಚರಣೆಗೂ ವಿಜ್ಞಾನದ ಆಧಾರವನ್ನು ಅವಳು ಬೇಡದಿದ್ದರೂ ಅನೇಕ ಸಲ ಆಕಸ್ಮಿಕ

ಘಟನೆಗಳು ಅವಳ ಶ್ರದ್ಧೆಯನ್ನು ಕಡಿಮೆ ಮಾಡುತ್ತವೆ. ಉದಾ:ಒಬ್ಬ ಶ್ರದ್ಧಾವಂತ ಮಹಿಳೆ ಮಂಗಳಗೌರಿ ವ್ರತವನ್ನು ಅಲಂಕೃತಳಾಗಿ ಆಚರಿಸುವಾಗ ಪತಿಗೆ ಆಫೀಸಿಗೆ ಹೋಗಲು ತಡವಾಯಿತು. ಓಡೋಡುತ್ತ ಹೋಗಿ ಬಸ್ಸು ಹಿಡಿಯುವಾಗ ಆಕಸ್ಮಿಕ ಅಪಘಾತದಿಂದ ಆತ ಸ್ಥಳದಲ್ಲಿಯೇ ಮರಣ ಹೊಂದುತ್ತಾನೆ. ಗೌರೀ ಪ್ರಸಾದವನ್ನು ಭಕ್ತಿಯಿಂದ ಸ್ವೀಕರಿಸುತ್ತಿರುವಾಗಲೇ ಬಾಗಿಲಲ್ಲಿ ಸಪ್ಪೆಮುಖದ ನಾಲ್ಕು ಜನ ಬಂದು ಈ ಮರಣ ಸಮಾಚಾರವನ್ನು ಹೇಗೆ ಹೇಳುವದು ಎಂದು ಸಂಕೋಚಪಡುತ್ತ ಹೇಳಿದಾಗ ಹೂವಿನ ಮಧ್ಯದಲ್ಲಿ ಅಡಗಿದ ಮಂಗಳಗೌರಿ ಮಹಿಳೆಗೆ ಮಂಗಳವನ್ನು ತರದೇ ಇದ್ದಾಗ ಅವಳ ಶ್ರದ್ಧೆ ದೃಢವಾಗಿ ಉಳಿದೀತೆ? ಅದು ಕಡಿಮೆಯಾಗುವದು ಸ್ವಾಭಾವಿಕವೆ. ಆದರೂ ಶ್ರದ್ಧಾವಂತ ಮಹಿಳೆ ಪೂರ್ವಜನ್ಮದ ಕರ್ಮವೆಂದೋ ಮುಂದಿನ ಜನ್ಮಕ್ಕೆ ದಾರೀಬುತ್ತಿ ಎಂದೊ ಮತ್ತೆ ಅದೇ ವ್ರತವನ್ನು ಹೆಣ್ಣುಮಕ್ಕಳಿಗೆ ಹೇಳಿಕೊಟ್ಟಾಗ ದಿನನಿತ್ಯ ಚಂದ್ರಲೋಕ ಅಂತರಿಕ್ಷದ ವಾರ್ತೆಯನ್ನು ಪತ್ರಿಕೆಯಲ್ಲಿ ಓದುವ ಅವರು ಮಣ್ಣಿನ ಬೊಂಬೆ ಪೂಜಿಸಿದರೆ ಪತಿ ಬದುಕುವನೆ? ಇದನ್ನೆಲ್ಲ ಮಾಡಿ ಯಾಕೆ ವೇಳೆಯನ್ನು ಹಾಳುಮಾಡಿಕೊಳ್ಳಬೇಕು? ಹುತ್ತದಲ್ಲಿ ಹಾಲು ಸುರುವಿದರೆ ಏನು ಪ್ರಯೋಜನ? ಎಂಬ ಪ್ರಶ್ನೆಗಳನ್ನು ಕೇಳಿದರೆ ಸಮರ್ಪಕವಾದ ಉತ್ತರವನ್ನು ಹೇಳಲು ಇಂದಿನ ತಾಯಿಯಂತೂ ಸರಿ "ಪಂಡಿತ"ರೂ ಅಸಮರ್ಥರಾಗಿದ್ದಾರೆ. "ಸುಮ್ಮನಿರಿ ನಮ್ಮ ಹಿರಿಯರಿಗೆ ನಾವು ಹೀಗೆ ಅಡ್ಡತಿಡ್ಡ ಪ್ರಶ್ನೆ ಕೇಳಿರಲಿಲ್ಲ" ಎಂದು ಹೇಳಿ ಅವರ ಬಾಯಿ ಮುಚ್ಚಿಸಿದರೆ ಅವರು ಮರು ಪ್ರಶ್ನೆಯನ್ನು ಕೇಳಲಿಕ್ಕಿಲ್ಲ— ಆದರೆ ಅಂಥ ವಿಶ್ವಾಸವನ್ನೂ ಇಡುವದಿಲ್ಲ. "ಹೀಗೆ" ಎಂದು ಒಂದು ಪೌರಾಣಿಕ ಕಥೆಯನ್ನು ಹೇಳಿದರೂ ಇಂದಿನ ಮಕ್ಕಳು ನಂಬುವದು ಸಾಧ್ಯವಿಲ್ಲ. ಪಾತಿವ್ರತ್ಯದ ಮಹಿಮೆಯನ್ನು ಹೇಳುವಾಗ, ಕುಂಟ ಪತಿಯನ್ನು ತೊಟ್ಟಲಲ್ಲಿ ಕೂಡಿಸಿಕೊಂಡು, ವೇಶ್ಯೆಯ ಮನೆಗೆ ತಲುಪಿಸುವಾಗ, ಮಾಂಡವ್ಯಋಷಿಯನ್ನು ತಪ್ಪಿ ಎಡವಿ, ಸೂರ್ಯ ಬರುವದರಲ್ಲಿ ವಿಧವೆಯಾಗೆಂದು ಆತನಿಂದ ಶಾಪ ಕೇಳಿದಾಕ್ಷಣ ಸೂರ್ಯನು ಉದಯಿಸುವದನ್ನೇ ತಡೆದಳು ಎಂಬ ನಾಳಾಯಣಿಯ ಕಥೆಯನ್ನು ಇಂದು ಹೇಳಿದರೆ ನಮ್ಮ ಹೆಣ್ಣುಮಕ್ಕಳಲ್ಲಿ ಎಷ್ಟು ಜನ ನಂಬುತ್ತಾರೆ? ಅಥವಾ ಅಂಥ ಪಾತಿವ್ರತ್ಯಧರ್ಮದಲ್ಲಿ ನಂಬಿಗೆ ಇಡುತ್ತಾರೆ?



## ಶ್ರದ್ಧೆಯ ರೂಪದಲ್ಲಿ ಬದಲಾವಣೆ

ನಂಬಿಗೆ ಕಡಿಮೆಯಾಗಿದೆ ಎಂದು ಇಂದಿನ ಮಹಳೆಯರು ಧರ್ಮದಲ್ಲಿ ಶ್ರದ್ಧೆ ಇಟ್ಟಿಲ್ಲ ಎನ್ನಲಾಗುವದಿಲ್ಲ. ಶ್ರದ್ಧೆಯ ರೂಪ ಬದಲಾಗಿದೆ ಅಷ್ಟೆ. ನಾಳಾಯಣಿಯ ಕಥೆಯನ್ನು ಕೇಳಿದ ಇಂದಿನ ಮಹಿಳೆ— ಪತಿಯನ್ನು ವೇಶ್ಯೆಯ ಮನೆಗೆ ಮುಟ್ಟಿಸುವದು ಅದೆಂಥ ಧರ್ಮ, ಆಧುನಿಕ ವಿಜ್ಞಾನದಿಂದ ಕೃತ್ರಿಮ ಸಹಾಯದಿಂದ ಅವನ ಕಾಲು ಸರಿಪಡಿಸಲು ಯತ್ನಿಸುವದು ಮೊದಲ ಕರ್ತವ್ಯವಲ್ಲವೆ? ಅವನು ವೇಶ್ಯೆಯ ಮನೆಗೆ ಯಾಕೆ ಹೋಗುತ್ತಾನೆ. ನನ್ನಲ್ಲೇನು ಕಡಿಮೆಯಾಗಿದೆ? ಆ ನ್ಯೂನತೆಯನ್ನು ನಾನು ಮೊದಲು ಸರಿಪಡಿಸಿಕೊಳ್ಳಬೇಕು ಎಂಬ ಒಂದು ಶ್ರದ್ಧೆಯಿಂದ ಪ್ರಯತ್ನಿಸಿ ಧರ್ಮಮಾರ್ಗದಲ್ಲಿಯೇ ನಡೆದು ತನ್ನ ಪತಿಯನ್ನು ಆ ಮಾರ್ಗದಲ್ಲಿ ನಡೆಸಲು ಪ್ರಯತ್ನಿಸುತ್ತಾಳೆ.

ಧರ್ಮದ ಮೂಲ ಒಂದೇ ಇದ್ದರೂ ಕಾಲಮಾನಕ್ಕನುಸರಿಸಿ ವ್ಯಕ್ತಿಗತವಾದ ಸ್ವಭಾವಧರ್ಮದಿಂದ ಅದರ ರೂಪ ಬದಲಾಗಿದೆ. ಹಿಂದಿನ ಅನೇಕ ಧಾರ್ಮಿಕ ಸಂಪ್ರದಾಯಗಳು ಇಂದು ಸಾಂಸ್ಕೃತಿಕ ಹಿನ್ನೆಲೆಯೊಂದಿಗೆ ಜನಜೀವನದಲ್ಲಿ ಕಲಾಭಿರುಚಿಯನ್ನು ಬೆಳೆಸಲು ಸಾಧನಗಳೆಂದು ಪರಿಗಣಿಸಲಾಗಿದೆ. ವಿಶೇಷವಾಗಿ ಮಹಿಳೆಯರಿಗೆ ಸಂಗೀತ-ರಂಗವಲ್ಲಿ-ಅಡಿಗೆ-ಶೃಂಗಾರಗಳನ್ನು ಬೆಳೆಸಿ ಉಳಿಸಿಕೊಳ್ಳಲು ಸಹಾಯಕವಾಗಿವೆ. ಅನೇಕ ಸಂಪ್ರದಾಯಗಳಿಗೆ ಧಾರ್ಮಿಕ ಹಿನ್ನೆಲೆ ಇರಲಿ ಇರದೆ ಇರಲಿ-ಅದೊಂದು ಸಂಪ್ರದಾಯವೆಂದು ಸ್ತ್ರೀಯರು ನಡೆಸಿಕೊಂಡು ಬರುತ್ತಾರೆ- ಉದಾ: ನವರಾತ್ರಿ ಹಬ್ಬವನ್ನೆ ತೆಗೆದುಕೊಳ್ಳಬಹುದು. ಈ ನಾಡಹಬ್ಬಕ್ಕೆ ಅನೇಕ ಐತಿಹಾಸಿಕ ಕಥೆಗಳಿದ್ದರೂ ಮೈಸೂರಿನ ಸ್ತ್ರೀಯರು ಆ ಕತೆಗಳಿಗೆ ಸಂಬಂಧವಿಲ್ಲದ ಬೊಂಬೆ ಇಡುವ ಸಂಪ್ರದಾಯವನ್ನು ಪಾಲಿಸುತ್ತಾರೆ. ಲಕ್ಷ್ಮೀ-ನಾರಾಯಣರ ಬೊಂಬೆ ಜತೆಯಲ್ಲಿ ಅನೇಕ ಚಿತ್ರ ವಿಚಿತ್ರ ವಸ್ತುಗಳನ್ನು ಕಲಾಪೂರ್ಣವಾಗಿ ಇಟ್ಟು ಬಣ್ಣದ ದೀಪಗಳಿಂದ ಅಲಂಕರಿಸಿ-ಒಂದು ನವೀನ ಕಲ್ಪನಾಸಾಮ್ರಾಜ್ಯವನ್ನೇ ಸ್ಥಾಪಿಸುತ್ತಾರೆ. ಮನೆಗೆ ಬಂದ ಮಹಿಳೆಯರಿಗೆ ಅರಿಶಿಣಕುಂಕುಮ ಕೊಡುವಾಗ ಹಾಡು ಹೇಳಲು ಕೇಳಿಕೊಳ್ಳುತ್ತಾರೆ. ಸಾಮಾನ್ಯ ಮಹಿಳೆ ತಮ್ಮ ಸಂಗೀತಕಲೆ ಪ್ರದರ್ಶಿಸಲು ಇದೇ ಒಂದು ಸುಸಂದರ್ಭವೆಂದು ಭಾವಿಸಿ ಬಂದದ್ದನ್ನು ಹೇಳುತ್ತಾಳೆ. ಇಂಥ ಹಬ್ಬಗಳು ಮಹಿಳೆಯರಿಗೆ ಸಾಮಾಜಿಕವಾಗಿ ಬೆರೆಯಲು ಕಲೆಯನ್ನು ಪ್ರದರ್ಶಿಸಲು ಅವಕಾಶ ಒದಗಿಸಿಕೊಡುವದರಿಂದ ಮಹಿಳೆ ಅದನ್ನೊಂದು ಧಾರ್ಮಿಕ ಸಂಪ್ರದಾಯವೆಂದೇ ಭಾವಿಸಿ ಅದನ್ನು ಮುಂದುವರೆಸಿಕೊಂಡು ಬರುತ್ತಾಳೆ.



## ಮಾರ್ಗದರ್ಶಿಕೆ

ಹಿಂದಿನಿಂದಲೂ ಸ್ತ್ರೀಯು ಪುರುಷರೊಂದಿಗೆ ಧಾರ್ಮಿಕಕಾರ್ಯಗಳಲ್ಲಿ ಆಧ್ಯಾತ್ಮದಲ್ಲಿಯೇ ಆಗಲಿ-ಬಾಹ್ಯ ಆಚರಣೆಯಿಂದಲೇ ಆಗಲಿ-ಸಾಮಾಜಿಕವೇ ಆಗಲಿ ಜತೆ ಜತೆಯಾಗಿಯೇ ನಡೆದು ಬಂದಿದ್ದಾಳೆ. ಅನೇಕ ಸಲ ಅವನಿಗೆ ಮಾರ್ಗದರ್ಶಕಳೂ ಆಗಿದ್ದಾಳೆ. ಇತ್ತೀಚಿನ ಮಹಿಳೆಯಲ್ಲಿ ಕಸ್ತೂರಬಾ ಅವರನ್ನು ಉದಾಹರಿಸಬಹುದು. ಸಾಂಸಾರಿಕ ಜೀವನದಲ್ಲಿದ್ದರೂ ಆತ್ಮೋನ್ನತಿಯನ್ನು ಸಾಧಿಸುವ ಶಿಕ್ಷಣವನ್ನು ಶಾರದಾಮಾತೆ ಅರವಿಂದಾಶ್ರಮದ ಮಾತೆಯರು ಸುಲಭವಾಗಿ ಸಾಮಾನ್ಯರಿಗೆ ತಿಳಿಹೇಳಿದ್ದಾರೆ.

ಮಹಿಳೆಯರಿಗೆ ಧಾರ್ಮಿಕ ಶಿಕ್ಷಣವೆಂದರೆ ಯಾರಾದರೂ ಯಾವ ಕಾಲಕ್ಕೂ ಆಶೀರ್ವದಿಸುವದು ಒಂದೆ. ಒಳ್ಳೇ ಬಾಳನ್ನು ಬಾಳು, ಇತರರಿಗೆ ಸಹಾಯಕಳಾಗು ಸುಪುತ್ರನನ್ನು ಪಡೆ ಹಿರಿಯರನ್ನು ಗೌರವಿಸು. ಇತ್ಯಾದಿ ಇತ್ಯಾದಿ....

ಈ ಮಾತುಗಳ ಆಧಾರದಿಂದಲೇ ಮಹಿಳೆಯಲ್ಲಿ ಇನ್ನೂ ಧರ್ಮ ಉಳಿದಿದೆ ಎಂದು ಹೇಳಬೇಕಾಗಿದೆ. ಕಾರಣ ಹಿಂದಿನ ಮಹಿಳೆ ಮಾಡುವದನ್ನೇ ಇಂದಿನವಳೂ ಮಾಡುತ್ತಿದ್ದಾಳೆ. ಕಾಲ ಬದಲಾದರೂ! ಕುಟುಂಬ ಒಂದಿದ್ದಾಗ ಹಿರಿಯರನ್ನು ಗೌರವಿಸಿ ಸತ್ಯದಿಂದ ನಡೆದು ಅತ್ತೆ-ಮಾವಂದಿರ ಸೇವೆಯನ್ನು ಮಾಡುತ್ತಿದ್ದಳು. ಇಂದು ಕುಟುಂಬ ಒಡೆದು ಮುದುಕರ ಸಮಸ್ಯೆಎದುರಿಗೆ ಬಂದಾಗ-ಅನಾಥರ ಕಷ್ಟ ಕಣ್ಣಿಗೆ ಕಂಡಾಗ 'ಸಮಾಜ ಕಲ್ಯಾಣ' ಎಂಬ ಹೆಸರಿನಿಂದ ಅನಾಥರಿಗೆ ರಕ್ಷಣೆಯನ್ನೂ—ಮುದುಕರ ಸಮಸ್ಯೆಯನ್ನೂ ಬಿಡಿಸಲು ವ್ಯಕ್ತಿಗತವಾಗಿ ಮತ್ತು ಸಾಮೂಹಿಕವಾಗಿ ಇಂದಿನ ಸ್ತ್ರೀಯರು ಪ್ರಯತ್ನಿಸುತ್ತಾರೆ—ಇದನ್ನು ನೋಡಿದಾಗ ಹಿರಿಯರ ಮನಸ್ಸು ಸ್ವಲ್ಪ ಮುದುಡೆಯಾಗಿ "ಧರ್ಮ" ಉಳಿದಿಲ್ಲ. "ಅಪ್ಪ ಎನ್ನಲು ಒಪ್ಪತ್ತಿನ ಕೂಲಿ ಬೇಕು" ಎಂಬ ಉದ್ಗಾರವನ್ನು ತೆಗೆಯುತ್ತಾರೆ. ಸಂಪ್ರದಾಯವನ್ನು ಉಳಿಸಿಕೊಂಡು ಸಮಾಜ ಕಲ್ಯಾಣದ ಮಾರ್ಗದಲ್ಲಿ ಮುನ್ನಡೆದರೆ ಮಾತ್ರ ಮಹಿಳೆಯರು ನಿಜವಾದ ಗೌರವಕ್ಕೆ ಪಾತ್ರರಾಗಿ ನಮ್ಮ ಸ್ತ್ರೀಯರಿಂದಲೇ ಧರ್ಮ ಉಳಿದಿದೆ ಎಂಬ ಮಾತಿಗೆ ಆದರ್ಶವಾಗುತ್ತಾರೆ.

ಲೇಖಕರು :
ಶ್ರೀ. ಮಿರ್ಜಿ ಅಣ್ಣಾರಾಯರು,
ಶೇಡಬಾಳ

# ಪುರುಷಾರ್ಥವೆಂದರೆ...?

ಭಾರತದ ತರುಣರು ಪೌರುಷಕ್ಕೆ ಹೆಸರಾದವರು. ಅವರ ವೀರಶ್ರೀ ಖ್ಯಾತ-ವಾದುದು. ಆದರೆ ಇಂದು ನಡೆದಿರುವದೇನು ? ಪುರುಷಾರ್ಥವೆಂದು ಯಾವುದನ್ನು ನಮ್ಮ ತರುಣರು ಭಾವಿಸಿಕೊಂಡಿದ್ದಾರೆ ? ವಂಚನೆ - ಮೋಸಗಳೇ ಪುರುಷಾರ್ಥವೆಂದು ಅವರು ಬಗೆದಿದ್ದಾರೆಯೆ ? ಇಲ್ಲವಾದರೆ ಅವರು ನಡೆಯುತ್ತಿರುವ ಈ ದಾರಿಯ ಅರ್ಥವೇನು ? ಇಂದಿನ ಪುರುಷಾರ್ಥ ಸಾಧನೆ ಯಾವುದು ? ಇವೆಲ್ಲವಕ್ಕೂ ಲೇಖಕರು ಇಲ್ಲಿ ತಮ್ಮದೇ ಆದ ಬಗೆಯಲ್ಲಿ ಉತ್ತರವನ್ನು ಕೊಡಲು ಯತ್ನಿಸಿದ್ದಾರೆ,

ನಮ್ಮೂರ ಪುರೋಗಾಮಿ 'ತರುಣರ ತಂಡ'ದ ಸದಸ್ಯರು ಪುರುಷಾರ್ಥವೆಂದರೆ ಏನೆಂದು ಅರ್ಥ ಮಾಡಿರುವರು ಗೊತ್ತೊ ? ಸ್ವತಂತ್ರ ಭಾರತದ ಸರ್ವತಂತ್ರ ಸ್ವತಂತ್ರ—ಅಂದರೆ ಅವರ ಅರ್ಥದಲ್ಲಿ ಸ್ವೈರವಲ್ಲ ಮತ್ತೆ !—ಜೀವನವನ್ನು ಸಾಗಿಸುವಿಕೆ ! ಪ್ರಜಾಪ್ರಭುತ್ವವೆಂದ ಮೇಲೆ ಯಾರ ಅಧಿಕಾರವೂ ಯಾರ ಮೇಲೆಯೂ ನಡೆಯುದಂಥ—ತಮ್ಮ ಮೇಲೆ ಮತ್ತೆ ಯಾರ ಅಧಿಕಾರವೂ ಇಲ್ಲವೆಂಬಂಥ ಸಂಪೂರ್ಣ ಸ್ವತಂತ್ರಜೀವನಕ್ರಮವೆಂದರೇನೇ ಪುರುಷಾರ್ಥಸಾಧನೆ ! ಇಂಥ ಅವರ ಪುರುಷಾರ್ಥ ಸಾಧನೆಯಿಂದಲೇ ಅವರಿಗೆ ಊರೆಲ್ಲ ಸ್ವಾಧೀನವಾಗಿರುವುದು !

ಸುತ್ತಲಿನ ಜನರನ್ನು ಗಾಂಭೀರ್ಯದಲ್ಲಿಯೇ ಹೆದರಿಸುತ್ತ ಬಾಳುವುದರಲ್ಲಿ ಪುರುಷಾರ್ಥವಿದೆಯಷ್ಟೆ. ಪುರುಷ ಎಂದರೆ ಗಂಡು. ಪುರುಷಾರ್ಥ ಎಂದರೆ ಗಂಡಸುತನ. ಅದೆಲ್ಲ ಗಂಡಸರಾದ ತಮ್ಮ ಪಾಲಿಗೇ ಮೀಸಲು ಎಂದವರ ಅಭಿಪ್ರಾಯ. ಪುರುಷಾರ್ಥವೆಂದರೆ ಮಾನವಜೀವನದ ಸಾರ್ಥ




ಕತೆಯ ಸೂತ್ರ. ಅದು ಹೆಂಗಸರಿಗು ಕೂಡ ಅನ್ವಯಿಸಬಲ್ಲದು—ಎಂಬುದನ್ನು ಯಾರು ಸೂಚಿಸಬಲ್ಲರು ಈ ತರುಣರಿಗೆ ? ತಮ್ಮನ್ನುಳಿದು ಮೀಸೆ ಹೊತ್ತ ಬೇರೆ ಪುರುಷರಿಗೂ ಪುರುಷಾರ್ಥ ಸಾಧನೆಯ ಅಧಿಕಾರವಿಲ್ಲವೆಂದು ಭಾವಿಸಿದ ಈ ಸಭ್ಯರಿಗೆ ! ಉಳಿದವರೆಲ್ಲ ಇವರಂತೆ ಅನ್ಯರ ಹೊಲ ಮನೆಗಳನ್ನು ಆಕ್ರಮಿಸಿ, ಅನ್ಯ ನಾರಿಯರ ಸತೀ-ತ್ವವನ್ನು ಅಪಹರಿಸಿ ಬಾಳುತ್ತಿಲ್ಲವಲ್ಲ ! ಅಂದ ಮೇಲೆ ಅವರೇನು ಪುರುಷಾರ್ಥ ಸಾಧಿಸಿದಂತಾಯಿತು ?

ನಮ್ಮ ಪೂರ್ವಿಕರು ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂದು ನಾಲ್ಕು ಪುರುಷಾರ್ಥಗಳನ್ನು ಪ್ರತಿಯೊಬ್ಬ ಮಾನವನೂ ಸಾಧಿಸಬೇಕೆಂದು ಸಾರಿದ್ದಾರೆಂಬುದನ್ನು ಎಲ್ಲರೂ ಬಲ್ಲರು. ಎಲ್ಲರಂತೆ ಈ ತರುಣರೂ ಬಲ್ಲರು ! ಆದರೆ ಸತ್ತ ಮೇಲೆ ಸಿಗುವ ಸ್ವರ್ಗ-ಮೋಕ್ಷಗಳತ್ತ ಅವರ ಗಮನವೇ ಇಲ್ಲ. 'ಋಣಂ ಕೃತ್ವಾ ಘೃತಂ ಪಿಬೇತ್'ಎಂಬ ಅಮೃತವಾಕ್ಯವನ್ನಂತೂ ಅವರು ನಿತ್ಯವೂ ಪಠಿಸುತ್ತಲೇ ಇರುತ್ತಾರೆ. ಇಷ್ಟೇ ಅಲ್ಲ ; ಇವರು ಕೇವಲ ವಚನಶೂರರಲ್ಲ. ನುಡಿದಂತೆ ನಡೆಯಬೇಕೆನ್ನುವ ವೀರಚಾರಿತ್ರ್ಯಧಾರಿಗಳಿವರು ! ಪರರದನ್ನು ತಕ್ಕೊಂಡದ್ದೇನೂ ಕೊಟ್ಟೇ ಸಾಯಬೇಕೆಂಬ ನಿಯಮವೇನಿಲ್ಲವೆಂದೇ ಅವರ ಕೊಡಕೊಳ್ಳುವಿಕೆಯ ಧರ್ಮವಾಗಿದೆ.! ಇದರಲ್ಲಿ ಅವರು ಇನ್ನೊಬ್ಬರಿಗೆ ಕೊಟ್ಟುದಕ್ಕೆ ಮಾತ್ರ ಈ ಸೂತ್ರವು ಅನ್ವಯಿಸಲಾರದು. ತಮ್ಮದನ್ನು ನಿಂತ ಕಾಲ ಮೇಲೆ ವಸೂಲು ಮಾಡುವ ಪುರುಷಾರ್ಥ ಅವರಲ್ಲಿದೆ. ಅಂಥ ಸಿದ್ಧಿಯನ್ನು ಅವರು ಪಡೆದಿದ್ದಾರೆ.

ಈ ತರುಣರ ತಂಡದ ಸದಸ್ಯರೊಬ್ಬರಿಗೆ ನೂರಿನ್ನೂರು ರೂಪಾಯಿಗಳನ್ನು ಕೊಟ್ಟು ಕೈಸುಟ್ಟುಕೊಂಡ ಹಿರಿಯರೊಬ್ಬರು ಅವರಿಗೆ ಒಮ್ಮೆ ಒಂದು ಕಥೆಯನ್ನು ಹೇಳಿದರಂತೆ. ಕಥೆಯೇನೋ ಅರ್ಥಪೂರ್ಣವಾದುದು ; ಸ್ವಾರಸ್ಯವಾಗಿಯೂ ಹೇಳಬಲ್ಲರವರು :—ದನಗಳ ವ್ಯಾಪಾರದಲ್ಲಿ ದಲಾಲಿಯನ್ನು ಮಾಡುವುದಕ್ಕಾಗಿ—ಹಳ್ಳಿಗರ ಮಾತಿನಲ್ಲಿ 'ಹೇಡಿತನ'ವೆಂದು ಈ ಉದ್ಯೋಗದ ಹೆಸರಾಗಿದೆ.—ಸಂತೆಗೆ ಹೋದ ನಾಲ್ವರು ಊರಿಗೆ ಮರಳಿದ್ದರಂತೆ. ಸಾಯಂಕಾಲದ ವರೆಗೂ ದನಗಳ ಸಂತೆಯಲ್ಲಿ ಅವರು ಕೆರವುಗಳನ್ನು ಧೋತರದಲ್ಲಿ ಕಟ್ಟಿ 'ರೊಟ್ಟಿಯನ್ನುಮುಟ್ಟಿ ಆಣೆಮಾಡಿ ಸತ್ಯ ಹೇಳುವೆ'ನೆಂದು ಅವುಗಳನ್ನು ಮುಟ್ಟಿ ಹೇಳಿ ಹೇಳಿ ಅನೇಕ ದನಕರುಗಳನ್ನು ಗಿರಾಕಿಗಳ ಕೊರಳಿಗೆ ಕಟ್ಟಿದ ವಚನಶೂರರವರು. ಯಾವುದೋ ಸತ್ತ ಎಮ್ಮೆಯ ಕರುವೂ ಈಗಿರುವ ಎಮ್ಮೆಯ ಕರುವಾಗಬಲ್ಲುದು, ಅವರ ವಾಕ್‌ಚಾತುರ್ಯದಲ್ಲಿ ! ಒಂದು ವರ್ಷದ ಹಿಂದೆ ಕಂದಹಾಕಿದ ಎಮ್ಮೆ, ಆಕಳುಗಳು ಸಹ ಈಗ ಎಳಗಂದಿಯಾಗಬಲ್ಲುವು ಅವರ ರೊಟ್ಟಿಯ ಆಣೆಯಲ್ಲಿ ! ಇಲ್ಲದಿದ್ದರೆ ಒಂದು ಸಂತೆಗೆ ಹೋದರೆ ಇಂಥ ಗುಂಪು ತಲಾ ಹತ್ತೆಂಟು ರೂಪಾಯಿ ಗಳಿಸದೆ ಊರಿಗೆ ಮರಳುವುದುಂಟೆ ?

ಇಂಥ ಸಜ್ಜನರು ನಾಲ್ವರು ಸಂಜೆಯ ವರೆಗೆ ಸಂತೆಯಲ್ಲಿ ಪುರುಷಾರ್ಥ ಸಾಧಿಸಿ, ಊರಿಗೆ ಮರಳುವಾಗ ದಾರಿಯಲ್ಲಿ ಇದ್ದ ಒಂದು ತೋಟದ ಬಾವಿಯ ಮೇಲೆ ಊಟದ ಬುತ್ತಿಯ ಗಂಟನ್ನು ಬಿಚ್ಚಲಿಕ್ಕೆ ಹೋದರಂತೆ. ಇವರ ಹಣೆಯಮೇಲಿನ ಗಂಧ, ಮುಖದ ಮೇಲಿನ ಸೌಜನ್ಯ, ಉಡಿಗೆ-ತೊಡಿಗೆಯೊಳಗಿನ ಸಭ್ಯತೆಗಳನ್ನೆಲ್ಲ ಕಂಡ ತೋಟಿಗನು ಸಹಜ ಹೇಳಿದನಂತೆ ;—"ದನಕರುಗಳೂ ಜನರೂ ನೀರಿಗೆ ಬರುವ ಹೊತ್ತು. ಈಗ ಬಾವಿಯ ಬದಿಯಲ್ಲಿ ಊಟಕ್ಕೆ ಕೂಡುವುದು ವಿಹಿತವಲ್ಲ. ಒಳಗೆ ತೋಟದಲ್ಲಿ ಮೆಣಸಿನ ಗಿಡಗಳಲ್ಲಿ ಸ್ವಚ್ಛ ನೆಲವಿದೆ. ನಾಲ್ಕು ಮೆಣಸಿನ ಕಾಯಿಗಳನ್ನು ಹರಿದು ರೊಟ್ಟಿಯ ಕೂಡ ತಿನ್ನಲೂ ತಕ್ಕೊಳ್ಳಲಿಕ್ಕಾಗುವುದು. ಅಲ್ಲಿಯೇ ಊಟಕ್ಕೆ ಹೋಗಿರಿ.." ಇದು ತೋಟದೊಡೆಯನ ಸಜ್ಜನಿಕೆಯುಳ್ಳ ಉದಾರ ಸೂಚನೆಯು.

ಅಷ್ಟೇ ಸಾಧಿಸಿತೆಂದರು ಈ ಸಭ್ಯರು ! ತೋಟದೊಳಗೆ ಊಟಕ್ಕೆ ಹೋದರು. ಮಾಲಕನಂತೂ ಧರ್ಮನಿಷ್ಠನಾಗಿ ಮೆಣಸಿನಕಾಯಿಗಳನ್ನು ಹರಿದು

ಕೊಳ್ಳಲು ಸೂಚನೆಯನ್ನಂತೂ ಕೊಟ್ಟುಬಿಟ್ಟಿದ್ದನು. ಇವರಿಗೆ ಊಟದ ಅವಸರಕ್ಕಿಂತ— ಊಟವನ್ನು ಮನೆಗೆ ಹೋಗಿ ಮಾಡಿದರೂ ನಡೆದೀತಲ್ಲ!- ಮೆಣಸಿನಕಾಯಿಗಳನ್ನು ಹರಿದು ಕೈಚೀಲ ತುಂಬುವ ಅವಸರವೇ ಹೆಚ್ಚಾಯಿತು. ಜಾಗ್ರತೆಯಿಂದ ಗೊತ್ತಾದ ಹೊತ್ತಿನಲ್ಲಿ ಕೆಲಸ ಸಾಧಿಸುವ ಚದುರರವರು. ಇಂಥ ಕೈಚಳಕವಿಲ್ಲದವರಿಗೆ ಸಂತೆಯಲ್ಲಿ ಮಾತನಾಡಿ ಅರ್ಥಸಂಪಾದನೆಯನ್ನು ಮಾಡುವುದು ಸಾಧ್ಯವಿತ್ತೇ? ಅವರು ನಡೆ-ನುಡಿಗಳಲ್ಲೆಲ್ಲ ಸಮಪ್ರಮಾಣದಲ್ಲಿಯೇ ಪ್ರವೀಣರು ತಾನೆ! 'All Round'ರು!

ಇವರ ಆತುರದ ಅವಸರದ ಚಟುವಟಿಕೆಯನ್ನು ಕಂಡೋ... ಇವರ ಮನದ ಇಂಗಿತವನ್ನು ಅರಿತೋ ಏನೋ ಯಾರೋ ಗಹಗಹಿಸಿ ನಕ್ಕ ಸದ್ದಾಯಿತು. ಸ್ವಲ್ಪ ತಮ್ಮ ಈ ನಡುಗಾಲದ ಉದ್ಯೋಗದಲ್ಲಿ ವಿಶ್ರಾಂತಿಯನ್ನು ತಕ್ಕೊಂಡು, ಕಾಲದ ಅಪವ್ಯಯವನ್ನು ಗಮನಿಸದೆ, ಸುತ್ತಲೂ ನಿರೀಕ್ಷಿಸಿದರು. ತೋಟದ ಒಡೆಯನಂತೂ ನಿಃಶಂಕವೃತ್ತಿಯವನು. ಅವನು ತನ್ನ ನಿತ್ಯದ ಉದ್ಯೋಗದಲ್ಲಿ ತೊಡಗಿದ್ದಾನೆ. ಈ ಅತಿಥಿಗಳ ಕಡೆಗೆ ಅವನ ಗಮನವೇ ಇಲ್ಲ... ಪಾಪ! ಇವರೂ ನಿಃಶಂಕರಾಗಿಯೇ ಮತ್ತೆ ಬಾಗಿ ಮೆಣಸಿನ ಕಾಯಿಗೆ ಕೈಹಾಕಿದರು. ಅಷ್ಟರಲ್ಲಿ ಮತ್ತೆ ಗಹಗಹಿಸಿ ನಗುವ ಸದ್ದು. ಅದೇ ಧ್ವನಿ! ಅದೇ ಠೀವಿ! ನಾಲ್ಕು ಸಲ ನಡೆಯಿತು. ಈ ನಗೆಯ ಮಾಟ, ಆಟ! ಆಗ ಇವರಿಗೆ ಗೊತ್ತಾಯಿತು. ತೋಟದಲ್ಲಿ ಬೆಚ್ಚಕ್ಕೆಂದು ಬಿದರು ಗೋಲಿಗೆ ಹಾಕಿದ ಯಾವುದೋ ಸತ್ತ ದನದ ತಲೆಬುರುಡೆಯು ತಮ್ಮನ್ನು ನೋಡಿ ನಗುತ್ತಿದೆಯೆಂದು! ಆ ನಗೆಯ ಕಡೆಗೆ ಗಮನವಿಟ್ಟು ಕೇಳಿದಾಗ ನುಡಿಯೂ ಒಂದು ಕೇಳಬಂತು,— 'ಎರಡು ಜನ್ಮಗಳ ಹಿಂದೆ ಇದೇ ತೋಟದ ಒಡೆಯನಲ್ಲಿ ಎರಡು ರೂಪಾಯಿಗಳನ್ನು ಕೈಗಡ ಒಯ್ದಿದ್ದೆ. ಅದರಲ್ಲಿ ನಾಲ್ಕಾಣೆ— ಈಗಿನ




ಲೆಕ್ಕದಲ್ಲಿ 25 N.P. ಮಾತ್ರ ತಿರುಗಿ ಮುಟ್ಟಿಸುವ ಋಣ ಉಳಿಯಿತು. ಸತ್ತು ಆಕಳಾಗಿ ಹುಟ್ಟಿ ಬಂದು, ಇವರಲ್ಲಿ ಹನ್ನೆರಡು ಹೋರಿಗಳನ್ನು ಹೆತ್ತೆ. ಈಗ ಯಾತ ಜಗ್ಗುವ ಮುದಿ ಎತ್ತುಗಳು ನಾನು ಹೆತ್ತವುಗಳೇ! ಇಷ್ಟಕ್ಕೆ ಋಣ ತೀರಲಿಲ್ಲ. ಈಗ ಸತ್ತರೂ ನನ್ನ ತಲೆಬುರುಡೆಯು 'ಬೆಚ್ಚ'ದ ರೂಪದಲ್ಲಿ ಈ ಮೆಣಸಿನಗಿಡಗಳನ್ನು ಕಾಯುವ ಸೇವೆಯನ್ನು ಸಲ್ಲಿಸುತ್ತಲಿದೆ. ನೋಡಿ! ನೀವೇನು ಆಗಿ ಈ ತೋಟಿಗನ ಮೆಣಸಿನಕಾಯಿ ಕದ್ದ ಋಣ ಕಳೆಯಬೇಕೆನ್ನುವಿರಿ!'

ಜೀವಂತ ಮನುಷ್ಯನ ಮಾತನ್ನೇ ಒಪ್ಪದವರು ಸತ್ತದನದ ನೀತಿಯನ್ನು ಕೇಳಿಯಾರೆ? ಕೈಗೆ ಸಿಕ್ಕುದನ್ನು ದೋಚಿಕೊಂಡು ಹೋಗುವುದೇ ಅರ್ಥಸಂಪಾದನೆಯ ನೀತಿಯೆಂದು ನಿರ್ಣಯಿಸಿದ ಅವರು, ಗಳಿಕೆಯು ಸುಮ್ಮನೆ ಆಗುವುದಿಲ್ಲ. ಅದಕ್ಕಾಗಿ ಬಹಳ ಪರಿಶ್ರಮ ಮಾಡಬೇಕಾಗುತ್ತದೆ; ಸಮಯೋಚಿತ ಯುಕ್ತಿಗಳನ್ನು ಹೂಡಬೇಕಾಗುತ್ತದೆ; ಸಾವಿರ ಸುಳ್ಳು ಹೇಳಬೇಕಾಗುತ್ತದೆ. ಆಗೆಲ್ಲ ಧರ್ಮ, ಕರ್ಮ ಎಂದು ಹೇಳುತ್ತ ಕೂತರೆ ಲಕ್ಷ್ಮಿಯು ಒಲಿಯುಳು. ಮಾಡುವ ಕಾಲದಲ್ಲಿ ಎಲ್ಲವನ್ನು ಮಾಡಲೇಬೇಕಾಗುತ್ತದೆ. ಎಂಥ ಸುಳ್ಳನ್ನೇ ನುಡಿಯಲಿ ಅದು ಸತ್ಯ ನುಡಿಯಂತೆ ಕಂಡರಾಯಿತು. ಹ್ಞಾ! ಸುಳ್ಳನ್ನಾಡುವುದು ಸಾಮಾನ್ಯರ ಕೆಲಸವಲ್ಲ. ಸತ್ಯವಂತನಿಗಿಂತ ಅವನಿಗೆ ಜಾಣ್ಮೆ ಬೇಕು. ಸತ್ಯವನ್ನು ಸಾಧಿಸಲಿಕ್ಕೇನು ಅಂಥ ಬುದ್ಧಿವಂತಿಕೆ ಬೇಕೆ? ಇದ್ದುದನ್ನು ಇದ್ದಂತೆ ಹೇಳುವುದು ತೀರ ಕ್ಷುಲ್ಲಕ ಕಾರ್ಯವದು. ಇದನ್ನು ಎಳೆ ಮಕ್ಕಳು ಸಹ ಮಾಡಿಯಾರಲ್ಲ! ಅದರಲ್ಲೇನು ಪುರುಷಾರ್ಥವಿದೆಯೆ?

ಪುರುಷಾರ್ಥವಿರುವುದು ತಾನು ಬಯಸಿದುದನ್ನು ಏನು ಬೇಕಾದುದನ್ನಾದರೂ ಮಾಡಿ ಸಂಪಾದಿಸಿಯೇ ತೀರುವುದರಲ್ಲಿ! ಇದೇ ಕಾಮಪುರುಷಾರ್ಥ ತಾನೆ? ತನ್ನ ಹೊಲದಲ್ಲಿ 'ಮೇವು' ಇಲ್ಲ; ನೆರೆಯವರಲ್ಲಿದೆ. ಅವರಿಲ್ಲದಾಗ ಕಡಿದುತಂದು ತಮ್ಮ ದನಗಳಿಗೆ ಹಾಕಿದರಾಯಿತು. ಹೇಗೋ ತರುವುದೆಂದ ಮೇಲೆ ಚೆನ್ನಾಗಿ ತೆನೆ ಹಾಕಿ ಸೀತೆನೆಯಾದುದನ್ನೇ ತಂದರಾಯಿತು. ಅವರಿಗೆ ಬೇಡವೆನಿಸಿದರೆ ಮುಂದೆ ತನಗೆ ಹೊಲವನ್ನೇ ಮಾರಿ ಹೋದಾರು ಬೇಕಾದರೆ.... ಬೆಳೆಯನ್ನಷ್ಟೆ ಅಲ್ಲ; ನೆಲ... ಇವರ ಪುರುಷಾರ್ಥವು ಅವರ ಮೇಲೆ ಪ್ರಭಾವ ಬೀರದೆ ಹೋದರೆ ಸದ್ಯಕ್ಕೆ ಸೀಮೆಯನ್ನಾದರೂ ಸರಿಸುವ ಕಾಯಕವನ್ನು ಆರಂಭಿಸಿದರಾಯಿತು. ತಿರುಗಿ ಎದುರಾಡಿದರೆ ಬಡಿಗೆಯ ದರ್ಶನವಂತೂ ಇದ್ದೇ ಇದೆಯಲ್ಲ! ಪುರುಷಾರ್ಥಕ್ಕೇನು ಕೊರತೆಯಿದೆಯೆ? ಇಂಥ ಪುರುಷಾರ್ಥದ ಬಲದಿಂದ ಭೂಮಿಯನ್ನು ಸಂಪಾದಿಸುವದಕ್ಕೇನು ಬಹಳ ದಿನಗಳೆಯಬೇಕಾಗಿಲ್ಲ ತಾನೆ?

ಈ ಕಾಮಸಾಧುಗಳು ಯಾವಾಗಲೂ ಲೋಕಹಿತಚಿಂತಕರಾಗಿರುವುದರಲ್ಲಿ ಸಂಶಯವೇನು? ಯಾರ ಮನೆಯಲ್ಲಾದರೂ ಗಂಡ-ಹೆಂಡಿರಲ್ಲಿ ಜಗಳವಾದರೆ ಇವರಿಲ್ಲದೆ ಅದು ತೀರುವುದೇ ಇಲ್ಲ. ಗಂಡನು ಹೆಂಡತಿಯನ್ನು ಕಾಡುವನೆಂದು ಅವಳನ್ನುತಂದು ತಮ್ಮ ಮನೆಯಲ್ಲಿ ಇಟ್ಟುಕೊಂಡರೂ ಇಟ್ಟುಕೊಂಡರೇ. ಆ 'ಹೆಣ್ಣುಬಾಲಿ'ಯ ಹಿತಚಿಂತಕರೆಂದರೆ ಇವರೇ! ಪರವೂರಲ್ಲಿ—ಅವಳಿಗೆ ತವರುಮನೆಯಿಲ್ಲದ ಇವರ ಊರಲ್ಲಿ—ಪರದೇಶಿಯಾದ ಅವಳನ್ನು ಪತಿಯ ಸೆರೆಯಿಂದ ಬಿಡಿಸುವ ಗಂಡಸರು ಇವರಲ್ಲದೆ ಇನ್ನಾರು? ಅನಾಥರಕ್ಷಕರಲ್ಲವೆ ಇವರು? ಅವಳ ಗಂಡ ಇವರಿಗೆ ಸಾಷ್ಟಾಂಗ ನಮಸ್ಕಾರ ಹಾಕಿದರೂ ವಿನಯದ ಸೋಗು ಹಾಕಿದ ಅವನಿಗೆ ತಮ್ಮ ಬೆನ್ನಿಗೆ ಬಿದ್ದ ಅಬಲೆಯನ್ನು ಹೇಗೆ ಒಪ್ಪಿಸಿಯಾರು. ಈ ದಯಾಘನರು! ಅವಳೇ ತನ್ನ ಮನೆಗೆ ಹೋಗುವೆನೆಂದರೂ ಅಂಥ ಮೂರ್ಖತನ ಮಾಡಗೊಡರು. ಆ ಹುಚ್ಚು ಹೆಂಗಸಿಗೆ, ಈ ಹಿತಚಿಂತಕರು. ಅವಳ ತವರುಮನೆಯವರನ್ನು ಕರೆಯಲೆಂದು ಇವರ ಆಳು ಹೋ-

ದರೂ ಹೋದನೆ? ಅವರು ಬರುವ ವರೆಗೆ ಆ ಸುಂದರ ಯುವತಿಯ ಸಂರಕ್ಷಣೆಯ ಭಾರವೆಲ್ಲಾ




ಪಾಪ ಇವರ ಮೇಲೆಯೇ! ಆ ರಾವಣಾಸುರನಂಥ ಪತಿಯ ಕೈಗೆ ಈ ಸೀತೆಯಂಥ ಸತೀಸಾಧ್ವಿಯನ್ನು ಹೇಗೆ ಒಪ್ಪಿಸಿಯಾರು ಈ ಆಧುನಿಕ ರಾಮಚಂದ್ರರು...?

ಸತಿ-ಪತಿಗಳಲ್ಲಿ ಅಕಸ್ಮಾತ್ ಸಂಭವಿಸಿದ ಇಂಥ ಚಿಕ್ಕಪುಟ್ಟ ಜಗಳಗಳಲ್ಲಿಯೇ ಅನುಪಮ ಸಹಾಯವನ್ನೂ ಅದ್ಭುತ ಸಹಕಾರವನ್ನೂ ಸಲ್ಲಿಸುವ ಮನೋವೃತ್ತಿಯುಳ್ಳ ಇವರು ಗಂಡನಿಗೆ ಒಲ್ಲದ ಹೆಂಡತಿಯನ್ನು ಅವಳ ಪತಿಗೃಹದಿಂದ ಓಡಿಸುವುದರಲ್ಲಿಯೂ ಬಾರದ ಹೆಣ್ಣನ್ನು ತಂದುಕೊಡುವುದರಲ್ಲಿಯೂ ಇವರು ರಾಮನಿಗೆ ನೆರವಾದ ಸುಗ್ರೀವನ ಸೈನಿಕರೇ ಆಗಿ ಹಗಲಿರುಳೂ ದುಡಿಯಲು ಹಿಂದೆ ಮುಂದೆ ನೋಡುವುದಿಲ್ಲ. ಸುತ್ತಲಿನ ಹಳ್ಳಿಯ ಗಂಡು-ಹೆಣ್ಣುಗಳ ಜಗಳವೆಲ್ಲ ತೀರುವುದು ನಮ್ಮೂರ ತರುಣರ ತಂಡದಿಂದಲೆ ತಾನೆ? ಇದಕ್ಕೆನ್ನಬೇಕು ನಮ್ಮೂರ ತರುಣರ ಪುರುಷಾರ್ಥ!

ಇವರು ಯಾವಾಗಲೂ ಜನತಾ ಜನಾರ್ದನನ ಸೇವಕರು. ಇವರ ಉಪಕಾರವನ್ನು ನೆನೆಯದ ಬಡಬಗ್ಗರೇ ಊರಲ್ಲಿ ಇಲ್ಲವೆಂದರೆ ಅಡ್ಡಿಯಿಲ್ಲ. ಮಳೆಗಾಲದಲ್ಲಿ ಕೆಲಸವಿಲ್ಲದೆ ಕುಳಿತ ಜನರಿಗೆ ಹೊಟ್ಟೆಗೆ ಹಾಕುವ ಅನ್ನದಾತರೂ ಇವರೇ! ಬಿತ್ತಿಗೆಗೆ ಬೀಜವಿಲ್ಲದ ಬಡರೈತರಿಗೆ ಇವರಿಂದಲೇ ನೆರವು. ಅವರ ಹೊಲಗಳು ಬೀಜವನ್ನು ಕಾಣುವುದು ಈ ಉದ್ದಾಮ—ಅಲ್ಲ—ಮುದ್ದಾಮ—ಉದಾರಿಗಳಾದ ಕೊಡುಗೈದೊರೆಗಳಿಂದಲೇ. ಸುಗ್ಗಿಗೆ ಒಂದಕ್ಕೆ ಹತ್ತರಷ್ಟು ಬೆಲೆಯನ್ನು ತಕ್ಕೊಳ್ಳುವವಲ್ಲರೇಕೆ, ಹೊತ್ತಿಗೆ ಆಗುವರಲ್ಲ! ಇದೇನು ಸಣ್ಣ ಸಹಾಯವೆ? ಕಲಿಕಾಲದಲ್ಲಿ ಕರ್ಣನ ಅವತಾರವೆಂದೇ ಹೇಳಬೇಕು. ಆದರೆ ಕರ್ಣನಂತೆ ತನ್ನ ಕವಚ-ಕುಂಡಲಗಳನ್ನೇ— ಕೊಡಲಿ-ಕುಡಗೋಲಗಳನ್ನೇ—ಬಿಟ್ಟುಕೊಡುವ ಮರುಳತನ ಇವರಲ್ಲಿ ಇಲ್ಲವೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಅಂತಲೇ ಕೊಟ್ಟದ್ದರ ಹತ್ತುಪಟ್ಟು ತಾನೇ ಬಂದು ಇವರ ನಡುಮನೆಯಲ್ಲಿ ಬೀಳುವುದು.

ಇಂಥ ಪೌರುಷವಿರುವುದರಿಂದಲೇ ಇವರು ವ್ಯವಹಾರಚತುರರು. ನಾಲ್ಕು ಜನರಿಗೆ ಬೇಕಾದವರು. ಸುಗ್ಗಿಯಲ್ಲಿ ತಮ್ಮ ಬಾಕಿಯನ್ನು ಸಲ್ಲಿಸಲು ಶಕ್ತರಾಗದವರು ಜೀತದಾಳುಗಳಾಗಿ ದುಡಿಯುವುದು ಇವರಲ್ಲಿಯೆ. ಅನ್ಯರಿಗೆ ಕೆಲಸ ಮಾಡಲು ಕೂಲಿಗಳು ಸಿಕ್ಕದ ಸಂದರ್ಭದಲ್ಲಿ ಇವರಲ್ಲಿ ಹಲವಾರು ಆಳುಗಳು! ಇವರ ಋಣದಲ್ಲಿ ಬಿದ್ದ ಅವರು ಇವರ ಒಪ್ಪಿಗೆಯನ್ನು ಪಡೆಯದೆ ಅನ್ಯರಲ್ಲಿ ದುಡಿಯಲಿಕ್ಕಾದರೂ ಹೋಗಲು ಆದೀತೆ? ಹೋದವರು ಊರಲ್ಲಿ ಬಾಳ್ವೆಯನ್ನಾದರೂ ಮಾಡಿಯಾರೆ? ಅಂಥ ಪುರುಷಾರ್ಥ ಸಾಧನೆಯು ಅವರಲ್ಲಿ ಅದೆಲ್ಲಿರುತ್ತದೆ?

ಮಾತಿನ ಮರ್ಮವನರಿಯದ ಹೊಣೆಗೇಡಿಗಳಾರೋ ಈ ತರುಣರ ತಂಡದ ಕೀರ್ತಿಯನ್ನು ಕಟ್ಟೆಯ ಮೇಲೆ ಕುಳಿತು ಮಾತನಾಡಿದರಂತೆ! ಕಟ್ಟೆಯ ಪುರಾಣದ ವಿಷಯವೇ ಇಂಥ ಪುರುಷಾರ್ಥದ ಕಥೆಗಳು? ಅದೇನು ಹರಟೆಯ ವಿಷಯವೊ? ನಾಲ್ಕು ದಿನಗಳಲ್ಲಿ ಇಂಥವರ ಹಿತ್ತಲಿನ ಕಣಿಕೆಯ ಬಣಿವೆಯ ಬೆಳಕು ಸುತ್ತಲಿನ ಮನೆಗಳನ್ನೆಲ್ಲ ಬೆಳಗಿತು. ಮಾತನಾಡುವುದನ್ನೇ ಮಾತನಾಡಬೇಕೇ ಹೊರತಾಗಿ, ಸಿಕ್ಕಸಿಕ್ಕವರ ಸಂಗತಿಯನ್ನು ಕಟ್ಟೆಗೆ ಕುಳಿತು ಮಾತನಾಡಿದರೆ ಯಾವ ಪುರುಷಾರ್ಥವನ್ನು ಸಾಧಿಸಿದಂತಾಯಿತು? ಹೀಗೆಲ್ಲ ಮಾತನಾಡಿ ಪುಂಡಾಟಿಕೆ ನಡೆಯಿಸಲು ಇಂದಿನ ಯುಗದಲ್ಲಿ ಸಾಧ್ಯವೆ? ಹೇಳಿಕೇಳಿ ಪ್ರಜಾಪ್ರಭುತ್ವದ ಕಾಲವಿದು? ಯಾರು ಬೇಕಾದವರು ಬೇಕಾದುದನ್ನು ಮಾಡಲು ಸ್ವತಂತ್ರರಿರುವಾಗ ಇವರಿಗೆ ಮಾತನಾಡುವ ಅಧಿಕಾರವಾದರೂ ಎಲ್ಲಿಂದ ಬಂತು?

ಪ್ರಜಾಪ್ರಭುತ್ವದಲ್ಲಿ ಅಧಿಕಾರಪ್ರಾಪ್ತಿಯು ಜನಬಲದ ಮೇಲೆಯೋ, ಧನಬಲದ ಮೇಲೆಯೋ? ಹತ್ತು ಜನ ಸಜ್ಜನರ ಸಂಘಟನೆಯೇನೂ ಆಗದು. ನೂರು ಜನ ದುಷ್ಟರು ಒತ್ತಟ್ಟಿಗೆ, ಸೇರಲು ಅವಕಾಶವೇ ಬೇಕಿಲ್ಲ. ಯಾವುದಕ್ಕಾದರೂ ಸ್ವಸಾಮರ್ಥ್ಯವೆಂಬುದು ಬೇಕೇಬೇಕು. ಅಂಥ ಸಾಮರ್ಥ್ಯ ಜನಬಲ, ಧನಬಲಗಳೆಲ್ಲ ಇರುವುದರಿಂದಲೇ ಊರಲ್ಲಿ ಸಿಂಹಸದೃಶರಾಗಿ ಬಾಳುತ್ತಿರುವರಷ್ಟೇ. ಇಂಥವರ ಎದುರಿಗೆ ನರ-ಕುರಿಗಳು ನಿಂತು ಬಾಳಬಲ್ಲುವೇ? ಜೀವನದಲ್ಲಿ ಅರ್ಥ ಮತ್ತು ಕಾಮ ಪುರುಷಾರ್ಥಗಳಷ್ಟೇ ಅವರಿಗೆ ಸಾಧನೆಯ ವಿಷಯಗಳು. ಅವುಗಳಿಂದಲೇ ಅಭ್ಯುದಯವೆಂಬುದನ್ನು ಹುಟ್ಟುವಾಗಲೇ ಕಲಿತು ಬಂದಿರುವರವರು. ಅದನ್ನೇನು ಅನ್ಯರು ಅವರಿಗೆ ಹೇಳಿಕೊಡುವ ಅವಶ್ಯಕತೆಯಿಲ್ಲ. ಅರ್ಥ, ಕಾಮಗಳೆರಡನ್ನೂ ಧರ್ಮದಿಂದ ಪಡೆಯಬೇಕೆಂದು ಅವರಿಗೆ ಹೇಳುವ ಪುರುಷಾರ್ಥವಾದರೂ ಯಾರಿಗಿದೆ? ಧರ್ಮವೂ ದುಡ್ಡಿನ ದಾಸವೆಂಬುದನ್ನು ಅವರು ಚೆನ್ನಾಗಿ ಅರಿತಿರುವರು. ಕಾಮವನ್ನು ಸಹ ಗುಡಿ-ಗುಂಡಾರಗಳಲ್ಲಿ ಸಾಧಿಸಬಹುದೆಂದು ಅವರು ಪ್ರಯೋಗದಿಂದಮನಗಂಡವರಾಗಿದ್ದಾರೆ. ಸಾಯಂಕಾಲ ಅವರು ನಿತ್ಯ ದೇವರ ಗುಡಿಗೆ ಹೋಗುವುದು ದೇವರ ದರ್ಶನಕ್ಕೆಂದಲ್ಲದಿದ್ದರೂ ಸೌಂದರ್ಯದ ಅಧಿದೇವತೆಯರ ದರ್ಶನಕ್ಕೆಂಬುದಂತೂ ನಿಶ್ಚಿತವು. ಅದರಂತೆ ಧಾರ್ಮಿಕ ಕಾರ್ಯಗಳನ್ನು ಡಾಂಭಿಕತನದಿಂದ ನಡೆಯಿಸಿ ತಮ್ಮ ಕಡೆಗೆ ನರರ- ಅಲ್ಲ- ನಾರಿಯರ ಮನಸ್ಸನ್ನು ಸೆಳೆಯುವ ಸಂದರ್ಭಗಳನ್ನಂತೂ ಅವರೆಂದೂ ಹುಸಿ ಹೋಗಗೊಡುವುದಿಲ್ಲ. ಅದೇ ಧರ್ಮಾಚರಣೆ! ಧರ್ಮ ಪುರುಷಾರ್ಥಸಾಧನೆ! ಲೌಕಿಕವನ್ನು ಚೆನ್ನಾಗಿ ಅರಿತ ಅವರು ಧರ್ಮದಿಂದಲೂ ಅದನ್ನು ಸಾಧಿಸಿಕೊಳ್ಳುವುದರಲ್ಲಿಯೂ ನಿಷ್ಣಾತರೆಂಬುದನ್ನು ಬೇರೆಯಾಗಿ ಹೇಳಬೇಕಾದುದಿಲ್ಲ.

ಇಷ್ಟೇ ಅಲ್ಲ, ಲೌಕಿಕ ಜೀವನಕ್ಕೆ ಧಾರ್ಮಿಕ

ಜೀವನದ ಒಪ್ಪವಿಟ್ಟು ಪ್ರದರ್ಶಿಸುವುದರಲ್ಲಿ ಇವರ ಪುರುಷಾರ್ಥವನ್ನು ಸುತ್ತಲಿನ ಹಳ್ಳಿಗಳವರೂ ಕಲಿತುಕೊಂಡು ಹೋಗಬೇಕು. ಮನೆಯ ಸೊಸೆ ಬಾವಿ ಹಾರುವಾಗ ಆಳುಮಗ ಉಳಿಸಿದಾಗಲೋ, ಮಗಳು ಯಾರನ್ನೋ ಹಿಂಬಾಲಿಸಿ ನಾಲ್ಕು ದಿನ ಎಲ್ಲಿಯೋ ಹೋದಾಗಲೋ ಊರಲ್ಲೆಲ್ಲ ಗುಜು ಗುಜು! ಗುಣುಗುಣು! ಆದರೆ ಇವರ ಮನೆಯಲ್ಲಿ ವಾದ್ಯ, ಓಲಗಗಳ ಮೇಳದಲ್ಲಿ ಸಂಭ್ರಮದ ದೇವ-ಪೂಜೆ! ಗುಡಿಯಿಂದ ಪಲ್ಲಕ್ಕಿಯಲ್ಲಿ ದೇವರು ಇವರ ಮನೆಗೆ ವೈಭವದಿಂದ ಬರುವವಿಧಾನ! ರಾತ್ರಿಯಲ್ಲಿ ಕೀರ್ತನೆ, ಭಜನೆಗಳು! ಕಳ್ಳತನದಿಂದಲಾದರೂ ಇವರ ಮನೆಯ ಕೀರ್ತಿಯನ್ನು ಮಾತನಾಡಿಕೊಳ್ಳಬೇಕೆಂಬ ಲವಲವಿಕೆಯುಳ್ಳವರಿಗೂ ಊಟಕ್ಕೆ ಔತಣ! ಪಾಪ ಅವರೇ ಭ್ರಮೆಗೆ ಒಳಗಾಗಬೇಕು. ಜನರು ಆಡಿಕೊಳ್ಳುವುದು ಸತ್ಯವೋ? ಕಣ್ಣು ಕಂಡು, ನಾಲಿಗೆ ಸವಿಯುತ್ತಿದ್ದುದು ಸತ್ಯವೋ? ಅಂಥ ಅವಮಾನಕರ ಸಂಗತಿಯೇನೂ ಮನೆಯಲ್ಲಿ ಘಟಿಸಿರದಂಥ ಧರ್ಮಾಚರಣೆಯ ಠೀವಿ! ಹೋದ-ವರು ಬರುತ್ತಾರೆ! ಕತ್ತಲೆಯ ಕೋಣೆಯಲ್ಲಿ ಕೊಳೆಯುತ್ತಾರೆ! ಒದೆತಗಳನ್ನು ತಿನ್ನುತ್ತಾರೆ! ಇತ್ತ ಹೊರಗೆ ಧಾರ್ಮಿಕ ವಿಧಿ ವಿಧಾನಗಳೂ ನಡೆದೇ ಇರುತ್ತವೆ. ಇದಕ್ಕೆನ್ನಬೇಕು ಧರ್ಮ-ಪುರುಷಾರ್ಥದ ಸಾಧನೆ! ಅಂತೆಲೇ ಲೌಕಿಕದಲ್ಲಿ ಹೆಸರುವಾಸಿಗಳ-ವರು! ಊರಲ್ಲಿ–ಸಮಾಜದಲ್ಲಿ–ಗೌರವಸ್ಥರವರು.

ಇಂಥ ಧರ್ಮಾಭಿಮಾನಿಗಳನ್ನುಳಿದು ಮೋಕ್ಷಲ-ಕ್ಷ್ಮಿಯು ಇನ್ನಾರ ಕೊರಳಿಗೆ ಮಾಲೆಯನ್ನು ಹಾಕಿಯಾಳು?— ಹೀಗೆ ಪುರುಷಾರ್ಥಮರ್ಮವನ್ನರಿ-ಯದ ನಮ್ಮಂಥವರು ನುಡಿದರೆ ಅಚ್ಚರಿ ಪಡುವ ಕಾರಣವೇನೂ ಇಲ್ಲ. ಇದನ್ನೇನೂ ಹಿಂದೆಕುಳಿತು ಮಾತನಾಡಬೇಕಾಗಿಲ್ಲ. ಅವರ ಮುಖದ ಮೇಲೆಯೆ ಆಡಿ, ಹಾಡಿಬಂದರೆ ತೀರಿತು. ಇಬ್ಬರ ಉದ್ದೇಶವೂ ಸಫಲವೇ. ಹೊಗಳಿದವರ ಜೀವನಕ್ಕೆ ನೆಮ್ಮದಿ! ಹೊಗಳಿಸಿಕೊಂಡವರಿಗೆ ನಮ್ಮ ಗುಟ್ಟು ರಟ್ಟಾಗಿಲ್ಲವಲ್ಲ ಎಂಬ ಸಂತಸ! ಗುಟ್ಟು ರಟ್ಟಾದ ಸಂಗತಿಯನ್ನಂತೂ ಇಬ್ಬರೂ ಬಲ್ಲ ಜಾಣರೇ! ಇಂದಿನ ಜಗತ್ತಿನಲ್ಲಿ ಜಾಣರೆನಿಸುವವರು ಇಂಥವರೇ ಅಲ್ಲವೆ? ಗೊತ್ತಿದ್ದೂ ಗೊತ್ತಿಲ್ಲದವರಂತೆ ಬಾಳುವುದು. ಅರಿತದ್ದನ್ನು ಆಡುವಂತಿಲ್ಲ. ಅನುಭವಿಸಿದುದನ್ನು ವ್ಯಕ್ತಗೊಳಿಸದೆ ಇರುವುದು. ತಾನರಿಯದ ಅನುಭವಿಸದ ಸಂಗತಿಗಳನ್ನೇ ಅರಿತಂತೆ ಅನುಭವಿಸಿದಂತೆ ನಟಿಸುವುದು.' ಇದರಿಂದಲೇ ಜೀವನವೊಂದು ನಾಟಕವೆಂದು ಹೆಸರು ಪಡೆದಿದೆ? ನಾವೆಲ್ಲ ನಾಟಕದ ಪಾತ್ರಗಳಷ್ಟೆ! ಚೆನ್ನಾಗಿ ನಟನೆ ಮಾಡಲು ಕಲಿಯಿರಿ! ಅದರಿಂದಲೇ ನೀವು ಚನ್ನಾಗಿ ಸಮಾಜದಲ್ಲಿ ಬಾಳಬಲ್ಲಿರಿ!

ಪುರುಷಾರ್ಥದ ಸಾಮಾನ್ಯ ವ್ಯಾಖ್ಯೆಯಿದು. ಸೂಕ್ಷ್ಮ ವಿವರ ತಿಳಿದುಕೊಳ್ಳುವ ಅಪೇಕ್ಷೆಯಿದ್ದರೆ ಒಮ್ಮೆ ಸಂದರ್ಶಿಸಿರಿ ನಮ್ಮ ತರುಣರ ತಂಡದ ಸದಸ್ಯರನ್ನು! ಆದರೆ ಅಲ್ಲಿ ನಿಮ್ಮ ಪುಂಡಾಟವೇನೂ ನಡೆಯದು ಲಕ್ಷದಲ್ಲಿಡಿರಿ! ಪೌರುಷದ ಮುಂದೆ ಪುಂಡಾಟವೆ?



ಲೇಖಕರು :

**ಪ್ರೊ. ಜಿ. ಡಿ. ನಾಡಕರ್ಣಿ,**
ಜಿ. ಎಸ್. ಎಸ್. ಕಾಲೇಜ,
ಧಾರವಾಡ

# ಭಾಸನು ಚಿತ್ರಿಸಿದ ಕೈಕೇಯಿ

ಭಾಸನ ನಾಟಕಗಳಲ್ಲಿ ''ಪ್ರತಿಮಾ'' ತುಂಬ ಹೆಸರು ಗಳಿಸಿದೆ, ಅವನು ಸೃಷ್ಟಿಸಿದ ಅನೇಕ ಹೊಸ ಅಂಶಗಳು ಇದಕ್ಕೆ ಕಾರಣವಾಗಿರುವ ಜೊತೆಗೆ ಇನ್ನೂ ಒಂದು ಅಂಶ ಮುಖ್ಯವಾಗಿದೆ. ಕೈಕೇಯಿ ಪಾತ್ರಸೃಷ್ಟಿಯಲ್ಲಿ ಅವನು ತೋರಿದ ಅಪೂರ್ವ ಜಾಣ್ಮೆಯೇ ಅದಾಗಿದೆ. ಕೈಕೇಯಿಯ ಪಾತ್ರನಿರೂಪಣೆಯು ಅತ್ಯಂತ ಮಾರ್ಮಿಕವಾಗಿದೆ. ಹೃದಯಂಗಮ ರೀತಿಯಲ್ಲಿ ಚಿತ್ರಿತವಾಗಿರುವದನ್ನು ನಾವು ಕಾಣಬಹುದಾಗಿದೆ. ಅದನ್ನೇ ಲೇಖಕರು ಇಲ್ಲಿ ಸೋದಾಹರಣವಾಗಿ ವಿವರಿಸಿದ್ದಾರೆ.

ಸಂಸ್ಕೃತ ನಾಟಕಕಾರರಲ್ಲಿ ಭಾಸನಿಗೆ ಅತ್ಯಂತ ಗೌರವದ ಸ್ಥಾನವಿದೆ. ಕಾಲಿದಾಸನು 'ಕವಿಕುಲಗುರು'ವೆಂದು ಹೆಸರಾಗಿದ್ದರೆ ಭಾಸನು ಕವಿತಾಮಾನಿನಿಯ (ಬೆಳುನಗೆ) 'ಹಾಸ' ಎಂದು ಕೀರ್ತಿತನಾಗಿದ್ದಾನೆ. ಕಾಳಿದಾಸನಿಂದಲೂ 'ಪ್ರಥಿತಯಶ'ನೆಂದು ಹೊಗಳಲ್ಪಟ್ಟ ಭಾಸನ ನಾಟಕಗಳು ಈ ಶತಮಾನದ ಪ್ರಾರಂಭದ ವರೆಗೆ ದೊರೆತಿರಲಿಲ್ಲ. ಇಂದಿನ ಸಂಸ್ಕೃತ ಸಂಶೋಧಕರ ವ್ಯವಸ್ಥಿತ ಸಂಶೋಧನೆಯ ಪರಿಣಾಮವಾಗಿ "ಭಾಸನಾಟಕಚಕ್ರ"ವೆಂದು ಹೆಸರಾಗಿರುವ ಭಾಸನ ಹದಿಮೂರು ನಾಟಕಗಳು ದೊರೆತು ಅಚ್ಚಾಗಿವೆ. ಇತ್ತೀಚೆಗೆ "ಯಜ್ಞಫಲ" ಎಂಬ ಇನ್ನೊಂದು ಭಾಸಕೃತವಾದ ನಾಟಕವೂ ದೊರೆತಿದೆ. ಈ ಸಂಶೋಧನಾಕಾರ್ಯದಲ್ಲಿ ವಿದ್ವಾಂಸರಾದ ಶ್ರೀ ಟಿ. ಗಣಪತಿಶಾಸ್ತ್ರಿಗಳವರ ಮಹಾಕಾರ್ಯ ಸಂಸ್ಮರಣೀಯವಾಗಿದೆ. ರಾಮಾಯಣ ಮತ್ತು ಮಹಾಭಾರತದ ಅನೇಕ ಪ್ರಸಂಗಗಳನ್ನು ತೆಗೆದುಕೊಂಡು ಭಾಸನು ಅನೇಕ ನಾಟಕರತ್ನಗಳನ್ನು ನಿರ್ಮಿಸಿದ್ದಾನೆ—ಮಧ್ಯಮವ್ಯಾಯೋಗ, ಪಂಚರಾತ್ರ, ದೂತವಾಕ್ಯ, ಊರುಭಂಗ, ಅಭಿಷೇಕ, ಪ್ರತಿಮಾ ನಾಟಕ, ಇತ್ಯಾದಿ.

ಅವನ ನಾಟಕಗಳಲ್ಲಿ "ಪ್ರತಿಮಾನಾಟಕ" ತುಂಬ ಪ್ರಸಿದ್ಧವಾಗಿದೆ. ಅದಕ್ಕೆ ಅನೇಕ ಕಾರಣಗಳಿರಬಹುದು. ಈ ನಾಟಕದಲ್ಲಿ ಎದ್ದು ಕಾಣುವ ಅಂಶ ಕೈಕೇಯಿ ಪಾತ್ರ. ಕೈಕೇಯಿಯ ಪಾತ್ರನಿರೂಪಣೆಯು ಅತ್ಯಂತ ನೂತನವಾಗಿದ್ದು ಹೃದಯಂಗಮರೀತಿಯಲ್ಲಿ ಚಿತ್ರಿತವಾಗಿರುವದನ್ನು ನಾವು ಕಾಣಬಹುದಾಗಿದೆ.

ಸಂಸ್ಕೃತ ನಾಟಕಕಾರರು ಸಾಮಾನ್ಯವಾಗಿ ಉದಾತ್ತರಾದ ಹಾಗೂ ಆದರ್ಶಜೀವಿಗಳಾದ ವ್ಯಕ್ತಿಗಳನ್ನೇ ತಮ್ಮ ನಾಟಕಗಳಲ್ಲಿ ಚಿತ್ರಿಸುತ್ತಾರೆ. ಒಂದು ವೇಳೆ ಮೂಲಕಥೆಯಲ್ಲಿ ಯಾವುದೊಂದು ವ್ಯಕ್ತಿಯ ನಡೆ-ನುಡಿಗಳಲ್ಲಿ ಲೋಪ-ದೋಷವಿದ್ದುದೇ ಆದರೆ, ನಾಟಕಕಾರನು ಆ ಕಥೆಯನ್ನು ತೆಗೆದುಕೊಂಡು ನಾಟಕರಚನೆ ಮಾಡುವಾಗ ಆ ವ್ಯಕ್ತಿಯ ದೋಷ-ದೌರ್ಬಲ್ಯಗಳನ್ನು ತೆಗೆದು ಹಾಕಿ ಆ ಪಾತ್ರದ ಸ್ವಭಾವವನ್ನು ಉನ್ನತಗೊಳಿಸುತ್ತಾನೆ. ಇದಕ್ಕೆ ಉದಾಹರಣೆಯಾಗಿ ಕಾಳಿದಾಸನ 'ಶಾಕುಂತಲ'ದಲ್ಲಿ ಬರುವ ದುಷ್ಯಂತ, ಭಟ್ಟನಾರಾಯಣನ 'ವೇಣೀಸಂಹಾರ' ನಾಟಕದಲ್ಲಿಯ ದುರ್ಯೋಧನ, ಭಾಸನ 'ಊರುಭಂಗ'ದ ದುರ್ಯೋಧನ—ಇವರನ್ನು ನೋಡಬಹುದು. ( ಈ ಮೇಲ್ಪಂಕ್ತಿಯನ್ನು ಅನುಸರಿಸಿ ರನ್ನನು "ಗದಾಯುದ್ಧ"ದಲ್ಲಿ ದುರ್ಯೋಧನನನ್ನೂ ನಾಗಚಂದ್ರನು ತನ್ನರಾಮಾಯಣದಲ್ಲಿ ರಾವಣನ ಪಾತ್ರವನ್ನೂ ಉನ್ನತಗೊಳಿಸಿದ್ದನ್ನು ಗಮನಿಸಬಹುದು.)

"ಕೈಕೇಯಿ" ಎಂದೊಡನೆಯೆ ರಾಮಾಯಣದ ಎಲ್ಲ ಅನರ್ಥಕ್ಕೂ ಕಾರಣಳಾದ ಮಹಾಲೋಭ, ಅಸೂಯೆ ಮುಂತಾದ ದುರ್ಗುಣಗಳ ತವರಾದ ಒಬ್ಬ ದುಷ್ಟರಾಕ್ಷಸಿಯ ಚಿತ್ರ ಸಾಮಾನ್ಯವಾಗಿ ನಮ್ಮೆದುರು ಬಂದು ನಿಲ್ಲುತ್ತದೆ. ಶ್ರೀರಾಮನನ್ನು ಅಡವಿಗಟ್ಟಿ, ದಶರಥನ ಮರಣಕ್ಕೆ ಅಪ್ರತ್ಯಕ್ಷವಾಗಿ ಕಾರಣಳಾಗಿ ತನ್ನ ಪುತ್ರ, ಭರತನು ಅರಸನಾಗಬೇಕೆಂದು ಹಂಬಲಿಸಿದ ದುಷ್ಟೆ ಈ ಕೈಕೇಯಿ—ಎಂಬ ಕಲ್ಪನೆ ಜನತೆಯಲ್ಲಿ ರೂಢಮೂಲವಾಗಿದೆ. ರಾಮ-ಸೀತೆಯರು ಜನತೆಗೊಂದು ಆದರ್ಶವಾದರೆ ಕೈಕೇಯಿ ಎಲ್ಲರ ತಿರಸ್ಕಾರಕ್ಕೆ ಪಾತ್ರಳಾದ ಓರ್ವ ವ್ಯಕ್ತಿ. ಈ ಕಲ್ಪನೆಯನ್ನೇ ಸಂಪೂರ್ಣವಾಗಿ ತಲೆಕೆಳಗುಮಾಡಿ ಭಾಸನು ತನ್ನ "ಪ್ರತಿಮಾ" ನಾಟಕದಲ್ಲಿ ಕೈಕೇಯಿಯ ಪಾತ್ರವನ್ನು ಹೊಸಬಗೆಯಿಂದ ನಿರೂಪಿಸಿದ್ದಾನೆ. ಇಲ್ಲಿ ಅವಳು ಸದಾ ರಾಮಚಂದ್ರನ ಹಿತವನ್ನೇ ಬಯಸುವ, ರಾಮ ಮತ್ತು ಭರತರನ್ನು ಸಮಾನವಾಗಿ ಕಾಣುವ, ಪತಿಭಕ್ತಿ ಹಾಗೂ ತನ್ನ ವಂಶದ ಗೌರವವನ್ನುಳಿಸಲು ಜಾಗೃತಳಾದ ಓರ್ವ ಆರ್ಯಸಾಧ್ವಿಯಾಗಿ ಮಾರ್ಪಾಡು ಹೊಂದಿದ್ದಾಳೆ.

ವಾಲ್ಮೀಕಿರಾಮಾಯಣದಲ್ಲಿ ಚಿತ್ರಿತವಾಗಿರುವಂತೆ, ಕೈಕೇಯಿ ತನ್ನ ಆಪ್ತದಾಸಿಯಾದ ಮಂಥರೆಯ ದುರುಪದೇಶಕ್ಕೆ ಒಳಗಾಗಿ ರಾಮನಿಗೆ ವನವಾಸ ಮತ್ತು ಭರತನಿಗೆ ರಾಜ್ಯ ಎಂಬ ಎರಡು ಬೇಡಿಕೆಗಳನ್ನು ಆಗ್ರಹದಿಂದ ಪಡೆದಳು. ಮತ್ತು ಹೀಗೆ ಮುಂದಿನ ಅನರ್ಥಪರಂಪರೆಗೆ ಕಾರಣಳಾದಳು ಎಂಬುದಾಗಿ ಬರುತ್ತದೆ. ಭರತನು ಅಯೋಧ್ಯೆಯಲ್ಲಿ ಇಲ್ಲದಿರುವಾಗ ಶ್ರೀರಾಮನ ಪಟ್ಟಾಭಿಷೇಕವನ್ನು ದಶರಥನು ಮರುದಿನ ಮುಂಜಾನೆ ನೆರವೇರಿಸುವವನಿದ್ದಾನೆ ಎಂಬುದನ್ನು ಮಂಥರೆಯು ಬಂದು ಮೊದಲು ಹೇಳಿದಾಗ ಕೈಕೇಯಿಗೆ ಆಗ ಆನಂದವೇ ಆಯಿತು. ಸಂತೋಷದ ಆ ಸುದ್ದಿಯನ್ನು ತಂದ ಮಂಥರೆಗೆ ಆಭರಣವನ್ನು ಕಾಣಿಕೆಯಿತ್ತು ಕೈಕೇಯಿ—

"ಇದಂ ತು ಮಂಥರೇ ಮಹ್ಯಂ
ಆಖ್ಯಾಸಿ ಪರಮಂ ಪ್ರಿಯಂ ।
ರಾಮೇ ವಾ ಭರತೇ ವಾ ಅಹಂ
ವಿಶೇಷಂ ನ ಉಪಲಕ್ಷೈ"

ಎಂದು ಹೇಳುತ್ತಾಳೆ. ರಾಮ ಮತ್ತು ಭರತರಲ್ಲಿ ಮೊದಲು ಯಾವ ಅಂತರವನ್ನೂ ಕೈಕೇಯಿ ಕಾಣುತ್ತಿದ್ದಿಲ್ಲವಷ್ಟೇ ಅಲ್ಲ ; ಪ್ರತಿಯಾಗಿ ಶ್ರೀರಾಮನ ಸದ್ಗುಣಗಣವನ್ನೆಲ್ಲ ಹೊಗಳುತ್ತಾಳೆ. "ಹಡೆದ ತಾಯಿ ಕೌಸಲ್ಯೆಗಿಂತ ರಾಮನು ಹೆಚ್ಚು ಭಕ್ತಿಯಿಂದ ನನ್ನ ಶುಶ್ರೂಷೆ ಮಾಡುತ್ತಾನೆ" ಆದ್ದರಿಂದ—

"ರಾಜ್ಯಂ ಯದಿ ಹಿ ರಾಮಸ್ಯ ಭರತ
ಸ್ಯಾಪಿ ತತ್ತದಾ"

—ಎಂದರೆ ರಾಜ್ಯವು ರಾಮನದು ಆದರೆ, ಅದು

ಭರತನದೂ ಆದಂತೆಯೇ ಎಂದು ಸ್ಪಷ್ಟವಾಗಿ ಹೇಳಿಬಿಡುತ್ತಾಳೆ. ಆಗ ಮಂಥರೆಯು "ರಾಮನು ಅರಸನಾದರೆ ಅವನ ನಂತರ ಅವನ ಮಗನು ರಾಜನಾಗುವನು. ಭರತನು ರಾಜ್ಯಭ್ರಷ್ಟನಾಗುವನು; ಕೌಸಲ್ಯೆಯು ರಾಜಮಾತೆಯಾಗಿ ನಿನ್ನ ಮೇಲೆ ತನ್ನ ವೈರವನ್ನು ಸಾಧಿಸುವಳು" ಎಂದು ಅನೇಕ ಬಗೆಯಾಗಿ ದುಷ್ಟ ಉಪದೇಶ ಮಾಡುವಳು. ಕೈಕೇಯಿಯ ಮೇಲೆ ಈ ಉಪದೇಶವು ನಾಟಿ, ಮಂಥರೆಯ ಸೂಚನೆ ಮೇರೆಗೆ ಅವಳು ದಶರಥನೆದುರು, ದೇವಾಸುರ ಯುದ್ಧದಲ್ಲಿಯ ಹಿಂದಿನ ತನ್ನ ಎರಡು ವರಗಳನ್ನು ಈಗ ಕೊಡಬೇಕೆಂದು ಕೇಳುವಳು. ಇವೇ ಆ ಎರಡು ಭೀಷಣ ವರಗಳು :—

"ಅನೇನೈವಾಭಿಷೇಕೇಣ ಭರತೋ ಮೇ
ಅಭಿಷಿಚ್ಯತಾಮ್ ।
ನವ ಪಂಚ ಚ ವರ್ಷಾಣಿ ರಾಮೋ
ಭವತು ತಾಪಸಃ ॥

ಅನಿರೀಕ್ಷಿತವಾದ ಹಾಗೂ ಕ್ರೂರವಾದ ಈ ಶಬ್ದಗಳನ್ನು ಕೇಳಿದ ದಶರಥನು ಕ್ರುದ್ಧನಾಗಿ, ತನ್ನ ಕಣ್ಣುಗಳಿಂದ ಅವಳನ್ನು ಸುಡುವಂತೆ ನೋಡಿ, ಕೇಳಿದನಂತೆ—

ನೃಶಂಸೇ, ದುಷ್ಟಚಾರಿತ್ರೇ, ಕುಲಸ್ಯಾಸ್ಯ
ವಿನಾಶಿನಿ ।
ಕಿಂ ಕೃತಂ ತವ ರಾಮೇಣ ಪಾಪೇ,
ಪಾಪಂ ಮಯಾಪಿ ವಾ ?॥

ಆದರೆ ಅವನು ಅಸಹಾಯನಾಗಿದ್ದನು. ಅವನೆಷ್ಟು ಅಂಗಲಾಚಿ ಬೇಡಿದರೂ ಕೈಕೇಯಿಯ ಕಲ್ಲೆದೆ ಕರಗಲಿಲ್ಲ; ಅವಳು ತನ್ನ ಹಟ ಬಿಡಲಿಲ್ಲ. ಅಲ್ಲದೆ ತನ್ನ ಸ್ವಾರ್ಥಕ್ಕೆ ಧರ್ಮ ಸತ್ಯಗಳ ಸೋಗು ಬೇರೆ ಹಾಕುತ್ತಾಳೆ. ಅವಳೆನ್ನುತ್ತಾಳೆ—

"ಆಹುಃ ಸತ್ಯಂ ಹಿ ಪರಮಂ ಧರ್ಮಂ
ಧರ್ಮವಿದೋ ಜನಾಃ ।
ಸತ್ಯಮಾಶ್ರಿತ್ಯ ಹಿ ಮಯಾ ತ್ವಂ ಚ
ಧರ್ಮಂ ಪ್ರಚೋದಿತಃ ॥"

ಕೊನೆಗೆ ದಶರಥನು ಅವಳಿಗೆ ಪ್ರಾರ್ಥಿಸುತ್ತಾನೆ— "ರಾಮನಿಗೆ ರಾಜ್ಯವನ್ನು ಕಾಣಿಕೆಯಾಗಿ ಕೊಟ್ಟು ಶಾಶ್ವತವಾದ ಕೀರ್ತಿಯನ್ನು ಪಡೆ!" ಆದರೆ ಯಾವುದರಿಂದಲೂ ಅವಳ ಕಲ್ಲುಹೃದಯ ಕರಗಲಿಲ್ಲ. (ಕವಿ ವಾಲ್ಮೀಕಿ ಅವಳನ್ನು ಪಾಪಿ, ನಿರ್ಲಜ್ಜೆ, ಅನಾರ್ಯೆ ಇತ್ಯಾದಿಯಾಗಿ ವರ್ಣಿಸಿದ್ದಾನೆ . ನಂತರ ಅವಳು ರಾಮನನ್ನು ಕರೆಯಿಸಿ, ಅವನು ವನವಾಸಕ್ಕೆ ಹೊರಡಬೇಕಾದ ವಿಷಯವನ್ನು ತಾನೇ ತಿಳಿಸುತ್ತಾಳೆ. ರಾಮ-ಸೀತೆ-ಲಕ್ಷ್ಮಣರಿಗೆ ತಾನೇ ತನ್ನ ಕೈಯಿಂದ ನಾರುಬಟ್ಟೆಗಳನ್ನು ಕೊಡುತ್ತಾಳೆ. ಅವನ್ನು ಹೇಗೆ ಉಟ್ಟುಕೊಳ್ಳಬೇಕೆಂಬುದು ಗೊತ್ತಿಲ್ಲದ ಸೀತೆಗೆ ನಾರುಬಟ್ಟೆಯನ್ನು ತಾನೇ ಉಡಿಸುತ್ತಾಳೆ! ಮುಂದೆ ಅವರು ಅಯೋಧ್ಯೆಯಿಂದ ಹೊರಟುಹೋದ ಮೇಲೆ ಭರತನು ಬರುತ್ತಾನೆ. ಆಗ ಕೈಕೇಯಿಯೇ ಮುಂದಾಗಿ ದಶರಥನ ಸಾವಿನ ಸುದ್ದಿಯನ್ನೂ ರಾಮಾದಿಗಳು ದಂಡಕಾರಣ್ಯಕ್ಕೆ ಹೋದ ವಾರ್ತೆಯನ್ನೂ ತಿಳಿಸುತ್ತಾಳೆ. ಭರತನು ಈ ಅನಿರೀಕ್ಷಿತ ದುರ್ವಾರ್ತೆಯನ್ನು ಕೇಳಿ ಸಹಿಸಲಾರದ ದುಃಖದಿಂದ ತಾಯಿಯನ್ನು ಧಿಕ್ಕರಿಸಿ ರಾಮನನ್ನು ಹುಡುಕಿಕೊಂಡು ಬರಲು ಸೇನಾಸಮೇತನಾಗಿ ಹೊರಡುತ್ತಾನೆ.

ಒಟ್ಟಿನಲ್ಲಿ ವಾಲ್ಮೀಕಿ ರಾಮಾಯಣದ ಪ್ರಕಾರ ಕೈಕೇಯಿ ತನ್ನ ಸ್ವಾರ್ಥದಿಂದ ಅತ್ಯಂತ ಕ್ರೂರಳಾಗಿ ನಡೆದುಕೊಂಡು ಮುಂದಿನ ಅನರ್ಥಕ್ಕೆಲ್ಲ ಕಾರಣಳಾಗಿ "ಅಪರಾಧಿ" ಎಂಬುದಾಗಿ ಚಿತ್ರಿತಳಾಗಿದ್ದಾಳೆ. ಮಹಾಕವಿ ಭಾಸನು ತನ್ನ "ಪ್ರತಿಮಾ" ನಾಟಕದಲ್ಲಿ ಅವಳು ಸಂಪೂರ್ಣ ನಿರ್ದೋಷಿ, ಅಲ್ಲದೆ ರಾಮನ ಹಿತವನ್ನು ಬಯಸಿಯೇ ಅವಳು ಇಷ್ಟೆಲ್ಲ ನಾಟಕವನ್ನು (ವಸಿಷ್ಠ ವಾಮದೇವಾದಿಗಳ ಸೂಚನೆಯಂತೆ) ಮಾಡಿದಳು ಎಂದು ನಿರೂಪಿಸಿದ್ದಾನೆ. ರಾಮಾಯಣದ ಪೂರ್ವಕಥೆಯಲ್ಲಿಯೇ ಇದ್ದ ಕೆಲವು ಅಂಶಗಳ ಸಹಾಯದಿಂದ, ಕಥೆಗೆ ಯಾವ ಹೊಸ ಅಂಶವನ್ನು ಸೇರಿಸದೆಯೇ ಕೈಕೇಯಿಯ ನಿರಪರಾಧಿತ್ವವನ್ನು ರಸಿಕರಿಗೆ ಅಚ್ಚರಿಯಾಗುವಂತೆ ಪ್ರಸ್ತಾಪಿಸಿದ್ದು ನಿಜವಾಗಿಯೂ ಭಾಸನ ಕೈವಾಡವನ್ನು ತೋರಿಸುತ್ತದೆ.

ಇದನ್ನು ಸಾಧಿಸಲು ಭಾಸನು ಮುಖ್ಯವಾಗಿ ದಶರಥನಿಗಿದ್ದ ಹಿಂದಿನ ಶಾಪವನ್ನು ಉಪಯೋಗಿಸಿಕೊಂಡಿದ್ದಾನೆ. ಈ ಶಾಪದ ವಿಚಾರವನ್ನು ದಶರಥನೂ (ಅವನಂತೆಯೇ ಓದುಗರೂ) ಮರೆತಂತೆ ಕಾಣುತ್ತದೆ. ಆದರೆ ವಿಧಿ ಇದನ್ನು ಮರೆತಿಲ್ಲ. ಹಿಂದೆ ದಶರಥನು ಚಿಕ್ಕವನಿದ್ದಾಗ, ಇನ್ನೂ ಮಕ್ಕಳನ್ನೂ ಪಡೆಯದೆ ಇದ್ದಾಗ, ಬೇಟೆಯಾಡಲು ಹೋದನು. ಅಡವಿಯಲ್ಲಿ ಶ್ರವಣಕುಮಾರನು ತನ್ನ ವೃದ್ಧ ಹಾಗು ಕುರುಡ ತಾಯಿ-ತಂದೆಯರನ್ನು ಯಾತ್ರೆಗೆಂದು ಕರೆದುಕೊಂಡು ಹೊರಟವನು ಅವರಿಗಾಗಿ ನೀರನ್ನು ತರಲು ಸರೋವರಕ್ಕೆ ಬರುತ್ತಾನೆ. ಅವನು ಕೊಡದಲ್ಲಿ ನೀರನ್ನು ತುಂಬುವಾಗ ದೂರದಲ್ಲಿದ್ದ ದಶರಥನಿಗೆ ಆ ಸಪ್ಪಳವು ಆನೆ ನೀರನ್ನು ಕುಡಿದಂತೆ ಕೇಳಿಬರುತ್ತದೆ. ಸರಿ; ಆಗ ಅವನು ಶಬ್ದವೇಧಿಬಾಣವನ್ನು ಪ್ರಯೋಗಿಸುತ್ತಾನೆ. ಅದರ ಹೊಡೆತಕ್ಕೆ ಸಿಕ್ಕು ಶ್ರವಣಕುಮಾರನು ಆರ್ತನಾದ ಮಾಡಿದಾಗ ದಶರಥನು ಅಲ್ಲಿಗೆ ಬಂದು ನಿಜಸಂಗತಿಯನ್ನರಿಯುತ್ತಾನೆ; ಅವನನ್ನು ಎತ್ತಿಕೊಂಡೊಯ್ದು ಅವನ ತಾಯಿ-ತಂದೆಯರ ಮುಂದೆ ಇಳಿಸುತ್ತಾನೆ. ಕ್ರುದ್ಧನಾದ ಆ ವೃದ್ಧ ತಪಸ್ವಿಯು ಆಗ ಶಾಪವೀಯುತ್ತಾನೆ— "ಅಳಿವೆನದೆಂತಾಂ ನೀನುಂ । ಬಳಿಕಂತೆಯೆ ಪುತ್ರಶೋಕದಿಂದಳಿವೆ ದಿಟಂ॥" *—ಎಂದರೆ ದಶರಥನ ಸಾವು ಪುತ್ರಶೋಕದಿಂದ ಎಂಬುದು ನಿರ್ಧಾರಿತವಾಗಿಬಿಟ್ಟಿದೆ. ಈಗ ಶ್ರೀರಾಮನ ಪಟ್ಟಾಭಿಷೇಕದ ಪ್ರಸಂಗಕ್ಕೆ ಬರೋಣ. ದಶರಥನು ಈ ಶಾಪವನ್ನು ಮರೆತುಬಿಟ್ಟರೂ ಅವನ ಕುಲಗುರುಗಳಾದ ವಸಿಷ್ಠ—ವಾಮದೇವ ಋಷಿಗಳು ಅದನ್ನು ಮರೆತಿರಲಿಲ್ಲ. ದಶರಥನಿಗೆ ನಾಲ್ವರು ಪುತ್ರರಿದ್ದರೂ ಅವರೆಲ್ಲರಲ್ಲಿ ಶ್ರೀರಾಮನೇ ಅತ್ಯಂತ ಪ್ರೀತ್ಯಾಸ್ಪದನು. ಆದ್ದರಿಂದ ದಶರಥನಿಗೆ "ಪುತ್ರಶೋಕ"ವಾಗುವುದಾದರೆ ಶ್ರೀ ರಾಮನಿಗೆ ಮೊದಲು ಏನಾದರೂ ವಿಪತ್ತು ಸಂಭವಿಸುವುದು ಖಂಡಿತ; ಆ ವಿಪತ್ತಿನ ಸ್ವರೂಪ ನಿಶ್ಚಿತವಿಲ್ಲ. ಶ್ರವಣಕುಮಾರನ ಪ್ರಸಂಗ ನೆನೆದುಕೊಂಡರೆ "ಪುತ್ರಶೋಕ"ದ ಅರ್ಥವು ಶ್ರೀರಾಮನ ಮರಣವಾಗಿ ಅದರ ಮೂಲಕ ದಶರಥನಿಗೆ ಬರುವ ಸಾವು— ಎಂದೂ ಆಗಬಹುದು. ಆದ್ದರಿಂದ ಶ್ರೀರಾಮನಿಗೆ ಏನಾದರೂ ಅಲ್ಪವಿಪತ್ತು ಉಂಟುಮಾಡಬೇಕು; ಅದರಿಂದ ವೃದ್ಧನೂ ಆಸನ್ನಮರಣನೂ ಆದ ದಶರಥನು ಪುತ್ರಶೋಕದಿಂದ ಮಡಿದು ಹೋಗುವನು ; ಎಂದರೆ ಋಷಿಶಾಪವು ಪೂರ್ತಿಯಾಗುವುದು. ಮತ್ತು ಶ್ರೀರಾಮನು ತನಗೆ ಬರಲಿರುವ ಮಹಾವಿಪತ್ತಿನಿಂದ ಪಾರಾಗುವನು. ಹೀಗೆ ಯೋಚಿಸಿ ವಸಿಷ್ಠಾದಿಗಳು ಶ್ರೀರಾಮನನ್ನು ಹದಿನಾಲ್ಕು ದಿವಸ ದಶರಥನಿಂದ ಅಗಲಿಸಬೇಕೆಂದು ನಿಶ್ಚಯಿಸಿದರು. ಶ್ರೀರಾಮನನ್ನು ಅರೆಗಳಿಗೆ ಬಿಟ್ಟಗಲದ ದಶರಥನು ವೃದ್ಧಾಪ್ಯದಲ್ಲಿ ಉಂಟಾದ ಆಕಸ್ಮಿಕವಾದ ಕೆಲವು ದಿನಗಳ ರಾಮವಿರಹದಿಂದ ದುಃಖಿಸಿ ಮರಣಹೊಂದುವನು. ಮುಂದೆ ರಾಮನು ಬಂದು ಅಯೋಧ್ಯೆಯ ರಾಜ್ಯವನ್ನು ವಹಿಸಿಕೊಳ್ಳುವನು. ಈ ವಿಷಯವನ್ನು ವಸಿಷ್ಠರೇ ದಶರಥನಿಗೆ ತಿಳಿಸಿಬಿಟ್ಟರೆ ಉದ್ದೇಶವು ಫಲಿಸುವಂತಿರಲಿಲ್ಲ— ಏಕೆಂದರೆ ಕೆಲವು ದಿನಗಳನಂತರ ರಾಮವಿರಹವನ್ನು ಅವನು ಹೇಗೋ ಸಹಿಸಿಕೊಳ್ಳಬಹುದು. ಆದ್ದರಿಂದ ಇದು ನಿಜವೆಂಬಂತೆಯೂ ಆಕಸ್ಮಿಕವಾಗಿಯೂ ದಶರಥನಿಗೆ ಮರಣಾಂತಿಕ ದುಃಖವುಂಟುಮಾಡುವಂತೆಯೂ ಆಗಬೇಕಾದರೆ ಕೈಕೇಯಿಯಿಂದಲೇ ಮಾತ್ರ ಸಾಧ್ಯ. ಹೀಗೆ ನಿಶ್ಚಯಿಸಿ ವಸಿಷ್ಠರು ಕೈಕೇಯಿಯನ್ನು ಕಂಡು ಈ ವಿಷಯವನ್ನು ಪ್ರಸ್ತಾಪಿಸಿದರು. ಅವಳಿಗೆ ಇದು ಮೊದಲು ಒಪ್ಪಿಗೆಯಾಗದಿದ್ದರೂ ಇದರಲ್ಲಿ ಶ್ರೀರಾಮನ ನಿಜವಾದ ಮತ್ತು ಶಾಶ್ವತವಾದ ಹಿತವಿದೆ ಎಂಬುದನ್ನು ತಿಳಿದಮೇಲೆ ಕೈಕೇಯಿ ವಸಿಷ್ಠರು ಹೇಳಿಕೊಟ್ಟಂತೆ ಈ ನಾಟಕದಲ್ಲಿ ಪಾತ್ರ ವಹಿಸಿದಳು.

ಕೈಕೇಯಿಯೇ ಏಕೆ ಈ ಕೆಲಸ ಮಾಡಬೇಕು? ಉಳಿದವರಾರೂ ಮಾಡಿದರೆ ನಡೆಯುವಂತಿರಲಿಲ್ಲವೆ? ಎಂಬುದಕ್ಕೆ ಭಾಸನು ಸಮಂಜಸ ಉತ್ತರ ಕಲ್ಪಿಸಿದ್ದಾನೆ. ದಶರಥನು ಕೈಕೇಯಿಯನ್ನು ಮದುವೆಯಾಗುವಾಗ ಅವಳ ಪುತ್ರನಿಗೇ ರಾಜ್ಯ ಕೊಡುವನೆಂದು ವಚನ ಕೊಟ್ಟಿದ್ದನೆಂಬ ಮಾತು ಇಲ್ಲಿ ಮಹತ್ವದ್ದಾಗಿದೆ. ಈ ವಚನವನ್ನು ಪಾಲಿಸುವುದನ್ನು ಬಿಟ್ಟು ದಶರಥನು, ಭರತನು ಊರಲ್ಲಿಲ್ಲದ ವೇಳೆಯಲ್ಲಿ, ಶ್ರೀರಾಮನಿಗೆ ರಾಜ್ಯಾಭಿಷೇಕ ಮಾಡುವುದನ್ನು ನಿಶ್ಚಯಿಸುತ್ತಾನೆ. ಎಂದರೆ ಈಗ ಕೈಕೇಯಿ ಇದನ್ನು ತಡೆಯದಿದ್ದರೆ ರಾಮನು ಅಭಿಷಿಕ್ತನಾಗಿ, ದಶರಥ ಮಹಾರಾಜನು ಸತ್ಯಭ್ರಷ್ಟನಾಗುತ್ತಿದ್ದನು. ಆದ್ದರಿಂದ ಪತಿಯ ಸತ್ಯಕ್ಕೆ ಭಂಗ ಬರಬಾರದು ಎಂಬ ಉದ್ದೇಶದಿಂದ ಕೈಕೇಯಿ ಶ್ರೀರಾಮನ ಅಭಿಷೇಕಕ್ಕೆ ಅಡ್ಡಿಯಾದಳೇ

* ಡಾ. ಕೆ. ಕೃಷ್ಣಮೂರ್ತಿಯವರ "ಕನ್ನಡ ಪ್ರತಿಮಾ ನಾಟಕ"---ಪುಟ : ೭೪.

ಹೊರತು ತನ್ನ ಮಗ ಭರತನಿಗೇ ರಾಜ್ಯದೊರೆಯ ಬೇಕೆಂಬ ಸ್ವಾರ್ಥದಿಂದಲ್ಲ. ಈ ದೃಷ್ಟಿಯಿಂದ ಭಾಸನು ಚಿತ್ರಿಸಿದ ಕೈಕೇಯಿ ನಿಃಸ್ವಾರ್ಥಿಯಾಗಿದ್ದಾಳೆ ಮಾತ್ರವಲ್ಲ, ಎಲ್ಲರ ನಿಂದೆಗೆ ಗುರಿಯಾದರೂ ಇಕ್ಷ್ವಾಕು ವಂಶದ ದಶರಥನ ಸತ್ಯವನ್ನು ಕಾಪಾಡಿದ ಪುಣ್ಯವಂತೆ.

"ಪ್ರತಿಮಾ ನಾಟಕ"ದ ಕೈಕೇಯಿ ಸಹನೆ-ಸ್ಥೈರಣೆ-ಶಾಂತಿಗಳ ಮೂರ್ತಿ. ಹಿರಿಯರ ಮಾತಿಗೆ ಒಪ್ಪಿ, ರಾಮನ ಶಾಶ್ವತವಾದಹಿತಕ್ಕಾಗಿ ತನ್ನ ಪತಿಯೆದುರು ವರಗಳನ್ನೇನೋ ಬೇಡಿಕೊಳ್ಳುತ್ತಾಳೆ. ಆದರೆ ಈ ನಿಜವಾದ ಕಾರಣ ಗೊತ್ತಿಲ್ಲದ ಜನರೆಲ್ಲ ಅವಳನ್ನು "ಸ್ವಾರ್ಥಿ, ರಾಕ್ಷಸಿ" ಎಂದು ಕಟುವಾಗಿ ಟೀಕಿಸುತ್ತಾರೆ. ವಸಿಷ್ಠ, ವಾಮದೇವ, ಸುಮಂತ್ರ— ಈ ಮೂವರನ್ನುಳಿದು ನಿಜವಾದ ಕಾರಣ ಮತ್ತಾರಿಗೂ ತಿಳಿಯದು. ಆದ್ದರಿಂದ ದಶರಥ, ಲಕ್ಷ್ಮಣ, ಭರತ, ಊರಿನ ಜನರು— ಎಲ್ಲರೂ ಅವಳನ್ನು ನಿಂದಿಸುವವರೇ. ಆದರೆ ಯಾರು ಎಷ್ಟು ಬೈದರೂ ಅದನ್ನೆಲ್ಲ ಸಹಿಸಿಕೊಂಡು ತಾಳ್ಮೆಯಿಂದಿರುತ್ತಾಳೆ ಅವಳು. ಕೊನೆಗೆ ಎಂದರೆ ದಶರಥನ ಮರಣದ ನಂತರ ನಿಜ ಸಂಗತಿಯನ್ನು ಭರತನಿಗೆ ತಿಳಿಸುತ್ತಾಳೆ. ಇದು ಕೈಕೇಯಿಯ ಸ್ವಾರ್ಥದ ಪರಿಣಾಮವಲ್ಲವೆಂಬುದನ್ನು ತಿಳಿದ ಮೇಲೆ ಭರತನು ತಾಯಿಯನ್ನು ಕ್ಷಮಿಸುತ್ತಾನೆ.

"ಪ್ರತಿಮಾ ನಾಟಕ"ದಲ್ಲಿ ಮಂಥರೆಯ ದುಷ ಉಪದೇಶವಿಲ್ಲ ; ಕೈಕೇಯಿ ದಶರಥನೆದುರು ಸಿಂಹಿಣಿಯಂತೆ ಕಟುವಾಕ್ಯಗಳನ್ನಾಡುವುದಾಗಲಿ, ನಿಷ್ಕರುಣೆಯಿಂದ ವರ್ತಿಸುವ ಪ್ರಸಂಗವಾಗಲಿ ಬರುವುದಿಲ್ಲ. ರಾಮಾಯಣದಲ್ಲಿಯಂತೆ ಇಲ್ಲಿ ಕೈಕೇಯಿ ನಾರುಬಟ್ಟೆಗಳನ್ನು ತಾನೇ ಕೈಯಾರೆ ರಾಮ-ಸೀತೆಯರಿಗೆ ಕೊಟ್ಟು ಅವರನ್ನು ಕಾಡಿಗೆ ಅಟ್ಟುವ ನಿಷ್ಕರುಣ ದೃಶ್ಯವಿಲ್ಲ. ಅರಮನೆಯ ನಾಟಕಶಾಲೆಯಲ್ಲಿ ನಟರು ಉಪಯೋಗಿಸುತ್ತಿದ್ದ ನಾರುಬಟ್ಟೆಯನ್ನು (ಅವದಾತಿಕೆ ಎಂಬ ದಾಸಿಯು ಆಕಸ್ಮಿಕವಾಗಿ ತಂದದ್ದನ್ನು) ಸೀತೆಯು ವಿನೋದಕ್ಕಾಗಿ ಉಟ್ಟುಕೊಂಡಿರುತ್ತಾಳೆ. ಅದನ್ನು ಕಂಡ ಶ್ರೀರಾಮನು ತಾನೂ ವಿನೋದಕ್ಕಾಗಿಯೇ ಉಟ್ಟುಕೊಳ್ಳುತ್ತಾನೆ. ಮುಂದೆ ಪಿತೃವಾಕ್ಯಪರಿಪಾಲನೆಗಾಗಿ ಅಡವಿಗೆ ಹೊರಡಬೇಕಾದಾಗ ಅವೇ ನಾರುಬಟೆ ಯನ್ನು ಉಟ್ಟುಕೊಂಡೇ ರಾಮ-ಸೀತೆಯರು ಲಕ್ಷ್ಮಣನೊಡನೆ ಹೊರಟುಬಿಡುತ್ತಾರೆ. ತುಂಬ ನಾಟಕೀಯವಾದ ಈ ಅಂಕವು ಕೈಕೇಯಿಯು ಶ್ರೀರಾಮನಿಗೆ ನಾರುಬಟ್ಟೆಯನ್ನು ಕೈಯಾರೆ ಕೊಟ್ಟು ನಿಷ್ಕರುಣಿಯಾಗಿ ಕಂಡುಬರುವ ಪ್ರಸಂಗವನ್ನು ಚಮತ್ಕಾರದ ರೀತಿಯಲ್ಲಿ ತಪ್ಪಿಸುತ್ತದೆ.

ರಾಮಾಯಣದಲ್ಲಿ ನಿರೂಪಿತವಾದಂತೆ, ಭರತನು ಬಂದೊಡನೆಯೆ ಕೈಕೇಯಿ ತಾನು ಮುಂದಾಗಿ ಅವನನ್ನು ಸ್ವಾಗತಿಸಿ ನಡೆದು ಹೋದ ವಿಷಯಗಳನ್ನು ತಿಳಿಸಿ ಅರಸನಾಗಲು ಕೇಳಿಕೊಳ್ಳುತ್ತಾಳೆ. ಕೈಕೇಯಿಯ ಮೃದು ಹೃದಯವನ್ನೂ ನಿಃಸ್ವಾರ್ಥತೆಯನ್ನೂ ರಾಮಪ್ರೀತಿಯನ್ನೂ ಚಿತ್ರಿಸಲು ಬಯಸಿದ ಭಾಸನು ಈ



ತಂತುಮಾತ್ರವಾದರೂ ಧೈರ್ಯಕ್ಕೆ ಸಾಕು.

ಪ್ರಸಂಗವನ್ನು ತಪ್ಪಿಸಿದ್ದಾನೆ. "ಪ್ರತಿಮಾ ನಾಟಕ"ದಲ್ಲಿ ಭರತನಿಗೆ ದಶರಥನ ಸಾವು, ರಾಮನ ವನಗಮನ ಮೊದಲಾದ ಸಂಗತಿಗಳು ತಿಳಿದುಬರುವುದು ಅಯೋಧ್ಯೆಯ ಅಗಸೆಯ ಹೊರಗೆ ಇರುವ "ಪ್ರತಿಮಾಗೃಹ" ದಲ್ಲಿ. ಅಲ್ಲಿ ರಘುವಂಶದ ದಿಲೀಪ, ಅಜ, ರಘು, ದಶರಥ ಹೀಗೆ ನಾಲ್ವರ ಪ್ರತಿಮೆಗಳಿರುತ್ತವೆ. ತನ್ನ ಸೋದರಮಾವನ ಮನೆಯಲ್ಲಿದ್ದ ಭರತನಿಗೆ ತನ್ನ ತಂದೆಯು ಅಸ್ವಸ್ಥನಾದ ವಾರ್ತೆ ತಿಳಿದೊಡನೆಯೆ ಅಯೋಧ್ಯೆಗೆ ಧಾವಿಸುತ್ತಾನೆ. ನಗರವನ್ನು ಪ್ರವೇಶಿಸಲು ಮುಹೂರ್ತವು ಚೆನ್ನಾಗಿಲ್ಲದ್ದರಿಂದ ಊರ ಹೊರಗೆ ಕೆಲ ಕಾಲ ಕಳೆಯಬೇಕಾದಾಗ ಭರತನು ಅಲ್ಲಿ ದೇವಾಲಯದಂತೆ ಕಾಣುವ ಕಟ್ಟಡವೊಂದನ್ನು ಪ್ರವೇಶಿಸುತ್ತಾನೆ. ಅಲ್ಲಿಯ ಪ್ರತಿಮೆಗಳು ದೇವತೆಗಳಲ್ಲ, ಆದರೆ ತನ್ನ ಕುಲದ ಹಿರಿಯರ ಪ್ರತಿಮೆಗಳು ಎಂದು ತಿಳಿದ ಭರತನು ಅವುಗಳಿಗೆ ವಂದಿಸುತ್ತಾನೆ. ನಾಲ್ಕನೆಯ ಪ್ರತಿಮೆಯನ್ನು ವಂದಿಸುವಾಗ ಅದು ದಶರಥನದೆಂದು ಅಲ್ಲಿಯ ದೇಗುಲಿಗನಿಂದ ತಿಳಿದುಬರುತ್ತದೆ; ಮತ್ತು ಅವನಿಂದಲೇ ಸ್ವರ್ಗಸ್ಥರಾದವರ ಮೂರ್ತಿಗಳನ್ನು ಮಾತ್ರ ಅಲ್ಲಿ ಇಟ್ಟಿರುವರು ಎಂಬ ವಾರ್ತೆಯೂ ತಿಳಿದುಬರುತ್ತದೆ. ಹೀಗೆ ಭರತನು ದಶರಥನ ಮರಣದ ವೃತ್ತಾಂತವನ್ನು ಪ್ರತಿಮಾಗೃಹದಲ್ಲಿ ಪ್ರಾಸಂಗಿಕವಾಗಿ, ಬೇರೆ ರೀತಿಯಿಂದ ಅರಿತುಕೊಳ್ಳುತ್ತಾನೆ. ನಂತರ ಅದೇ ದೇಗುಲಿಗನಿಂದ ಶ್ರೀರಾಮನ ವನಗಮನವನ್ನೂ ಅದಕ್ಕೆ ಕಾರಣವನ್ನು ಅರಿತು ಅಲ್ಲಿಗೆ ಬಂದ ಕೈಕೇಯಿಯನ್ನು ನಿಂದಿಸಿ, ಕೌಸಲ್ಯೆಯನ್ನು ವಂದಿಸಿ ಅಲ್ಲಿಂದಲೇ ಭರತನು ರಾಮನನ್ನು ಹುಡುಕಿ ಮರಳಿ ಅಯೋಧ್ಯೆಗೆ ತರಲು ವನಕ್ಕೆ ತೆರಳುತ್ತಾನೆ.

ಈ ಪ್ರತಿಮಾಗೃಹದ ಸನ್ನಿವೇಶ ಭಾಸನ ಸ್ವತಂತ್ರ ಸೃಷ್ಟಿ. ರಾಮಾಯಣದಲ್ಲಿ ಇದರ ಸೂಚನೆ ಕೂಡ ಇಲ್ಲ. ಅತ್ಯಂತ ಧ್ವನಿಪೂರ್ಣವಾದ, ನಾಟಕೀಯವಾದ, ಒಂದು ಹೊಸ ಸನ್ನಿವೇಶವನ್ನು ರಾಮಾಯಣದ ಕಥೆಯಲ್ಲಿ ಸರಿಯಾಗಿ ಹೊಂದಿಸಿದ್ದಕ್ಕಾಗಿಯೇ ಭಾಸನು ತನ್ನ ನಾಟಕಕ್ಕೆ "ಪ್ರತಿಮಾ" ಎಂದು ಹೆಸರು ಕೊಟ್ಟಿರುವುದು. ರಸಿಕರು ಇದನ್ನು ಲಕ್ಷಿಸಿ ಮೆಚ್ಚಬೇಕೆಂಬುದು ಭಾಸನ

ಆಶಯ. ಭಾಸನ ಕೀರ್ತಿಗೆ ಪತಾಕೆಯಂತಿದೆ ಈ ಪ್ರತಿಮಾಗೃಹದ ಸನ್ನಿವೇಶ. ಕೈಕೇಯಿ ಭರತನಿಗೆ ಕಟುವಾದ, ದುಃಖದ ಸಂಗತಿಗಳನ್ನು ತಾನೇ ಮುಂದಾಗಿ ಹೇಳಬೇಕೆಂಬುದು ಭಾಸನ ಇಚ್ಛೆಯಲ್ಲ. ಆದರೆ ಭರತನಿಗೆ ದಶರಥನ ಮರಣ, ರಾಮನ ವನಗಮನ ಮುಂತಾದುವು ತಿಳಿಯದೆ ಗತ್ಯಂತರವಿಲ್ಲ. ಈ ಎರಡನ್ನೂ ಒಟ್ಟಿಗೇ ಸಾಧಿಸಲು ಭಾಸನು ತನ್ನ ಅಪ್ರತಿಮ ಪ್ರತಿಭೆಯ ಮೂಲಕ ಈ ಪ್ರತಿಮಾಗೃಹದ ಸನ್ನಿವೇಶ ಕಲ್ಪಿಸಿದ್ದಾನೆ. ಇದು ನಾಟಕಕ್ಕೆ ಸಜೀವತೆಯನ್ನು ತಂದುಕೊಡುವುದರ ಜೊತೆಗೇ ಕೈಕೇಯಿಯು ಓದುಗರಿಗೆ ಸ್ವಾರ್ಥಿಯಾಗಿ, ಲೋಭಿಯಾಗಿ, ರಾಕ್ಷಸಿಯಾಗಿ ಕಂಡುಬರು ಪ್ರಸಂಗವನ್ನು ಬಹು ಜಾಣ್ಮೆಯಿಂದ ತಪ್ಪಿಸುತ್ತದೆ.

ಸಾಮಾನ್ಯವಾಗಿ ಕೈಕೇಯಿ ಲೋಭಿಯಾಗಿದ್ದಳಷ್ಟೇ ಅಲ್ಲ, ತನ್ನ ದುರಾಸೆಯಿಂದ ಪತಿ ದಶರಥನ ಸಾವಿಗೂ ಕಾರಣಳಾದಳು ಎಂಬ ಭಾವನೆ ರಾಮಾಯಣದ ಕಥೆಯನ್ನು ಬಲ್ಲವರಿಗೆಲ್ಲ ಇರುವುದುಂಟು. ಭಾಸನು ಇದನ್ನು ಬದಲಿಸಿದ್ದಾನೆ. ದಶರಥನಿಗಿದ್ದ ಹಿಂದಿನ ಶಾಪವೇ ಅವನ ಮರಣಕ್ಕೆ ಕಾರಣವಾಯಿತೇ ವಿನಾ ಕೈಕೇಯಿಯಲ್ಲ. ಅವಳು ರಾಮನನ್ನು (ವಸಿಷ್ಠಾದಿಗಳ ಸೂಚನೆಯ ಮೇರೆಗೆ) ಕೆಲ ಕಾಲ ವನಕ್ಕೆ ಕಳಿಸಿದಳು. ಅದರಿಂದ ಪುತ್ರಶೋಕಕ್ಕೆ ಗುರಿಯಾದ ದಶರಥ ಮರಣಹೊಂದಿದನು. ಹೀಗೆ ಶ್ರವಣಕುಮಾರನ ತಂದೆ ಇತ್ತ ಶಾಪವು ಫಲಿಸಿತು. ಆದರೆ ಇಷ್ಟರ ಸಲುವಾಗಿ ಶ್ರೀರಾಮನು ೧೪ ವರ್ಷಗಳ ದೀರ್ಘಕಾಲ ವನವಾಸವನ್ನೇಕೆ ಅನುಭವಿಸಬೇಕು? ಈ ರೀತಿಯ ವಚನವನ್ನು ದಶರಥನಿಂದ ಕೈಕೇಯಿ ಏಕೆ ಪಡೆದಳು? ಇದಕ್ಕೂ ಭಾಸನು ಸಮಂಜಸ ಉತ್ತರವನ್ನು ಕೊಡಲು ಪ್ರಯತ್ನಿಸಿದ್ದಾನೆ. ರಾವಣನಿಂದ ಸೀತಾಪಹರಣ ನಡೆದ ಬಳಿಕ ಭರತನು ಸುಮಂತ್ರನೊಡನೆ ಕೈಕೇಯಿಯ ಹತ್ತಿರ ಬಂದು—"ಸಿಕ್ಕಿತು ಸೊಸೆಯವಮಾನಂ। ಸಿಕ್ಕಲ್ ಸೊಸೆಯೆಂದು ನೀಂ ಗಡ ನಿರುತಂ॥"* —ಎಂದು ಮೂದಲಿಸುತ್ತಾನೆ. ಆಗ ಅವಳು ನಿಜವಾದ ವಿಷಯವನ್ನೆಲ್ಲ "ಹೇಳುವುದಕ್ಕೆ ಇದೇ ಸಕಾಲ"ವೆಂದು ನುಡಿದು ಶ್ರೀರಾಮನನ್ನು ವನಕ್ಕೆ ಅಟ್ಟುವುದರಲ್ಲಿ ತನ್ನ ಸ್ವಾರ್ಥ ವಿರಲಿಲ್ಲವೆಂದೂ ಅದರಲ್ಲಿ ಶ್ರೀರಾಮನ ಹಿತವೇ ಉದ್ದಿಷ್ಟವಾಗಿತ್ತೆಂದೂ ಸ್ಪಷ್ಟೀಕರಿಸುತ್ತಾಳೆ. ದಶರಥನ ಸಾರಥಿಯಾದ ವೃದ್ಧ ಸುಮಂತ್ರನೂ ದಶರಥ ಮಹಾರಾಜನಿಗಿದ್ದ ಶಾಪವನ್ನು ವರ್ಣಿಸಿ, ವಸಿಷ್ಠ-ವಾಮದೇವ ಮುಂತಾದ ಕುಲಗುರುಗಳ ಸೂಚನೆಯ ಮೇರೆಗೆ ಕೈಕೇಯಿ ಹೀಗೆ ನಡೆದುಕೊಂಡದ್ದನ್ನು ವಿವರಿಸುತ್ತಾನೆ. ಆಗ ಭರತನು ಅವಳಿಗೆ—"ಮಗನ ವಿಯೋಗವೆಂಬುದು ಸಮಾನವಾಗಿದ್ದಾಗ ನೀನು ನನ್ನನ್ನೇಕೆ ಕಾಡಿಗಟ್ಟಲಿಲ್ಲ?" ಎಂದು ಪ್ರಶ್ನಿಸುತ್ತಾನೆ. ಆದರೆ ಅದಕ್ಕೆ ಅವಳು ಸಮರ್ಪಕ ಉತ್ತರವೀಯುತ್ತಾಳೆ —"ಮಗನೇ, ಮಾವನ ಮನೆಯಲ್ಲೇ ನೀನಿರುತ್ತಿದ್ದುದರಿಂದ ನಿನ್ನ ವಿಯೋಗ ಮಹಾರಾಜನಿಗೆ ಒಗ್ಗಿಹೋಗಿತ್ತು." ಹೀಗಾಗಿ ತಂದೆಯಿಂದ ಅರೆಗಳಿಗೆ ಬಿಟ್ಟಗಲದ ಶ್ರೀರಾಮನನ್ನೆ ಕೈಕೇಯಿ ವನಕ್ಕೆ ಕಳಿಸಬೇಕಾಯಿತು. ಅವಳು ವನವಾಸದ ಅವಧಿ ೧೪ ದಿವಸಗಳು ಎಂದು ಹೇಳಬೇಕೆಂದಿದ್ದಳು. ಆದರೆ ಅವಳ ಮನಸ್ಸು ಪರ್ಯಾಕುಲವಾಗಿದ್ದರಿಂದ ಬಾಯಿತಪ್ಪಿ ಹದಿನಾಲ್ಕು ವರ್ಷಗಳೆಂದು ನುಡಿದುಬಿಟ್ಟಳು. ಇದು ಕುಂಟು ನೆವವೆಂದು ತೋರುತ್ತದೇನೋ ನಿಜ; ಆದರೆ ಇಲ್ಲಿ ವಿಧಿ ಅಷ್ಟು ಪ್ರಬಲವಾಗಿತ್ತೆಂದು ನಾವು ಕಲ್ಪಿಸಿಕೊಳ್ಳಬಹುದು. ಮೇಲಾಗಿ ತ್ರಿಲೋಕಜ್ಞಾನಿಗಳಾದ ವಸಿಷ್ಠ ವಾಮದೇವರೂ ಇದನ್ನೆಲ್ಲ ಮೊದಲಿನಿಂದ ಅರಿತಿದ್ದರೆಂದ ಬಳಿಕ ಇಲ್ಲಿ ಸಂಶಯಕ್ಕೆ ಆಸ್ಪದವಿಲ್ಲ.

ಹೀಗೆ ಭಾಸನು ಕೈಕೇಯಿ ಪಾತ್ರಕಲ್ಪನೆಯಲ್ಲಿ ಅತಿ ನೂತನ ದೃಷ್ಟಿಯನ್ನಿರಿಸಿಕೊಂಡು ಅವಳು ನಿರಪರಾಧಿ ಎಂಬುದನ್ನು ಚಿತ್ರಿಸಿ, ಅವಳನ್ನು ಉದಾತ್ತೀಕರಿಸಿ ಮಹಾಕವಿಗಳು "ಅಘಟಿತ ಘಟನಾನೂತನಬ್ರಹ್ಮರು" ಎಂಬ ಉಕ್ತಿಯನ್ನು ಮತ್ತೊಮ್ಮೆ ಸಿದ್ಧಪಡಿಸಿದ್ದಾನೆ.

* ಡಾ. ಕೆ. ಕೃಷ್ಣಮೂರ್ತಿಯವರ "ಕನ್ನಡ ಪ್ರತಿಮಾ ನಾಟಕ", ಪುಟ ೨೨

ಲೇಖಕರು :
ಶ್ರೀ. ಎಸ್. ಎಸ್. ಗದಗಕರ
ಧಾರವಾಡ

# ಹಾಸ್ಯ-ಪರಿಹಾಸ

(ಲಘು ಪ್ರಬಂಧ)

ನಗದಿದ್ದ ಮಾನವನ ಬಾಳು-ಬದುಕು ವ್ಯರ್ಥ ಎಂದು ಗಾಂಧೀಜಿ ಒಮ್ಮೆ ಪತ್ರಿಕಾಕರ್ತರಿಗೆ ಹೇಳಿದ್ದರು. ಇಂಥ ನಗೆಯ ಲೀಲಾಪ್ರಪಂಚ ತುಂಬ ವಿಚಿತ್ರವಾದುದು. ಹಲವಾರು ನಾಲಿಗೆಯ ಆದಿಶೇಷನೇ ಅದನ್ನು ಅರಿಯಲಾರದೆ ಹೋದಾಗ ಸಾಮಾನ್ಯರ ಪಾಡೇನು! ಅದು ಅಷ್ಟೊಂದು ವಿಸ್ತೃತ, ವೈವಿಧ್ಯಮಯವಾಗಿರುವುದು. ಆ ನಗೆಯ ಪ್ರಕಾರಗಳೂ ತುಂಬ. ಇಂಥ ನಗೆ, ಹಾಸ, ಪರಿಹಾಸವನ್ನು ಕಾಣಲು ವಿಶಿಷ್ಟ ಕಂಣೇ ಬೇಕು. ಈ ಹಾಸ ಪರಿಹಾಸದ ವಿವಿಧತೆಯನ್ನು ಲೇಖಕರಿಲ್ಲಿ ಮನಂಬುಗುವಂತೆ ಚಿತ್ರಿಸಿದ್ದಾರೆ.

"Laugh, laugh, the world
laughs with you,
Weep, weep, you weep but alone"
—W. Hazlitt

ಶೃಂಗಾರ, ವೀರ, ಹಾಸ್ಯ, ರುದ್ರ, ಭಯಾನಕ ಮೊದಲಾದ ನವರಸಗಳು ಸಾಹಿತ್ಯದ ಜೀವನಾಡಿಗಳೆನಿಸಿದಾಗ, ಹಾಸ, ನಗೆ ಇಲ್ಲವೆ ವಿನೋದಕ್ಕೆ ವಿಶೇಷ ಪ್ರಾಮುಖ್ಯ ಉಂಟೆಂದು ಆರಂಭದಲ್ಲಿಯೆ ಸಾಧಿಸತೊಡಗಿದರೆ, ಚಿಕಿತ್ಸಕ ಓದುಗರು ಸಂಶಯ ತಳೆದಾರೆಂದೆನಿಸುವುದು. ಹಾಗೆ ನೋಡಿದಲ್ಲಿ "ನಕ್ಕಾವಾ ಗೆದ್ದಾವಾ" ಎನ್ನುವ ಉಕ್ತಿಯಲ್ಲಿ ಹುದುಗಿದ ಸ್ವಾರಸ್ಯ, ರಹಸ್ಯ ಎಂತಹದು! ಹಾಸ್ಯ ಅಥವಾ ನಗೆಯೊಂದು ಹೇಗೋ ಪ್ರಪಂಚದಿಂದ ಮಟ್ಟಮಾಯವಾಯಿತೆನ್ನಿ. ಎಂತಹ ಕೋಲಾಹಲ! ಆ್ಯಟಂಬಾಂಬಿನ ಭೀಕರತೆ ಸರಿಗಟ್ಟುವಷ್ಟು ರೌದ್ರ ರಸ ವಾಸ್ತವಲೋಕದಲ್ಲಿ ಅಡಿ ಇಟ್ಟೀತು!

ಇರಲಿ. ಹಾಸ್ಯದ ಮುಖವಾಡವಾದ ನಗೆಯ ಸ್ವರೂಪ ಎಂತಹದು! ಪಲವುಂ ನಾಲಿಗೆಯುಳ್ಳ ಆದಿಶೇಷ ಕೂಡ ನಗೆಯ ಲೀಲಾಪ್ರಪಂಚ ಅರಿಯಲಾರ. ಅಷ್ಟು ವಿಸ್ತೃತ, ಗಹನ, ವೈವಿಧ್ಯಮಯ ಆ ರಂಗ. ಮಂದಸ್ಮಿತ, ಮುಗುಳುನಗೆ, ಗಹಗಹಿಸಿ ನಗುವುದು, ಖಿಕ್ ಎಂಬ ನಗೆ, ಖೊಳ್ಳೆಂಬ ಸದ್ದು, ಪಿಸಿಪಿಸಿ, ಹಿಹಿಹಿಹಿ ಎಂಬ ತಿರಸ್ಕಾರದ ಪ್ರತೀಕ, ಕೊಂಕುನಗೆ,— ಏನು ನಗೆಯ ಪ್ರಕಾರಗಳು! ಬಾಯಿಯಲ್ಲಿ ಹಲ್ಲಿಲ್ಲದ ವೃದ್ಧಾಪ್ಯದಲ್ಲಿ ಗಾಂಧೀಜಿ ನಕ್ಕ ನಗೆ ಜಗತ್ತಿಗೇ ಬೆಳಕು ಹರಡಿತು. ಹಸುಗೂಸುಗಳನ್ನು ವಾತ್ಸಲ್ಯಾತಿಶಯದಿಂದ ಅಪ್ಪಿ ಮುದ್ದಿಟ್ಟ ಆ ಜವಾಹರಲಾಲರ ನಗೆಮುಗುಳು ವಿಶ್ವಪ್ರೇಮದ ಪ್ರತೀಕ.

**"ಅಲಕ್ಷ್ಯದಂತ ಮುಕುಲಾನನಿಮಿತ್ತ ಹಾಸ್ಯೈರವ್ಯಕ್ತವರ್ಣರಮಣೀಯ ವಚಃ ಪ್ರವೃತ್ತೀನ್"**

ಎಂದು ಕವಿಕುಲಗುರು ಕಾಲಿದಾಸನು ತನ್ನ ಲೋಕೋತ್ತರ ಶಾಕುಂತಲ ನಾಟಕದಲ್ಲಿ ಉದ್ಗಾರ ತೆಗೆದಂತೆ, ಗುಲಾಬಿ ಗಲ್ಲದ ಹಸುಮಕ್ಕಳ ಎಳೆನಗೆ ಎಂದೂ ಮುದ್ದು; ಯಾರಿಗೂ ಮೋಹಕ. ಇಂತಹ ಮಕ್ಕಳಾದುದಕ್ಕೆ ಕಾದಂಬರಿಯ ತಾರಾಪೀಡ— 'ನ ಹಿ ಕೃತಂ ಅವದಾತಂ ಕರ್ಮ' ಎಂದು ವಿಲಾಸವತಿಯೆದುರು ಕಲ್ಮರಗುವಂತೆ ತನ್ನ ವ್ಯಾಕುಲತೆ ತೋಡಿಕೊಳ್ಳುವನು.

ಇಂತಹ ಸುಕುಮಾರಹಾಸದ, ನಗೆಯ ಉಗಮದ ಬಗೆಗೆ ಪರ್ಯಾಲೋಚಿಸಿದಾಗ, ತಾತ್ವಿಕವಾಗಿ ಹಲವಾರು ವಿಚಾರಗಳು ಬುದ್ಧಿಜೀವಿಯನ್ನು—ರಸಿಕನನ್ನು ಮುತ್ತುವವು- ಹಾಗೆಯೇ ಕೆಣಕುವವು. "Humour is a sense of the incongruous"—ಎಂಬುದು ಸಮರ್ಪಕವಾದ ನುಡಿ. ನಾವು ಭರಬೀದಿಯಲ್ಲಿ ಹೊರಟಿರುವೆವೆನ್ನಿ. ಆಗ ಸೂಟು, ಬೂಟು ವೇಷಧಾರಿಯಾದ ನವಮನ್ವಂತರದ ಯುವಕನೊಬ್ಬ ಬಾಳೆಯಹಣ್ಣಿನ ಸಿಪ್ಪೆಯ ಮೇಲೆ ಕಾಲಿಟ್ಟಾಗ ಜಾರಿ ಬಿದ್ದನೆನ್ನಿ, ಆಗಿನ ಸುತ್ತು-ಮುತ್ತಲಿನ ಜನರ ನಗೆಯ ತರಂಗಗಳ ಕೋಲಾಹಲ ಎಂತಹದು! ಆಗ ಆ ಬಿದ್ದ ಪೆಟ್ಟಿಗಿಂತ ನಕ್ಕ ಪೆಟ್ಟೇ ಹೆಚ್ಚಿನದೆನಿಸಿ ಆ ಸದ್ಗೃಹಸ್ಥ ಮೂರು ದಿನ ಹೊರಗೆ ಅಷ್ಟು ಮನಸೋಕ್ತ ಬಾರದಿರನೆಂದರೆ ಪ್ರಮಾದವೇನು? ಆ ಅವಮಾನ—ಶಲ್ಯದ ಮೂಲಕ ಅವ ನೌಕರಿಗೇ ಮುಂದೆ ಹೋಗಲಿಕ್ಕಿಲ್ಲ ಎಂದರ್ಥವಲ್ಲ. ಆದರೆ ಜನರ ಮುಖ ಅಷ್ಟು ತಪ್ಪಿಸಿಯಾನು ಎಂದಿಷ್ಟೇ ಮಥಿತಾರ್ಥ. ಏನಿದ್ದರೂ ಇಂತಹ ನಗೆ ಸ್ವಚ್ಛಂದ ಸ್ವರೂಪದ್ದಿದ್ದರೂ ಕಣ್ಣೀರಿಗೆ ನಿಕಟವರ್ತಿ. "They are different facts of the same gem" ಎಂಬುದು ಉಚಿತೋಕ್ತಿ. ಇವರ ನಿದರ್ಶನಕ್ಕೆಂದು ನಾವು ಚಾರ್ಲ್‌ಸ್ ಲ್ಯಾಂಬ್‌ನ "Dream children" ಪ್ರಬಂಧ ಅವಲೋಕಿಸಬಹುದು. ಲ್ಯಾಂಬ್ ಅವಿವಾಹಿತನಾಗಿ, ಸಹೋದರಿಯ ಕಲ್ಯಾಣಕ್ಕಾಗಿ ಹಾಗೇ ಉಳಿದಿದ್ದರೂ ತಾನು ಲಗ್ನವಾಗಿ ಮೊಮ್ಮಕ್ಕಳನ್ನು ಪಡೆದಾಗಿನ ಕಾಲ್ಪನಿಕ ಚಿತ್ರ ಮನಸ್ಸಿನಲ್ಲಿ ಧೇನಿಸತೊಡಗಿದರೆ, ಕೊಂಚ ನಗೆ ಉದ್ಭವಿಸದೆ ವಿಧಿ ಇಲ್ಲ. ಆದರೆ ಆ ಎಲ್ಲ ರಸಮಯ ಸ್ವರ್ಣಸ್ವಪ್ನ, ರೋಮಾಂಚಕತೆ, ಹಿಂದುಗಡೆ ಬಾಹ್ಯಪ್ರಂಪಚದಲ್ಲಿ ಚಲ್ಲಾಪಿಲ್ಲಿಯಾದಾಗ ಎಂತಹ ವ್ಯಥೆ! ಮತ್ತೆ ಅದೆ ಮಧ್ಯವಯಸ್ಕ ಲ್ಯಾಂಬ್, ಅದೇ ಹಾಳು ಹಾಳು ಸುರಿಯುವ ಕೊಠಡಿ, ಅರೆಹುಚ್ಚಿ ತಂಗಿ, ಮುರುಕು ವಿರಾಮಾಸನ, ಧೂಳಡರಿದ ಪುಸ್ತಕದ ಶೆಲ್ಫ!

ಹಾಸ್ಯದ ಉದ್ಗಮ ಹೀಗಿದ್ದರೂ ಪೌರಾಣಿಕ ಕಾಲದಲ್ಲಿ ಅದರಿಂದಾದ ಅನರ್ಥ ಅಪರಿಮಿತ. ರಾಜಸೂಯಯಾಗ ಪ್ರಸಂಗದಲ್ಲಿ ಪಾಂಡವರು ಆನಂದದ ಪರಾಕಾಷ್ಠೆ ಮುಟ್ಟಿದರು. ಮಯನು ಅವರಿಗಾಗಿ ಮಾಯಾ ಸಭಾಗೃಹ ನಿರ್ಮಿಸಿಕೊಟ್ಟ. ಮುತ್ತು ರತ್ನ ವಜ್ರವೈಡೂರ್ಯಗಳ ಆಗರ ಅದು. ಎಷ್ಟು ವಿಸ್ತೀರ್ಣ, ಏನು ರಂಜನೆ ಅವರದು! ಪಾಂಡವರ ಆಗಿನ ದೌಲತ್ತಿಗೆ ಯಾರೂ ಬೆರಳು ಕಚ್ಚುವಂತಿತ್ತು. ದುರ್ಯೋಧನ, ಶಕುನಿಗಳು ಕ್ಷಣ ಕಾಲ ಹೌಹಾರಿದ್ದರು. ಅವರ ಕಣ್ಣು ಕುಕ್ಕಿದವು. ಆದರೆ ಮುಂದೆ ದುರ್ಯೋಧನ ಆ ಮಯನ ಸಭೆಯ ರಹಸ್ಯ ತಿಳಿಯಲಾಗದೆ ತಪ್ಪಿತಸ್ಥನಾಗಿ ನಡೆದಾಗ ಅಂತಃಪುರದ ಲಲನೆಯರು ನಕ್ಕರು. ದ್ರೌಪದಿಯೂ ನಕ್ಕುಬಿಡಬೇಕೇ ಪರಿಹಾಸದ ಬಗೆಯಲ್ಲಿ? ದುರ್ಯೋಧನನು ಭಾರಿ ಕೆಂಡವಾದ. ಬದ್ಧಭ್ರುಕುಟಿಯಾದ. ಆದರೆ ಮಾಡುವನೇನು? ಆ ಗುಪ್ತ ಕ್ರೋಧಾಗ್ನಿಯ ಜ್ವಾಲೆ ಮಾತ್ರ ನಂದದೆ ಮುಂದೆ ಕುರುಕ್ಷೇತ್ರಯುದ್ಧಕ್ಕೆ ನಾಂದಿಯಾ-

ಬಿಡು. ಕಿಡಿ ಹೋಗಿ ಜ್ವಾಲಾಮುಖಿಯಾದುದು ನಗೆಯ ಮೂಲಕವೇ !

ಮಹಾಕಾವ್ಯದ ಪ್ರಪಂಚದಿಂದ ಥಟ್ಟನೆ ನಾವು ವಾಸ್ತವರಂಗಕ್ಕೆ ಇಳಿದೆವೆನ್ನಿರಿ. ಆಗ ನಗೆಗೆ ವೈವಿಧ್ಯದ ಪ್ರಸಂಗಗಳು ನೂರಾರು ಒದಗುವವು. ಆ ನಗೆಯ ವೈಚಿತ್ರ್ಯವೆಂದರೆ, ನಗಲು ಅವಕಾಶ ಸಿಗುವದು ಏಕಾಂಗಿಯಾದಾಗಲೂ ಎಂಬುದು. ಅದು ಹುಚ್ಚು ನಗೆ ಎನ್ನಲೇಬೇಕು. ಇಂದಿನ ಇಪ್ಪತ್ತನೆಯ ಶತಮಾನದ ಯುಗಕ್ಕೆ ಸಹಜವಾಗಿ ಜಾಹೀರಾತಿನ ಯುಗ ಎನ್ನಬಹುದು. ಅದರಲ್ಲಿ ತಪ್ಪುಗ್ರಹಿಕೆಗೆ ಎಳ್ಳಷ್ಟೂ ಅವಕಾಶವಿಲ್ಲ. ಬೀದಿಯಲ್ಲಿ ಕಣ್ಣಿಗೆ ಬೀಳುವ ಬೋರ್ಡುಗಳು ವಿಲಕ್ಷಣ ಭಾಷಾ-ಸೌಂದರ್ಯದಿಂದೊಡಗೂಡಿ ಯಾರನ್ನೂ ನಗೆಯ ತುಂದಿಲರನ್ನಾಗಿಸದೆ ಬಿಡುವದಿಲ್ಲ. “ಇಲ್ಲಿ ತಾಸೆ ಬಜಂತ್ರಿ ಬಾರಿಸಲ್ಪಡುತ್ತೇವೆ” ಎಂದು ಬರೆದು ವಿಖ್ಯಾತ ವೈಯ್ಯಾಕರಣಿ ಪಾಣಿನಿಯ ಕೊಲೆಯನ್ನು ಹಗಲೇ ಹಾಡೆ ವ್ಯವಸ್ಥಿತವಾಗಿ ಮಾಡಿರುವರು. ‘ಕಿರಾಣಿ’ ಎಂಬ ಶಬ್ದವನ್ನು ಒಡೆದು ‘ಕಿ’ ಒಂದು ಸಾಲಿನಲ್ಲಿ, ‘ರಾಣಿ’ ಎಂದು ಇನ್ನೊಂದು ಸಾಲಿನಲ್ಲಿ ಬರೆದು ಅಪಾರ್ಥಕ್ಕೆ ಎಡೆ ಕಲ್ಪಿಸಿ ಕೊಡುವರು. ಇನ್ನು ಬೇರೆಡೆ ದಿಟ್ಟಿ ಚೆಲ್ಲಿದರೆ, “ಇಲ್ಲಿ ಬನಾರಸಿ ಪೀತಾಂಬರ, ಪತ್ತಲ, ಸೀರೆ ಒಂದೇ ಸೋಯಿ ದರದಲ್ಲಿ ದೊರೆಯುವವು” ಎಂದು ಬರೆದಿರುವರು. ಆಗ ನಾವು ಆ ಎಲ್ಲ ಮಾಲಿನ ಖಚಿತ-ಸ್ವರೂಪದ ಬಗ್ಗೆ ಸಂಶಯ ತಳೆಯದೆ ಇರಲಾರೆವು. ಇವೇ ಪ್ರಸಂಗದಲ್ಲಿ ನಾವು ಇನ್ನೂ ಕಾಲೇಜಿನಲ್ಲಿರುವಾಗ ನೋಡಿದ ಒಂದು ಮರಾಠಿ ಚಿತ್ರಪಟದ ನೆನಪಾಗಿ ನಗೆಯ ತುಷಾರ ಹೊರಸೂಸುವವು. ಕಥಾನಾಯಕನ ಅಕ್ಷರಶತ್ರು (ಪೂರ್ಣವಲ್ಲ!) ಗೆಳೆಯ ಮಹಾ ಚಾಣಾಕ್ಷ. ಪ್ರತಿಯೊಬ್ಬ ವಿದ್ಯಾರ್ಥಿ ವಿದ್ಯಾರ್ಥಿನಿಯ ಕಡೆಯಿಂದ ಫೀ ತೆಗೆದುಕೊಳ್ಳುವ ಅವನ ವಿಧಾನವೇ ಬೇರೆ. ಒಬ್ಬರಿಗೆ ಓದು ಹೇಳಿದುದಕ್ಕೆ ಅವರಲ್ಲಿ ಊಟ. ಇನ್ನೊಬ್ಬರಲ್ಲಿ ವಸತಿ. ಕಲಿಸುವ ಕಲೆಗಳೊ? ಚೌಷಷ್ಟಕ್ಕೆ ಕೇವಲ ಹತ್ತೊ ಇಪ್ಪತ್ತೊ ಅಷ್ಟೆ ಕಡಿಮೆ. ತಬಲಾ, ಸಿತಾರ, ಪೇಟಿ, ಜನಿವಾರ ತಯಾರಿಸುವುದು, ಸಂಗೀತ, ಗಣಿತ, ಸಾಹಿತ್ಯ, ಸಂಸ್ಕೃತ- ಇವೇ ಮಾದರಿ! ಮೇಲೆ ಆ ಉಪಾಧ್ಯಾಯಮಹಾಶಯನದು ಅಪ್ರತಿಮ ಸಂಶೋಧಕ ಬುದ್ಧಿ. ‘Book’ ಎಂಬ ಶಬ್ದವನ್ನು ಆಂಗ್ಲರು ಕದ್ದರು; ಮೂಲ ಸಂಸ್ಕೃತ ಅದು ಎಂದು ‘ಬುಕಂ ಬುಕೆ ಬುಕಾನಿ’ ಎಂದು ನುಡಿಸಲು ಕಲಿಸುತ್ತಿದ್ದ. ಅವನ ರೂಪವೊ? ಮನ್ಮಥನು ಎದೆ ಒಡೆದುಕೊಳ್ಳುವಂತಹದು. ಧ್ವನಿ ಗೋಣು ಮುರಿಸಿಕೊಂಡ ಸರಸ್ವತಿಯನ್ನು ಅನುಕರಿಸುವಂತಹದು. ಹೀಗಿದ್ದರೂ ಅಡ್ಡದಾರಿ ಹಿಡಿದ ಕಥಾನಾಯಕನಿಗೆ ಅವನು ಸನ್ಮಾರ್ಗಕ್ಕೆ ಹಚ್ಚುವನು. ಆ ಬುದ್ಧಿಮತ್ತೆಗೆ, ಜಾದೂಗಾರಿಕೆಗೆ, ಲೋಕವ್ಯವಹಾರಜ್ಞತೆಗೆ ಶರಣುವೆನ್ನುವೆವು ನಾವು.

ದೈನಿಕ ಜೀವನ ಬದಿಗಿರಿಸಿ ನಾವು ಕ್ಷಣ ಕಾಲ ಕನ್ನಡ ಸಾಹಿತ್ಯಕ್ಕೆ ಬಂದೆವೊ ಅಲ್ಲಿ ಪರಿಶುದ್ಧ ನಗೆ ಒದಗುವುದು. ಮುದ್ದಣ ಮನೋರಮೆಯರ



ಸುಸಂಸ್ಕೃತ ನಗೆ ನಮಗೆ ನಿರಂತರ ಜ್ಞಾನದೀವಿಗೆ. ನೀರಿಳಿಯದ ಗಂಟಲೋಳ್ ಕಡುಬಂ ತುರುಕಿದಂತಾಯ್ತು; ಪದ್ಯಂ ವಧ್ಯಂ ಗದ್ಯಂ ಹೃದ್ಯಂ; ಹೋಳಿಗೆ ತುಪ್ಪಕ್ಕೇಂ ಕೊರತೆ? ರಾಘವನ ಯಜ್ಞಪರಿಸಮಾಪ್ತಿಯೆಂತಾಯ್ತು ಪೇಳ್; ಬಗ್ಗಿಸೆಲೆ ಕೋಗಿಲೆ! ಏನೀಮಾಮರದ ಸೆಳೆಗೊಂಬಿನೊಳ್ ಮೂಗುವಟ್ಟಿರ್ಪಯ? ಕಜ್ಜಲರ್ ಕೆಂಪಾದುದೇಕೆ? ಏತರ್ಕೆ? ಬೆರಗುವಡುವಯ್?- ಎಂಬಂತಹ ನುಡಿಗಳು ಮಾತಿನ ಚಮತ್ಕೃತಿಗೂ ಉಚ್ಚಮಟ್ಟದ ವಿನೋದಕ್ಕೂ ನವ್ಯತೆಗೂ ಜೀವಂತ ನಿದರ್ಶನವಾಗಿವೆ.

ಇತ್ತೀಚಿನ ಗದ್ಯಸಾಹಿತ್ಯಕ್ಕೆ ಬಂದರೆ ತೀರಿತು. ನಗೆಯ ಬುಗ್ಗೆಯೇ ಹೊರಚಿಮ್ಮುವದು. ಆದರೆ ಅದು ಬುದ್ಧಿಮತ್ತೆಯ ಆಗರ. ಕೀಳು ದರ್ಜೆಯ, ಕುತ್ಸಿತ ನಗೆಗೆ ಅಲ್ಲಿ ಎಡೆ ಇಲ್ಲ. ಕನ್ನಡದ ಭಾರ್ಗವರೆನಿಸಿದ ಕಾರಂತರ ‘ಹಳ್ಳಿಯ ಹತ್ತು ಸಮಸ್ತರು’, ‘ಮೈಲುಕಲ್ಲಿನೊಡನೆ ಮಾತುಕತೆ’ ವ್ಯಂಗ್ಯನಗೆಗೆ ಮೀಸಲು. ಶ್ರೀರಂಗರ ನಾಟಕಗಳ ಕೆಲ ಪಾತ್ರಗಳ ಮಾತಿನ ತಿರುವುಮುರುವಿನ ಜಾಣ್ಮೆ, ಕವಡುಗಂಟಕ ವಿಚಾರಸರಣೆ, ಆಚಾರವಿಚಾರಗಳ— ತೊಡಕು ಬುದ್ಧಿಜೀವಿಗಳಿಗೆ ಜಾಣ್ಮೆಯ ಮಂದಹಾಸ ಒದವಿಸದೆ ಇಲ್ಲ. ಸಂಸ್ಕೃತ ವಾಙ್ಮಯದ ವಿದೂಷಕ ಮೈತ್ರೇಯ, ಶಕಾರರಾಗಲಿ, ಆಂಗ್ಲ ನಾಟ್ಯಲೋಕದ ಕ್ಲೌನ್, ಫಾಲ್‌ಸ್ಟಾಫ್‌ರಾಗಲಿ ತಮ್ಮ ಕುರೂಪವೇಷಕ್ಕಿಂತ ಮಾತಿನ ಪ್ರಗಲ್ಭತೆಯಿಂದ ನಮ್ಮನ್ನು ಮುಗ್ಧರನ್ನಾಗಿಸುವರು.

ದಾಸ ಶಿವಶರಣರದೂ ಒಂದು ವಿಶಿಷ್ಟವಾದ ಹಾಸ. ಆ ಪರಿಹಾಸದಲ್ಲಿ ಗೂಢಾರ್ಥ ಹುದುಗಿದೆ. ಹೊರಗೆ ಏನೊ ನಗೆಯ ಸಂದರ್ಭ ಎನಿಸುವಂತಿದ್ದರೂ ಅಂತರಂಗ ಅರ್ಥಗರ್ಭಿಯಾದುದು. ಆ ನಗೆ ವೈರಾಗ್ಯದ ನಗೆ. ಸಮಾಜ ತಿದ್ದುವ ಎದೆಗಾರಿಕೆಯ ಆತ್ಮವಿಶ್ವಾಸದ ಮುಗುಳುನಗೆ. “ನಗೆಯು ಬರುತಿದೆ’ಎನಗೆ, ನಗೆಯು ಬರುತಿದೆ” ಎಂದು ಹಾಡಿ ದಾಸರು ಜನರ ಡಾಂಭಿಕತನ ಬಯಲಿಗೆಳೆದರು. ಬರಿ ಗಡ್ಡ ಮೀಸೆ ತೆಗೆಯಿಸಿ, ಗೊತ್ತು ನಾಮ ಬಡೆದುಕೊಂಡು, ಅರ್ಧ ತಿಳ್ದ

ಮುದ್ರೆ ಹಚ್ಚಿಕೊಂಡು ಗುಡ್ಡಗುಡ್ಡದ ಮಾತು ಹೇಳುವ ಹುಚ್ಚು ಕರ್ಮಠರಿಗೆ ಅವರು ವೈಷ್ಣವರೆಂದು ಮನ್ನಿಸಲಿಲ್ಲ. ಮತದ ಸಿದ್ಧಾಂತದ ಪದ್ಧತಿ ಚಾಚೂ ತಪ್ಪದೆ ಮೈಗೂಡಿಸಿಕೊಂಡವರಿಗೆ ಕೈ ಹಚ್ಚಲಿಲ್ಲ.

"ಹರಿಪಾದವಿರಲಿಕ್ಕೆ ಪರದೈವಂಗಳಿ-
ಗೆರಗಲೇಕೆ ?
ವರ ಮಾಣಿಕವಿದ್ದು ಎರವಿನ ಒಡವೆಯ
ಬಯಸಲೇಕೆ ? "

ಎಂದು ಬುದ್ಧಿವಂತಿಕೆಯ ತಾರ್ಕಿಕತೆಯಿಂದ ಭಕ್ತರನ್ನು ಆಹ್ವಾನಿಸಿದರು.

" ಮನವ ಶೋಧಿಸಬೇಕು ನಿಚ್ಚ, ದಿನ
ದಿನ ಮಾಡುವ ಪಾಪಪುಣ್ಯದ ವೆಚ್ಚ."

ಎಂದು ತಲೆದೂಗುವಂತೆ ತಿಳಿಯಾಗಿ ಪಾಪ-ಪುಣ್ಯದ ವಿಚಾರ ಲೀಲಾಜಾಲವಾಗಿ ಉಸಿರಿರುವರು. ಭಾರತೀಯ ಅಧ್ಯಾತ್ಮಕ್ಕೆ ಬೇಜಾರ ಒಂದು ವೇಳೆ ತಲೆದೋರಿತೆನಿಸಿದರೆ, ಆಂಗ್ಲ ವಾಙ್ಮಯ-ವಿನೋದ, ವಿದ್ಯೆ, ಅನುಭವಗಳ ತ್ರಿವೇಣಿಸಂಗಮ ಎನಿಸುವದು. ಅಲ್ಲಿಯ ಹಲವು ಲೇಖಕರ ಪಾಡು, ಕೃತಿಗಳಲ್ಲಿಯ ನೈಜ ಹಾಸ್ಯ, ಅಪಾರ ಪಾಂಡಿತ್ಯ-ಸುಸಂಸ್ಕೃತರನ್ನು ರಂಜಿಸದಿಲ್ಲ.

ಡಾ. ಜಾನ್ಸನ್ನರ ಜೀವನ ಆಯ್ದುಕೊಳ್ಳಿ. ಅವರು ಹುಟ್ಟುಸ್ವಾಭಿಮಾನಿ. ಹಾಸ್ಟೆಲ್ಲಿನಲ್ಲಿದ್ದಾಗ ಸಿರಿವಂತ ವಿದ್ಯಾರ್ಥಿಯೊಬ್ಬ, ಇವ ಬರಿಗಾಲಿನಿಂದ ನಡೆವುದು ನೋಡಿ ಸಹಿಸಲಾಗದೆ ಸದ್ಬುದ್ಧಿಯಿಂದ ಜೋಡು ಕೊಡುಮಾಡಿದರೆ, ಅವನ್ನು ಕಿಡಿಕಿಯೊಳಗಿಂದಲೆ ಹೊರಗೆ ಬಿಸಾಕಿದನಂತೆ ಇವ. ಎಂಥ ವಿಕ್ಷಿಪ್ತತೆ ಎನಿಸೀತು ಕ್ಷಣ. ಆದರೆ ಜಾನ್ಸನ್ ವಿಶ್ವಕುಟುಂಬಿ. "Pecuniary losses, unless they reduced the loser absolutely to beggary moved him very little" ಎಂಬುದು ಅವರ ವಿಷಯದಲ್ಲಿ ಅರ್ಥಪೂರ್ಣ. ಅಂತೇ ಜಾನ್ಸನ್‍ರು ರೋಗಪೀಡಿತರನ್ನು ಅನಾಥರನ್ನು (?) ಬೆನ್ನುಮೇಲೆ ಹೊತ್ತುತಂದು ತಮ್ಮ ಮನೆ ಮಠವನ್ನಾಗಿಸಿದರು. ಅದು ಒಮ್ಮೊಮ್ಮೆ ಹುಚ್ಚರ ಆಸ್ಪತ್ರೆಯೂ ಅನಿಸುತ್ತಿತ್ತು. ಇಂಥವರು, ಪಾಪ! ಶ್ರೀಮತಿ ಥ್ರೇಲ್‍ರು—'ಏನು ಲಂಡನ್ ಬೀದಿಗಳು ಧೂಳಿಮಯ' ಅಂದುದಕ್ಕೆ ಕಿಡಿಕಿಡಿಯಾದರು. ತನ್ನ "Good Natured Men" ನಾಟಕ ಕೆಟ್ಟಿತು; ಜನರ ಸಹಾನುಭೂತಿ ದೊರೆಯಲಿಲ್ಲವೆಂದು ಗೆಳೆಯ ಗೊಲ್ಡ್‌ಸ್ಮಿಥ್ ಪೇಚಾಡಿದರೆ, ಇವರ ಮನ ಕರಗಲಿಲ್ಲ. ಗಂಡ ಸತ್ತನೆಂದು ಶ್ರೀಮತಿ ಟಿಪ್ಪಿಸ್ಪಾರ್ಕ್‍ಳು ಮರುಗಿದರೆ, ಒಬ್ಬ ಅಗಸಗಿತ್ತಿ ಒಂಬತ್ತು ಮಕ್ಕಳಿದ್ದರೂ ಎದೆಯೊಡೆದುಕೊಂಡು ಸಾಯುವದಿಲ್ಲವೆಂದು ಉತ್ತರಿಸಿದರು.

"He Scarcely ever took wine. But when he drank it, he drank it greedily and in large tumblers" ಎಂದು ಚರಿತ್ರೆಕಾರರು ಜಾನ್ಸನ್ನರ ವಿಕ್ಷಿಪ್ತತೆ ನೋಡಿ ನಗೆಯಾಡಿರಲು ಸಾಕು. ಬೀದಿಯಲ್ಲಿಯ ದೀಪದ ಖಂಬಗಳನ್ನು ತಪ್ಪದೆ ಮುಟ್ಟುತ್ತ ಹೋಗುವದು ಅವರ ಇನ್ನೊಂದು ವಿಲಕ್ಷಣ ಚಟ.

ಕುಟುಂಬದ ಚಿತ್ರ ತೆಗೆಯಿಸಿಯಾದ ಮೇಲೆ ಅದನ್ನು ಬಾಗಿಲಿನೊಳಗಿಂದ ಹೊರಗೆ ಒಯ್ಯಲಾಗಲಿಲ್ಲವಂತೆ! ನಾಲ್ಕನೆಯ ಸಲ ವಿವಾಹವಾದ ವಿಲ್ಮಾಟ್‍ನ ಮುಂದ ವಿಕಾರ, ಏಕಪತ್ನಿವ್ರತಸ್ಥನಾಗುವದರ ಮಹಿಮೆ ಬಣ್ಣಿಸುವನು. ರಾಮ, ಸೀತೆ ಇವರು ಹಾಲಿವುಡ್ ಫ್ಯಾಶನ್ನಿಗೆ ಮರುಳಾದಂತಹ ಈ ಹಲವು ಸನ್ನಿವೇಶಗಳು. ಗೋಲ್ಡ್-ಸ್ಮಿಥ್‍ರ 'ವಿಕಾರ ಆಫ್ ವೇಕ ಫೀಲ್ಡ' ಕಾದಂಬರಿಗೆ ಅವರ್ಣನೀಯ ಸೊಬಗು, ಹಾಸ ಪರಿಹಾಸ ಒದಗಿಸಿವೆ.

ಇನ್ನು ಬರ್ನಾರ್ಡ ಶಾ ರಂತಹರ ನಗೆ ನಗೆಯೇ ಅಲ್ಲ. ಅದು ಜಗತ್ತಿನ ದಡ್ಡತನವನ್ನು ತುಚ್ಛವಾಗೆಣಿಸಿದ ರೀತಿ ಅಷ್ಟೆ.

ಆಡಳಿತೆಯನ್ನು ವಿಡಂಬಿಸಿ ತೋರಿಸಲು "ಗಲಿವ್ಹರನ ಪ್ರವಾಸ" ರಚಿಸಿದ ಸ್ವಿಫ್ಟ್, ಮಕ್ಕಳನ್ನು ರಂಜಿಸಿದರೂ ಹಿರಿಯರು ತಲೆತುರುಸಿಕೊಂಡು ನಿರಂತರ ವಿಚಾರಪರರಾಗಬೇಕಾಯಿತು. ಎಚ್. ಜಿ. ವೆಲ್ಸರು ನಾಳಿನ ಜಗತ್ತನ್ನು ನೋಡಲು 'ಕಾಲಯಂತ್ರ' ಯೋಜಿಸಿ ನಗಿಸಿದ್ದು, ಜನತೆಯನ್ನು ಕಂಡು ನಗೆಯಾಡಿದ್ದು ಸಮಾಜಸುಧಾರ-ಕತೆಯ ಧರ್ತಿಯಲ್ಲಿ! ಹಾಗೆಯೇ ಸ್ಪೇನದ ಸರ್ವಾಂಟಿಸ್‍ರು ತಮ್ಮ "ಡಾನ್ ಕ್ವಿ ಹೊ' ಪಾತ್ರದ ಮುಖಾಂತರ ಹಿಂದಿನ ಇಂದಿನ ತಲೆ-ಮಾರಿನ ತಲೆತಿರುಕತನ ಬಯಲಿಗೆಳೆದರು.

ನಗೆ, ಪರಿಹಾಸದ ವ್ಯಾಪ್ತಿ ಇಷ್ಟಿದ್ದರೂ ಅಸಹಜತೆ ಅದರ ಮೂಲ ಎಂದು ಹೊಳೆದಾಗ ಚಿಕ್ಕ ಮಕ್ಕಳ ಕನ್ನಡಿಯಂತಹ ತಿಳಿಮನಸ್ಸಿನ ಚಿತ್ರ ಕಣ್ಕಟ್ಟುವದು, ಅವರ ಕಲ್ಪನಾವಿಲಾಸ ಹಾಸದ ಆಗರ. ಈ ಸಂದರ್ಭದಲ್ಲಿ ವಿಶ್ವವಂದ್ಯ ಕವಿ ಠಾಕುರರ Hero ಎಂಬ ಕವನ ನಮ್ಮ ಮನಸೆಳೆಯುವದು. ಆ ಹುಡುಗನ ಕಲ್ಪಕ ಶಕ್ತಿಗೆ ನಾವೆ ದಂಗಾಗಿ ನಿಲ್ಲುವೆವು. ಬೆರಗಿನ ದ್ಯೋತಕವೆಂದು ನಗೆಯ ಕುಡಿಮಿಂಚು ಕಾಣಿಸಿಕೊಳ್ಳುವದು. ಆ ಬಾಲನಾಯಕನ ಅದ್ಭುತತೆಯ ಅಂಗ-ಅಂಗಗಳಲ್ಲಿ ಪರಿಹಾಸ ಹೊನಲು ಹೊನಲಾಗಿ ಹರಿಯುವದು. ಅವನ ವಿವರಗಳಂತೂ ಅತಿ ಕುತೂಹಲಕಾರಿ—

"ಅವ್ವ, ನಾವಿಬ್ಬರೂ ಒಂದು ಕಟ್ಟಡವಿಯ ಪ್ರದೇಶದಲ್ಲಿ ಹೊರಟಿರುವೆವೆಂದು ಕಲ್ಪಿಸು. ನೀನು ಪಲ್ಲಕ್ಕಿಯಲ್ಲಿರುವಿ. ನಾನೊ? ಕೆಂಪು ಕುದುರೆ ಏರಿ ನಿಂತಿರುವೆ. ಸೂರ್ಯಾಸ್ತಕಾಲ ಸಮೀಪಿಸುತ್ತಿರುವದು. ಆಗ ನೀನು ಹೆದರಿ ಹೌಹಾರಿ ನುಡಿಯುವಿ-ತಮ್ಮಾ, ದಾರಿ ತಪ್ಪಿತು. ಆಗ ನಾನು ಸಮಾಧಾನ ಹೇಳುವೆ—ಅವ್ವಾ, ನಾನಿದ್ದೇನೆ ಹೆದರಿಕೆ ಏಕೆ?

ಹೀಗೆ ಹುಲ್ಲುಗಾವಲಿನಲ್ಲಿ ಕ್ರಮಿಸುವಾಗ ಕತ್ತಲೆ ಕವಿಯುವದು. ಎಲ್ಲ ಮಂಜು. ಏನೊ ದೂರದ ಬೆಳಕು ಕಾಣುವದು. ಅಯ್ಯೊ ಅಷ್ಟರಲ್ಲಿ ಕಳ್ಳರ ಕೋಲಾಹಲ ಏಳುವದು. ಏನು ಭಯಾನಕತೆ ಅವರದು! ಕೈಯಲ್ಲಿ ಕೋಲು ಗುದಿಗೆ. ಹುಯ್ ಹುಯ್ ಸದ್ದು. ಆಗ ನಾನು ನುಡಿವೆ— ಏ ರಕ್ಕಸರೆ, ಮುಂದೆ ಕಾಲಿಟ್ಟರೆ ಪರಿಣಾಮ ನೆಟ್ಟಗಾಗಲಿಕ್ಕಿಲ್ಲ. ತಮ್ಮಾ, ಅವರ ಗೊಡವೆ ಬೇಡ ನಿನಗೆ; ನನ್ನ ಬಳಿಗೆ ಬಾ ಎನ್ನುವಿ ನೀನು. ನಾನೊ? ಮುನ್ನುಗ್ಗಿ ಅವರನ್ನು ನುಚ್ಚುನೂರು ಮಾಡಿ ರಕ್ತರಂಜಿತವಾಗಿ ಬರುವೆ."

ಹಿರಿಯರಿಗೆ ಇದೆಲ್ಲ ಕಟ್ಟುಕತೆ. ಆದರೆ ಕಥಾನಾಯಕ ಬಾಲಕನಿಗೆ ಇದೆಲ್ಲ ಇನ್ನೂ ಸಾಧ್ಯ ಕೋಟಿಯ ಸಂಗತಿ!

ನಗೆ, ಹಾಸ-ಪರಿಹಾಸದ ವಿರಾಟರೂಪ ಕಾಣಲು ಇಂತು ವಿಶಿಷ್ಟ ಕಣ್ಣು ಅವಶ್ಯ. ಆಫೀಸಿನಲ್ಲಿ ಮುಂಜಾವಿನಿಂದ ಸಂಜೆಯ ವರೆಗೆ ಮೈ ನುಗ್ಗಾಗಿಸಿಕೊಂಡ ನೌಕರನಿಗೆ ತನ್ನ ಮೇಲಧಿಕಾರಿಯ ಉತ್ತೇಜಕ ನಗೆ ಬಂಗಾರ. ಹೆಂಡತಿಗೊ? ಗಂಡನ ನಗೆಮುಗುಳು ಆಭರಣ ತಂದೀತು— ೧ಳ ಕ್ಯಾರೆಟ್ಟಿನದು! ಸಾರ್ವಜನಿಕ ವೇದಿಕೆಯಲ್ಲಿಯ ಮಾತುಗಾರ ಪಾಂಡಿತ್ಯ ಪ್ರದರ್ಶನ ಮಾತ್ರ ಗುರಿಯಾಗಿರಿಸಿಕೊಂಡರೆ ಕೆಳಗೇ ಇಳಿದಾನು! ನಗೆಯ ಮಸಾಲೆ ಅವ ತ್ಯಜಿಸಲಾರ. ಹಿರಿ ಬೀದಿಯ ವ್ಯಾಪಾರಿ ಮೋರೆ ಗಂಟುಹಾಕಿ ಕುಳಿತರೆ ಗಿರಾಕಿ ನಿಶ್ಚಿತ ಮುಂದಿನ ಅಂಗಡಿ ಕಂಡಾವು. ಹೀಗೆ ನಕ್ಕು ನಗಿಸುವದು ತೀರ ವ್ಯಾವಹಾರಿಕವಿದ್ದರೂ ಚುಚ್ಚನಗೆ ಗರ್ಹಣೀಯವಲ್ಲವೆ? ಇದೀಗ ಪರಿಹಾಸ-ಹಾಸದ ಜಾಲ, ಇಂದ್ರಜಾಲ!

ಲೇಖಕರು ;

ಶ್ರೀನಿವಾಸ ಕುಲಕರ್ಣಿ,
ಎಂ. ಎ.

# ಇಂಟರವ್ಯೂದಲ್ಲೊಂದು ಇಂಟರವ್ಯೂ

ದಿಲ್ಲಿಗೆ ಕೆಲಸ ದೊರಕಿಸಲು ಇಂಟರವ್ಯೂಗೆ ಹೊರಟಾಗ ಮಾರ್ಗದಲ್ಲಿ ಅವನು ವಿಚಿತ್ರ ಅನುಭವವನ್ನು ಪಡೆಯಬೇಕಾಯಿತು. ಅದೊಂದು ಅವನ ಪರೀಕ್ಷಾ ಕಾಲವಾಗಿಯೇ ಪರಿಣಮಿಸಿತು. ಆ ದಿವ್ಯದೊಳಗಿಂದ ಅವನು ಪಾರಾದ ಬಗೆ ಅವನ ಮಟ್ಟಿಗೆ ಮತ್ತೊಂದು ಇಂಟರವ್ಯೂ ಆಗಿಯೇ ಪರಿಣಮಿಸಿತು. ಲೇಖಕರು ಈ ಹೊಸ ಇಂಟರವ್ಯೂವನ್ನು ತುಂಬ ಹೃದಯಂಗಮವಾಗಿ ನಿರೂಪಿಸಿದ್ದಾರೆ.

---

ನಾನು ರೈಲು ನಿಲ್ದಾಣ ತಲುಪಿದಾಗ ಆಗಲೇ ರಾತ್ರಿ ೧೧-೪೦ ಗಂಟೆಯಾಗಿತ್ತು. ಬೆಂಗಳೂರ ಪೂನಾ ಎಕ್ಸಪ್ರೆಸ್ ಬಿಡಲಿಕ್ಕೆ ಕೇವಲ ಹತ್ತೇ ನಿಮಿಷಗಳ ಅವಕಾಶ. ನಾನು ಲಗುಬಗೆಯಿಂದ ಟಾಂಗಾವಾಲಾನಿಗೆ ಹಣಕೊಟ್ಟು, ಟಿಕೆಟ್ ತೆಗೆದುಕೊಂಡು ರೈಲುನಿಂತ ತಾಣದ ಕಡೆಗೆ ಧಾವಿಸಿದೆ.

ಎಂಜಿನ್ನಿನಿಂದ ಕೊನೆಯ ಡಬ್ಬೆಯವರೆಗೂ ಭಾರವಾದ ಸೂಟ್‌ಕೇಸನ್ನು ಹೊತ್ತುಕೊಂಡು ಒಮ್ಮೆ ಸುತ್ತುಹಾಕಿ ಬಂದೆ. ಎಲ್ಲ ಡಬ್ಬಿಗಳಲ್ಲಿಯೂ ಒಂದು ಇರುವೆ ಹೊಗುವಷ್ಟು ಸಹ ಸ್ಥಳವಿಲ್ಲದಂತೆ ಪ್ರಯಾಣಿಕರು ತುಂಬಿಕೊಂಡಿದ್ದರು. ಇರಲಿ; ಇನ್ನೇನು ಮಾಡುವದು ಹತ್ತರೊಂದಿಗೆ ನಾನೂ ಒಬ ಹನ್ನೊಂದು ಎಂದುಕೊಂಡು ಒಂದು ಡಬ್ಬಿಯನ್ನೇರಲು ಪ್ರಯತ್ನಿಸತೊಡಗಿದೆ. (ನೆನಪಿರಲಿ ನಾನು ಹೇಳುತ್ತಿದ್ದುದು ಮೂರನೆಯ ದರ್ಜೆಯ ಡಬ್ಬಿಯ ನ್ನಷ್ಟೆ ದೃಷ್ಟಿಯಲ್ಲಿಟ್ಟುಕೊಂಡು) ಆದರೇನು ಆದರ ಬಾಗಿಲು ಭದ್ರವಾಗಿ ಮುಚ್ಚಿಕೊಂಡಿತ್ತು. "ಸ್ವಾಮಿ, ಸ್ವಲ್ಪ ಬಾಗಿಲ ತೆಗೆಯಿರಿ ಗಾಡಿಬಿಡುವ ಹೊತ್ತಾಗಿದೆ" ಎಂದು ದೈನ್ಯದಿಂದ ಕೇಳಿಕೊಂಡೆ. ಅದಕ್ಕೆ ತನ್ನ ಡೊಳ್ಳುಹೊಟ್ಟೆಯನ್ನು ಆನಿಸಿಕೊಂಡು ಕುಳಿತ ಒಬ್ಬ ಸೇಠಜಿ ತೂಕಡಿಸುತ್ತಲೇ—"ಇಲ್ಲಿ ಸ್ಥಳವಿಲ್ಲ—ಮುಂದಿನ ಡಬ್ಬಿಗೆ ಹೋಗಿ"—ಎಂದು ಬಡಬಡಿಸಿದ.

ನಾನು ಒದರಿ ಒದರಿ ಬೇಸತ್ತು ಮುಂದಿನ ಡಬ್ಬಿಯ ಕಡೆಗೆ ಸಾಗಿದೆ. ಇನ್ನೂ ನಾನು ಅದರ ಸಮೀಪಕ್ಕೆ ಹೋಗಿದ್ದೆನೊ ಇಲ್ಲವೊ ಕಿಟಕೆಗಳ ಎಲ್ಲ ಬಾಗಿಲುಗಳು ಬಿದ್ದುಬಿಟ್ಟವು. ಆಗ ನಾನು ಗೊಣಗುಡುತ್ತಾ ಮತ್ತೆ ಮುಂದೆ ಹೋದೆ. ಆ ಡಬ್ಬಿಯ ಒಂದು ಕಿಟಕೆ ತೆರೆದಿತ್ತು ಆದರ ಅಭಿಮುಖ ಮೂಲೆಯ ಬಳಿಯಿದ್ದ ಕಿಟಕಿ ಗಾಜಿನ ಬಾಗಿಲಿನಿಂದ ಮುಚ್ಚಿಕೊಂಡಿತ್ತು. ತೆರೆದಕಿಟಕಿಯ ಬಳಿ ಒಬ್ಬ ಸೂಟ್‌ಧಾರಿ ಕುಳಿತಿದ್ದ. "ಸ್ವಾಮಿ, ನನಗೆ ದಿಲ್ಲಿಗೆ ಹೋಗಬೇಕಾಗಿದೆ. ಸ್ವಲ್ಪ ಸ್ಥಳ ಕೊಡುವಿರಾ? ಇನ್ನೆರಡು ನಿಮಿಷಕ್ಕೆ ಗಾಡಿ ಬಿಡುತ್ತದೆ"—ಎಂದು ಅವನಿಗೆ ಕೇಳಿಕೊಂಡೆ. ಪಂಜರದೊಳಗಿನ ಹಸಿದ ಸಿಂಹದಂತೆ ಆ ವರಾಹಮೂರ್ತಿ ನನ್ನ ಮೈಮೇಲೇರಿ ಬಂದು "ಹೋಗ್ರೋಗಿ, ಇಲ್ಲಿ ಸ್ಥಳವಿಲ್ಲ. ನೀವು ದಿಲ್ಲಿಗಾದರೂ ಹೋಗಿ, ಲಂಡನ್ನಿಗಾದರೂ ಹೋಗಿ ನಮಗೇನು?" ಎಂದು ಕೂಗಿಕೊಂಡು ಕಿಟಕಿಯೊಳಗೆ ತಲೆಹಾಕಿ ಒಳಗೆ ತೂರಿಹೋಗುತ್ತಿರುವ ನನ್ನನ್ನು ಮತ್ತೆ ಕೆಳಕ್ಕೆ ನೂಕಿ, ಅದರ ಬಾಗಿಲನ್ನು ಮುಚ್ಚಿಕೊಂಡು ಬಿಟ್ಟ. ಆಗ ನನಗೆ ತಡೆಯಲಾರದಷ್ಟು ಸಿಟ್ಟು ಉಕ್ಕಿಬಂತು. ಅಷ್ಟರಲ್ಲಿ ಗಾರ್ಡನ ಸೀಟಿಯ ಧ್ವನಿ ಕಿವಿಯಲ್ಲಿ ಕರ್ಕಶವಾಗಿ ಕೇಳಿಸಿತು. ಏನು ಮಾಡಬೇಕು ತೋಚದಾಗಿ ಕಕ್ಕಾವಿಕ್ಕಿಯಾದೆ. "ಬೇಗ ಈ ಕಿಟಕಿಯಿಂದ ಒಳಗೆ ಬನ್ನಿ" ತತ್‌ಕ್ಷಣವೇ ಗಾಜಿನ ಬಾಗಿಲ ತೆರೆದು ನುಡಿದ ಹೆಣ್ಣಿನ ದನಿಯನ್ನು ಕೇಳಿದಾಗ ನನ್ನ ಹೃದಯದಲ್ಲಿ ಸಂತಸದ ಮಳೆ ಸುರಿದಂತಾಯಿತು. ಕಿಟಕಿಯ ಬಳಿ ಬಂದು ಸೂಟಕೇಸನ್ನು ಒಳಗೆ ದಬ್ಬಿದೆ. ಅವಳೇ ತನ್ನ ಕೋಮಲಕರಗಳಿಂದ ಅದನ್ನು ಒಳಗೆ ತೆಗೆದುಕೊಂಡಳು. ಅನಂತರ ನಾನು ಒಂದೇ ನೆಗೆತಕ್ಕೆ 'ಟಣ್ಣನೆ' ಒಳಗೆ ಜಿಗಿದೆ.

ಕಿಸೆಯಲ್ಲಿಯ ಕರವಸ್ತ್ರವನ್ನು ಹೊರತೆಗೆದು ಮುಖವನ್ನು ಒರಿಸಿಕೊಳ್ಳುತ್ತಾ—"ನಿಮ್ಮ ಉಪಕಾರವನ್ನು ಮರೆಯಲಾರೆ. ನೀವು ಸ್ಥಳ ಬಿಡದೆ ಹೋಗಿದ್ದರೆ ಇವತ್ತು ನನಗೆ ಗಾಡಿಯೇ ಸಿಗುತ್ತಿರಲಿಲ್ಲ." ಎಂದೆ. ಆಗ ಅವಳು ನನ್ನನ್ನೊಮ್ಮೆ ನೋಡಿ ಮುಗುಳ್ನಗೆ ಬೀರಿ ಸುಮ್ಮನಾದಳು. ಆ ಆತ್ಮೀಯ ನಗೆ ನನ್ನ ಹೃದಯದಲ್ಲಿ ಅಲೆಅಲೆಯಾಗಿ ಆವರಿಸಿಕೊಂಡಿತು.

ಗಾಡಿ ಚಲಿಸಿತು. ನಾನು ಮತ್ತೆ ಒಮ್ಮೆ ಆ ಸೂಟ್‌ಧಾರಿಯ ಕಡೆಗೆ ವಕ್ರದೃಷ್ಟಿಯಿಂದ ನೋಡಿದೆ. ಆಗ ಅವನು— "ಏನು ಸ್ವಾಮಿ ದಿಲ್ಲಿಗೆ ಹೋಗುತ್ತಿದ್ದೀರಾ? ಇಂಟರ್‌ವ್ಯೂಗೋ?—" ಎಂದು ಅತಿ ಸಲುಗೆಯಿಂದ ಪ್ರಶ್ನಿಸಿದ. ನನಗೆ ಆಶ್ಚರ್ಯವೆನಿಸಿತು—ಇದೀಗ ನನಗೆ ಒಳಗೆ ಬರಲಿಕ್ಕೆ ಸ್ಥಳ ಕೊಡದೆ ಸಿಕ್ಕಾಪಟ್ಟೆ ಕೂಗಾಡಿದ ವ್ಯಕ್ತಿಯೇ ಈಗೇಕೆ ಹೀಗೆ ಮಶೀಲಿ ಹಚ್ಚುತ್ತಿದ್ದಾನೆನ್ನಿಸಿ— "ಏನ್ರಿ, ಇನ್ನೂ ಒಳಗೆ ಬರುತ್ತಲೇ ಬಾಂಧವ್ಯ ಪ್ರಾರಂಭಿಸಿಬಿಟ್ಟಿರಲ್ಲ. ಒಳಗೆ ಬರಲಿಕ್ಕೆ ಸ್ವಲ್ಪ ಸ್ಥಳ ಕೊಡದ ತಾವು"— ಎಂದೆ. ಅದನ್ನು ಕೇಳಿ ಅವನು ತಮಿಳು ಸಿನೇಮಾದಲ್ಲಿಯ ದೆವ್ವಗಳು ನಗುವಂತೆ ಹ್ಹ! ಹ್ಹ! ಹ್ಹ! ಎಂದು ನಗುತ್ತಾ "ಅದರಲ್ಲಿಯೇ ಸ್ವಾರಸ್ಯ ಇರೋದು ಸ್ವಾಮಿ. ಥರ್ಡಕ್ಲಾಸ್ ಡಬ್ಬಿ ಏರೋದು ಅಂದರೆ ಫ್ಯಾಮಿಲಿ ಪ್ಲ್ಯಾನಿಂಗ ಮಾಡಿದಂತೆ–" ಎಂದ. "ಅಂದರೆ"— ನನಗರ್ಥವಾಗದೆ ಕೇಳಿದೆ. "ನಿಮಗೆ ತಿಳಿಯಲಿಲ್ವೆ- ಇಲ್ನೋಡಿ ಫ್ಯಾಮಿಲಿ ಪ್ಲ್ಯಾನಿಂಗ ಬೋಧಿಸೋ ಜನ ತಾವು ಮೊದಲು ಸಾಕಷ್ಟು ಡಜನ್ನ ಮಕ್ಕಳನ್ನು ಹೆತ್ತ ಮೇಲೆಯೇ ಅಲ್ಲವೆ? ಹಾಗೆಯೇ ನೋಡಿ ಈ ಥರ್ಡಕ್ಲಾಸ ಡಬ್ಬಿ ಏರೋದು ನಾವು ಹತ್ತುವವರೆಗೂ ಸ್ಥಳಾ ಇಲ್ಲ ಅಂತ್ಲೇನೆ ಬೇರೆಯವರು

---

ಹೇಳ್ತಾರೆ (ಅಂದರೆ ಮೊದಲು ಸ್ಥಳಾ ಸಿಕೋ(ರು) ನಾವು ಹೇಗೋ ಮಾಡಿ ಡಬ್ಬಿ ಒಳಗೆ ಬಂದ ಮೇಲೆ ಮತ್ತೆ ಬೇರೆಯವರಿಗೆ ಸ್ಥಳಾ ಇಲ್ಲಾ ಅಂತಾ ಹೇಳೋದಕ್ಕೆ ಶುರು ಮಾಡೋದಿಲ್ವೆ— ನೋಡಿ ಬೇಕಾದ್ರೆ ನೀವೂ ಹಾಗೆಯೇ ಹೇಳ್ತೀರಾ ?" ಅಂತ ನುಡಿದ. ಆಗ ನನಗೂ ನಗೆ ಬಂತು.

ಅಷ್ಟರಲ್ಲಿಯೇ ನನಗೆ ಅದುವರೆಗೂ ಸುಮ್ಮನೆ ಅವಳ ಬಳಿಯೇ ಕುಳಿತ ಒಬ್ಬ ಯುವಕನ ಕಡೆಗೆ ದೃಷ್ಟಿ ಹರಿಯಿತು. (ಬಹುಶಃ ಅವನು ಅವಳ ಪತಿ ಇರಬೇಕೆಂದು ಭಾವಿಸಿದೆ.) ಅನಂತರ ಎಲ್ಲವೂ ತಿಳಿಯಿತು. ನನ್ನ ಊಹೆ ಸರಿಯಾಗಿತ್ತು. ಅವರು ನವ ವಿವಾಹಿತರು. ಜೋಡಿಯೂ ಚೆನ್ನಾಗಿತ್ತು. ನೋಡಲಿಕ್ಕೆ ಅವನಿಗಿಂತ ಅವಳೇ ರೂಪವತಿಯಾಗಿದ್ದಳು. ಕುಳ್ಳಗಿದ್ದರೂ ಬಳ್ಳಿಯಂತೆ ಬಳಕುವ ದೇಹ; ಬಣ್ಣ ಸಾದುಗಪ್ಪಾಗಿದ್ದರೂ ಮುಖದಲ್ಲಿ ಅವರ್ಣನೀಯ ಕಾಂತಿಯಿತ್ತು. ಅವರ ಬಳಿ ಐದು ವರುಷದ ಒಬ್ಬ ಹುಡುಗನೂ ಇದ್ದ. ಅವನು ಅವಳ ತಮ್ಮ? ಅವಳ ಪತಿ ನನಗೆ ಅಷ್ಟರಲ್ಲಿಯೇ ಕುಳಿತುಕೊಳ್ಳಲು ಸ್ಥಳ ಮಾಡಿಕೊಡುತ್ತಾ— "ಏನು ನೀವು ದಿಲ್ಲಿಗೆ ಹೋಗುತ್ತಿದ್ದಿರಾ?" ಎಂದು ಕೇಳಿದ. "ಹೌದು."— ಎಂದೆ.

"ಅಲ್ಲಿ ಏನು ಕೆಲಸ ಮಾಡುತ್ತೀರಾ ? — ಬಿ. ಎ. ಆಗಿದೆಯೆ ?"—

"ಇಲ್ಲ 'ಇಂಟರ್‌ವ್ಯೂ'ಗೆ ಹೊರಟಿದ್ದೇನೆ. ಎಂ. ಎ. ಪರೀಕ್ಷೆಗೆ ಕುಳಿತಿದ್ದೆ. ಅದು ಮೊನ್ನೆ ತಾನೆ ಮುಗಿಯಿತು. ನೀವು ಎಲ್ಲಿಗೆ ಹೋಗುತ್ತಿದೀರಿ."

"ಮುಂಬೈಗೆ— ಬೆಂಗಳೂರಿನಿಂದಾ ಬರ್ತಾ ಇದ್ದೇವೆ."

"ಅರೆ! ಇದೇನು. ನಿಮಗೆ ಸ್ಲೀಪಿಂಗ್ ಕೋಚ್ ಸಿಗಲಿಲ್ವೆ ?" — ಎಂದು ನಾನು ಮಾತು ಮುಗಿಸುವಷ್ಟರಲ್ಲಿ ಅವಳು ಮಧ್ಯ ಬಾಯಿ ಹಾಕಿ— "ಇದೇ ಸಿಗೋದು ಕಷ್ಟವಾಗಿತ್ತು. ಸ್ಲೀಪಿಂಗ್ ಕೋಚ್ ಬೇಕಾದ್ರೆ ಎಂಟು ದಿನಾ ಮೊದಲೇ ರಿಜರ್ವ ಮಾಡಿಸಬೇಕಾ, ಗುತ್ತೆ ?" ಎಂದು ನುಡಿದಳು.

"ಹೌದು ಹೌದು. ಅದು ಖರೇವs ಅದs" (ನಾನು ಬೆಂಗಳೂರಿನವರಂತೆ ಮಾತಾಡಲು ಹೋದುದಕ್ಕೆ ಧಾರವಾಡ ಕನ್ನಡ ಕೇಳೀತೆ— ಖರೇವs ಎನ್ನಿಸೇ ಬಿಟ್ಟಿತು.)

"ಅಕ್ಕಾ ಇವರ್‍ಯಾರು ?" ಆ ಹುಡುಗ ಕೇಳಿದ. ಆಗ ಅವಳು ಒಂದು ಸಲ ನನ್ನ ಕಡೆ ನೋಡಿ ನಕ್ಕು— "ಅವರೂ ನಿನ್ನ ಭಾವ"— ಎಂದಳು. "ನಿನ್ನ ಹೆಸರೇನು ?" ನಾನು ಮೆಲ್ಲಗೆ ಅವನ ಗಲ್ಲ ತಟ್ಟಿ ಕೇಳಿದೆ.

"ಮುರಲಿ ..." ಆ ಹುಡುಗ ನನ್ನ ಕೈ ಜಗ್ಗುತ್ತ ನುಡಿದ. ಒಮ್ಮೆಲೆ ನನಗೆ ಅವಳ ಪತಿಯ ಹೆಸರು ಕೇಳುವದು ಜ್ಞಾಪಕಕ್ಕೆ ಬಂತು. "ಅರೇ! ನಿಮ್ಮ ಹೆಸರನ್ನೆ ಕೇಳಲಿಲ್ಲವಲ್ಲ" ಎಂದೆ. — "ರವಿ" ಅವನು ಉತ್ತರಿಸಿದ.



"ನಿಮ್ಮದು".... ಆಗ "ಶ್ರೀಧರ.." ಎಂದು ನಾನು ನನ್ನ ಹೆಸರು ಅಡ್ಡಹೆಸರು ಎಲ್ಲವನ್ನು ತಿಳಿಸಿದೆ. ಮತ್ತು ನಮ್ಮ ಧಾರವಾಡ ಕಡೆಯ ಅಡ್ಡಹೆಸರಿನ ಹಾವಳಿಯ ಚರಿತ್ರೆಯನ್ನು ಉಪ್ಪುಖಾರ ಹಚ್ಚಿ ಬಣ್ಣಿಸಿ ಅವರನ್ನು ನಗೆಗಡಲಿನಲ್ಲಿ ತೇಲಿಸಿದೆ....

ಯಥಾಪ್ರಕಾರವಾಗಿ ಯಾವದನ್ನೂ ಲೆಕ್ಕಿಸದೆ ತನ್ನ ಗುರಿ ಎಡೆಗೆ ರೈಲು ಸಾಗಿಯೇ ಇತ್ತು. ಕಿಟಕಿಯ ಆಚೆಗೆ ಸೃಷ್ಟಿ ಚಂದ್ರನ ಹಾಲುಬೆಳದಿಂಗಳಲ್ಲಿ ಮೀಯತೊಡಗಿತ್ತು. ಹಿತಕರವಾದ ತಂಗಾಳಿ ಸುಂಯ್ ಸುಂಯ್ ಎಂದು ಬೀಸಿ ತನುಮನಗಳನ್ನು ಹಗುರಗೊಳಿಸಹತ್ತಿತ್ತು.

ಅನಂತರ ಎಷ್ಟೋ ನಿಮಿಷಗಳ ವರೆಗೆ ನಮ್ಮಲ್ಲಿ ಮೌನ ಆವರಿಸಿತ್ತು. ಸ್ವಲ್ಪ ಹೊತ್ತಿನ ಮೇಲೆ ನಾನು ಸೂಟಕೇಸಿನೊಳಗಿಂದ ಟಿ. ಎಚ್. ಲಾರೆನ್ಸರ 'ಸನ್ಸ ಆ್ಯಂಡ ಲವ್ಹರ,' ಹಾಗು ಎಸ್. ಎಲ್. ಭೈರಪ್ಪನವರ 'ಧರ್ಮಶ್ರೀ' ಹೊರತೆಗೆದೆ. ಧರ್ಮಶ್ರೀ ಆಗಲೇ ಓದಿ ಮುಗಿಸಿದ್ದರೂ ಹಾಗೆಯೇ ಕೆಲ ಪುಟಗಳನ್ನು ತಿರುವುತ್ತ ಸುಂದರವಾದ ಸನ್ನಿವೇಶಗಳನ್ನು ಮತ್ತೆ ಮತ್ತೆ ಓದತೊಡಗಿದ್ದೆ. "ಆ ಕನ್ನಡ ಪುಸ್ತಕ ಯಾವುದು" ಅವಳು ಮೌನ ಮುರಿದು ಕೇಳಿದಳು.

"ಧರ್ಮಶ್ರೀ....ಭೈರಪ್ಪನವರದು".

"ಚೆನ್ನಾಗಿದೆಯೆ ?"

"ನನಗಂತೂ ಬಹಳ ಸೇರಿತು. ಆದರೆ ಅವರವರ ಅಭಿರುಚಿ ಹೇಗೆ ಹೇಳುವುದು ?"

"ಹೌದು ಅದು ನಿಜ ಅನ್ನಿ— ಸ್ವಲ್ಪ ನೋಡಿ ಕೊಡುತ್ತೀನಿ ಕೊಡುತ್ತೀರಾ ?"— ಎಂದು ಕೇಳಿದಾಗ "ಅಗತ್ಯವಾಗಿ ತೆಗೆದುಕೊಳ್ಳಿ !" ಎಂದು ಕೊಟ್ಟು ನಾನು ಸನ್ಸ ಆ್ಯಂಡ ಲವ್ಹರ್ಸ ಎತ್ತಿಕೊಂಡೆ.

ನಮ್ಮ ಹರಟೆಯಲ್ಲಿ ಯಾವ ಯಾವ ಸ್ಟೇಶನ್ನ ಬಂದುಹೋದವೊ ನಮಗೆ ಗೊತ್ತೇ ಆಗಲಿಲ್ಲ. ನಮ್ಮ ಮಾತು ಒಂದೇ? ಎರಡೇ? ಅದಕ್ಕೆ

ಆದಿ-ಅಂತ್ಯವೆಂಬುದೇ ಇರಲಿಲ್ಲ. ಸಾಹಿತ್ಯ, ರಾಜಕಾರಣ, ಧರ್ಮ, ಜಾತ್ಯಂಧತೆ, ರೇಲ್ವೆ ಥರ್ಡಕ್ಲಾಸ್ ಡಬ್ಬಿಯಲ್ಲಿ ಆಗಬೇಕಾದ ಸುಧಾರಣೆ ಮತ್ತು ಚಲಚ್ಚಿತ್ರ ಪ್ರಪಂಚವೂ ಸುಳಿದು ಹೋಯಿತು. ಪ್ರತಿಯೊಂದು ವಿಷಯದಲ್ಲಿಯೂ ಅವಳಿಗಿದ್ದ ಅಭಿರುಚಿ, ಜಿಜ್ಞಾಸೆಯನ್ನು ನೋಡಿ ನಾನು ದಂಗಾಗಿ ಹೋದೆ. ಪತಿಗಿಂತಲೂ ಅವಳೇ ಹೆಚ್ಚು ಅರಿತುಕೊಂಡಂತಿದ್ದಳು. ಆದರೆ ಗುಣದಲ್ಲಿ ಮಾತ್ರ ಇಬ್ಬರೂ ಸಮತೂಕದಲ್ಲಿ ಇದ್ದಂತೆ ತೋರಿತು.

ನಾವು ಮೂವರಲ್ಲಿಯೂ ಎಷ್ಟೋ ವರುಷಗಳಿಂದ ಬಂದ ಬಾಂಧವ್ಯದಂತೆ ಆತ್ಮೀಯತೆ ಬೆಳೆದು ಹೋಯಿತು. ಚಹ, ಊಟದಲ್ಲಿ ಎಲ್ಲರೂ ಸಹಭಾಗಿಗಳಾಗಿದ್ದೆವು.

"ನಿಜವಾಗಿಯೂ ಶ್ರೀಧರ.... ನೀವು ಬಂದ ಮೇಲೆಯೇ ನಮ್ಮ ಜರ್ನಿಗೆ ಲೈಫ್ ಬಂದಂತಾಯಿತು"— ಎಂದ ರವಿ.

"ನೋಡಿ ನಿಮ್ಮ ಮಾತಿನಲ್ಲಿ ಬೆಳಗು ಹರಿದದು ಸಹ ಗೊತ್ತಾಗಲಿಲ್ಲ"--ಎಂದು ಅವಳು ನಸುನಗೆ ಬೀರಿ ನುಡಿದಳು. . . . .

ನಮ್ಮ ರೈಲು ಪೂನಾಕ್ಕೆ ಮಧ್ಯಾಹ್ನ ತಡವಾಗಿ ತಲುಪಿತು. ಆದ್ದರಿಂದ ಪೂನಾದಿಂದ ಮುಂಬೈಗೆ ಬಿಡುವ ರೈಲಿನ ಅವಕಾಶ ಕೇವಲ ಹತ್ತೊ ಹನ್ನೆರಡೊ ನಿಮಿಷಗಳಷ್ಟು ಉಳಿದಿತ್ತು. ಅಷ್ಟರಲ್ಲಿಯೇ ನಾವು ಅಟ್ಟಹತ್ತಿ ಇಳಿದು ಗಾಡಿಯನ್ನು ಬದಲಿಸಬೇಕಿತ್ತು. ನಾನೇನೊ ಸುಲಭವಾಗಿ ಪಾರಾಗಿಬಿಡಬಲ್ಲವನಾಗಿದ್ದೆ. ಆದರೆ ಆ ನವದಂಪತಿಗಳ ಪರಿಸ್ಥಿತಿ ಸ್ವಲ್ಪ ಕಠಿಣವಿತ್ತು ಅನ್ನಿ. ಏಕೆಂದರೆ ಅವರ ಬಳಿ ಸಾಮಾನುಗಳ ದೊಡ್ಡ ಲಗೇಜ ಇತ್ತು.

"ಶ್ರೀಧರ ಪ್ಲೀಜ್ ನೀವು ನಮ್ಮವಳನ್ನು ಕರೆದುಕೊಂಡು ಬನ್ನಿ ನಾನು ಕೂಲಿಯುವನ ಹಿಂದೆ ಬೇಗ ಬೇಗ ಹೋಗಿ ಸ್ಥಳ ಹಿಡಿಯುತ್ತೇನೆ"— ಎಂದು ರವಿ ಕೇಳಿಕೊಂಡಾಗ ನಾನು ಒಪ್ಪಿಕೊಳ್ಳಲೇ ಬೇಕಾಯಿತು.

ಅವನು ಮುಂದೆ ಮುಂದೆ ಹೊರಟು ಹೋದ. ನಾನು ಅವಳನ್ನೂ ಮುರಲಿಯನ್ನೂ ಕರೆದುಕೊಂಡು ಹಿಂಬಾಲಿಸಿದೆ. ಎಲ್ಲ ಡಬ್ಬಿಗಳು ಪ್ರಯಾಣಿಕರಿಂದ ಕಿಕ್ಕಿರಿದು ತುಂಬಿ ಹೋಗಿದ್ದವು. ಪ್ರವಾಹದಂತೆ ಜನಸಂದಣಿ ಪ್ಲ್ಯಾಟಫಾರ್ಮಿನ ಮೇಲೆ ತೇಲಾಡಹತ್ತಿತ್ತು. ಅಬ್ಬಾ! ಇಲ್ಲಿ ರೈಲು ಹತ್ತುವದು ಹುಬ್ಬಳ್ಳಿಗಿಂತ ಮೀರಿದ್ದು ಎನ್ನಿಸಿತು. ಅದರೊಂದಿಗೆ ಇನ್ನೊಂದೆರಡು ಥರ್ಡಕ್ಲಾಸ ಡಬ್ಬಿಗಳನ್ನು ಏಕೆ ಹಚ್ಚುವದಿಲ್ಲವೊ ಎಂದು ರೇಲ್ವೆ ಖಾತೆಯುವರನ್ನು ಶಪಿಸಿದೆ.

ರವಿ ಅಷ್ಟರಲ್ಲಿ ಕೊನೆಯ ಡಬ್ಬಿಯ ಮೊದಲನೆಯ ಬಾಗಿಲಬಳಿ ಹೇಗೋ ಜಿಗಿದು ಸಾಮಾನುಗಳನ್ನು ಒಳಗೆ ಹಾಕಿಕೊಂಡಿದ್ದ. ನನ್ನ ಸೂಟ್‌ಕೇಸೂ ಅವನ ಬಳಿಯೇ ಇತ್ತು. ನಾವು ಡಬ್ಬಿಯ ಬಳಿ ಬರುತ್ತಲೇ—"ಶ್ರೀಧರ ನೀವು ಆಚೆ ಬಾಗಿಲಿನಿಂದ ಇವಳನ್ನೂ ಮುರಲಿಯನ್ನೂ ಕರೆದುಕೊಂಡು ಹತ್ತಿರಿ. ಪ್ಲೀಜ್.." ಎಂದ. "ಒಳ್ಳೇದು ನೀವು ಕಾಳಜೀ ಮಾಡಬೇಡಿ. ಸಾಮಾನುಗಳ ಕಡೆಗೆ ಲಕ್ಷ್ಯವಿರಲಿ. ನಾನು ಇವರನ್ನು ಹತ್ತಿಸುತ್ತೇನೆ" ಎಂದು ಆಚೆ ಬಾಗಿಲ ಕಡೆಗೆ ಧುಮುಕಿದೆ.

ನಮ್ಮ ಡಬ್ಬಿಗೆ ಹೊಂದಿದ ಡಬ್ಬೆಯ ಬಳಿ ಒಂದು ಒಳ್ಳ ಮೋಜಿನ ಘಟನೆಯೇ ನಡೆಯಿತು.— ಮುಂಬೈಗೊ? ಅಹ್ಮದಾಬಾದಿಗೊ? ಹೊರಟಿದ್ದ ಗುಜರಾಥಿ ದಂಪತಿಗಳು ತಮ್ಮ ಅರ್ಧಡಜನ್ನ ಮಕ್ಕಳನ್ನು ಕರೆದುಕೊಂಡು ಬಂದು ಅವಸರವಸರವಾಗಿ ಡಬ್ಬಿ ಏರಲು ಪ್ರಯತ್ನಿಸತೊಡಗಿದರು. ಕೂಲಿಯುವನು ಮೊದಲು ಆ ಹುಡುಗರನ್ನೆಲ್ಲ ಕಾಳಿನ ಚೀಲಗಳನ್ನೂ ಟ್ರಕ್ಕಿನಲ್ಲಿ ಒಟ್ಟುವಂತೆ ಅರೆಚಣದಲ್ಲಿ ಸಾಗಿಸಿಬಿಟ್ಟ. ಆನಂತರ ಸಾಧಾರಣ ಶರೀರದ ಗಂಡನೂ ಒಳಗೆ ಜಿಗಿದುಬಿಟ್ಟ. ಆದರೆ ಮುಂದಿನ ಸಮಸ್ಯೆ ಕಾಶ್ಮೀರ ಸಮಸ್ಯೆಗಿಂತಲೂ ಜಟಿಲವಾಗಿತ್ತೆನ್ನಿ. ಬೊಜ್ಜುಹೊಟ್ಟೆಯ 'ಟುನ್‌ಟುನ್'ಳಂಥ ಶರೀರದ ಆ ಹೆಣ್ಣುಮಗಳನ್ನು ಒಳಗೆ ಸಾಗಿಸುವದು ಹೇಗೆ? ಬಾಗಿಲು ತೆರೆಸುವದಂತೂ ಅಸಾಧ್ಯ ಮಾತು. ಕೊನೆಗೆ ಅವರನ್ನು ಕಳಿಸಲು ಬಂದ ಬಂಧುಗಳು ಅವಳನ್ನೆತ್ತಿ ಕಿಡಿಕೆಯಿಂದ ಸಾಗಿಸಲು ಪ್ರಯತ್ನಿಸತೊಡಗಿದ್ದರು. ಮೊದಲು ಅವಳು ಎರಡೂ ಕಾಲುಗಳನ್ನು ಒಳಗೆ ಹಾಕಿ ಅರ್ಧ ಶರೀರವನ್ನು ಸಾಗಿಸಿದ್ದಳು. ಆದರೆ ಆಮೇಲಿನ ಅರ್ಧ ಶರೀರ ಒಳಕ್ಕೆ ಹೋಗದಂತೆ ಗಟ್ಟಿಯಾಗಿ ಕಿಡಿಕೆಗೆ ಕಾರ್ಕನಂತೆ ಸಿಕ್ಕುಬಿಟ್ಟತ್ತು. ಅವಳ ತ್ರಿಶಂಕುಸ್ವರ್ಗ ನೋಡಿ ನನಗೆ ಮರುಕ ಬಂದಿತು, ಹತ್ತಾರುಜನ ಸೇರಿ ಒಳಕ್ಕೆ ಸಾಗಿಸಿದರು. ಹಾಗೆ ನೋಡುತ್ತ ನಿಂತರೆ ನಮಗೆ ರೈಲು ತಪ್ಪೀತೆಂಬ ಭಯದಿಂದ ಡಬ್ಬಿಯಲ್ಲಿ ಒಳನುಗ್ಗಲು ಪ್ರಾರಂಭಿಸಿದೆ. ಇಲ್ಲಿಂದ ಪ್ರಯಾಣಿಕರಲ್ಲಿ ಸಂಭಾಷಣೆ ನಡೆದುದು ಹಿಂದಿಯಲ್ಲಿ. ಮರಾಠಿ ಮಾತಾಡಬಹುದಿತ್ತು. ಆದರೆ ಅದು ನನಗೆ ಶುಂಠಿ!

ಡಬ್ಬಿಯ ಬಾಗಿಲನ್ನು ದಬ್ಬುತ್ತ—"ಸ್ವಾಮಿ ಬಾಗಿಲ ತೆಗೆಯಿರಿ, ಗಾಡಿಬಿಡುವ ಹೊತ್ತಾಗಿದೆ. ಹುಡುಗರು ಹೆಣ್ಣುಮಕ್ಕಳೂ ಇದ್ದಾರೆ" —ಎಂದು ಆದಕ್ಕೆ ಆನಿಸಿಕೊಂಡು ನಿಂತವ್ಯಕ್ತಿಯನ್ನು ಕೇಳಿಕೊಂಡೆ. ಅವನೊಬ್ಬನಿಂದೇಕೆ ಅಲ್ಲಿದ್ದ ಯಾರಿಂದಲೂ ಉತ್ತರವೇ ಬರಲಿಲ್ಲ. ಈ ಜನಕ್ಕೆ ಬಾಯಿ ಇದೇಯೋ ಎನ್ನಿಸಿತು. "ಇನ್ನೇನು ಮುಂದೆ ಗತಿ. ಮತ್ತೆ ಹುಬ್ಬಳ್ಳಿಯ ಪರಿಸ್ಥಿತಿಯೇ ಬಂತಲ್ಲಾ. ಅಗಂತೂ ನಾನೊಬ್ಬನೇ ಇದ್ದೆ. ಈ ಮತ್ತೆರಡು ವ್ಯಕ್ತಿಗಳು ನನ್ನ ಕೊರಳಿಗೆ ಬಿದ್ದಿವೆ. ಗಾಡಿ ತಪ್ಪಿದರೆ ರವಿ ಗತಿ ? ಹೀಗಾದರೆ ಈ ಜನ ಬಿಟ್ಟಾರೆಯೆ ?" —ಎಂದುಕೊಂಡು ಸಮರಕ್ಕೆ ಸಿದ್ಧನಾದೆ. ಆದನು ನೋಡಿ ಅವಳು—'ಇಲ್ನೋಡಿ ವ್ಯರ್ಥ ಕಾದಾಡಬೇಡಿ' "ನೀವು ಹೇಳೋದು ನಿಜ. ಆದರೆ ಈ ಜನ ಹಾಗೆ ಮಾತು ಕೇಳೋರಲ್ಲ, ಬಾಯುಜೋರ ಆಗಬೇಕು?"—ಎಂದು ಬಾಗಿಲದಬ್ಬತೊಡಗಿದೆ. ಅದಕ್ಕೆ ನಿಂತ ವ್ಯಕ್ತಿ ಕೋಪದಿಂದ — "ಏ! ಏ! ನಿನ್ಗ ಕಣ್ಣ ಕಾಣಸ್ತವ ಇಲ್ಲೊ?— ಹಾಗೇ ದಬ್ಬತೀಯಲ್ಲ —ನಾ ಸ್ಥಳಾ ಬಿಡೋದಿಲ್ಲ"— ಎಂದ. ಜಗಳಗಂಟ ಎಂದು ಶಾಲೆ-ಕಾಲೇಜು, ಮನೆ-ಮಾರುಗಳಲ್ಲಿ ಹೆಸರಾದ ನನಗೆ ಇಷ್ಟು ಸಿಕ್ಕರೆ ಸಾಕಿತ್ತು—"ಬಾಗಿಲ ತೆರೆಯೋದಿಲ್ಲ ಅನ್ನಿಕ್ಕ

ನಿಮ್ಮಪ್ಪನ ಗಾಡಿ ಅಂತಾ ತಿಳಿದೀ ಏನು ?" —ಎಂದೆ. ಬಾಗಿಲ ಸ್ವಲ್ಪ ಬಿರುಕು ಬಿಟ್ಟಿತು. ಆ ವ್ಯಕ್ತಿ "ಏನು ನಿಮ್ಮಪ್ಪರ ಗಾಡಿ ನಿಮ್ಮಪ್ಪಂದು ಅಂತಾ ತಿಳಿದೀರೇನು !"—ಎಂದ. "ಹಾಗೇನಿಲ್ಲ. ನಮ್ಮಪ್ಪನದೂ ಇಲ್ಲ ನಿಮ್ಮಪ್ಪನದೂ ಅಲ್ಲ—ಆಯಿತೆ ? ಸ್ವಲ್ಪ ಸ್ಥಳಬಿಡಿ." ನನ್ನ ಬಾಣ ನಾಟಿತ್ತು. "ಬಿಡ್ರಿ ಬಿಡ್ರಿ ಪಾಪ ! ಹೆಂಡ್ರು-ಮಕ್ಳು ಅವ" ಎಂದು ಯಾವನೊ ಒಬ್ಬ ಮಹಾಪ್ರಭು ಕನಿಕರ ತೋರಿಸಿದ. ನನಗೆ ಅಷ್ಟೇ ಸಾಕಿತ್ತು. ಆ ಬಿರುಕಿನಿಂದ ಮೊದಲು ಮುರಲಿಯನ್ನು ಒಳಗೆ ಕಳುಹಿದೆ. ಆ ಮೇಲೆ ನಾನು ಏರಿದೆ. ಅಷ್ಟರಲ್ಲಿ ಗಾರ್ಡನ ಸೀಟಿಯೂ ಬಾರಿಸಿಬಿಟ್ಟಿತು "ಬನ್ನಿ, ಬನ್ನಿ ಬೇಗ ಹತ್ರಿ, ಗಾಡಿಬಿಡುತ್ತೆ"-ನಾನು ಅವಳಿಗೆ ಹೇಳಿದೆ. ಅವಳಿಗೆ ಎಷ್ಟು ಪ್ರಯತ್ನಿಸಿದರೂ ಹತ್ತಲಿಕ್ಕೆ ಬಾರದಾಯ್ತು. ಇನ್ನು ಗಾಡಿ ಚಲಿಸುವದರಲ್ಲಿತ್ತು. ಅವಳ ಕೈಹಿಡಿದು ಎಳೆದುಕೊಳ್ಳಬೇಕೆಂದರೆ ?.. ಸಮಸ್ಯೆ. ನನ್ನ ಪರಿಸ್ಥಿತಿ ಅಡಕತ್ತಿನಲ್ಲಿ ಸಿಕ್ಕಂತಾಯಿತು—"ಅರೆ ಗಾಡಿಬಿಟ್ಟಿತು. ನಿಮ್ಮ ಮನಿಯವರ್‍ನ ಲಗು ಮೇಲೆ ಕರೆದುಕೊಳ್ರಿ"—ಎಂದ ಒಬ್ಬ. ಆ ಶಬ್ದ ಅವಳ ಕಿವಿಗೆ ಬಿತ್ತೋ ಇಲ್ಲೊ. ನನ್ನ ಕಿವಿಗೆ ಬಿದ್ದಾಗ ಮೈ 'ಜುಂ' ಎಂದಿತು. ಈಗ ನನ್ನ ಪಾರೂ ಇದ್ದಿದ್ದರೆ ಇವರನ್ನು ಕೊಬ್ಬರಿಯಂತೆ ತುರಿದು ಬಿಡುತ್ತಿದ್ದಳು ಎಂದುಕೊಂಡೆ. ಗಾಡಿ ಚಲಿಸಿತು. ತತ್‌ಕ್ಷಣವೇ ನಾನು ಅವಳ ಮುಂಗೈಹಿಡಿದು ಮೇಲಕ್ಕೆ ಎಳೆದುಕೊಂಡುಬಿಟ್ಟೆ. ಅವಳು ಜೋರಿನಿಂದ ಮೇಲೆ ಬಂದು ನನ್ನ ಮೈದಡವಿ ನಿಂತುಕೊಂಡಳು. ಜನರು ಈ ದೃಶ್ಯವನ್ನು ಕುತೂಹಲದಿಂದ ನೋಡತೊಡಗಿದ್ದರು. ಬಾಗಿಲು ಮತ್ತೆ ಮುಚ್ಚಿಕೊಂಡಿತು. ಆ ಮೇಲೆ ಅವಳು ನನ್ನಿಂದ ಸರಿದು ನಿಂತುಕೊಂಡಳು. ಲಜ್ಜೆಯಿಂದ ಅವಳ ಮುಖ ಕಿತ್ತಳೆ ಹಣ್ಣಿನ ಬಣ್ಣಕ್ಕೆ ತಿರುಗಿತ್ತು. ಜಾರಿದ ಸೆರಗನ್ನು ತುಂಬ ಹೊದೆದುಕೊಂಡಳು. ಮುಖದಮೇಲೆ ಮೂಡಿದ ಬೆವರಿನ ಹನಿಗಳು ಮುತ್ತು ಅಂಟಿಸಿದಂತಿತ್ತು.

ರವಿಯ ಸಮಾಚಾರ ಕೇಳೋಣವೆಂದು ಹೊರಳಿ ನೋಡುತ್ತೇನೆ. ಕಟ್ಟಿಗೆಗಳನ್ನು ಒಟ್ಟಿದಂತೆ ಜನಜಂಗುಳಿ ತುಂಬಿಹೋಗಿತ್ತು. ಆ ದೊಡ್ಡ ಡಬ್ಬಿಯಲ್ಲಿ ನೂರಾರು ಜನ ತುಂಬಿಕೊಂಡು ಆಚೆಕಡೆಯವರ ಮುಖ ಈಚೆ ಕಡೆಗೆ ಕಾಣಿಸದಂತಾಗಿತ್ತು. ಅಷ್ಟೇ ಏಕೆ ಕೂಗಿದರೂ ಕೇಳಿಸುತ್ತಿರಲಿಲ್ಲ. "ಕ್ಷಮಿಸಿ"— ನಾನು ಅವಳ ಕಡೆಗೆ ನೋಡದೆ ಕೇಳಿದೆ— "ಪರವಾ ಇಲ್ಲೇಳಿ. ನೀವು ಇದ್ರಿ ಅಂತಾ ರೈಲು ಸಿಕ್ಕಿತು. ಪಾಪ ನಿಮ್ಗೆ ತೊಂದರೆ ಆಯ್ತು" ಎಂದಳು. ಆ ನುಡಿಗಳಲ್ಲಿ ಮಾರ್ದವತೆಯಿತ್ತು. ಉಪಕಾರಸ್ಮರಣೆಯ ಬೇಡಿಕೆಯಿದ್ದಂತಿತ್ತು. ಪಾರಾದೆ. ನಾನು ಕೈ ಹಿಡಿದು ಎಳೆದುಕೊಂಡುದಕ್ಕೆ ಅವಳೇನು ತಪ್ಪು ಭಾವಿಸಿಲ್ಲ. ಅಷ್ಟರಲ್ಲಿ ಪ್ರಯಾಣಿಕರಲ್ಲಿ ಗುಜುಗುಜು ನಡೆದೇಬಿಟ್ಟಿತ್ತು. ಒಟ್ಟು ಜನರಿಗೆ ಹೊತ್ತು ಕಳೆಯುವದು ಮುಖ್ಯವಲ್ಲವೇ ? ಆಗ ಅವರು— "ನಾವು ನವವಿವಾಹಿತರು. ಆ ಹುಡುಗ ಅವಳ ಅಥವಾ ನನ್ನ ತಮ್ಮ ಇರಬೇಕು" ಎಂದುಕೊಂಡರು. ಅವಳೂ ಗಂಭೀರವಾಗಿ ಅದನ್ನೇ ಆಲಿಸುತ್ತಿದ್ದಳು. "ತಗೊಳಮ್ಮ ! ನಿಮ್ಮ ಯಜಮಾನ್ರ ಪೆನ್ನು ಬಿದ್ದಿದೆ"- ಎಂದು ಅಲ್ಲಿಯೆ ಬಿದ್ದ ನನ್ನ ಪೆನ್ನು ಎತ್ತಿಕೊಂಡು ಒಬ್ಬ ಹೆಣ್ಣು ಮಗಳು ಕೊಡಹೋದಳು. ಒಮ್ಮೆಲೆ ನಾನೇ ಅದನ್ನು ಕಸಿದುಕೊಳ್ಳಲು ಹೋದೆ. ಆಗ ಅವಳು ಮಧ್ಯ ನಿಲ್ಲಿಸಿ ತಾನೇ ತೆಗೆದುಕೊಂಡು- "ತೊಗೊಳ್ರಿ" ಎಂದು ಒಂದು ನಸುನಗೆ ಬೀರಿದಳು. ನಾನು ಅವಳನ್ನು ದಿಟ್ಟಿಸಿ ನೋಡಿದೆ. ಅದೇ ಆ ಮುಖದಲ್ಲಿ ನಿರ್ವಿಕಾರ ಭಾವ ನಲಿಯುತ್ತಿತ್ತು.

ಗಾಡಿಯ ಓಟ ತೀವ್ರಗತಿಯಲ್ಲಿತ್ತು. ಕ್ಷಣಕ್ಷಣಕ್ಕೆ ಶಕೆ ವಿಪರೀತವಾಗಹತ್ತಿತು. ಸ್ವಲ್ಪ ಹೊರಳಲು ಸಹ ಸ್ಥಳವಿರಲಿಲ್ಲ. ಪಾಯಖಾನೆಯಲ್ಲಿ ಸಹ ಜನರು ತುಂಬಿಕೊಂಡಿದ್ದರು. ಅಂದಮೇಲೆ ವಾಯುದೇವರ ಕೃಪೆಯಾಗುವದೆಂತು ? ಅವಳ ಬಾಯಾರ ಹತ್ತಿತ್ತು. "ಇಲ್ಲಿ ಎಲ್ಲಿಯಾದರೂ ನೀರು ಸಿಕ್ಕಬಹುದೊ"— ಎಂದು ಅವಳು ಕೇಳಿದಾಗ ಅತ್ತಿತ್ತ ಹುಡುಕಾಡಿ— "ಸ್ವಲ್ಪ ತಾಳಿ ಮುಂದಿನ ಸ್ಟೇಷನ್ನದಲ್ಲಿ ಸೋಡಾ ಲೆಮನ್ ಆದರೂ ತೆಗೆದುಕೊಳ್ಳುವಾ ?" ಎಂದು ನಾನು ಹೇಳಿದೆ. ಅವಳ ಮುಖವೇಕೊ ಬಾಡುತ್ತಾನಡೆದಂತೆ ಭಾಸವಾಯ್ತು. "ಬಾಯಾರಿಕೆ ತುಂಬಾ ಆಗ್ತಾ ಇದೆ.... ಕಣ್ಣಿಗೆ ಚಕ್ರ ಬರ್‍ತಾ ಇದೆ ?" ಎನ್ನುತ್ತ ಅವಳು ತನ್ನ ಎರಡೂ ಕೈಗಳಿಂದ ಕಣ್ಣುಗಳನ್ನು ಒತ್ತಿಕೊಂಡಳು. ಆಗ ನನಗೇನು ಮಾಡಬೇಕು ತೋಚದಾಯಿತು. ರವಿಯನ್ನಾದರೂ ನೋಡೋಣ ಎಂದು ಆಚೆಗೆ ಹೊರಳಿದೆ. ಅವನ ಮುಖದರುಶನ ಸಹ ಅಸಾಧ್ಯವಾಗಿತ್ತು. ಇದೇನು ಫಜೀತಿ ಎಂದುಕೊಳ್ಳುವಷ್ಟರಲ್ಲಿ "ಅಯ್ಯೋ.... ತಲೆ... ತಿರುಗ್ತಾ.." ಎನ್ನುಎನ್ನುತ್ತಲೆ ಉಸರೆಳೆಯುತ್ತ ನನ್ನ ಮೈಮೇಲೆ ಕುಸಿದುಬಿದ್ದಳು. ನಾನು ಒಮ್ಮೆಲೆ ಅವಳ ಕಂಕುಳಲ್ಲಿ ಕೈಹಾಕಿ ಎದೆಗೆ ಎಳೆದುಕೊಂಡು — "ಏನಾಯ್ತು... ಏನಾಯ್ತು"— ಎಂದು ಗಲ್ಲ ಅಲ್ಲಾಡಿಸಿ ಕೇಳಿದೆ. ನಾನು ಗಾಬರಿಗೊಂಡೆ. ಇನ್ನೇನು ಮಾಡಲಿ ? ಜನರೆಲ್ಲ ಸಹಾಯಕ್ಕೆ ಧಾವಿಸಿಬಂದರು. ಅಲ್ಲಿಯೇ ಕುಳಿತ ಪ್ರಯಾಣಿಕರು ಎದ್ದು—"ಇಲ್ಲಿ ಕೂತಕೊಳ್ರೀ—ಪಾಪಾ. ಬಿಸಿಲಿಗೆ ಹಾಗೆ ಆಗಿರಬೇಕು—" ಎಂದರು. ಯಾವನೋ ಪುಣ್ಯಾತ್ಮ ತನ್ನಲ್ಲಿದ್ದ ನೀರಿನ ಫ್ಲಾಸ್ಕ ತಂದುಕೊಟ್ಟ. ಆಗ ನಾನು ಫ್ಲಾಸ್ಕಿನ ಗ್ಲಾಸಿನಲ್ಲಿ ನೀರು ಹಾಕಿ ಸ್ವಲ್ಪ ಅವಳ ಕಣ್ಣಿಗೆ ಸಿಂಪಡಿಸಿ ಒಂದೆರಡು ಗುಟುಕು ಕುಡಿಸಿದೆ. ನನ್ನ ಮನಸ್ಸಿನಲ್ಲಿ ಅಣುಸ್ಫೋಟವಾದಂತೆ ಕೋಲಾಹಲವೆದ್ದಿತ್ತು. ನನ್ನ ತೊಡೆಯ ಮೇಲೆ ತಲೆಯಿರಿಸಿ ಮಲಗಿದ ಅವಳು ಕಣ್ಣು ತೆರೆದ ಕೂಡಲೇ ಈ ದೃಶ್ಯ ನೋಡಿ ಚೀರಿಕೊಂಡರೆ ?-ಒಮ್ಮೆಲೆ ಏನೂ ಹಿಂದುಮುಂದು ನೋಡದೆ ನಾಲ್ಕು ಜನರಲ್ಲಿ ಕಪಾಳಮೋಕ್ಷ ಮಾಡಿದರೆ ?.. ಛೇ ಹಾಗೇಕೆ ಮಾಡುತ್ತಾಳೆ .. ನಾನೇನು ತಪ್ಪು ಮಾಡಿದ್ದೇನೆ — ಇದು ನನ್ನ ಕರ್ತವ್ಯವಲ್ಲವೇ .... ಪಾರೂ .. ಪಾರೂ ... ನೀನೆ ಹೇಳು

ನಾನು ಸರಿಯಾದದ್ದನ್ನೇ ಮಾಡೀನಲ್ಲವೆ ?

ಮೆಲ್ಲಗೆ ಅವಳ ಸುಂದರ ನಯನಗಳು ಮಲ್ಲಿಗೆಯಂತೆ ಬಿಚ್ಚತೊಡಗಿದವು. ನಾನು ನಸುನಗೆಯಿಂದ (ತಂದುಕೊಂಡು)—"ನೀವು ಮೂರ್ಛೆಹೋಗಿದ್ರೀ". — ಒಂದು ಕ್ಷಣ ಅವಳು ನನ್ನನ್ನೇ ಎವೆಯಿಕ್ಕದೆ ಒಂದು ವಿಲಕ್ಷಣ ರೀತಿಯಲ್ಲಿ ನೋಡಿ ಚಟ್ಟನೆ ಮೇಲೆ ಪುಟದೇಳಲೆತ್ನಿಸಿದಳು. ಆದರೆ ಮೈ ಜಡವಾಗಿದ್ದರಿಂದ ಮತ್ತೆ ಹತಾಶಳಾಗಿ ಬಿದ್ದುಬಿಟ್ಟಳು. ಆ ಹರಿತವಾದ ನೋಟವನ್ನು ನೋಡಿ ನನ್ನ ಎದೆ ಝಲ್ ಎಂದಿತು.— "ಕ್ಷಮಿಸಿ — ವಿಧಿ ನನ್ನನ್ನು ಪರೀಕ್ಷಿಸಿತು. ನೀವು ತಪ್ಪು ಭಾವಿಸಿ ತ್ರಾಸ ಮಾಡಿಕೊಳ್ಳಬೇಡಿ. ನಾನು ನಿಮ್ಮ ಅಣ್ಣ...." ಎಂಬ ನುಡಿಗಳು ನನ್ನ ಹೃದಯದಿಂದ ಉಕ್ಕಿ ಬಂದಾಗ ಒಮ್ಮೆಲೆ ಅವಳ ಬಾಡಿದ ಮುಖದಲ್ಲಿ ನೂರಾರು ರಂಗು ರಂಗಿನ ಕಾರಂಜಿಗಳು ಚಿಮ್ಮಿ ಬಂದಂತಾಯಿತು. ತುಟಿಗಳೇನೊ ಹೇಳಲಿಕ್ಕೆ ಅಲುಗಿದಂತಾದವು. ಕಣ್ಣುಗಳಿಂದ ಹೃದಯದ ಸ್ನಿಗ್ಧತೆ ಬಸಿಯುತ್ತಿತ್ತು. ಅನಂತ ತೃಪ್ತಿ ಆವರಿಸಿತ್ತು.

ಹಾಗೆ ಐದಾರು ನಿಮಿಷಗಳ ನಂತರ ಸಾವರಿಸಿಕೊಂಡು ಎದ್ದು ಕುಳಿತಳು. ಅವಳ ತಮ್ಮ ಗಾಬರಿಯಿಂದ— "ಈಗ ಹೇಗಿದ್ದಿ ಅಕ್ಕಾ?" ಎಂದು ಕೇಳಿದ. "ಚೆನ್ನಾಗಿದೀನಿ ಮುರಲಿ.." ಎಂದು ಅವನ ಮುಂಗುರಳ ನೇವರಿಸಿದಳು. ಸ್ಟೇಷನ್ನುಗಳ ನಂತರ ಸ್ಟೇಷನ್ನಗಳು ಉರುಳಿ ಹೋದವು. ಅನಂತರ ನಮ್ಮ ಮಾತಿನಲ್ಲಿ ಪರಕೀಯರೆಂಬ ಭಾವವೇ ಉಳಿದಿರಲಿಲ್ಲ.

ಕಲ್ಯಾಣದಲ್ಲಿ ಸ್ವಲ್ಪ ಗದ್ದಲ ಕಡಿಮೆಯಾದುದರಿಂದ ರವಿಯ ಮುಖ ಕಾಣಿಸಿತು. "ಸಾಮಾನು ಎಲ್ಲ ಸಂರಕ್ಷಿತವಾಗಿದೆಯೋ ನಿಮ್ಮದು ಮುಂದಿನ ಸ್ಟೇಷನ್ನ ಅಲ್ಲವೇ?" ಎಂದು ಕೇಳಿದೆ— "ಹೌದು"— ಎಂದು ಆತ ನಗುತ್ತಾ. ಪಾಪ ಅವನಿಗೇನು ಗೊತ್ತು ಇಲ್ಲಿ ವಿಧಿ ನನ್ನ 'ಇಂಟರ್‌ವ್ಯೂ' ತೆಗೆದುಕೊಂಡಿದ್ದು.

ಅವರು ದಾದರಿಗೆ ಇಳಿದರು. ನಾನು ವಿ.ಟಿ.ಯ ವರೆಗೆ ಹೋಗಿ ಗಾಡಿ ಬದಲಿಸಬೇಕಿತ್ತು. ದಾದರದಲ್ಲಿ ನನಗೆ ಕಿಟಕಿ ಬಳಿ ಕುಳಿತುಕೊಳ್ಳಲು ಸ್ಥಳ ಸಿಕ್ಕಿತು. ಕೂತುಕೊಂಡೆ. ರವಿ ನನ್ನ ಸೂಟ್‌ಕೇಸ ಕೊಟ್ಟ— "ತುಂಬಾ ಥ್ಯಾಂಕ್ಸ್ ನಮ್ಮನ್ನ ಮರೀಬೇಡಿ-" ಎಂದ.

ನಾನು ಅವಳ ಕಡೆ ನೋಡಿದೆ. ಅವಳು ಅದೇ ನೆಟ್ಟ ದೃಷ್ಟಿಯಿಂದ ನೋಡತೊಡಗಿದ್ದಳು. ಆ ನೋಟದಲ್ಲಿ ಮಾದಕತೆಯಿರಲಿಲ್ಲ. ಆನಂದ, ವಾತ್ಸಲ್ಯದ ಸ್ನಿಗ್ಧತೆ ಇತ್ತು. ಕ್ಷಣಿಕ ರೈಲಿನ ಸಂಬಂಧ ಇಷ್ಟೊಂದು ಜನ್ಮಜನ್ಮಾಂತರದ ನಂಟಾಗಿ ಪರಿಣಮಿಸಬಹುದೆಂದು ನಾನು ಕನಸು ಮನಸಿನಲ್ಲಿಯೂ ಎಣಿಸಿರಲಿಲ್ಲ. "ಮರಿಯಬೇಡಿ. ಅಡ್ರೆಸ್ ಕೊಟ್ಟಿದ್ದೇನೆ— ಯಾವಾಗಲಾದರೂ ಬನ್ನಿ—" ಎಂದು ಕೈ ಮಾಡಿ ಬೀಳ್ಕೊಟ್ಟಳು.

ರೈಲು ಚಲಿಸಿತು. ಕ್ರಮೇಣ ಅದರ ಗತಿಯೂ ಹೆಚ್ಚಿತು. ದಾದರ ನಿಲ್ದಾಣ ಕೈಕಂಬ ಎಲ್ಲವೂ ಒಂದೊಂದಾಗಿ ಕಣ್ಮರೆಯಾದವು. ಆದರೂ ಇಂದಿಗೂ ನನ್ನ ಸ್ಮೃತಿವ್ಯೂಹದಲ್ಲಿ ಸಿಲುಕಿದ ಆ ವ್ಯಕ್ತಿ ನೆನಹಿನ ತಂತಿಯನ್ನು ಮಿಡಿದಾಗ ಕಣ್ಮುಂದೆ ಮೈವೆತ್ತು ಬಂದು ನಿಲ್ಲುತ್ತದೆ.



ಲೇಖಕರು :
ರಾ. ನ. ಮಳಗಿ,
ಹುಬ್ಬಳ್ಳಿ

# ಕಲ್ಲುಬಂಡೆಗಳು ಮಾನವ ಜನಾಂಗವನ್ನು ಉಳಿಸುವ ಸಂಭವ!

ದಿನದಿನಕ್ಕೂ ಜನಸಂಖ್ಯೆ ಬೆಳೆಯುತ್ತಲೇ ಇದೆ. ನೂರು ವರುಷಗಳಲ್ಲಿ ಅದು ಎರಡುಪಟ್ಟಾಗುವ ಸಂಭವವಿದೆ. ಇದನ್ನು ತಡೆಯುವದು ತುಂಬ ಕಠಿಣವೂ ಇದೆ. ಅವರಿಗೆ ಅವಶ್ಯವಿರುವ ಆಹಾರ, ಯಾಂತ್ರಿಕಶಕ್ತಿ ದೊರೆಯದೆ ಹೋಗಿ ಭೀಕರ ಪರಿಸ್ಥಿತಿಯನ್ನು ಎದುರಿಸಬೇಕಾಗಿ ಬರಬಹುದು. ಆಗ ಮಾನವನಿಗೆ ಸಹಾಯ ದೊರೆವುದು, ಬಂಡೆಗಲ್ಲುಗಳಿಂದ ಮಾತ್ರ ಸಾಧ್ಯ. ಅವುಗಳಲ್ಲಿರುವ ಯುರೇನಿಯಂ, ಥೋರಿಯಂ ಅವನಿಗೆ ಶಕ್ತಿಯನ್ನು ಒದಗಿಸುವವು. ಈ ಪ್ರಯೋಜನಕತೆಯ ನಿರೂಪಣೆ ಈ ಲೇಖನದಲ್ಲಿರುವುದು.

ಜಗತ್ತಿನ ಇಂದಿನ ಜನಸಂಖ್ಯೆಯು ಸುಮಾರು ಮೂರೂವರೆ ಅಬ್ಜ. ಮುಂದಿನ ವರ್ಷ ಮೂರೂವರೆ ಕೋಟಿಯಷ್ಟು ಜನಸಂಖ್ಯೆಯು ಏರುತ್ತದೆ. ಇದೇ ಪ್ರಕಾರವಾಗಿ ಜನಸಂಖ್ಯೆಯು ಏರುತ್ತಾ ನಡೆದ ಪಕ್ಷದಲ್ಲಿ ನೂರು ವರುಷಗಳ ಹೊತ್ತಿಗೆ ವಿಶ್ವದ ಜನಸಂಖ್ಯೆಯು ಏಳು ಅಬ್ಜಕ್ಕೆ ಏರುತ್ತದೆ ; ಎಂದರೆ ಅದು ಇಂದಿನ ಎರಡರಷ್ಟಾಗುತ್ತದೆ. ಇದರ ಫಲವಾಗಿ ಆಹಾರ, ವಸತಿ, ನಿರುದ್ಯೋಗ ಮೊದಲಾದ ಅನೇಕ ಸಮಸ್ಯೆಗಳು ಭೀಕರಾಕಾರವನ್ನು ತಳೆಯುತ್ತವೆ. ಭೀಕರತೆಯನ್ನು ಹೇಗೆ ಕಡಿಮೆ ಮಾಡಬೇಕೆಂದು ವಿಶ್ವದ ಮುಂದಾಳುಗಳು ಇಂದು ವಿಚಾರಮಗ್ನರಾಗಿದ್ದಾರೆ. ಹೆಚ್ಚು ಆಹಾರಧಾನ್ಯಗಳನ್ನು ಬೆಳೆಯುವುದರಿಂದಲೂ ಸಂತತಿ ನಿಯಂತ್ರಣದಿಂದಲೂ ಸಾಕಷ್ಟು ಪ್ರಯೋಜನವಾಗುವುದಿಲ್ಲ. ಮೇಲಾಗಿ ಅಡವಿಗಳನ್ನು ಹೊಲಗಳನ್ನಾಗಿ ಪರಿವರ್ತಿಸುವುದಕ್ಕೂ ಅಷ್ಟೇ ಪ್ರದೇಶದಲ್ಲಿ ಹೆಚ್ಚು ಬೆಳೆಯನ್ನು ದೊರಕಿಸುವುದಕ್ಕೂ ಒಂದು ಮಿತಿ ಇದೆ. ಜನಸಂಖ್ಯೆಯ ಹೆಚ್ಚಳಕ್ಕೆ ಮಾತ್ರ ಮಿತಿಯೆಂಬುದಿಲ್ಲ. ಸಂತತಿನಿಯಂತ್ರಣವು ಸುಲಭಸಾಧ್ಯವಲ್ಲ. ಅದು ಬಹುಮಟ್ಟಿಗೆ ಯಶಸ್ವಿಯಾದರೂ ಭರದಿಂದ ಬೆಳೆಯುತ್ತಿರುವ ಜನಸಂಖ್ಯೆಯೊಡನೆ ಅದು ಸ್ಪರ್ಧಿಸಲಾರದು. ಕ್ರಿ. ಶ. ೧೬೫೦ ರಲ್ಲಿ ವಿಶ್ವದ ಜನಸಂಖ್ಯೆಯು ೫೪॥ ಕೋಟಿ ಇತ್ತು. ಮುಂದೆ ಅದು ಕ್ರಿ. ಶ. ೧೯೦೦ ರ ಹೊತ್ತಿಗೆ ೧ ಅಬ್ಜ ೬೦ ಕೋಟಿ ೮೦ ಲಕ್ಷಕ್ಕೇರಿತು. (೧೬೫೦ ರ ಸುಮಾರು ಮೂರುಪಟ್ಟು; ಅದೂ ೨೫೦ ವರ್ಷಗಳಲ್ಲಿ) ಇದು ಮುಂದೆ ಹೆಚ್ಚಾಗುತ್ತ ನಡೆದು ೬೦ ವರ್ಷಗಳ ನಂತರ, ಎಂದರೆ ಕ್ರಿ.ಶ. ೧೯೬೦ ರ ಹೊತ್ತಿಗೆ, ೨·೨೦ ಪಟ್ಟಗೇರಿದೆ.

"ಮುಂದಿನ ೨೫ ವರ್ಷಗಳಲ್ಲಿ ಪ್ರಪಂಚದ ಜನಸಂಖ್ಯೆಯು ಅಬ್ಜಗಳಿಗೇರುತ್ತದೆ" ಎಂದು ಇತ್ತೀಚಿನ "ಪಾಪ್ಯುಲೇಶನ್ ಬುಲೆಟಿನ್"ದಲ್ಲಿ ಹೇಳಲಾಗಿದೆ. ಇದರ ಅರ್ಥವು ಕ್ರಿ. ಶ. ೧೯೦೦ ರ ಜನಸಂಖ್ಯೆಯು ೧೯೮೮ ರ ಹೊತ್ತಿಗೆ ಎರಡೂವರಿ ಪಟ್ಟಾಗುವುದೆಂದೂ ೧೬೫೦ ರ ೭·೧೩ ಪಟ್ಟಾಗುವುದೆಂದೂ (೩೩೮ ವರ್ಷಗಳಲ್ಲಿ) ಹೇಳಲಾಗುತ್ತದೆ. ೧೬೫೦ರಲ್ಲಿ೫೪॥ ಕೋಟಿ ಜನರಿದ್ದರೆ, ೧೯೮೮ ರಲ್ಲಿ ಅಂದಿಗಿಂತ ೩,೪೫,೫೦,೮೦,೦೦೦ ಹೆಚ್ಚು ಜನರಿರುವರು. ಕ್ರಿ. ಶ. ೧೯೦೦ ರಲ್ಲಿ ಇದ್ದ ಜನರಿಗಿಂತಲೂ ಇಂದು ೧,೮೯,೨೦,೦೦,೦೦೦ ಹೆಚ್ಚು ಜನರಿದ್ದಾರೆ.

ಇದೇ ಪ್ರಮಾಣದಲ್ಲಿ ಇನ್ನು ಮುಂದೆಯೂ ಜನಸಂಖ್ಯೆಯು ಹೆಚ್ಚಾಗುತ್ತ ಹೋದರೆ, ಕ್ರಿ. ಶ. ೬,೫೦೦ ರ ಹೊತ್ತಿಗೆ ಪ್ರಪಂಚವನ್ನು ಸಂಪೂರ್ಣವಾಗಿ ತುಂಬಿದ ಜನರ ಒಟ್ಟು ಭಾರವು ಭೂಲೋಕದ ಭಾರಕ್ಕೆ ಸರಿಯಾಗುವುದೆಂದು ಸುಪ್ರಸಿದ್ಧ ಜನಸಂಖ್ಯಾಶಾಸ್ತ್ರಜ್ಞರಾದ ಡಾ. ವಿನ್‌ಬರ್ಗ್‌ರು ಲೆಕ್ಕಮಾಡಿ ಹೇಳಿದ್ದಾರೆ. ಅಷ್ಟು ಭಾರವನ್ನು ಭೂಮಿಯು ತಡೆಯಲಾರದು. ಆ ಮಾತು ಬೇರೆ.

ಮೇಲಾಗಿ ಹೀಗಾಗುವುದೂ ಸಾಧ್ಯವಿಲ್ಲ. ಭೂಕಂಪ, ಬರಗಾಲ, ಬಿರುಗಾಳಿ, ರೋಗಗಳ ಹಾವಳಿ, ಅಣುಯುದ್ಧ ಮೊದಲಾದುವುಗಳ ಮೂಲಕ ಜನಸಂಖ್ಯೆಯು ಇತ್ತ ಕಡಿಮೆಯಾಗುತ್ತದೆ. ಕ್ರಿ. ಶ. ೧೯೧೮ ರಲ್ಲಿ ಮೊದಲಿನ ಮಹಾಯುದ್ಧವು ಮುಗಿಯಿತು. ಆಗ ಇಂದಿನ ಮಾರಕಾಸ್ತ್ರಗಳೂ ವಿಮಾನಗಳೂ ಇರಲಿಲ್ಲ. ಆದರೂ ೮೫ ಲಕ್ಷ ಜನರು ಆ ಯುದ್ಧದಲ್ಲಿ ಹತರಾಗಲಿಲ್ಲವೇ ? ಹೀಗಿದ್ದರೂ ಜನಸಂಖ್ಯೆಯು ಹೆಚ್ಚಾಗುತ್ತಿರುವುದು ಮಾತ್ರ ನಿಜ.

"ಮಾನವನ ಭವಿಷ್ಯವು ಬಹು ಭಯಾನಕವಾಗಿದೆ. ಏಕೆಂದರೆ, ಕೋಟ್ಯಂತರ ಜನರಿಗೆ ಸಾಕಷ್ಟು ಆಹಾರವು ಏನು ಮಾಡಿದರೂ ದೊರೆಯುವುದಿಲ್ಲ ; ಅವರಿಗೆ ಸಾಕಷ್ಟು ಯಾಂತ್ರಿಕ ಶಕ್ತಿಯು (energy) ಸಿಗುವ ಸಂಭವವಿಲ್ಲ. ಆಗ ಪರಸ್ಪರರಲ್ಲಿ ಹೋರಾಟವು ನಡೆಯಹತ್ತುವುದು" ಎಂದು "ಮುಂದಿನ ದಶಲಕ್ಷ ವರ್ಷಗಳು" ಎಂಬ ಗ್ರಂಥದಲ್ಲಿ ಸರ್ ಚಾರ್ಲ್ಸ್ ಡಾರ್ವಿನ್ನನು ಹೇಳಿದ್ದಾನೆ. ಇವನು ಉತ್ಕ್ರಾಂತಿವಾದದ ಜನಕನಾದ ಡಾರ್ವಿನ್ನನ ಮೊಮ್ಮಗ. "ಇಂತಹ ಅನಾಹುತವನ್ನು ತಡೆಯಲು ಒಂದೇ ಒಂದು ದಾರಿಯಿದೆ ಎಂದಿಗೂ ಕೊನೆಯಿಲ್ಲದಂತಹ ಯಾಂತ್ರಿಕ ಶಕ್ತಿಯ (energy) ಉಗಮಸ್ಥಾನವನ್ನು ಕಂಡುಹಿಡಿಯುವುದೇ ಅದು" ಎಂದು ಸಹ ಅವನು ಅದೇ ಗ್ರಂಥದಲ್ಲಿ ಹೇಳಿದ್ದಾನೆ.

ಒಂದಾನೊಂದು ಕಾಲದಲ್ಲಿಯಾದರೂ ಪ್ರಪಂಚದ ಜನಸಂಖ್ಯೆಯು ಇಮ್ಮಡಿಯಾಗುವುದು (ಏಳು ಅಬ್ಜ) ನಿಶ್ಚಿತ. ಆಗ ಇಂದಿನ ೨೦

ಪಟ್ಟ ಯಾಂತ್ರಿಕ ಶಕ್ತಿಯು (energy) ಆವಶ್ಯವಾಗುವುದೆಂದು ಕ್ಯಾಲಿಫೋರ್ನಿಯಾ ತಂತ್ರಶಾಲೆಯ ಪ್ರಾಧ್ಯಾಪಕರಾದ ಹ್ಯಾರಿ ಬ್ರೌನರು ಲೆಕ್ಕಹಾಕಿದ್ದಾರೆ. ಇದನ್ನು ದೊರಕಿಸಲು ಸಾಧ್ಯವೇ ?

ಈಗಂತೂ ಸಾಕಷ್ಟು ಯಾಂತ್ರಿಕ ಶಕ್ತಿಯು (energy) ದೊರೆಯುತ್ತಿಲ್ಲ. ಇದು ಹೆಚ್ಚಾಗದೆ ಗತ್ಯಂತರವಿಲ್ಲ. ಇದನ್ನು ದೊರಕಿಸಲು ಕಚ್ಚಾ ಮಾಲು ಬೇಕು. ಈ ಕಚ್ಚಾ ಮಾಲೇ ಕಲ್ಲಿದ್ದಲಿ. ಇದನ್ನು ದೊರಕಿಸುವುದಕ್ಕೂ ಒಂದು ಮಿತಿಯಿದೆ. ನಂತರ ಏನು? ಭೂಮಿಯಲ್ಲಿ ಸುಮಾರು ಹತ್ತು ಸಾವಿರ ಅಬ್ಜ ಟನ್ ಕಲ್ಲಿದ್ದಲಿಯಿದೆ. ಕಲ್ಲಿದ್ದಲಿಯಿಂದ ಅವಶ್ಯವಿರುವ ಶಕ್ತಿಯನ್ನು ದೊರಕಿಸುವುದಾದರೆ, ೭ ಅಬ್ಜ ಜನರು ನೂರು ವರ್ಷಗಳಲ್ಲಿ ಇಷ್ಟು ಕಲ್ಲಿದ್ದಲಿಯನ್ನು ಇಲ್ಲದಂತೆ ಮಾಡುತ್ತಾರೆ. ಹಾಗಾದನಂತರ ಉದ್ದಿಮೆ ಮೊದಲಾದುವುಗಳಿಗೂ ಕೃಷಿರಂಗಕ್ಕೂ ಶಕ್ತಿಯನ್ನು ಒದಗಿಸುವ ಬಗೆಯಾವುದು ? ಕೆಲ ಕಾಲಾನಂತರದಲ್ಲಿಯೇ ಮಾನವನು ನೀರಿನ ಮೇಲ್ಭಾಗದಲ್ಲಿ ರಾಸಾಯನಿಕ ವಸ್ತುಗಳನ್ನುಪಯೋಗಿಸಿ ದೊಡ್ಡ ಪ್ರಮಾಣದ ಬೆಳೆಗಳನ್ನು ಬೆಳೆಯಲಾರಂಭಿಸುವವನಿದ್ದಾನೆ. ಇದಕ್ಕೂ ಯಾಂತ್ರಿಕ ಶಕ್ತಿ ಬೇಕು.

ಆಹಾರವಿಲ್ಲದೆ ಮಾನವನೂ ಇತರ ಪ್ರಾಣಿಗಳೂ ಬದುಕಲಾರವು. ಉದ್ದಿಮೆಯ ಅಭಿವೃದ್ಧಿಯು ಕೃಷಿಯ ಬೆನ್ನೆಲುಬಿನಂತಿದೆ. ಇವೆರಡೂ ಕುಂಠಿತವಾದರೆ ಉಳಿಗಾಲವಿಲ್ಲ. ಇವೆರಡಕ್ಕೂ ಶಕ್ತಿಯು (energy) ಬೇಕು. ದೊರಕಿಸಿದ ಕಲ್ಲಿದ್ದಲಿಯಿಂದ ಸಾಕಷ್ಟು ಶಕ್ತಿಯು ದೊರೆಯುವದಿಲ್ಲ. ಸಾಕಷ್ಟು ಕಲ್ಲಿದ್ದಲಿಯೂ ಕೊನೆತನಕ ದೊರೆಯಲಾರದು. ಆದ್ದರಿಂದ ಅನಂತಶಕ್ತಿಯನ್ನು ದೊರಕಿಸುವ ಹೊಸ ಮಾರ್ಗವನ್ನು ಕಂಡುಹಿಡಿಯಲೇಬೇಕಾಗಿದೆ.

ಮೇಲೆ ಹೇಳಿದ ಸುಪ್ರಸಿದ್ಧ ವಿಜ್ಞಾನಿಗಳಾದ ಡಾ. ಆಲ್ವಿನ್ ಎಂ. ವೀನ್‌ಬರ್ಗರು ಮುಂದಿನ ಹೊಸ ಮಾರ್ಗಗಳನ್ನು ಸೂಚಿಸಿದ್ದಾರೆ.

ಮಾನವಜನಾಂಗಕ್ಕೆ ಎರಡು ಬಗೆಗಳಲ್ಲಿ ಶಕ್ತಿಯನ್ನು ಒದಗಿಸಬಹುದು.

ಬಂಡೆಗಲ್ಲುಗಳಲ್ಲಿ ಯುರೇನಿಯಂ ಎಂಬ ಮೂಲಧಾತುವಿದೆ. ಬಂಡೆಗಲ್ಲುಗಳು ನೆಲದ ಮೇಲೂ ಕೆಳಭಾಗದಲ್ಲಿಯೂ ಅನಂತ ಸಂಖ್ಯೆಯಲ್ಲಿ ದೊರೆಯುತ್ತವೆ. ಇವುಗಳನ್ನು ಚೂರ್ಣ ಮಾಡಿದರೆ ರೇಡಿಯೊ ವಿಕಿರಣ ವಸ್ತುಗಳಾದ ಯುರೇನಿಯಂ ಮಾತ್ರವಲ್ಲದೆ ಥೋರಿಯಂ ಎಂಬ ಮೂಲಧಾತುವು ಸಹ ಸ್ವಲ್ಪ ಪ್ರಮಾಣದಲ್ಲಿ ಸಿಕ್ಕುತ್ತದೆ. ಇವುಗಳನ್ನು ದೊರಕಿಸಿ ಶಕ್ತಿಯನ್ನು (energy) ಮುಂದೆ ಸಂಪಾದಿಸುವುದು ಸಾಧ್ಯವೆಂದು ಅವರ ಮತ.

ಶಕ್ತಿಯ ಎರಡನೆಯ ಮೂಲಸ್ಥಾನವು ಸಮುದ್ರ. ಇದರ ನೀರೂ ಅನಂತವಾಗಿದೆ. ಸಮುದ್ರದ ನೀರಿನಲ್ಲಿ ರೇಡಿಯೊ ವಿಕಿರಣ ವಸ್ತುವಾದ "ಡಿಟೆರಿಯಂ" ಇದೆ. ಇದನ್ನು ನೀರಿನಿಂದ ಬೇರ್ಪಡಿಸಿ ಉಪಯೋಗಿಸಿಕೊಂಡರೆ ಸಾಕಷ್ಟು ಶಕ್ತಿಯು ದೊರೆಯುತ್ತದೆ.

ಹೀಗೆ ಸಮುದ್ರದಿಂದಲೂ ಬಂಡೆಗಲ್ಲುಗಳಿಂದಲೂ ಶಕ್ತಿಯನ್ನು ಸಂಪಾದಿಸಲು ಸಾಧ್ಯವಾದರೆ ಪ್ರಪಂಚವು ಸುಮಾರು ಹತ್ತು ಅಬ್ಜ ವರ್ಷಗಳವರೆಗೆ ನಿಶ್ಚಿಂತೆಯಿಂದಿರಬಹುದೆಂದು ಅವರು ಲೆಕ್ಕಮಾಡಿ ಹೇಳಿದ್ದಾರೆ.

ಮೇಲೆ ಹೇಳಿದ ಎರಡು ಮೂಲಗಳಲ್ಲಿ ಬಂಡೆಗಲ್ಲುಗಳಿಂದ ಶಕ್ತಿಯನ್ನು ದೊರಕಿಸುವುದು ಹೆಚ್ಚು ವ್ಯಾವಹಾರಿಕ ಮಾರ್ಗವೆಂದು ಅವರ ಅಭಿಮತ. ಇದಂತೂ ಈಗ ಸುಲಭಸಾಧ್ಯವಾದ ಕಾರ್ಯವಲ್ಲ. ಮುಂದೆ ಇದನ್ನು ಹೇಗೆ ಸುಲಭಸಾಧ್ಯವಾಗಿಸಬೇಕೆಂಬ ಬಗ್ಗೆ ಸಂಶೋಧನೆಯು ನಡೆಯಬೇಕಾಗಿದೆ.

ಬಂಡೆಗಳಿಂದ ಯುರೇನಿಯಂ ಮತ್ತು ಥೋರಿಯಂಗಳನ್ನು ದೊರಕಿಸಲು ಸಾಕಷ್ಟು ಶಕ್ತಿಯನ್ನು ಎಲ್ಲಿಂದ ದೊರಕಿಸಬೇಕೆಂಬುದೇ ಇಂದಿನ ಪ್ರಶ್ನೆಯಾಗಿದೆ. ಅಣುಶಕ್ತಿಯನ್ನು ಶಾಂತಿಕಾರ್ಯಗಳಿಗೆ ಮಾತ್ರ ಉಪಯೋಗಿಸುವ ಸುದಿನವು ಬಂದಾಗ ಈ ಪ್ರಶ್ನೆಗೆ ಪರಿಹಾರವು ದೊರೆಯುವ ಸಂಭವವಿದೆ. ಆದರೆ ಸಮುದ್ರ ಮತ್ತು ಬಂಡೆ ಇವುಗಳಿಂದ ಶಕ್ತಿಯನ್ನು ದೊರಕಿಸುವ ಕಾರ್ಯವು ಅಸಾಧ್ಯ ಪ್ರಕರಣವಲ್ಲವೆಂದು ವೀನ್‌ಬರ್ಗರ ಮತ.

ಇಂದಿನ ಇಮ್ಮಡಿ ಜನಸಂಖ್ಯೆಗೆ ಸಾಕಾಗುವಷ್ಟು ಶಕ್ತಿ (energy) ಯನ್ನು ನಾವು ದೊರಕಿಸಬಲ್ಲೆವಾದರೆ, ಸಾವಿರ ಅದೇಕೆ ನೂರು ವರ್ಷಗಳ ನಂತರದ ವಿಚಾರವನ್ನು ಮಾಡಿ ನಾವು ತಲೆಕೆಡಿಸಿಕೊಳ್ಳುವುದು ಸರಿಯೇ ? ಎಂಬ ಪ್ರಶ್ನೆಯು ಉದ್ಭವಿಸಬಹುದು. ಆ ಬಗ್ಗೆ ಈಗಲೇ ಕಾರ್ಯವನ್ನು ಕೈಕೊಳ್ಳುವುದು ಸರಿ. ಏಕೆಂದರೆ ಮೇಲೆ ತಿಳಿಸಿದಂತೆ ಮುಂದಿನ ೩೫ ವರ್ಷಗಳಲ್ಲಿ ವಿಶ್ವದ ಜನಸಂಖ್ಯೆಯು ೫೦ ಕೋಟಿ ಹೆಚ್ಚಾದರೆ ನಾವು ಬದುಕಿರುವುದೇ ಕಠಿಣವಾಗುತ್ತದೆ. ಈಗಿನ ಜನಸಂಖ್ಯೆಯಿಂದಲೇ ನಾವು ಜರ್ಜರಿತರಾಗಿದ್ದೇವೆ. ಎಲ್ಲರೂ ಗಮನಿಸಬೇಕಾದ ಅಂಶವಿದು. ಬಂಡೆಗಲ್ಲಿನಿಂದ ಶಕ್ತಿಯನ್ನು ಪಡೆಯುವ ಮಹಾಸಾಹಸವನ್ನು ವಿಜ್ಞಾನಿಗಳು ಪ್ರಾರಂಭಿಸುವವರಿದ್ದಾರೆ. ಇದರಲ್ಲಿ ಎಷ್ಟು ಶೀಘ್ರವಾಗಿ ಯಶವು ದೊರೆಯುವುದೋ ವಿಶ್ವಕ್ಕೆ ಅಷ್ಟು ಒಳಿತು. ಇದರ ಫಲವಾಗಿ ವಿಶ್ವವು ಒಂದುಗೂಡುತ್ತದೆ ಮತ್ತು ರಾಷ್ಟ್ರಗಳಲ್ಲಿ ಸಹಕಾರವೂ ಉಂಟಾಗುತ್ತದೆ.



ಲೇಖಕರು :

ಜಿ. ಜಿ. ಹೆಗಡೆ,

ಹುಬ್ಬಳ್ಳಿ

# ಎಲ್ಲಾ ರೋಲ್ಡ್‌ಗೋಲ್ಡೇ!

ಚೊಕ್ಕ ಚಿನ್ನದ ಮೇಲೆ ಸರಕಾರವು ನಿಯಂತ್ರಣ ಹೇರಿದ ನಂತರ ವಿಶೇಷವಾಗಿ ಅಳಿಯಂದಿರಿಗೆ ಪೇಚಿನ ಪ್ರಸಂಗ ಬಂದಿದೆ. ದೀಪಾವಳಿಯಲ್ಲಿ ಅವರಿಗೆ ಬಂಗಾರದ ವಸ್ತುಗಳನ್ನು ಕೇಳಲು ಅವಕಾಶವೇ ಉಳಿಯದಂತಾಗಿದೆ. ಆದರೆ ಅವರು ತಮ್ಮ ಅಪ್ಪಂದಿರ ಮಾತು ಕೇಳಿ ಒಳದಾರಿ ಹುಡುಕಿದ್ದಾರೆ. ಕಳ್ಳಪೇಟೆಯಿಂದಾದರೂ ಚಿನ್ನ ದೊರಕಿಸಲು ಕೇಳತೊಡಗಿದ್ದಾರೆ. ಆದರೆ ಅವರಿಗೆ ದೊರೆವುದು ರೋಲ್ಡ್ ಗೋಲ್ಡ್; ಹದಿನಾಲ್ಕು ಕ್ಯಾರೆಟ್ಟಿನ ಚಿನ್ನ ಕೂಡ ಅಲ್ಲ. ಇಂಥ ಒಂದು ಪ್ರಸಂಗ ಈ ನಾಟಕದ ಕಥಾವಸ್ತುವಾಗಿ ಪರಿಣಮಿಸಿದೆ. ಆದರ ಸ್ವಾರಸ್ಯವನ್ನು ನೀವು ಓದಿಯೇ ಅರಿಯಬೇಕು. . .

---

[ವಿಘ್ನೇಶ್ವರರಾಯನ ಮನೆ. ಪಡಸಾಲೆಯಲ್ಲಿ ಕುಳಿತು ಪತ್ರವೊಂದನ್ನು ಓದುತ್ತಲಿದ್ದ ಅವರು ಒಮ್ಮಿಂದೊಮ್ಮೆ ಎದ್ದುನಿಂತು ಮನೆಯ ಹಂಚು ಹಾರಿಹೋಗುವವರ ಹಾಗೆ......]

**ವಿಘ್ನೇ**— ಏ- ಏನೇ, ಬಾ ಇಲ್ಲಿ.

**ಸುಶೀಲಾಬಾಯಿ** (ಅವರ ಹೆಂಡತಿ ಒಳಗಿಂದಲೆ)— ಯಾಕೆ? ಹಾಗೆ ಒದರಿಕೊಳ್ಳಲಿಕ್ಕೆ ಏನಾತು? ಓಣಿ ತುಂಬಾ....

**ವಿಘ್ನೇ**—ಹುಂ. ನೀನಲ್ಲೆ ಕೂತು ಕಾರಭಾರ ಮಾಡು. ಓಣಿ ತುಂಬಾ ಯಾಕೆ—ಊರತುಂಬಾನೂ ಕೇಳಿಸೀತು ನನ್ನ ಮಾತು. ಬಾ ಇಲ್ಲಿ ಅಂಪ್ರ ಬರಬೇಕು. ಮತ್ತೆ ಆ ಕಮ್ಯೂ ಎಲ್ಲಿದ್ದಾಳೆ? ಕರಿ ಅವಳನ್ನು. ಆಗಿಹೋಗಲಿ ಇಂದು ಸೋಕ್ಷಮೋಕ್ಷ. ನನ್ನ ಏನಂತ ತಿಳಕೊಂಡಾನ ಇಂವಾ. ಹಿಂಡತದ ಅಂತ ದನದ ಕೆಚ್ಚಲ ಕೊಯ್ಯೋ ಮಕ್ಕಳು ಇವ್ರು. ತಾ: ನೋಡಿದ್ರೆ- ಫೋರ್ಟೀನ್ ಕ್ಯಾರೆಟ್, ೧೪ ಕ್ಯಾರೆಟ್ಟಾದ್ರೂ ಆಗಿದ್ರೆ, ಏನೊ ಸುಮ್ಮನಿದ್ರೂ ಇರಬಹುದಿತ್ತು— ಬರೀ ರೋಲ್ಡ್‌ಗೋಲ್ಡ್. ಮತ್ತೆ ಮ್ಯಾಲೆ ದಿಮಾಕ. ಏನು ನೀ ಬರ್ತೀಯೊ ಅಥವಾ....

**ಸುಶೀಲಾ**—ಬಂದೆ. (ಹೊರಗೆ ಬಂದು) ಯಾಕಿಂದು ಒಮ್ಮೆಲೆ ಫಟಾಕ್ಷಿ ಹಾರಸಲಿಕ್ಕೆ ಹತ್ತೀರಿ? ಆವದ್ದಾವರೂ ಏನೂ? ಸ್ವಲ್ಪ ಸುಧಾರಿಸಿಕೊಂಡು ಮೆಲ್ಲಗೆ ಹೇಳಿದ್ರೆ....

**ವಿಘ್ನೇ**—ಹುಂ. ನೀ ನನಗೆ ಉಪದೇಶ ಮಾಡು. ಸಾಯೂ ವಯಸ್ಸಾದ್ರೂ ನನ್ನ ನಶೀಬದೊಳಗೆ ಉಪದೇಶ ಕೇಳೂದು ತಪ್ಪಲಿಲ್ಲ. ಆ ಮಗರಾಯಾ ಅಲ್ಲಿ ಮುಂಬಯಿಯೊಳಗೆ ಕೂತಕೊಂಡು ನನಗೆ ಬರೀತಾನೆ—"ಕಾಲ ಕಠಿಣ ಅದೆ. ನೀವು ಹೇಳಿದಷ್ಟು ನಾ ಕಳಸೂದು ನನ್ನ ಕರ್ತವ್ಯ. ಆದ್ರೆ ಅದರ ಸದುಪಯೋಗ ಆಗ್ಲಿ. ಮನಿ ಮೇಲಿನ ಸಾಲ ತೀರಲಿ" ಅಂತ. ನನಗೆ ಇಂವಾ ಹೇಳಿಕೊಡಬೇಕೇನು? ಇಂವಗ ಕಲಸಿ ಎಂ. ಕಾಂ. ಮಾಡಿ ಒಂದು ನೋಕರಿ ಹಚ್ಚಬೇಕಾದ್ರೆ ಈ ಅಪ್ಪಾ ಆದಂವ ಎಷ್ಟು ಒದ್ದಾಡಬೇಕಾತು, ತನ್ನ ತಂಗೀಗೆ ಒಂದ ವರಾ ಹುಡುಕಿ ಲಗ್ನಾಮಾಡಬೇಕಾದ್ರೆ ಈ ಅಪ್ಪ ದುಡದ ಗಂಟು ಹ್ಯಾಂಗ ಕರಗಿಹೋತು ಅಂತ ತಿಳುವಳಿಕೆ ಇದ್ದಿದ್ರೆ— ಮತ್ತೆ ನಾ ಏನು ನನ್ನ ಚೈನೀಗೆ ಸಾಲ ಮಾಡಿದೆನೇನು? ಕಳಸಿ ಕಳಸಿ ಇಂವಾ ಎಷ್ಟು ಕಳಸತಾನ? ಬರೀ ಐವತ್ತು. ಸಾಲದ ಕಂತು ಅಂತ ನಾ ಎಪ್ಪತ್ತೈದು ತುಂಬತೇನೆ. ಗೊತ್ತಿದ್ದೂ ಗೊತ್ತಿದ್ದೂ ಹೀಂಗ ಬರೀಬೇಕಾದ್ರೆ ಇಂವಾ–ಹೋಗ್ಲಿ. ಈಗ ಇಡೀ ಜಗತ್ತೆ ಫೋರ್ಟೀನ್ ಕ್ಯಾರೆಟ್ ಅಥವಾ ಅದಕ್ಕೂ ಖರೇ ಹೇಳಬೇಕಾದ್ರೆ ರೋಲ್ಡ್‌ಗೋಲ್ಡ್ ಆಗಿಬಿಟ್ಟದ. ಖರೇ ಬಂಗಾರದ ಸತ್ವ ಎಲ್ಲಿಂದ ಬರ್ಬೇಕು?

**ಸುಶೀಲಾ**—(ನಕ್ಕು) ಓಹೋ! ಇದಕೇ ಇಷ್ಟು ಹಾರಾಡಲಿಕ್ಕೆ ಹತ್ತೀರೇನು? ಆ ಖೋಡಿ ರಾಘು—ಇನ್ನೂ ಹುಡುಗ, ಹುಡುಗಾಟಿಕೆ ಬುದ್ಧೀಲಿ ಏನೊ ತಪ್ಪ ಬರದಾ ಅಂತ ನೀವು ಮನೀ ಹಂಚು ಹಾರಿ ಹೋಗೂಹಾಂಗೆ ಒದರಾಡಲಿಕ್ಕೆ ಹತ್ತಿದ್ರೆ ಏನನ್ನಬೇಕು? ನಮ್ಮ ಮನಿಹಂಚು ಹಾರಿದ್ರೆ ಸೋರೂದು ನಮ್ಮ ಮನೀನೇ ಹೌದೊ ಅಲ್ಲೊ? ಹಬ್ಬಕ್ಕೆ ಬರ್ತಾನಲ್ಲ ಅಂವ ಹ್ಯಾಂಗೂ. ಬಂದಾಗ ನಾ ಅಂವಗೆ ನಾಲ್ಕು ಬುದ್ಧಿಮಾತು ಹೇಳ್ತೇನಿ. ಆತೊ ಇಲ್ಲೊ. ನೀವೀಗ ಥಣ್ಣಗೆ ಪೇಪರ್ ಓದಕೋತ ಕೂಡ್ರಿ. ಹಬ್ಬಕ್ಕೆ ನಾಲ್ಕೇದಿನ ಉಳದವು. ಹೊಸ ಅಳಿಯ ಬರ್ತಾನೆ. ಸ್ವಲ್ಪ ಶಿಸ್ತಿನಿಂದ, ಎದ ಕಾಣೂಹಾಂಗೆ ತಯಾರಿ ಮಾಡ್ಬೇಕೊ ಬ್ಯಾಡೊ?

**ವಿಘ್ನೇ**—ಸಾಕು ಸುಮ್ಮನಿರು. ಮಗನಿಗೆ ಬುದ್ಧಿ ಹೇಳ್ತಾಳಂತೆ. ನಿನಗೆ ಬುದ್ಧಿ ಇದ್ದರೆ ಹೌದೊ ಅಲ್ಲೊ ಇನ್ನೊಬ್ಬರಿಗೆ ನೀ ಹೇಳೂದು? ನನ್ನ ಮಗನಿಗೆ ಬುದ್ಧಿ ಹೇಳೂ ಸಾಮರ್ಥ್ಯ ನನ್ನಲ್ಲಿ ಇಲ್ಲಾಂತ ಆದಮ್ಯಾಲೆ ನಿನ್ನ ಹತ್ರ ಹೇಳ್ತೇನೆ. ತಿಳಿತೇನು? ಇದು ಬ್ಯಾರೆ ಪ್ರಕರಣ. ಯಾವ ಅಳಿಯ ಬರ್ತಾನಂತ ನೀ ಅಡ್ವಾನ್ಸ್ ತಯಾರಿ ಮಾಡ್ಲಿಕ್ಕೆ ಹತ್ತೀಯೊ, ಸಾಕ್ಷಾತ್ ಕೈಹಿಡಿದ ಗಂಡನ್ನ ಸುದ್ಧಾ ಉಪೇಕ್ಷಾಮಾಡಿ ಕುಣದಾಡಲಿಕ್ಕೆ ಹತ್ತೀಯೊ, ಆ ಅಳಿಯ ಮಹಾಶಯರದ್ದೇ ಪ್ರಕರಣ ಇದು. ತಾ ನೋಡಿದರೆ ರೋಲ್ ಗೋಲ್ಡ್ ಮನಶಾ—ಶುದ್ಧ ಬಂಗಾರ ಬೇಕಂತ, ಹ್ಹುಂ!

**ಸುಶೀಲಾ**—ಏನಂತೀರಿ ನೀವು? ಶ್ಯಾಮನ ಪತ್ರ ಬಂದದೇನು? ಏನು ಬರದಾನ? ಎಂದ ಬರ್ತಾನಂತ?

**ವಿಘ್ನೇ**—ಅದನ್ನೆ ಹೇಳಲಿಕ್ಕೆ ಹತ್ತೇನಿ— ನೀ ಕೇಳೂದು ಬಿಟ್ಟು ನನಗೇ ಉಪದೇಶ ಮಾಡಲಿಕ್ಕೆ ಹತ್ತೀದಿ. ಒಂದ ಹತ್ತ ವರ್ಷ ಸಂಸಾರ ಮಾಡಿದ ಕೂಡ್ಲೆ ಹೆಂಡಂದಿರೀಗೆ ತಾವು ಹೇಳಿದ್ದಕ್ಕೆ



ವಿಷ್ಣೋ— ತಾ ನೋಡಿದರೆ ರೋಲ್ಡ್ ಗೋಲ್ಡ್ ಮನಶಾ...

'ಜೀಹಾಂ' ಅನ್ನಲಿಕ್ಕಷ್ಟೆ ಈ ಗಂಡಂದಿರು ಲಾಯಕ್ಕು ಅಂತ ಅನಿಸಿಬಿಡ್ತದ. ಕರೀ ಆ ಕಮು ಲಾನ್ನ. ಅವಳ ಗಂಡನಿಗೆ ಸಂಬಂಧಪಟ್ಟ ವಿಚಾರ ಅಂದ ವ್ಯಾಲೆ ಅವಳಿಗೂ ತಿಳಿದಿರಲಿ. ಖರೇ ಅಂದ್ರೆ, ನನಗೆ ಈ ಪ್ರಕರಣ ಬಗೀಹರಿಸಲಿಕ್ಕೆ ನಿನ್ನ ಸಹಾಯನೂ ಬೇಕಾಗಿದ್ದಿಲ್ಲ. ಕಮ್ಮೂನ ಸಹಾಯನೂ ಬೇಕಾಗಿದ್ದಿಲ್ಲ. ಆದರೆ ನಾ ಹಾಗೆ ಮಾಡಿದ್ರೆ ನೀವಿಬ್ಬರೂ ಕೂಡಿ ನನ್ನ ತಲೀಮ್ಯಾಲೆ ಮೆಣಸ ಅರಿಯದೆ ಬಿಟ್ಟೀರೇನು? ಅಂತೇ....

**ಸುಶೀಲಾ—** ಅಳಿಯ ಏನ ಬರದಾನ ಅದನಷ್ಟ ಓದಿಹೇಳ್ರಿ. ಆಮ್ಯಾಲೆ ಬೇಕಾದ್ರೆ....

**ವಿಷ್ಣೋ—** ಏನು ನನ್ನ ಮಾತು ನಿನಗೆ ತಿಳೀತದೊ ಇಲ್ಲೊ? ಕಮ್ಮೂನ ಕರೀ ಅಂದ್ರೆ ಕರಿ. ಕಮ್ಮೂ— ಏ ಕಮಲೂ ಬಾ ಇಲ್ಲೆ. ('ಯಾಕಪ್ಪಾ' ಅನ್ನುತ್ತ ಕಮಲಾ ಬರುವಳು) ನೀನೂ ನಿನ್ನ ತಾಯೀ ಹಾಗೆ ಆಗಬೇಡ ತಿಳಿತೇನು? ಇವಳನ್ನ ಕರೀಬೇಕಾದ್ರೆ, ನನ್ನ ಮಾತು ಇವಳ ಕಿವಿಗೆ ಮುಟ್ಟುವಹಾಗೆ ಮಾಡಬೇಕಾದರೆ ಗಂಟಲು ಒಡದು ಹೋಗಬೇಕಾಗತದ. ಸಾವಕಾಶ ಕರದ್ರೆ ಇವಳು ದಾದ ಮಾಡೂದಿಲ್ಲ. ಕೂಗಿ ಕರದ್ರೆ 'ಹಂಚು ಹಾರೂ ಹಾಗೆ ಕೂಗ ಬ್ಯಾಡ್ರಿ' ಅಂತ ಟೀಕಾಮಾಡ್ತಾಳ. ಸಂಸಾರ ಹೂಡಿದ ಗಂಡಸು ಅಂದ್ರೆ ಫುಟಬಾಲ ಚಂಡಿನ ಹಾಗೆ ಆಗಿ ಹೋಗ್ತಾನೆ. ಎಲ್ಲರೂ ಅವನನ್ನ ಒದೀವವ್ರೆ. ಹೊಸದಾಗಿ ಲಗ್ನ ಆದಾಗ ನಾವೂ ಏನೊ ಮಬ್ಬಿಗೆ ಬಿದ್ದು ಹೆಂಡತಿ ಹೆಂಡತಿ ಅಂತ ಕುಣೀತೇವೆ. ಸಲಗಿ ಕೊಡತೇವೆ. ಕೈಅಳತೆಗೆ ಬರೂತನಕ ನಾವಂದ ಹಾಂಗೇ ಕುಣಿದ ಹಾಗೆ ಮಾಡಿ ಹೆಂಡಂದಿರು ಆಮ್ಯಾಲೆ ನಮ್ಮನ್ನೆ ಕುಣಿಸಲಿಕ್ಕೆ ಹತ್ತತಾರೆ. ಆಟ ಶುರು ಆದಮ್ಯಾಲೆ ಮುಗಿಯೋತನಕಾ ಫುಟಬಾಲ ಚಂಡು ಹ್ಯಾಂಗೆ ಅಂವ ಒದ್ದಾ ಅಂತ ಅತ್ತ, ಇಂವ ಒದ್ದಾ ಅಂತ ಇತ್ತ ಓಡಾಡ್ತಾ ಇರಬೇಕಾಗತದೊ ಹಾಗೆ ಸಂಸಾರ ಮಾಡಿಕೊಂಡ ಗಂಡಸು ಹೆಂಡತಿ ಒದ್ದಳು ಅಂತ ಇತ್ತ, ಸಂಸಾರ ಸಾಕಲಿಕ್ಕೆ ಅಂತ ದುಡೀವಾಗ ದುಡಿಸಿಕೊಂಬವ್ರು ಒದ್ರು ಅಂತ ಅತ್ತ ಜಿಗಿದಾಡ್ತಾನೇ ಇರಬೇಕಾಗ್ತದ.

**ಕಮಲಾ....** ಅಪ್ಪಾ, ನನ್ನ ಯಾಕ ಕರದಿ? ಅದನ್ನ ಹೇಳೂದು ಬಿಟ್ಟು....

**ಸುಶೀಲಾ—** ಕಮಲಾ, ನೀನೆ ನೋಡಕೊ ಅವ್ವಾ. ಹೆಂಡತಿ ಗಂಡನ್ನ ಒದೀತಾಳೆ ಅಂತ ಸಹಜ ಅಂದುಬಿಟ್ರು. ಸರಳ ಮಾತಾಡೂ ಹಾಂಗಿಲ್ಲ, ಸರಳ ಮಾಡೂಹಾಂಗಿಲ್ಲ. ಹೆಂಡತಿ ಆದವಳು ಹಾದೀಗೆ ಬರ್ರಿ ಅಂತ ಸೂಚನಾ ಮಾಡೂದೂ ತಪ್ಪು ಅನ್ನವ್ರ ಹಾಗೆ ತಾವು ನಡಕೋತೇವೆ ಅನ್ನೂದನ್ನ ಮರ್ತು....

**ಕಮಲಾ—** ಇರಲಿ ಬಿಡವ್ವಾ. ವ್ಯಾಳ್ಯಾ ಆಗ್ಯದ. ನೀ ಇನ್ನೂ ಅಡಗೀ ಮಾಡ್ಬೇಕು. ಅಪ್ಪ ಆಫೀಸಿಗೆ ಹೋಗಬೇಕು. ನಾನು—

**ವಿಷ್ಣೋ—** ಗೊತ್ತದೆ ನನಗೆ, ನೀ ಕಾದಂಬರಿ ಓದಕೋತ ಕೂಡಬೇಕು. ಲಗ್ನ ಆದಮ್ಯಾಲೆ ಕಾದಂಬರಿ ಓದೂದು, ಗಂಡಗೆ ಪ್ರೇಮಪತ್ರ ಬರಿಯೂದನ್ನ ನೀ ನಡಸೀದಿ ಅಂತ ನನಗೆ ತಿಳಿದಿಲ್ಲ ಅಂತ ಮಾಡೀಯೇನು? ನಿನ್ನ ಗಂಡನ ಈವತ್ತಿನ ಪತ್ರ ನೋಡಿದ್ರೆ ಅಂವ ಹಾಗೆ ಬರೀಲಿಕ್ಕೆ ನಿನ್ನ ಪುಸಲತ್ತೂ—

**ಕಮಲಾ—** ಪತ್ರ ಬಂದೇದೇನು? ಏನಂತ....

**ವಿಷ್ಣೋ—** ಬಂದದ. ಬಂದದ. ಸ್ವಚ್ಛ ವಕೀಲರ ನೋಟೀಸಿನಂಥಾ ಪತ್ರ ಬಂದದ.

**ಸುಶೀಲಾ—** ಅಂ!

**ಕಮಲಾ—** ಅಂಥಾದ್ದು ಏನು ಬರದಾರಪಾ?

**ವಿಷ್ಣೋ—** ಕೇಳಕೊಳ್ರಿ, ತಾಯಿ ಮತ್ತು ಮಗಳು ಇಬ್ಬರೂ. 'ತೀರ್ಥಸ್ವರೂಪ ಮಾವಂದಿರಿಗೆ ನಮಸ್ಕಾರಗಳು. ದೀಪಾವಳಿ ಹಬ್ಬಕ್ಕೆ ಬರಬೇಕು ಅಂತ ನೀವು ಬರದ ಪತ್ರ ಮುಟ್ಟಿತು. ಅಪ್ಪ ಅಂತಾನ, ಲಗ್ನದೊಳಗ ಕೊಡ್ತೇನೆ ಅಂತ ಅಂದಿದ್ದ ಬಂಗಾರದ ರಿಸ್ಟವಾಚ್ ಚೇನು ಈ ಹಬ್ಬಕ್ಕೆ ಸಿಗಲಿಕ್ಕೇಬೇಕು ಅಂತ. ನಾ ಅಂದೆ, ಈಗ ಬಂಗಾರನಿಯಂತ್ರಣ ಬಂದದೆ, ಹ್ಯಾಂಗ ಸಾಧ್ಯ ಆದೀತು ಅಂತ. ಅದಕ್ಕೆ ಅಪ್ಪ, ನಿಯಂತ್ರಣಬಂದ್ರೆ ಏನಾತು, ಬ್ಲಾಕ ಮಾರ್ಕೆಟ್ ಇಲ್ಲೇನು? ಬಂಗಾರ ಚೇನು ಸಿಗದಿದ್ರೆ ನೀ ಹೋಗೂದೇ ಬ್ಯಾಡ ಅಂತ ಅಂತಾನ. ಆದ್ದರಿಂದ ಮರುಟಪಾಲಿಗೇ ನಾ ಬರಬೇಕೋ ಬ್ಯಾಡೋ ಅಂತ ತಿಳಿಸಬೇಕು. ಅತ್ತೆಯವರಿಗೆ ನಮಸ್ಕಾರ. ಸೌ.ವತಿಗೆ ಆಶೀರ್ವಾದ. ಇಂತಿ ನಮಸ್ಕಾರಗಳು.'

**ಸುಶೀಲಾ—** ಅಯ್ಯ! ಇಷ್ಟೇನೇ? ನೋಟೀಸು ಅಂದ ಕೂಡ್ಲೆ ನಾ ಗಾಬರಿಯಾಗ್ಬಿಟ್ಟಿದ್ದೆ.

**ಕಮಲಾ—** ಅಪ್ಪ ಯಾವಾಗೂ ಹಾಗೇ ಅವ್ವಾ. ಕಡ್ಡಿ ಇದ್ದದ್ದನ್ನ ಗುಡ್ಡಾ ಮಾ ಡಿ....

ವಿಶ್ನೇ— ವ್ಹಾ ! ವ್ಹಾ ! ಮಂಗಲಸೂತ್ರ ಕಟ್ಟಿದ ಕೂಡ್ಲೆ ಹೆಂಗ ಸರಿಗೆ ತಲಿ ಜುರುಕಾಗ್ತಿರಬೇಕು ಅನ್ನೂ ನನ್ನ ಸಂದೇಹ ಇಂದು ಖರೇ ಆತು. ಅಪ್ಪನ ಮ್ಯಾಲೆ ಮಾತಿನ ಬಾಣಾ ಬಿಟ್ಟು ಈಗಿಂದಲೇ ತರಬೇತಿ ಮಾಡಿಕೊ. ನಾಳೆ ಸಂಸಾರಾ ಹೂಡಿದ ಮ್ಯಾಲೆ ಉಪ ಯೋಗಕ್ಕ ಬಂದೀತು.

ಸುಶೀಲಾ— ಹೋಗ್ಲಿ ಬಿಡ್ರಿ. ಅಳಿಯನಿಗೆ ಏನಂತ ಬರೀತೀರಿ?

ವಿಶ್ನೆ— ಬಾ ಹೀಗೆ ಹಾದೀಗೆ. ಅದನ್ನೆ ಹೇಳಲಿಕ್ಕೆ ಅಂತ ನಿನ್ನ ಕರದದ್ದು. ಅಳಿಯ ಎಷ್ಟು ಗತ್ತಿನಿಂದ ಬರದಾನೆ ನೋಡಿದಿಯೊ ಇಲ್ಲೋ. ಅಪ್ಪನ ಬಾಯಲ್ಲಿ ತನ್ನ ಮಾತು ಆಡಿ ಪಾರಾಗಬೇಕು ಅಂತ ಮಾಡ್ಯಾನ. ಇಂವಗ ಬ್ಲ್ಯಾಕ್‌ನಲ್ಲಿ ಆದರೂ ತಂದು ಶುದ್ಧ ಭಂಗಾರದ ಚೇನು ಕೊಡಬೇಕಂತ. ಇಲ್ಲಾಂದ್ರ ಹಬ್ಬಕ್ಕ ಬರೂದಿಲ್ಲಾಂತ ಹೆದರಿಕೀ ಹಾಕ್ಯಾನ. ಬಂಗಾರದ ಮ್ಯಾಲ ನಿಯಂತ್ರಣ ಇಲ್ಲದಿದ್ದರೂ ಬಂಗಾರದ ಚೇನಿನ ಅಳಿಯ ಏನು ಇಂವಾ ? 'ಮಗಾ ಎಂ. ಎ. ಪರೀಕ್ಷೆಗೆ ಕೂತಾನ. ಫರ್ಸ್ಟ ಕ್ಲಾಸ್ ಬಂದೇ ಬರ್ತಾನೆ. ಹತ್ತಾರು ಕಡೆ ನೋಕರೀ ಸಿಗೂ ಹಾಗೆ ಅದ. ಆಗದೀ ಕಡಿಮಿ ಅಂದ್ರೂ ಮೂರುನೂರು ರೂಪಾಯಿ ಪಗಾರಾದ್ರೂ ಮೊದಲಿಗೇ ಸಿಗ್ತದ. ಕೇಳಿದಷ್ಟು ವರದಕ್ಷಿಣೆ ಕೊಡ್ತೇವೆ ಅನ್ನುವವ್ರು ಮನೀ ಬಾಗಿಲಿಗೆ ಎಡತಾಕಲಿಕ್ಕೆ ಹತ್ಯಾರ. ಆದ್ರೆ ನಮ್ಮ ಶ್ಯಾಮು ನಿಮ್ಮ ಹುಡುಗಿ ಥಾಸ ಮಾಡ್ಯಾನ. ಅವನ ಮನಸು ಮುರೀಬಾರ್ದು ಅಂತ ಬರೀ ಐದು ಸಾವಿರ ವರ-ದಕ್ಷಿಣೆ ಸಾಕು ಅಂತ ಮಾಡೇನಿ ನೋಡ್ರಿ' ಅಂತ ಅವನ ಅಪ್ಪ ಹೇಳಿದ. ಒಬ್ಬಳೇ ಮಗಳು ಅಂತ ನಾನು ಹೂಂ ಅಂದು ಲಗ್ನ ಮಾಡಿದೆ. ವರದಕ್ಷಿಣೆ,ಲಗ್ನದ ಖರ್ಚು ಅಂತ ಸಾಲಾನೂ ಮಾಡಿಕೊಂಡು ಸ್ವಂತಮಗ ನಿಂದ ಉಪದೇಶ ಮಾಡಿಸಿ ಕೊಳ್ಳೂ ಪ್ರಸಂಗಾ ತಂ ದ್ಕೊಂಡೆ. ಆದರೆ ಈಗ ಯಾವ ಮಗ ಅಪ್ಪಟ ಚಿನ್ನ ಅಂತ ನಮ್ಮ ಬೀಗ ಹೇಳಿ ದ್ದನೊ ಅಂವಾ ರೋಲ್ಡ್ ಗೋಲ್ಡ್ ಅಳಿಯ ಅಂತ ಸಿದ್ಧ ಆಗಿಹೋಗ್ಯದ. ಫರ್ಸ್ಟ ಕ್ಲಾಸ್ - ಹೋಗ್ಲಿ ಸೆಕೆಂಡ ಕ್ಲಾಸ್ ಆದ್ರೂ ಆದನೇನು? ಊಂಹುಂ. ಆರ್ಡಿನರಿ ಥರ್ಡ ಕ್ಲಾಸ್ ಪಾಸಾದ.


ಸುಶೀಲಾ— ಅಯ್ಯ ! ಇಷ್ಟೇನೆ !

ನೋಕರಿ ಸಿಗಬೇಕಾದ್ರೆ ಅವನ ಅಪ್ಪಂದು, ನಂದು ಎಲ್ಲಾರ ಪುಣ್ಯ ಖರ್ಚಾಗಿ ಹೋತು. ಅದೂ ಎಂಥಾದ್ದು? ೧೦೦–೫–೧೫೦ ಇ.ಬಿ. ೧೦-೨೦೦ ತನ್ನ ಯೋಗ್ಯತಾ ಇಷ್ಟೇ— ತಾ ಏನು ಬಂಗಾರಾ ಪಂಗಾ ರಾ ಖರೀದಿ ಮಾಡೂದು ಅಪ್ಪರಲ್ಲೆ ಅದೆ ಅಂತ ಮಾವನ ಮ್ಯಾಲೆ ಟಬರ್‌ಮಾಡಿ ಸಿಕ್ಕಷ್ಟು ಗಂಟು ಮಾಡಿಕೊಳ್ಳೋಣ ಅಂತ ಲೆಕ್ಕ ಹಾಕಿದ ಹಾಗೆ ಕಾಣುತ್ತದೆ. ಮತ್ತೆ ಆರುವರ್ಷ ಕಾಲೇಜಿಗೆ ಮಣ್ಣು ಹೊತ್ತಮ್ಯಾಲೆ ಇಷ್ಟಾದ್ರೂ ಬುದ್ಧಿ ಬರದೆ ಹೋದೀತೇನು?

ಸುಶೀಲಾ—ಸಾಕುಬಿಡ್ರಿ ನಿಮ್ದು ಇಲ್ಲದ್ದೊಂದು. ನೀವು ಏನಾರ ಬರೀರಿ, ಬಿಡ್ರಿ ನನಗೇನು? ನೀವಿದ್ದೀರಿ ನಿಮ್ಮ ಮಗಳಿದ್ದಾಳೆ, ನಿಮ್ಮ ಅಳಿಯ ಇದ್ದಾನೆ.

ಕಮಲಾ—ಅವ್ವಾ.....

ಸುಶೀಲಾ—ಕಮ್ಮಾ, ಹೋಗು ನೀನು ನಿನ್ನ ಕೆಲಸಕ್ಕೆ. ಏನಾದ್ರೂ ನೆವ ಮಾಡಿ ದಿನಕ್ಕೆ ಒಂದ ನಾಲ್ಕಸಲಾ ಆದ್ರೂ ತಮ್ಮವ್ರನ್ನ ಬಯ್ಯದಿದ್ರೆ, ಹಂಗಸದಿದ್ರೆ ಇವರಿಗೆ ನಿದ್ದೆ ಬರೂದಿಲ್ಲ. ನನಗೆ ಗೊತ್ತಿಲ್ಲೇನು ನಮ್ಮ ದೇವರ ಗುಣಾ? ಹಾರಾಡುವಷ್ಟು ಹಾರಾಡಿ ಆಮ್ಯಾಲೆ ಹಾದೀಗೆ ಬಂದೇ ಬರ್ತಾರೆ. ಮಗಳು ಗಂಡನ ಮನೀಗೆ ಹೋಗಿ ಸಂಸಾರಾ ಹೂಡುವವರೆಗೂ ಅವಳ ಜವಾಬ್ದಾರಿ ತಂದು ಅಂತ....

ವಿಶ್ನೇ—ಹೋಗ್ರಿ, ಹೋಗ್ರಿ. ಆಮ್ಯಾಲ ಮಾತ್ರ ಹೀಗೆ ಏಕೆ ಮಾಡಿದ್ರಿ ಅಂತ ನನ್ನ ಕೇಳಬ್ಯಾಡ್ರಿ.

ಸುಶೀಲಾ— ಅಂದ್ರೆ—

ಕಮಲಾ— ಒಂದ ದಿನಾ ಮೊದಲೇ ಬರ್ರಿ ಅಂತ ಅಪ್ಪ ಬರೀತಾನೆ ಬಿಡು.

ವಿಶ್ನೇ— ಹುಂ. ಬರೀತಾನೆ. ಅಪ್ಪ ಸುರಳೀತ ಬರೀಲಿಕ್ಕೆ ಅಪ್ಪನ ಕೈಲಿ ಗಂಟಿಲ್ಲ. ಇದ್ರೂ ಬ್ಲಾಕ್‌ನಲ್ಲಿ ಬಂಗಾರಾ ತಂದು ಸಿಕ್ಕಿ ಬಿದ್ದು ಜೇಲಿಗೆ ಹೋಗೂ ಧೈರ್ಯವೂ ಇಲ್ಲ.

ಸುಶೀಲಾ— ಅಂದ್ರೆ, ಬರಬ್ಯಾಡಾ ಅಂತ ಬರೀತೀರೇನು?

ವಿಶ್ನೇ— ಇಲ್ಲಾ. ಮಹಾರಾಯನ ಹಾಗೆ ಬಾ. ಶುದ್ಧ ಬಂಗಾರದ ಒಡವೆ ಕಾಲ ಹೋಗ್ಯದ. ರೋಲ್ಡ್‌ಗೋಲ್ಡ್ ನಡೀವ್ಹಾಂಗೆ ಇದ್ರೆ ಬಾ— ಅಂತ ಬರೀತೇನೆ.

ಕಮಲಾ— ಆದ್ರೆ.......



ಕಮಲಾ— ನಾ ಒಂದು ಪತ್ರಾ ಅವರಿಗೆ..

**ವಿಷ್ಣೇ**— ಆದರೆ ಗೀದರೆ ಇಲ್ಲ. ನಾ ನಿಶ್ಚಯಿಸಿಬಿಟ್ಟೇನಿ. ಇವರ ಮ್ಯಾಲೆ ಅವನ ಇಷ್ಟ. ನಿನ್ನ ನಶೀಬ. ಏನೇ, ನೀ ಹೋಗು ಹಬ್ಬದ ತಯಾರಿ ಮಾಡ್ಲಿಕ್ಕೆ. ಕಮ್ಲೂ, ನೀ ಹೋಗು. ನಿನ್ನ ಕಾದಂಬರಿ ಓದಲಿಕ್ಕೆ. ಅಳಿಯ ರೋಲ್ಡ್ ಗೋಲ್ಡ್ ಆದ್ರೂ ನಮ್ಮ ಅಳಿಯನೇ. ಅದ್ದರಿಂದ ನಮ್ಮ ಕಿರಾಣಿ ಅಂಗಡಿಯವ ಏನಾದ್ರೂ ಒಂದಿಷ್ಟು ಬ್ಲಾಕ್‌ನಲ್ಲಿ ಸಕ್ರೀ ಕೊಡ್ತಾನೇನು ಅಂತ ಕೇಳಿಕೊಂಡು ಬರ್ತೇನೆ. ಆಗಲೇ ಹತ್ತು ಹೊಡೀಲಿಕ್ಕೆಬಂದದ. ಏನೇ, ಮೊದಲು ಅಡಗಿ ಮುಗಿಸಿ ಆ ವ್ಯಾಲೆ ನಿನ್ನ ಹಬ್ಬದ ವಿಚಾರಾ ಮಾಡು. ಇಲ್ಲಾಂದ್ರೆ ನನ್ನ ಆಫೀಸಿಗೆ ತಡಾ ಆದೀತು.

**ಕಮಲಾ**— ಅಪ್ಪಾ, ಅಪ್ಪಾ, ಅವರಿಗೆ ಸಿಟ್ಟು ಬರೂ ಹಾಂಗ ಏನಾದರೂ ಬರೀಬ್ಯಾಡಪಾ. ಅವರು ಬರಲಿ. ಆ ವ್ಯಾಲೆ....

**ವಿಷ್ಣೇ**— ಓಹೋ! ನೀ ಬುದ್ಧಿ ಹೇಳಿ ಅವನ ಸರೀ ಮಾಡವಾಕಿ ಏನು? ಹುಚ್ಚಿ, ಗಂಡ ಹೆಂಡತಿ ಮಾತು ಕೇಳ್ತಾನ ಅನ್ನೂದು ಖರೇ ಆದ್ರೂ ಹೆಣ್ಣಿನ ಮೋಹಕ್ಕಿಂತ ಬಂಗಾರದ ಮೋಹ ಹೆಚು ತಿಳೀತೇನು? ಸರಕಾರ ಸುಮ್ಮನೆ ಈ ಕ್ಯಾರೆಟ್ ಬಂಗಾರದ ಗದ್ದಲ ಎಬ್ಬಿಸ್ತು ಅಂತ ತಿಳಿದೀಯೇನು? ಅದಕ್ಕೆ ಗೊತ್ತದ, ಈ ಕಲಿಯುಗದೊಳಗ ಜನರೆಲ್ಲ ರೋಲ್ಡ್‌ಗೋಲ್ಡ್ ಮನಶಾರಾಗಿ ಬಿಟ್ಟಾರ ಅನ್ನೂದು. ಬರೀ ರೋಲ್ಡ್‌ಗೋಲ್ಡ್ ಸಾಕು ನಿಮ್ಮ ಯೋಗ್ಯತಾಕ್ಕ ಅಂದ್ರೆ, ತಲೀ ಕೆಟ್ಟು ಹುಚ್ಚುಚ್ಚಾರ ಮಾಡಿ ಬಿಟ್ಟಾರು ಅಂತ ಸಧ್ಯಕ್ಕೆ ಕ್ಯಾರೆಟ್ ಬಂಗಾರ ತಗೋರಿ ಅಂತ ಸರಕಾರದವರು ಅಂದಾರ. ಏನು ಬರೀಬೇಕೊ ನಾ ಬರೀತೇನಿ. ತಿಳೀತೇನು? (ಹೋಗುವನು)

**ಕಮಲಾ**— ಅಪ್ಪಾ, ಅಪ್ಪ....

**ಸುಶೀಲಾ**— ನೀ ಕಾಳಜಿ ಮಾಡಬ್ಯಾಡ. ಬಾಯಿಂದ ಅಂದ್ರೂ ಅವರು....

**ಕಮಲಾ**— ಇಲ್ಲವ್ವಾ. ಅಪ್ಪ ವಿಚಿತ್ರ ಸ್ವಭಾವದವ ಅನ್ನೂದು ನಿನಗೆ ಗೊತ್ತಿಲ್ಲೇನ ಇವ ಏನಾರ ಬರ್ದು, ಅವರು ಏನಾರ ತಿಳ-ಕೊಂಡು-

**ಸುಶೀಲಾ**—ಅದೂ ಖರೇನೆ. ಏನು ಮಾಡಬೇಕು ಅಂತ ತಿಳೀದ್ಹಾಂಗ ಆತು ನೋಡು.

**ಕಮಲಾ**—ಅವ್ವಾ, ಒಂದ ಕೆಲಸ ಮಾಡೋಣೇನು? ನಾ ಒಂದು ಪತ್ರ ಅವರಿಗೆ—

**ಸುಶೀಲಾ**— ನೀ ಪತ್ರ ಬರದರ ಅವರಂದ ಹಾಗೆ ಉಪಯೋಗ ಆಗಲಿಕ್ಕಿಲ್ಲ. ನಿನ್ನ ಗಂಡ ಒಂದು ವ್ಯಾಳೆ ಹೂಂ ಅಂತ ಅಂದ್ರೂ ಅವನ ಅಪ್ಪ ಒಪ್ಪಲಿಕ್ಕಿಲ್ಲ. ಲಗ್ನದೊಳಗೆ ಸಣ್ಣಪುಟ್ಟ ಮಾತಿಗೂ ತಕರಾರು ಮಾಡೇ ಮಾಡ್ತಿದ್ರು..

**ಕಮಲಾ**—ಅವ್ವಾ, ನಾ ಏನು ಬರೀತೇನೆ ಗೊತ್ತದೇನು? 'ಅಪ್ಪ ಬರದ ಪತ್ರಕ್ಕೆ ಮಹತ್ವ ಕೊಡಬ್ಯಾಡ್ರಿ. ನಿಮಗೆ ಹಬ್ಬಕ್ಕೆ ಬಂಗಾರದ ಚೇನು ಸಿಗ್ತದ' ಅಂತ ಬರೀತೇನೆ. ಆಗ ಬಂದೇ ಬರ್ತಾರ.

**ಸುಶೀಲಾ**—ಬಂದಾನು. ಬಂದ ಅಂತ ಇಟಕೊ. ಇಲ್ಲಿ ಬಂಗಾರದ ಚೇನು ಎಲ್ಲಿಂದ ಕೊಡ್ತಿ? ಅಂವ ಕೇಳಿದಾಗ ಇವ್ರು, ಈಗ ನಮ್ಮ ಮುಂದೆ ಅಂದ ಹಾಗೆ 'ನೀ ರೋಲ್ಡ್‌ಗೋಲ್ಡ್ ಮನಶಾ, ನಿನಗೆ ಯಾಕೊ ಬಂಗಾರದ ಮಾತು?' ಅಂದ್ರೆ ಮುಗದೇಹೋತು. ಇಲ್ಲಿ ವರೆಗೆ ಕರಸಿ ಅಪಮಾನ ಮಾಡಿದ್ರು ಅಂತ....

**ಕಮಲಾ**—ನೀ ಏನೂ ಕಾಳಜಿ ಮಾಡಬೇಡವಾ. ನಾ ಏನಾದ್ರೂ ಹಂಚಿಕೆ ಹಾಕ್ತೇನೆ. ಆಮ್ಯಾಲೂ ಬಂದವೇಳೆ ಅಪ್ಪ ಸಿಟ್ಟಿಗೆದ್ರೆ ಅಪ್ಪನ್ನ ಸುಧಾರಿಸಿಕೊಳ್ಳೂದು ನಿನ್ನ ಜವಾಬ್ದಾರಿ. ಅವ್ರನ್ನ ಸುಧಾರಿಸಿಕೊಳ್ಳೂದು ನನ್ನ ಜವಾಬ್ದಾರಿ.

**ಸುಶೀಲಾ**—ಏನು ಮಾಡ್ತೀಯೊ ಮಾಡಿಕೊ. ಮುಖ್ಯ ನೀ ಸುರಳೀತ ಗಂಡನ ಮನಿ ಸೇರಿದ್ರೆ ಸಾಕು.

( ೨ )

[ ಶಂಭುರಾಯರ ಮನೆ ]

**ಶಂಭು**— ಶ್ಯಾಮಾ, ಶ್ಯಾಮಾ, ಏ ಶ್ಯಾಮಾ? ಏನು ಮಾಡ್ಲಿಕ್ಕೆ ಹತ್ತೀಯೊ? ಬಾ ಇಲ್ಲಿ.

**ಶ್ಯಾಮು**—ಏನಿಲ್ಲಪ್ಪಾ, ಒಂದು ಪತ್ರ ಬರೀತಾ ಕೂತಿದ್ದೆ.

**ಶಂಭು**—ಪತ್ರ? ಯಾರೀಗೆ? ಯಾಕೆ ಸುಮ್ಮನಾದಿ? ಓಹೋ, ರಾಣೀಸಾಹೇಬ್ರೀಗೆ ಬರೀತಿದ್ದಿಯೇನು? ಹೀಗಾಗೇ ಈಗಿನವರ ಸಂಸಾರ ಒಗ್ಗಾಲಿಯಾಗಿರೂದು. ಅಲ್ಲೋ ಮಾಡಿಕೊಂಡ ಹೆಂಡ್ತಿಗೆ ಯಾಕೊ ಪ್ರೇಮಪತ್ರ ಬರಿಯೋದು? ಹುಚ್ಚುಚ್ಚು ಕಾದಂಬರಿ ಓದೂದು, ತಲೆ ಕೆಡಸೊ ಸಿನೇಮಾ ನೋಡೂದು, ಲಗ್ನ ಆಗುಮೊದಲು ಸಿಕ್ಕಸಿಕ್ಕ ಹುಡುಗೀರೀಗೆ, ಲಗ್ನ ಆದಮ್ಯಾಲೆ ಹೆಂಡ್ತಿಗೆ ಪ್ರೇಮ ಪತ್ರ ಬರಿಯೋದು! ಹೀಂಗಾಗೇ ನೀವೆಲ್ಲ ಥರ್ಡ್ ಕ್ಲಾಸ್ ಪಾಸಾಗಲಿಕ್ಕೆ ಹತ್ತೀರಿ, ಹೀಂಗಾಗೇ ಆ ವ್ಯಾಲೆ ನಿಮ್ಮ ಹೆಂಡಂದಿರು ನಿಮ್ಮ ಮಾತು ಕೇಳದ್ಹಾಂಗ ಆಗಿ ನೀವು ಮೂಗದಾರ ಪೋಣಿಸಿಕೊಂಡ ಎತ್ತಿನ ಹಾಂಗೆ ಹೆಂಡತಿ ಕೂತ ಗಾಡೀನ ಎಳೀತೀರಿ. ನಮ್ಮ ಕಾಲದಲ್ಲಿ ಇಂಥಾದ್ದು ಯಾವದೂ ಇದ್ದಿಲ್ಲ. ಸಂಸಾರ ಮಾಡ್ಲಿಕ್ಕೆ ಹತ್ತಿ ೪೦ ವರ್ಷ ಆತು. ನಿನ್ನ ಅವ್ವಗ ನನ್ನ ಮುಂದೆ ನಿಂತು ಮಾತಾಡೂ ಛಾತಿ ಅದೇನು? ಶ್ಯಾಮ್ಯಾ, ಗಂಡಸು ತಾ ಸಂಸಾರ ಆಳಬೇಕೇ ಹೊರ್ತು ತಾ ಆಳಿಸಿಕೊಳ್ಳಬಾರ್ದು. ಹರದು ಹಾಕು ನೀ ಬರದ ಪ್ರೇಮಪತ್ರಾನ್ನ. ಬ್ಯಾರೆ ಒಂದು ಬರೆ. ನಿನ್ನ ಅಪ್ಪಗೆ ಬರದ ಪತ್ರದ ವಿಚಾರ ನಿನಗೂ ತಿಳಿದಿರಬೇಕು. ಬಂಗಾರದ ಚೇನು, ಮತ್ತೆ ಒಂದು ರೇಡಿಯೋ ಬೇಕು ಅಂತ ನಿನ್ನ ಮನಸಿನೊಳಗ ಅದ ಅಲ್ಲ, ಅದನ್ನೂ ಕೊಡಿಸಿದ್ರೇನೇ ದೀಪಾವಳಿ ಹಬ್ಬ, ಅಂತ ಸ್ಪಷ್ಟ ಬರಿ. ಕಬ್ಬಿಣ ಆರಿದ ಮ್ಯಾಲೆ ಬಡವರೆ ಏನೂ ಪ್ರಯೋಜನ ಇಲ್ಲ.

**ಶ್ಯಾಮು**—ಆದ್ರೆ ಅಪ್ಪಾ....

**ಶಂಭು**— ಸುಮ್ಮನಿರು. ನಿನಗೇನು ತಿಳೀತದ? ಹುಚ್ಚಾ, ದಯಾ ದಾಕ್ಷಿಣ್ಯ ಇರ್ಬೇಕು. ಆದರೆ ಯಾವಾಗ, ಯಾರ ಮ್ಯಾಲೆ ಅನ್ನೂದು ಮುಖ್ಯ. ಖರೇ ಕಷ್ಟದಲ್ಲಿದ್ದವ್ರ ಮ್ಯಾಲೆ, ಅದೂ ನಮಗೆ ಲುಕ್ಸಾನ ಆಗದಿದ್ರ ಮಾತ್ರ, ದಯಾ ದಾಕ್ಷಿಣ್ಯ ತೋರಿಸ ಬಹುದು. ನಿನ್ನ ಮಾವ ಬಂಗಾರದ ಚೇನು, ರೇಡಿಯೊ ಕೊಡ

ಲಾರದಷ್ಟೇನೂ ಬಡವ ಅಲ್ಲ. ತಾ ದುಡೀತಾನೆ, ಮಗ ದುಡೀತಾನೆ. ಇರುವವಳು ಒಬ್ಬೇ ಮಗಳು. ಲಗ್ನದ ದಿನಾ ಎಂಥೆಂಥ ಸೋಗು ಮಾಡಿದ್ವ, ಗೊತ್ತದೊ ಇಲ್ಲೋ ನಿನಗೆ. ಇಷ್ಟು ಮಾಡಬೇಕಾದ್ರೇನೆ ದೊಡ್ಡ ಸಾಲ ಆಗಿ ಹೋತು ಅಂತ ಉಸಿರುಹಾಕಿದ. ಈ ಕಾಲದಲ್ಲಿ ಯಾರನ್ನೂ ನಂಬೂಹಾಂಗಿಲ್ಲಪಾ. ಎಲ್ಲ ರೋಲ್ಡ್-ಗೋಲ್ಡ್ ವ್ಯವಹಾರ ನಡೆದದ. ಕೆಲಸ ಆಗೂತನಕಾ ಶುದ್ಧ ಬಂಗಾರದ ಹಾಗೆ ನಡಕೋತಾರ ಅಷ್ಟೆ. ನಿನ್ನ ರಿಜಲ್ಟು ಬಂದು, ನಿನಗೆ ನೌಕರಿ ಹತ್ತಿದ ವ್ಯಾಲೆ ಲಗ್ನ ಮಾಡೋಣ ಅಂದ್ರೆ, 'ಯಾಕೆ ಕಾಳಜೀ ಮಾಡ್ತೀರಿ. ಪಾಸಾಗಲಿ, ನಪಾಸಾಗಲಿ, ಭಲೋ ನೌಕರಿ ಕೊಡಸೂ ಜವಾಬ್ದಾರಿ ನಂದು. ರೊಕ್ಕ ಇಲ್ಲದಿದ್ರೂ ವಜನ ಅದೆ' ಅಂತ ನಿನ್ನ ಮಾವ ಹೇಳಿದ್ದಿಲ್ಲೇನು? ಲಗ್ನ ಆತು. ನಿನ್ನ ನೌಕರಿ ಬಗ್ಗೆ ಕಡಗೂ ನಾನೇ ಖಟಪಿಟಿ ಮಾಡಬೇಕಾತು.

**ಶ್ಯಾಮು**— ಆದರೆ ಬಂಗಾರ ನಿಯಂತ್ರಣ ಒಂದು ಅದಲ್ಲ? ಅವರು ಹ್ಯಾಗೆ—

**ಶಂಭು**— ಅಯ್ಯೋ ಹುಚ್ಚಾ. ಈ ಜಗತ್ತನ್ನು ಸೃಷ್ಟಿಸಿ ಅದನ್ನು ನಡಸೂ ಬ್ರಹ್ಮಗ ಬುದ್ಧಿ ಇಲ್ಲ ಅಂತ ತಿಳಿದಿಯೇನು? ನಿಯಂತ್ರಣ ಮತ್ತು ಬ್ಲ್ಯಾಕ್ ಅನ್ನೂದು ಅವಳಿ ಜವಳಿ ಸಂತಾನ. ಬ್ಲ್ಯಾಕ್ ಇಲ್ಲದಿದ್ರೆ ಈ ನಿಯಂತ್ರಣ ಕಾಲದೊಳಗೆ ಯಾರಾದ್ರೂ ಬದುಕೂದು ಸಾಧ್ಯ ಇತ್ತೇನು? ರಾಜಾರೋಸ್ ಸಿಗದಿದ್ರೆ ನಿನ್ನ ಮಾವ ಬ್ಲ್ಯಾಕನೊಳಗೆ ತರಲಿ. ಅದು ಬ್ಯಾಡಾ ಅಂತಿದ್ರೆ ಮನಿಯೊಳಗೆ ಇದ್ದದ್ದನ್ನೇ ಮುರಸಿ ನಿನಗೆ ಚೇನು ಮಾಡ್ಸಿಕೊಡ್ಲಿ. ನಮಗೆಲ್ಲಾ ಒಂದೇ. ಹೋಗು ನಡಿ. ನೀ ಈಗ ಬರದ ಪತ್ರ ಹರದು ಹಾಕಿ ನಾ ಅಂದ ಹಾಗೆ ಪತ್ರ, ಅಂದ್ರೇನು ನೋಟೀಸೇ ಅನ್ನು, ಅಂಥಾ ಪತ್ರ ಬರದು ಹಾಕು. ಎಕ್ಸ್‌ಪ್ರೆಸ್ ಡಿಲಿವರಿ ಕಳಿಸು. ವ್ಯಾಖ್ಯಾ ಇಲ್ಲ. ತಿಳಿತೇನು? ಮತ್ತೆ ನೀ ಏನಾದ್ರೂ ಹೆಂಡತಿ ಅನ್ನೂ ಮೋಹದಿಂದ ಕನಿಕರ ತೋರ್ಸಿ ಬ್ಲ್ಯಾಕ್ ಮಾರ್ಕೆಟ್ ಆಟ ಹೂಡಿದಿ ಅಂದ್ರೆ— ನಿನ್ನ ಮನೀಹೊರಗೆ ಹಾಕೇನು? ತಿಳಿತೇನು? ಹೋಗು.

( ೩ )

( ವಿಘ್ನೇಶ್ವರರಾಯರ ಮನೆ. ಅವರು, ಅವರ ಅಳಿಯ ಶ್ಯಾಮು, ಅವರ ಮಗ ರಾಘು ಕುಳಿತಿದ್ದಾರೆ. )

**ವಿಘ್ನೇ**— ರಾಘು, ಕರಿಯಪಾ ನಿನ್ನ ಅವ್ವ ಮತ್ತು ತಂಗೀನ್ನ. ನಮ್ಮ ಶ್ಯಾಮರಾಯ್ರು ಹಬ್ಬಕ್ಕೆ ಬರಬೇಕಾದ್ರೆ ತನಗೆ ಬಂಗಾರ ಚೇನು, ರೇಡಿಯೊ ಬೇಕು ಅಂತ ಬರದಿದ್ರು. ಅವರು ಅಳಿಯ, ನಾ ಮಾವ. ಅಳಿಯ ಕರಾರು ಹಾಕೂದು, ಮಾವ ಹರಿಶ್ಚಂದ್ರ ರಾಜನ ಹಾಗೆ ತನ್ನೇ ಮಾರಿಕೊಂಡಾದ್ರೂ ಅಳಿಯನ ಬೇಡಿಕೆ ಪೂರೈಸೂದು ಅನಾದಿಕಾಲದಿಂದ ನಡೆದುಬಂದದ್ದು. ನಾನೂ ನನ್ನ ಕೈಲಾದ ಮಟ್ಟಿಗೆ ಶ್ಯಾಮುನ ಕರಾರು ಪೂರೈಸಲಿಕ್ಕೆ ಪ್ರಯತ್ನ ಮಾಡತೇನಿ. ಕರಿ ನಿನ್ನ ಅವ್ವ ಮತ್ತು ತಂಗೀನ. ಅವರ ಮುಂದೆ ಅಳಿಯದೇವರಿಗೆ ಕಾಣಿಕೆ ಒಪ್ಪಿಸಿ ಧನ್ಯ ಆಗತೇನೆ.

**ರಾಘು**—ಅವ್ವಾ ಅವ್ವಾ, ಕಮಲಾ ಕಮಲೂ, ಬರ್ರಿ ಇಲ್ಲಿ. ಅಪ್ಪ ಕರೀತಾನೆ. ಏನ ಕಮಲಾ ಅಷ್ಟು ಯಾಕೆ ನಾಚತಿ? ಬಾ ಇಲ್ಲೆ ಕೂತಕೊ ನಿನ್ನ ಗಂಡನ ಹತ್ತರ. ಅಪ್ಪ ಚೇನು ಮತ್ತೆ ರೇಡಿಯೊ ಕೊಟ್ಟ ವ್ಯಾಲೆ ಅವನ್ನ ನಿಮ್ಮಿಬ್ಬರ ಮಗ್ಗಲಲ್ಲಿ ಟೀಪಾಯ್ ಮೇಲಿಟ್ಟು ನಾ ಹೊಸದಾಗಿ ಕೊಂಡ ಕ್ಯಾಮರಾದಿಂದ ನಿಮ್ಮಿಬ್ಬರ ಫೋಟೊ ತಗೀತೇನೆ.


ಶಂಭು— ನಿನ್ನ ಮನೀಹೊರಗೆ ಹಾಕೇನ

**ವಿಘ್ನೇ**—ಅಂ! ಕ್ಯಾಮೆರಾ ತಗೊಂಡೀಯೇನು? ಅಲ್ಲೋ, ದೊಡ್ಡ ಪಂಡಿತನ ಹಾಗೆ ಕೈಬಿಗಿಹಿಡಿದು ಖರ್ಚು ಮಾಡಬೇಕು ಅಂತ ನನಗೆ ಉಪದೇಶ ಮಾಡೂ ನೀನು ಕ್ಯಾಮೆರಾ ತಗೊಂಡಿಯೇನು? ಎಷ್ಟುಕೊಟ್ಟಿ ಅದಕ್ಕೆ? ಮತ್ತೆ ನಾ ಎಲ್ಲಿ ರೇಡಿಯೊ ತಂದೇನಿ?

**ಶ್ಯಾಮು**— ತರಲಿಲ್ಲ? ಹಾಗಾದ್ರೆ 'ಬರ್ರಿ' ಅಂತ ಈಕೆ— (ಕಮಲಾನ ಕಡೆ ತೋರ್ಸಿ) ಇವಳು ಯಾಕೆ ಬರೆದಳು? ಬರ್ರಿ ಅಂತ ಬರದಮ್ಯಾಲೆ ಕೊಡ್ತಾರೆ ಅಂತ ಅಪ್ಪ ನನ್ನ ಕಳಸಿದ. ನಿಮ್ಮಿಂದ ಗ್ಯಾರಂಟಿ ಬಂದ ವಿನಾ ಹೊರಡಬಾರ್ದು ಅಂತ ನನಗೆ ತಾಕೀದು ಮಾಡಿದ್ದ. ಈಗ ನಾ ರೇಡಿಯೊ ಇಲ್ದೆ ಹೋದರೆ—

**ವಿಘ್ನೇ**—ಕಮಲಾ, ನೀನು 'ಬರ್ರಿ' ಅಂತ ಬರದಿದ್ದಿಯೇನು? ಕೊಡು ಹಾಗಾದ್ರೆ ನೀನೇ ರೇಡಿಯೋನ್ನ. ಶ್ಯಾಮರಾಯಾ, ತುಸು ಗದ್ದಲ ಆತು ನೋಡು. ನನ್ನ ಪತ್ರ ನಿನಗೆ ಮುಟ್ಟಲಿಲ್ಲೇನು? ನಾ ಅದರೊಳಗೆ ಸ್ವಚ್ಛ ಬರದಿದ್ದೆ, ಶುದ್ಧ ಬಂಗಾರ ಸಿಗೂ ಕಾಲ ಅಲ್ಲ ಇದು. ಹದಿನಾಲ್ಕು ಕ್ಯಾರೆಟ್ಟಿನ ಚೇನು ಕೂಡ ನಮ್ಮ ಊರಲ್ಲಿ ಸಿಗವಲ್ಲದು. ಅದಕ್ಕೆ— ಮತ್ತೆ ಈ ರೇಡಿಯೊ ಪ್ರಕರಣ ಯಾವದು? ನನಗೆ ಬಂದ ಪತ್ರದೊಳಗೇನೂ—

**ಶ್ಯಾಮು**— ನಿಮಗೆ ಬರದ ಪತ್ರದೊಳಗೆ ಇದ್ದಿಲ್ಲ ಖರೆ. ಆದರೆ ಅಪ್ಪ ನನ್ನ ಕಡಿಂದ ರೇಡೀಯೋನೂ ಬೇಕು ಅಂತ ಮತ್ತೊಂದು ಪತ್ರ ಬರಸಿದ್ದ. ಅದು ಮುಟ್ಟಿಲ್ಲೇನು ನಿಮಗೆ? ಆ ಪತ್ರ ನಾ ಬರದ ವ್ಯಾಲೇ ಈಕೀ ಕಡಿಂದ 'ನೀವು ಏನೂ ಕಾಳಜೀ ಮಾಡೋದು ಬ್ಯಾಡ. ಬರ್ರಿ' ಅಂತ ಪತ್ರ ಬಂದದ್ದು.

**ವಿಘ್ನೇ**— ಏ ಕಮಲೂ, ರಾಘೂ, ಏನಿದು? ರೋಲ್ಡ್‌ಗೋಲ್ಡ್ ಚೇನು ಕೊಡ್ತೇನೆ, ಅಡ್ಡಿ ಇಲ್ಲಾ ಅಂತ ಅಂದ್ರೆ, ಬಾ ಅಂತ ನಾ ಬರದ ಪತ್ರ ಇವನಿಗೆ ಮುಟ್ಟಲಿಲ್ಲ, ರೇಡಿಯೋನೂ ಬೇಕು ಅಂತ ಇಂವ ಬರದ ಪತ್ರ ನನಗೆ ಕೊಡಲಿಲ್ಲ. ನನಗೆ ತಿಳಿಸದೆ ಮನಸೀಗೆ ಬಂದ ಹಾಗೆ ಪತ್ರ ಬರದಿರೂ ಕಾರಭಾರ ನಿಮ್ದೇ ಇರಬೇಕು. ಆತು. ಭಲೋನೇ ಆತು. ನನಗೆ ಮೋಸಮಾಡಿ ನೀವು ಪಿತೃದ್ರೋಹ ಮಾಡಿದ್ರೂ ನನ್ನ ಜವಾಬ್ದಾರಿ ತಪ್ಪಿಸಿ ಉಪಕಾರಮಾಡಿದಿರಿ. ಇನ್ನು ನೀವೇನೊ ಈ ಶ್ಯಾಮನೇನೊ. ಏನು ಬೇಕಾದ್ದು ಮಾಡಿಕೊಳ್ರಿ. ಕೊಡ್ರಿ ಬಂಗಾರದ ಚೇನು ಮತ್ತು ರೇಡಿಯೋನ.

**ರಾಘು**— ಕೊಡ್ತೇವೆ. ನಾವೆಲ್ಲ ವ್ಯವಸ್ಥೆಮಾಡೇವಿ ಅಪ್ಪಾ.

**ವಿಘ್ನೇ**— ಅಂ! ಅದು ಹ್ಯಾಗೆ ತಂದೀರಿ?

**ರಾಘು**— ಹ್ಯಾಗೆ ತಂದೇವೋ ತಂದೇವಿ. ಕಮಲಾ, ಹೋಗಿ ತಗೊಂಡು ಬಾರವ್ವ ಚೇನು ಮತ್ತೆ ರೇಡಿಯೋನ್ನ.
(ಕಮಲಾ ಒಳಗೆ ಹೋಗಿ ತರುವಳು.)

**ವಿಘ್ನೇ**— (ಚೇನು ಹಿಡಿದು ನೋಡಿ) ಎಲಾ! ಬಂಗಾರದ್ದು! ಶುದ್ಧ ಬಂಗಾರದ್ದೆ ಇದು.



ಶ್ಯಾಮು— ತರ್‍ರಿ ಇಲ್ಲಿ ಆ ಚೇನು...

**ರಾಘು**— ಹೌದಪಾ. ಶುದ್ಧ ಬಂಗಾರದ್ದ ಇದು. ಕೊಡ ಲಿಲ್ಲಾ ಅಂದ್ರೆ ನಾಳೆ ಕಮಲಾನ ಸುಖಕ್ಕೆ—

**ವಿಷ್ನೇ**—ಓಹೋಹೊ ! ಭಾಳ ತಂಗೀ ಕಾಳಜೀ ಮಾಡವವ ನೀನು? ಹೇಳು, ಇವಕ್ಕೆಷ್ಟು ಕೊಟ್ಟಿ ? ರೊಕ್ಕ ಎಲ್ಲಿಂದ ತಂದಿ ?

**ರಾಘು**— ಸಾಲ ಮಾಡಿಲ್ಲಪಾ. ಶಿಲಕಿನಿಂದ ಕೊಡೋಣ ಅಂದ್ರೆ ಶಿಲಕೂ ಇದ್ದಿಲ್ಲ ಅದಕ್ಕೆ—

**ಶ್ಯಾಮು**—ತರ್‍ರಿ ಇಲ್ಲಿ ಆ ಚೇನು? ಖರೇ ಬಂಗಾರದ್ದೊ ಅಥವಾ ರೋಲ್ಡ್‌ಗೋಲ್ಡ್—

**ವಿಷ್ನೇ**— ಖರೇ ಬಂಗಾರದ್ದೆ ಇದು. ನೋಡಿಕೊ ಬೇಕಾದರೆ. ಇಕಾ, ರೋಲ್ಡ್ ಗೋಲ್ಡ್ ಚೇನು ಇಲ್ಲಿ ಅದೆ. (ಕಿಸೆಯೊಳಗಿಂದ ತೆಗೆಯುವನು.) ಖರೇ ಅಂದ್ರೆ ಈ ರೋಲ್ಡ್‌ಗೋಲ್ಡ್ ಚೇನು ನಿನಗೆ ಕೊಡಲಿಕ್ಕೆ ಅಂತ ನಾ ತಂದೆ. ಆದರೆ ಛೆ— ನನಗೇನೂ ತಿಳೀದ ಹಾಗೆ ಆಗಿ ಹೋತು. ಶ್ಯಾಮರಾಯಾ, ಈಗ ಏನಂದಿ ? ಜಗತ್ತೇ ರೋಲ್ಡ್‌ಗೋಲ್ಡ್ ಆಗಿಬಿಟ್ಟದ. ಸಾಚಾ ವ್ಯವಹಾರ ಅನ್ನೂದು ಇಲ್ಲೆ ಇಲ್ಲ. ಶುದ್ಧ ಅನ್ನೂದು ಯಾತರೊಳಗೂ ಇಲ್ಲ. ಇಲ್ಲಾಂತಂದ್ರೆ ರಾಘು ಮತ್ತು ಕಮಲಾ ನನಗೇ ಮೋಸ ಮಾಡ್ತಿದ್ರೇನು ? (ಮಗನಿಗೆ) ಹೇಳೊ ಹ್ಯಾಂಗೆ ತಂದಿ ಇದನ್ನ?

**ರಾಘು**— ಹೇಳ್ತೇನೆ. ಈವತ್ತಲ್ಲದಿದ್ರೂ ನಾಳೆಯಾದ್ರೂ ಎಲ್ಲಾರಿಗೂ ತಿಳಿದೇ ತಿಳೀತದ. ಆದರೆ ಒಂದು—ನಾನೂ ಕಮಲಾ ಕೂಡಿ ಮಾಡಿದ ಹಂಚಿಕೆ ಗುಟ್ಟು ಭಾವನ ಅಪ್ಪನಿಗೆ ಅಷ್ಟು ಸದ್ಯ ತಿಳೀಬಾರ್‍ದು. ಹಾಗಾದ್ರೆ ಮಾಡಿದ್ದೆಲ್ಲ ಹುಣಸೀಹಣ್ಣು ನೀರಿನೊಳಗೆ ತೊಳದ ಹಾಗೆ ಆದೀತು.

**ಶ್ಯಾಮು**— ಅಂದರೆ....

**ರಾಘು**— ಅಪ್ಪಾ, ಕಮಲಾನ ಕೊರಳಲ್ಲಿ ಮೂರು ಸರಾ ಇದ್ದವಲ್ಲ. ಅದರೊಳಗೆ ಒಂದು ಮುರಿಸಿ ಈ ಚೇನು ಮಾಡಿಸಿದ್ವಿ. ಉಳಿದ ರೊಕ್ಕ ಮತ್ತ ಅವ್ವನ ಹತ್ತರ ಇದ್ದ ಒಂದಿಷ್ಟ ರೂಪಾಯಿ ಕೂಡ್ಸಿ ರೇಡಿಯೊ ತಂದ್ವಿ. ನೀ ಇಷ್ಟು ಕೆದರಿ ಕೇಳದಿದ್ರ ಯಾರಿಗೂ ಈ ಈ ಗುಟ್ಟು ಗೊತ್ತಾಗ್ತಿದ್ದಿಲ್ಲ.

**ವಿಷ್ನೇ**— ಆಂ! ಏನು ? ಏನು ಅಂತೀನಿ? ಈಕಿ ಹತ್ತರ ರೂಪಾಯಿ ? ಇಷ್ಟು ವರ್ಷ ಸಂಸಾರಾ ಮಾಡಿದ ಮ್ಯಾಲೆ ಇವಳು ಶುದ್ಧ ಬಂಗಾರಾ ಅಂತ ನಂಬಿಕೊಂಡಿದ್ದೆ. ನನ್ನ ಹಣೇಬರಹಾ. ನನಗೇ ತಿಳೀದ ಹಾಗೆ ಇವಳು ರೂಪಾಯಿ ಕೂಡಿಸಿಟ್ಟಿದ್ದು ಅಂದ್ರೆ....! ಇವಳೂ ರೋಲ್ಡ್‌ಗೋಲ್ಡ್ ಅನ್ನೂದು ಸಿದ್ಧ ಆತಲ್ಲ. ಶಾಮರಾಯಾ, ನೋಡಿದೆಯಾ ಜಗತ್ತೆಲ್ಲ ರೋಲ್ಡ್‌ಗೋಲ್ಡೇ ಆಗಿದೆ ಅಂತ ನಾ ಅಂದದ್ದು ಈಗ ನಿನ್ನ ಮುಂದೇ ಸಿದ್ಧ ಆಗಿ ಹೋತು. ಏನೇ, ಇದಕೆಲ್ಲ ನೀನೇ ಕಾರಣ ಅಂತ ತಿಳೀತು. ಥತ್. ಹೆಂಡತಿ ರೋಲ್ಡ್‌ಗೋಲ್ಡು. ಮಗಾ, ಮಗಳು, ಅಳಿಯ ರೋಲ್ಡ್‌ಗೋಲ್ಡು. ಸಾಕು ನನಗಿನ್ನು ಈ ಸಂಸಾರಾ. ಏ ರಾಘು, ಹ್ಯಾಗೂ ನಿನಗೆ ನೌಕರಿ ಅದೆ. ಇನ್ನು ನಿಂದು ನೀ ನೋಡಿಕೋ. ಕಮಲೂ, ನೀನು ಅಪ್ಪಗ ಟೊಪ್ಪಿಗೆ ಹಾಕಿಯಾದ್ರೂ ಗಂಡನ್ನ ಸಮಾಧಾನ ಪಡಿಸೀದಿ. ನಿನ್ನ ಹಾದಿ ಸರಳ ಆತು. ನೀ ಇನ್ನು ಅವನ ಜೊತೆ ಹೋಗಿಬಿಡು. ಏನೇ, ಕೈಗೆ ಬಂದ ಮಗಾ ಇದ್ದಾನೆ, ನಂದೇನೂ ಗರಜಿಲ್ಲ ಅಂತಾ ಇಂದು ನನಗೆ ತಿಳಿಸಿಬಿಟ್ಟಿ. ಹೋಗು ಅವನ ಸಂಗಡ. ಈ ರೋಲ್ಡ್‌ಗೋಲ್ಡ್ ಜಗತ್ತು, ಈ ಸಂಸಾರಾ ಯಾವದೂ ನನಗೆ ಬ್ಯಾಡ. ನಾ ಎಲ್ಲಿಯಾದ್ರೂ ತೀರ್ಥಯಾತ್ರೆ ಮಾಡಿಕೋತ, ಸಾಧು-ಸಂನ್ಯಾಸಿ—

**ರಾಘು**— ಅವರೂ ರೋಲ್ಡ್‌ಗೋಲ್ಡೇ ಇರ್‍ತಾರಪಾ. ಸಾಧು ವೇಷ ಹಾಕಿಕೊಂಡು.....

**ವಿಷ್ನೇ**— ಸುಮ್ಮನಿರು ನೀನು. ರೋಲ್ಡ್‌ಗೋಲ್ಡ್ ಸಾಧು ಯಾರು, ಶುದ್ಧ ಬಂಗಾರದ ಸಾಧು ಯಾರು ಅನ್ನೂದು ತಿಳಿಯದಿರುವಷ್ಟು ನಾ ಏನೂ ಮೂರ್ಖ ಅಲ್ಲ, ತಿಳೀತೇನು ?

**ಸುಶೀಲಾ**— ಆದರೆ....

**ವಿಷ್ನೇ**—ನೀನೂ ಸುಮ್ಮನಿರು. ನನ್ನಿಂದ ಕದ್ದುಮುಚ್ಚಿ ರೊಕ್ಕಾ-

**ಸುಶೀಲಾ**—ಹೌದು ಇಟ್ಟಿದ್ದೆ. ಆದ್ರೆ ಏನಾತು? ಅದನೇನೂ ಹಾಳ ಮಾಡ್ಲಿಲ್ಲಲ್ಲ. ಮಗಳ ಹಿತಕ್ಕೇ ಉಪಯೋಗಿಸೇನಿ.

**ವಿಷ್ನೇ**—ಅಹಾಹಾ ! ಏನು ಮಹಾ ಮಾಡಿದಿ ಅಂತ ಹೇಳಕೊಳ್ತಿ? ಕಮಲಾನ ಸರಾ ಮುರ್‍ಸಿ ಅದರದ್ದೇ ಚೇನು ಮಾಡಿಸಿ ಅಳಿಯನಿಗೆ...

**ಶ್ಯಾಮು**—ಮಾವಾ, ಹೋಗ್ಲಿ ಬಿಡ್ರಿ. ಸದುದ್ದೇಶದಿಂದ ಮಾಡಿದ ಕೆಲಸದ ರೀತೀನ್ನ ಟೀಕಿಸಬಾರ್‍ದು. ಖರೇ ಅಂದ್ರೆ, ನಾನೂ ಅಪ್ಪನ

ಮಾತು ಮೀರಲಾರ್ದೆ ಚೇನು ರೇಡಿಯೊ ಬೇಕು ಅಂತ ಬರದಿದ್ದೆನೆ ಹೊರ್ತು ನಿಮಗೆ ತ್ರಾಸ ಕೊಡ್ಬೇಕು ಅಂತ ನನ್ನ ಮನಸಿನೊಳಗೇನೂ ಇದ್ದಿಲ್ಲ. ಖರೇ ಅಂದ್ರೆ ನಿಮ್ಮ ಮಾನಾನೂ ಉಳಿದಿರಬೇಕು, ನನ್ನ ಅಪ್ಪನ ಮಾತೂ ನಡದಿರಬೇಕು---ಹಾಗೆ ಉಪಾಯ ಹೂಡಿದ ನನ್ನ ಹೆಂಡತಿ, ಅವಳ ಅಣ್ಣ ಮತ್ತು ನನ್ನ ಅತ್ತೆ ಇವರ ಬಗ್ಗೆ ನನಗೆ ಅಭಿಮಾನ ಅನಸ್ತದ.

**ವಿಷ್ಣೀ**—ಭೇಷ್. ಆದ್ರೆ ಕಮಲಾನ ಕೊರಳಲ್ಲಿ ಇದ್ದ ಮೂರನೆ ಸರ ಎಲ್ಲಿ ಅಂತ ನಿನ್ನ ಅವ್ವ-ಅಪ್ಪ ಕೇಳಿದ್ರೆ—

**ಕಮಲಾ**—ಅಂಥಾದ್ದೇ-ಅದರ ಹಾಗೇ ಕಾಣೂ ರೋಲ್ಡ್‌ಗೋಲ್ಡ್ ಸರಾ ತಂದೇನಿ ಅಪ್ಪಾ.

**ಶ್ಯಾಮು**—ವ್ಹಾ! ಭೇಷ್! ಭಲೆ.

**ವಿಷ್ಣೀ**—ಯಾಕೆ ನಿಲ್ಲಿಸ್ದಿ? ಇಂಗ್ಲೀಷ್ ಕಲಿತೀದಿ. ಗುಡ್, ಎಕ್ಸಲೆಂಟ್, ಫೈನ್ ಅಂತ ಅನ್ನಲಾ. ಪಾಪ, ನೀನಾದ್ರೂ ಏನು ಮಾಡಿ? ಹೆಂಡತಿ ಏನು ಮಾಡಿದ್ರೂ ಛಂದ ಕಾಣೂ ವಯಸ್ಸು ನಿಂದು. ಆದ್ರೆ ತಮ್ಮಾ, ನಾ ಹೇಳ್ತೇನಿ ಕೇಳು, ಸಂಸಾರಾ ಅಂದ್ರೇನೇ ರೋಲ್ಡ್‌ಗೋಲ್ಡು ಅಂತ ತಿಳಕೊಳ್ದೆ ನೀ ನಡದೀ ಅಂದ್ರೆ....

**ರಾಘು**—ಅಪ್ಪನ ಹಾಗೇ ಹೆಂಡತಿ-ಮಕ್ಕಳ ಮುಂದೆ ಬುದ್ಧಿಸ್ಪರ್ಧೆಯಲ್ಲಿ ಸೋಲಬೇಕಾಗ್ತದ. ಈ ಸಂಸಾರ ರೋಲ್ಡ್‌ಗೋಲ್ಡ್ ಅನ್ನುವವ್ರ ಬುದ್ಧೀನೂ ರೋಲ್ಡ್‌ಗೋಲ್ಡೇ ಆಗಿರ್ತದ, ಅಂತ ಅನ್ನೂದು....

**ವಿಷ್ಣೀ**—ಹೌದಪಾ ಹೌದು. ಆಳಿಯು ಬಂದರೆ ಬಗ್ಲಿ, ಬಿಟ್ಟರೆ ಬಿಡ್ಲಿ ಅನ್ನೂ ದಿಮಾಕಿಂದ ನಾ ಪತ್ರ ಬರದ್ರೂ ಈ ತಾಯಿ-ಮಗಳು ಕುಲುಕುಲು ನಕ್ಕೋತ ಯಾಕೆ ಇದ್ದಾರೆ ಅನ್ನೂ ಸಂಶಯ ಕೂಡ ನನಗೆ ಬರಲಿಲ್ಲ ಅಂದಮ್ಯಾಲೆ ನೀ ಅಂದಹಾಂಗೆ ನನ್ನ ಬುದ್ಧೀನೂ ರೋಲ್ಡ್‌ಗೋಲ್ಡೇ ಆಗಿರಬೇಕು. ಆತು, ಆದದ್ದೆಲ್ಲ ಒಳಿತೇ ಆಯಿತು ಅಂತ ಅಂದ ದಾಸರ ಹಾಗೆ ಅಂದ್ಕೊಂಡು....

**ರಾಘು**—ಅಂದ್ರೆ ನೀ ಏನೂ ತೀರ್ಥಯಾತ್ರೆ-ಸಾಧು ಸಂನ್ಯಾಸಿ....

**ವಿಷ್ಣೀ**—ಇಲ್ಲಪಾ ಇಲ್ಲ. ನಾ ಮಾತ್ರ ಶುದ್ಧ ಭಂಗಾರಾ, ನೀವೆಲ್ಲ ರೋಲ್ಡ್‌ಗೋಲ್ಡು ಅನ್ನೂ ಭ್ರಮೆಯಿಂದ ಆ ವಿಚಾರ ಬಂತು ನನಗೆ. ಈಗ ನಾನೂ ರೋಲ್ಡ್‌ಗೋಲ್ಡ್ ಅಂದಮ್ಯಾಲೆ....

**ರಾಘು**— ಭೇಷ್! ಎಲ್ಲಾ ಸರಿ ಆತನ್ನು. ನಡಿ ಅವ್ವಾ, ನೀ ಇನ್ನು ಒಳಗೆ. ಚಹ ಫರಾಳದ ತಯಾರಿ ಮಾಡು. ಶ್ಯಾಮರಾವ್, ನೀವು ಕಮಲಾ ಒಟ್ಟಿಗೆ ಕೂಡ್ರಿ. ಫೋಟೋ ತಗೀತೇನೆ. ಅಂ ಹಂ! ಸರಿಯಾಗಿ ಕೂಡ್ರಿ. ತುಟಿಯೊಳಗೆ ನಗರಿ. ರೆಡಿ. ಒನ್, ಟೂ, ಥ್ರಿ; ಓ. ಕೆ.

**ಕಮಲಾ**— ನಾ ಇನ್ನ ಹೋಗ್ತೇನೆ ಅಣ್ಣಾ. ಅವ್ವಗ ಒಂದಿಷ್ಟು....

**ರಾಘು**— ಹೋಗು ಹೋಗು. ಚಹ ನೀನೇ ಮಾಡು. ಶ್ಯಾಮರಾಯ್ರೀಗೆ ಅದೇ ರುಚಿಯಾದೀತು. (ಶ್ಯಾಮರಾಯ ಎದ್ದದ್ದನ್ನು ಕಂಡು) ಯಾಕೆ ಎದ್ರಿ?

**ಶ್ಯಾಮು**— ಅಂ. ಪಿಸಿಲ್ಲ-ತುಸಾ

**ವಿಷ್ಣೀ**—ಸಿಗರೇಟುಪಗರೇಟು ಸೇದಬೇಕಾನೆದೇನೊ ಹೋಗ್ಲಿಬಿಡು ಅವನ ಕೋಣೆಗೆ (ಶ್ಯಾಮರಾಯ ಹೋದ ಮೇಲೆ ಮೆಲ್ಲಗೆ) ರಾಘು, ಈಗೇನೊ ನಿನ್ನ ಬುದ್ಧಿ ಚುರುಕಿದ್ದ ಹಾಂಗ ಕಾಣಸ್ತದ. ಆದರೆ ನಾಳೆ ನಿನ್ನ ಲಗ್ನದ ಪ್ಯಾಕ್ಯಕ್ಕ— ಲಗ್ನ ಆಗಿ ನೀ ದೀಪಾವಳೀಗೆ ಮಾವನ ಮನೀಗೆ ಹೋಗುವಾಗ ಮಾತ್ರ — ಈ ಶ್ಯಾಮುನ ಹಾಗೆ ಹೆಂಡತೀ ಮೋಹಕ್ಕೆ ಬಿದ್ದು ರೋಲ್ಡ್‌ಗೋಲ್ಡ್ ಬುದ್ಧಿ ಮಾಡಿಕೊಳ್ಳಬ್ಯಾಡ. ತಿಳೀತೇನು?



ರಾಘು— ನಾವು ಕೊಟ್ಟ ಚೇನೂ ರೋ[ಲ್ಡ್] ಗೋಲ್ಡಿಂದೇ.

**ರಾಘು**— ನೀ ಏನೂ ಕಾಳಜಿ ಮಾಡಬ್ಯಾಡಪ್ಪಾ. ಗುಟ್ಟು ಹೇಳ್ತೇನೆ ಕೇಳು. ನಂದೇ ಗೆದ್ದಿತು ಅಂತ ಹುರುಪಿನೊಳಗೆ ಗುಟ್ಟು ರಟ್ಟು ಮಾಡಬ್ಯಾಡ. ಖರೇ ಅಂದ್ರೆ ಕಮಲಾನ ಸರ ಮುರಿಸೇ ಇಲ್ಲ. ಅಳಿಯುದೇವರಿಗೆ ನಾವು ಕೊಟ್ಟ ಬಂಗಾರದ ಚೇನೂ ರೋಲ್ಡ್ ಗೋಲ್ಡಿಂದೇ. ಸಮಯ ಸಾಧಿಸಿ ಕಮಲಾ ಗಂಡನಿಗೆ ಈ ಮಾತು ಹೇಳಿ ಎಲ್ಲಾ ಸರಿಮಾಡ್ತಾಳ.

**ವಿಷ್ಣೀ**— ಆಂ! ಮತ್ತೆ ರೇಡಿಯೊ? ಅದೂ ಬರೀ ಪೆಟ್ಟಿಗೆ . . . .

**ರಾಘು**— ಅಲ್ಲ. ಅದು ಖರೇ ರೇಡಿಯೊ. ಅವ್ವನ ಹತ್ತರ ಇದ್ದ, ಆಗಾಗ 'ನೀ ಏನಾದ್ರೂ ನಿನ್ನ ಮನಸಿಗೆ ಬಂದದ್ದು ತಗೊ' ಅಂತ ಭಾವ ಕಮಲೂಗ ಕವರಿನಲ್ಲಿಟ್ಟು ಕಳಸುತ್ತಿದ್ದ ರೊಕ್ಕ ಕೂಡಿಸಿ ಅದನ್ನ ತಂದೇವಿ.

**ವಿಷ್ಣೀ**— ಭಲೆ! ಅಂತೂ ಚುರುಕಿದ್ದೀರಿ ನೀವೆಲ್ಲಾ. ನಾ ಹುಟ್ಟಿದ್ದು ಸಾರ್ಥಕ ಆತು. ನಾ ರೊಲ್ಡ್ ಗೋಲ್ಡ್ ಬುದ್ಧಿಯವ ಅಂತ ಆದ್ರೂ—

**ರಾಘು**— ಅಪ್ಪಾ, ಆ ಮಾತು ಬಿಡಪ್ಪಾ, ಇನ್ನು. ಎಲ್ಲಾರ ಬುದ್ಧಿನೂ ಖರೇ ಅಂದ್ರೆ ರೋಲ್ಡ್‌ಗೋಲ್ಡೇ ಇರ್ತದ. ಹುಚ್ಚೆನಿಗೊಮ್ಮೆ ಅವಮಾನಿಗೊಮ್ಮೆ ಖರೇ ಬಂಗಾರದ ಆಭಾಸ ಹುಟ್ಟಿಸ್ತದೆ ಅದು ಅಷ್ಟೆ. ನೀ ಅಂದಹಾಂಗೆ ಜಗತ್ತಿನೊಳಗೆ, ಸಂಸಾರದೊಳಗೆ ಎಲ್ಲಾ ರೋಲ್ಡ್‌ಗೋಲ್ಡೇ.

---

**ಸೂಚನೆ**— ಈ ನಾಟಕವನ್ನು ಪ್ರಯೋಗಿಸುವವರು ೧೫ ರೂ. ಗೌರವಧನ ಕಳಿಸಿ ಲೇಖಕರ ಪೂರ್ವಸಮ್ಮತಿ ಪಡೆದುಕೊಳ್ಳಬೇಕು.



ಲೇಖಕರು :
**ಸೊ. ಸುಬ್ರಹ್ಮಣ್ಯಂ, ಬೆಂಗಳೂರ**

# ಸಂಶೋಧನೆಯಲ್ಲಿಯೂ ಕಾಕತಾಳೀಯ ನ್ಯಾಯ

ವೈಜ್ಞಾನಿಕ ಸಂಶೋಧನೆಗಳು ಅದ್ಭುತ ರೀತಿಯಲ್ಲಿ ರೂಪಗೊಂಡಿವೆ: ಆಕಸ್ಮಿಕವಾಗಿ ಮಿಂಚಿನಂತೆ ಸಂಶೋಧಕರಿಗೆ ಅವು ಹೊಳೆಯುತ್ತಿರುತ್ತವೆ ಎಂದು ಸಾಮಾನ್ಯವಾದ ನಂಬಿಕೆಯಿದೆ. ಆದರೆ ಇಲ್ಲಿಯೂ ಸೃಜನಾತ್ಮಕಶಕ್ತಿಯೇ ಮುಖ್ಯ ಮೂಲ ಎಂಬುದನ್ನು ಅನೇಕರು ತಿಳಿದಿರಲಿಕ್ಕಿಲ್ಲ. ಇದು ಕಾಕತಾಳೀಯ ನ್ಯಾಯ ವಲ್ಲ; ಅದಕ್ಕೆ ಮಾನಸಿಕ ಹಿನ್ನೆಲೆಯೊಂದಿರುವದೆಂಬ ಅಂಶವನ್ನು ಲೇಖಕರು ಇಲ್ಲಿ ಸೋದಾಹರಣವಾಗಿ ನಿರೂಪಿಸಿದ್ದಾರೆ.

---

ಅನೇಕ ವೈಜ್ಞಾನಿಕ ಶೋಧಗಳು ಆಶ್ಚರ್ಯಜನಕ ಸಂಗತಿಗಳನ್ನೊಳಗೊಂಡಿರುತ್ತವೆ ಮತ್ತು ಅವುಗಳಲ್ಲಿನ ಪ್ರತಿಶೋಧದ ಪೂರ್ವಾಪರವನ್ನು ತಿಳಿಯಲು ಪ್ರತಿಯೊಬ್ಬನೂ ಕುತೂಹಲಿಯಾಗಿರುತ್ತಾನೆ. ಅದನ್ನು ಯಾರು ಮೊದಲು ಯೋಚಿಸಿದವರು ? ಆ ಭಾವನೆಗೆ ಅವನಲ್ಲಿದ್ದ ಪ್ರೇರಕಶಕ್ತಿ ಯಾವುದು ? ಅದು ಹಾಗಾಗಲು ಕಾರಣವೇನು ? ಇದೇ ಮೊದಲಾಗಿ ಅವನ ಚಿಂತೆ ಹರಿಯುದೆ ಸಂಗತಿಗಳು, ಘಟನೆಗಳು ಒಂದಕ್ಕೊಂದು ಮೇಳೈಸಿಕೊಂಡು ಕಥೆಯ ರೂಪ ಹೊಂದಿ ಪ್ರಚುರವಾಗುತ್ತವೆ. ಇವು ಕರ್ಣಾಕರ್ಣಿಯಾಗಿ ಹರಡಿ ಐತಿಹ್ಯವಾಗಿ ಉಳಿದರೂ ಸೋಜಿಗವೇನಲ್ಲ, "ತತ್‌ಕ್ಷಣವೇ ಎಡಿಸನ್ನನಿಗೆ ಮಿಂಚಿನಂತೆ ಭಾವನೆಯೊಂದು ಹೊಳೆಯಿತು..." "ಫ್ಲೆಮಿಂಗ್ ತನ್ನ ಅಭ್ಯರ್ಥನ ತಳಿಗೆಗಳತ್ತ ಓರೆನೋಟ ಬೀರಿದ ಕೂಡಲೇ ಅವನಿಗರಿವಾಯಿತು..." "ಇಲಿಗಳ ಜೋನಿಸತ್ತ ನೋಡಿದ ಕ್ಷಣವೇ ಪ್ಯಾಶ್ಚರನ ಮನಸ್ಸು ಅದ್ಭುತವನ್ನು ಕಂಡಿತ್ತು..." ಇತ್ಯಾದಿಗಳು ಇದಕ್ಕೆ ನಿದರ್ಶನ.

ವೈಜ್ಞಾನಿಕ ಶೋಧಗಳು ಸಾಮಾನ್ಯವಾಗಿ ಆಕಸ್ಮಿಕವಾಗಿ, ಕಲ್ಲೆಡವಿದಾಗ ಸಿಗುವ ನಿಧಿಯಂತೆ, ಕಾಕತಾಳೀಯ ನ್ಯಾಯದಿಂದ ಆಗತಕ್ಕುವೆಂಬ ಭಾವನೆ ಬೇರೂರಿದೆ. ನಮ್ಮ ಪ್ರಾಥಮಿಕ ಪಾಠಗಳಲ್ಲಿಯೇ ನಾವು ಆರ್ಕಿಮಿಡೀಸ್ ಸ್ನಾನದ ಮನೆಯಿಂದ "ನನಗೆ ತಿಳಿಯಿತು ! ನನಗೆ ತಿಳಿಯಿತು !!" ಎಂದು ಅರಚುತ್ತಾ ಬೆತ್ತಲೆ ಓಡಿಹೋದ ಕಥೆಯನ್ನು ಓದುತ್ತೇವೆ. ಎಳೆಯ ಮನಸ್ಸಿನ ಮೇಲೆ ಅದು ಬೀರುವ ಪ್ರಭಾವ ಎಂತಹುದೆಂದು ಹೇಳುವುದು ಅಸದಳ. ಆದರೆ ವಾಸ್ತವದಲ್ಲಿ ವೈಜ್ಞಾನಿಕ ಶೋಧಗಳು ಹೀಗೆ ತಟ್ಟನೆ ಇಲ್ಲವೆ ಹಠಾತ್ತನೆ ಆಗುವುದಿಲ್ಲ. ಭಾವನೆಗಳಿಗೂ ಪೂರ್ವಜರುಂಟು; ಅವೂ ಸಂಸಾರ ಕೂಡಿಕೊಂಡು ಬರುತ್ತವೆ. ಈ ಭಾವನಾನುಸಾರದ ಕೊನೆಯ ಅವತಾರವನ್ನು ಸುಲಭವಾಗಿ ಗುರುತಿಸಬಹುದು. ಉದಾಹರಣೆಗೆ, ಐನ್‌ಸ್ಟೈನರ ಸಾಪೇಕ್ಷಸಿದ್ಧಾಂತವು ಇಂತಹ ದಿನ ಪ್ರಕಟವಾಯಿತು; ಡಾರ್ವಿನ್ನರ ಜೀವಜಾತಿಗಳ ಹುಟ್ಟಿನ ನಿಯಮಗಳು ಈ ದಿನ ಪ್ರಕಟಣೆಗಾಗಿ ಹೊರಬಂದಿತು ಎನ್ನಬಹುದೇ ವಿನಾ ಯಾವ ಕಾರ್ಯಪರಂಪರೆ ಈ ಕೃತಿಗೆ ಕಾರಣವಾಯಿತು ? ಎಷ್ಟು ವರ್ಷಗಳ ಚಿಂತನ-ಮಂಥನದ ಫಲವಿದು? ಎಷ್ಟು ಲೋಪದೋಷಗಳಿಂದ ಇದರ ಪ್ರಾರಂಭ ಮತ್ತು ಪ್ರಗತಿ ? ಇದರಲ್ಲಿ ಅನುಭವ, ಆಕಸ್ಮಿಕ, ಕಾರಣ ಮತ್ತು ವಿವೇಚನೆಗಳ ಪಾತ್ರವೇನು ? ಎಂಬ ಪ್ರಶ್ನೆಗಳಿಗೆ ಉತ್ತರ ಹೇಳುವುದು ದುಸ್ಸಾಧ್ಯ.

## ಸೃಜನಾತ್ಮಕ ಪ್ರಯತ್ನ

ಮಿಕ್ಕೆಲ್ಲ ಕ್ಷೇತ್ರಗಳಲ್ಲಿನ ಸೃಜನಾತ್ಮಕ ಕ್ರಿಯೆಯಂತೆ ವೈಜ್ಞಾನಿಕ ಸೃಜನಾತ್ಮಕ ಕ್ರಿಯೆಯೂ ಒಂದೆಂದು ಸಾಮಾನ್ಯವಾಗಿ ಬಹುಮಂದಿ ತಿಳಿದಿಲ್ಲ. ಯಾವ ಕಾರಣದಿಂದಲೋ ಏನೋ ವಿಜ್ಞಾನವನ್ನು ವಿಶೇಷವೆಂದು ಪರಿಗಣಿಸಲಾಗಿದೆ. ಸಾಮಾಜಿಕ ಪರಿಸರ, ಸಮಕಾಲಿಕ ಆಲೋಚನೆ ಮೊದಲಾದವುಗಳನ್ನು ಸಾಂಸ್ಕೃತಿಕ ಚರಿತ್ರಕಾರರು ಪರಿಶೋಧಿಸಿ ಸೃಜನಾತ್ಮಕ ಶಕ್ತಿಯ ಮೇಲೆ ಅವುಗಳ ಪ್ರಭಾವವೇನೆಂಬುದನ್ನು ತಿಳಿಯಲು ಪ್ರಯತ್ನಿಸುತ್ತಾರೆ. ವೈಜ್ಞಾನಿಕ ಶೋಧಗಳ ಬಗ್ಗೆ ಆ ಆಸಕ್ತಿ, ಸಿಂಡರೆಲಾನ ಮೇಲಿನ ಪ್ರೀತಿಯಂತೆ, ಮಲತಾಯಿಯ ಮಮತೆ, ಕಲೆಯಲ್ಲಿ ಸೃಜನಾತ್ಮಕ ಪ್ರಯತ್ನಗಳ ಪರಿಚಯ ಪಡೆಯುವುದು ಕಷ್ಟವೆಂದು ತಿಳಿದು ಬಂದಿದೆ. ಮೊಟ್ಸಾರ್ಟ್ ಮತ್ತು ಬೀಕೊವೆನ್‌ರ ಸಂಗೀತಸೃಷ್ಟಿಯ ಮಾನಸಿಕ ಪೂರ್ವೇತಿಹಾಸದ ಅರಿವಾಗುವುದು ಅಸಾಧ್ಯವೇ ಸರಿ. ಆದರೆ ಕೆಪ್ಲರ್, ನ್ಯೂಟನ್, ಡಾರ್ವಿನ್, ಐನ್‌ಸ್ಟೈನರ ನಿಯಮಗಳ ಮಾನಸಿಕ ಹಿನ್ನೆಲೆಯನ್ನು ತಾನೆ ತಿಳಿಯುವುದು ಸಾಧ್ಯವೇ ?

ಶೋಧಗಳಿಗೆ ಪ್ರೇರಕವಾಗುವಂತಹ ವಿಶೇಷ ಪ್ರಭಾವಕಾರಿ ಅಂಶಗಳೇನಾದರೂ ಇವೆಯೇ ? ಹಲವಾರು ವಿಖ್ಯಾತ ವಿಜ್ಞಾನಿಗಳು ತಮ್ಮ ಕಾರ್ಯಕ್ರಮದ ರಹಸ್ಯಗಳನ್ನು ಹೊರಗೆಡಹಿದ್ದಾರೆ. 'ಪಕ್ಕವಾಗಿ ಆಲೋಚಿಸಬೇಕು.' ಎಂದರು ಕ್ಲಾಡೆ ಬರ್ನಾರ್ಡ್. ರಸಾಯನ ಶಾಸ್ತ್ರಜ್ಞ ಟೀಪಲ್‌ರವರ ಅಭಿಪ್ರಾಯದಲ್ಲಿ ಸೃಜನಾತ್ಮಕ ಶಕ್ತಿಯುಂಟಾಗುವುದು ಒಂದಾದ ಮೇಲೊಂದರಂತೆ ಎರಡು ಸಲ ಬಿಸಿನೀರಿನ ಸ್ನಾನ ಮಾಡಿದಾಗಲೇ. ಕೆಲವರಿಗೆ ಕಾಫಿ, ಕೆಲವರಿಗೆ ಕನಸಿನ ಅಧ್ಯಯನ, ಮತ್ತೆ ಕೆಲವರಿಗೆ ಕೇವಲ ತರಕಾರಿಗಳ ಪಥ್ಯ—ಹೀಗೆ ವಿಭಿನ್ನವಾದ ಪ್ರಭಾವಗಳು ಸೃಜನಾತ್ಮಕ ಶಕ್ತಿಗೆ ಪ್ರೇರಕವಾಗಿರುವುದು ತಿಳಿದು ಬಂದಿದೆ.

## ಮಾನಸಿಕ ಹಿನ್ನೆಲೆ

ಗಣಿತ ಶಾಸ್ತ್ರದಲ್ಲಿನ ಶೋಧಗಳ ಬಗೆಗೆ ಆ ಸೃಜನಾತ್ಮಕ ಕ್ರಿಯೆಯ ಮಾನಸಿಕ ಹಿನ್ನೆಲೆಯ ಪರಿಚಯ ಹೊಂದುವ ಪ್ರಯತ್ನ ಬಹುಮಟ್ಟಿಗೆ ಫ್ರೆಂಚ್ ವಿಜ್ಞಾನಿಗಳಿಂದ ನಡೆದಿದೆ. ಜಾಗೃತಾವಸ್ಥೆಯಲ್ಲಿರುವಾಗ ಸಮಸ್ಯೆಗಳಿಗೆ ಪ್ರಯಾಸಪಟ್ಟರೂ ದೊರಕದಿದ್ದ ಉತ್ತರಗಳು 'ಗಣಿತಸ್ವಪ್ನ'ಗಳಲ್ಲಿ ಗೋಚರವಾಗುವುದೆ? ಎಂಬ ಪ್ರಶ್ನೆಯನ್ನು ವಿಖ್ಯಾತ ಗಣಿತಶಾಸ್ತ್ರಜ್ಞರಿಗೆ ಕಳುಹಿಸಿಕೊಡಲಾಯಿತು. ಅವರಲ್ಲಿ ಬಹಳ ಮಂದಿ ಬೀಜಗಣಿತ ಮತ್ತು ರೇಖಾಗಣಿತದ ಸಮಸ್ಯೆಗಳ ಬಗೆಗೆ ಕನಸಿನ ಸಹಾಯದಿಂದ ಉತ್ತರಗಳನ್ನು ಪಡೆದಿರಲಿಲ್ಲ. ಉತ್ತರ ಪಡೆದ ಕೆಲವೇ ಮಂದಿ ಅದು ತಮಗೆ ಎಚ್ಚೆತ್ತ ತಕ್ಷಣವೇ ಹೊಳೆಯಿತೆಂದು ಹೇಳಿದರು. ಮತ್ತೊಮ್ಮೆ ಸಂಗ್ರಹಿಸಿದ ಉತ್ತರಗಳೂ ಅಷ್ಟು ಸಮರ್ಪಕವಾದ ನಿಖರ ಹಾಗೂ ನಿರ್ದುಷ್ಟ ಫಲಿತಾಂಶಗಳನ್ನು ನೀಡಿರಲಿಲ್ಲ. ವಿಖ್ಯಾತ ಗಣಿತಜ್ಞ

ಹೆನ್ರಿ ಪಾಯನ್‌ಕೇರರ ಅಭಿಪ್ರಾಯದಲ್ಲಿ ಗಣಿತ ಶಾಸ್ತ್ರಜ್ಞರು ಒಂದುಬಗೆಯ ವಿಶೇಷ ಅಂತರ್ದೃಷ್ಟಿಯನ್ನು ಹೊಂದಿರುತ್ತಾರೆ. ಹರಕು ಮುರುಕು ಆಲೋಚನೆಗಳು ಮನೋಗೃಹದಲ್ಲಿ ಅವ್ಯವಸ್ಥಿತವಾಗಿ ಹರಡಿಹೋಗಿದ್ದರೂ ಸಕಾಲಕ್ಕೆ ಅವೆಲ್ಲವೂ ಒದಗಿ ಬಂದು ಒಂದು ಆಂತರಿಕ ಆಳ್ವಿಕೆಗೊಳಪಟ್ಟಂತೆ ಅವಿಚ್ಛಿನ್ನ ಆಲೋಚನಾಸರಣಿಯಾಗಿ ಅವತಾರ ತಳೆಯುತ್ತದೆ. ಪಾಯನ್‌ಕೇರರ ವಾದಸರಣಿ ಇಂತಾದರೆ, ಜಾಕ್ವಿಸ್ ಹದಾಮರ್ದ್‌ರವರು ತಮ್ಮ ಪ್ರೌಢ ಪ್ರಬಂಧವೊಂದರಲ್ಲಿ ತಪ್ಪುಗಳೂ ಗಣಿತದ ಹಲವು ಶೋಧಗಳಿಗೆ ಕಾರಣವಾಗಿದೆಯೆಂದು ಹೇಳಿದ್ದಾರೆ. ಅಂತರ್ದೃಷ್ಟಿ ಅಥವಾ ತಾರ್ಕಿಕ ಮನೋಭಾವ, ನಿಷ್ಕೃಷ್ಟತೆ, ಮಾನಸಿಕ ಚಿತ್ರಣ ಅಥವಾ ವ್ಯವಸ್ಥೆಯೂ ಶೋಧಕ್ಕೆ ಸಹಾಯಕವಾಗಬಲ್ಲುದು.

ಶೋಧಗಳ ಗರ್ಭಾವಸ್ಥೆಯಲ್ಲಿನ ಕ್ರಿಯೆಯನ್ನು ಗಣಿತ ಅಥವಾ ಇನ್ನಿತರ ತಾತ್ವಿಕ ವಿಜ್ಞಾನಗಳಿಗಿಂತಲೂ ಪ್ರಾಯೋಗಿಕ ವಿಜ್ಞಾನಗಳಲ್ಲಿ ತಿಳಿಯುವುದು ಸುಲಭವೆ? ಪ್ರಾಯೋಗಿಕ ವಿಜ್ಞಾನಗಳಲ್ಲಿ ಶೋಧಪೂರ್ವದ ವಿವಿಧಾವಸ್ಥೆಗಳನ್ನು ವಿವರಿಸುವುದು ಸಾಧ್ಯ. ಸಂಗತಿಯೊಂದನ್ನು ವಿಜ್ಞಾನಿ ತಿಳಿಯುತ್ತಾನೆ; ಅದಕ್ಕೆ ಸಂಬಂಧಿಸಿದ ಭಾವನೆಯೊಂದು ತಾನೇ ತಾನಾಗಿ ಹೊಳೆಯುತ್ತದೆ; ಇದು ಹೆಚ್ಚಿನ ಮುಂದುವರಿದ ಪ್ರಯೋಗಗಳಿಗೆ ಎಡೆ ಮಾಡಿಕೊಡುತ್ತದೆ; ಇದರಿಂದ ಹೊಸ ಶೋಧ ಇಲ್ಲವೆ ಹೊಸ ಸಂಗತಿ ಹೀಗೆ ಚಕ್ರೀಯವಾಗಿ ಸಾಗುತ್ತದೆ. ಶೋಧಗಳತ್ತ ಸುವ್ಯವಸ್ಥಿತ ರೀತಿಯಲ್ಲಿ ಸಾಗಿ ಗುರಿ ಮುಟ್ಟಿರುವ ನಿದರ್ಶನಗಳೂ ಇವೆ. ಅಂತಹ ಸಂದರ್ಭಗಳಲ್ಲಿ ಸಮಸ್ಯೆಯೂ ಸುಲಭವಾಗಿದ್ದು ಯಾವ ಅಂತರ್ದೃಷ್ಟಿ ಅಥವಾ ಅನಿರೀಕ್ಷಿತ "ಅದೃಷ್ಟ"ಗಳೂ ಬೇಕಾಗುವುದಿಲ್ಲ. ಆ ವರೆಗೆ ನಡೆದಿರುವ ಕಾರ್ಯದ ಸೂಕ್ಷ್ಮಪ್ರಜ್ಞೆ, ಅಮೂಲಾಗ್ರವಾದ ವಿಶ್ಲೇಷಣೆ, ಸೂಕ್ತ ಸಲಕರಣೆಗಳು ಕೌಶಲ ವಿಧಾನಗಳಿಂದ ಅಪೇಕ್ಷಿತ ಫಲಿತಾಂಶಗಳನ್ನು ಪಡೆಯಲು ಸಾಧ್ಯ. ಈ ಬಗೆಯ ಪರಂಪರಾಕ್ರಿಯೆಗೆ ಉತ್ತಮೊತ್ತಮ ಉದಾಹರಣೆ ಯುರಾನಸ್, ನೆಪ್ಚೂನ್ ಮತ್ತು ಪ್ಲೂಟೋ ಗ್ರಹಗಳ ಶೋಧವೆನ್ನಬಹುದು.

## 'ಆಕಸ್ಮಿಕ'ಗಳಿಂದ ಎಲ್ಲರಿಗೂ ಲಾಭವಿಲ್ಲ

'ಆಕಸ್ಮಿಕ'ಗಳು ಅನೇಕರಿಗಾದರೂ ಅದರಿಂದ ಲಾಭ ಎಲ್ಲರಿಗೂ ಲಭಿಸದು. ಲೂಯಿಗಿ ಗ್ಯಾಲ್ವನಿ ತನ್ನ ಪ್ರಯೋಗಕ್ಕೆ ಬಳಸಲು ತಂದಿದ್ದ ಕಪ್ಪೆಯ ಸಮೀಪದಲ್ಲಿ ವಿದ್ಯುತ್ ಕಿಡಿ ಹಾರಿದಾಗ ಅದರ ಕಾಲಿನಲ್ಲುಂಟಾದ ಸೆಳೆತವನ್ನು ವೀಕ್ಷಿಸಿದ. ಹೀಗೆ ವಿಚಿತ್ರವಾಗಿ ಸಂಭವಿಸಿದ ಈ ವೀಕ್ಷಣೆಯೇ ವಿದ್ಯುತ್ಪ್ರವಾಹದ ಶೋಧಕ್ಕೆ ಕಾರಣವಾಯಿತು. ಈ ಪ್ರಯೋಗನನ್ನು ವಿವಿಧ ಹಾಗೂ ವಿಭಿನ್ನ ರೀತಿಯಲ್ಲಿ ಗ್ಯಾಲ್ವನಿ ನಡೆಯಿಸಿದರೂ ಅದಕ್ಕೆ ಅವನಿತ್ತ ಕಾರಣ ದೋಷಯುಕ್ತವಾಗಿತ್ತು. ಅಲೆಗ್ಸಾಂಡ್ರೋ ವೋಲ್ಟನು ಈ ಕ್ರಿಯೆಗೆ ನಿರ್ದುಷ್ಟ ವಿವರಣೆಯೊದಗಿಸಿದನಲ್ಲದೆ ಆತನ ಹೆಸರಿನದೇ ಆದ ಪ್ರಸಿದ್ಧ ವಿದ್ಯುತ್ಕೋಶದ ಶೋಧಕ್ಕೂ ಕಾರಣಪುರುಷನಾದನು. ಬೇರೆ ಮಾತಿನಲ್ಲಿ ಹೇಳುವುದಾದರೆ ಗ್ಯಾಲ್ವನಿ ತಾನು ಕಂಡದ್ದನ್ನು ಗಮನಿಸುವ ವೈಜ್ಞಾನಿಕ ಕಲ್ಪನಾಶಕ್ತಿಯುಳ್ಳವನಾಗಿದ್ದರೂ ಅದರ ಅರ್ಥವನ್ನು ಗ್ರಹಿಸುವ ಶಕ್ತಿ ಹೊಂದಿರಲಿಲ್ಲ; ಮೇಧಾವಿ ಭೌತಶಾಸ್ತ್ರಜ್ಞ ವೋಲ್ಟ ಆ ವೀಕ್ಷಣೆಯನ್ನೇ ಅನುಸರಿಸಿ ಅದನ್ನು ಒಂದು ವೈಜ್ಞಾನಿಕ ಅಂಶವಾಗಿ ಜ್ಞಾನ ಜಗತ್ತಿಗೆ ಕೊಡುಗೆಯಿತ್ತನು.

ಫ್ರೆಂಚ್ ಗಣಿತ ಶಾಸ್ತ್ರಜ್ಞ ಎಟ್ಯನೆ ಮಾಲುಸ್ ದ್ವಿವಕ್ರೀಭವನ ಶಕ್ತಿಯುಳ್ಳ ಐಸ್‌ಲೆಂಡ್ ಸ್ಪಾರ್ ಎಂಬ ಹರಳಿನ ಮೂಲಕ ಲಕ್ಸೆಂಬರ್ಗ್ ಅರಮನೆಯ ಕಿಟಕಿಯ ಮೇಲೆ ಸೂರ್ಯರಶ್ಮಿ ಬೀಳುತ್ತಿರುವುದನ್ನು ತನ್ನ ಮನೆಯಿಂದ ನೋಡುತ್ತಿದ್ದಾಗ ಆ ಹರಳನ್ನು ಅದರ ಅಕ್ಷದ ಮೇಲೆ ಒಮ್ಮೆ ತಿರುಗಿಸಿದಾಗ ಕಾಣುತ್ತಿದ್ದ ಪ್ರತಿಬಿಂಬಗಳು ಅನುಕ್ರಮವಾಗಿ ಅದೃಶ್ಯವಾಗುವುದನ್ನು ಕಂಡನು. ಈ ಸೋಜಿಗವು ಕಿಟಕಿಯಿಂದ ಪ್ರತಿಫಲಿತವಾಗುತ್ತಿರುವ ಬೆಳಕಿನ ಗುಣಲಕ್ಷಣಕ್ಕೆ ಸಂಬಂಧಿಸಿದುದೆಂದು ಗ್ರಹಿಸಿ ಆ ಬಳಿಕ ಪ್ರತಿಫಲನದಿಂದ ಸಪಾರ್ಶ್ವಬೆಳಕಿನ ಸಿದ್ಧಾಂತವನ್ನು ಪ್ರತಿಪಾದಿಸಿದನು. ಈ ಅಂಶ ಇನ್ನಿತರರಿಗೆ ಗೋಚರವಾಗಿದ್ದರು. ಸಹ ಅದರ ಆಂತರಿಕ ವೈಜ್ಞಾನಿಕ ಗುಣವನ್ನು ಅವರಾರೂ ಗ್ರಹಿಸಲಾರದೆ ಹೋಗಿದ್ದು ಆಕಸ್ಮಿಕವಾಗಿ ಮಾಲುಸ್ ಆ ಶೋಧಕ್ಕೆ ಕಾರಣವಾದುದು ಆಶ್ಚರ್ಯವೇ ಸರಿ.

## ಸ್ವಲ್ಪದರಲ್ಲಿಯೇ ಶೋಧಗಳು

ಹಲವು ಶೋಧಗಳನ್ನು ಜಗತ್ತು ಅನೇಕ ವರ್ಷಗಳ ವರೆಗೆ ಪರಿಗಣಿಸುವುದೇ ಇಲ್ಲವಾದರೆ ಮತ್ತೆ ಕೆಲವು ಸ್ವಲ್ಪದರಲ್ಲಿಯೇ ಶೋಧವೆನಿಸಿಕೊಳ್ಳುವ ಸ್ಥಿತಿಯಿಂದ ನುಣುಚಿಕೊಂಡಿರುತ್ತವೆ. ಗ್ರೆಗರ್ ಮೆಂಡಲರ ಆನುವಂಶಿಕ ಸಂಬಂಧದ ಸುಪ್ರಸಿದ್ಧ ಪ್ರಯೋಗಗಳು ಮೊದಲನೆಯ ವರ್ಗಕ್ಕೇ ಉತ್ತಮ ನಿದರ್ಶನವಾಗಿವೆ. ಸಾಪೇಕ್ಷ ಸಿದ್ಧಾಂತವನ್ನು 'ತೀರ ಸಮೀಪಿಸಿದ್ದ' ಹಲವರಲ್ಲಿ ಹೆನ್ರಿ ಪಾಯನ್‌ಕೇರ್ ಮತ್ತು ಹೆಂಡ್ರಿಕ್ ಲೊರೆನ್ಸ್ಜ 'ತಮ್ಮ ಆಲೋಚನೆಗಳನ್ನು ಪ್ರಸಿದ್ಧ ಪಡಿಸುವ ಸ್ಥೈರ್ಯ ಸಾಲದವರಾಗಿ' ಅದನ್ನು ಮುಟ್ಟದೆ ಕೀರ್ತಿಕಾಮಿನಿಯಿಂದ ವಂಚಿತರಾಗಿದ್ದರು.

ಹ್ಯಾನ್ಸ್ ಕ್ರಿಶ್ಚಿಯನ್ ವೊಯರ್‌ಸ್ಟೆಡ್ ೧೮೨೧ರಲ್ಲಿ ತನ್ನ ಪ್ರಸಿದ್ಧ ಪ್ರಯೋಗಗಳಿಂದ ವಿದ್ಯುತ್ಪ್ರವಾಹದ ಅಯಸ್ಕಾಂತ ಪ್ರಭಾವಗಳನ್ನು ತೋರಿಸಿಕೊಟ್ಟ ಕೂಡಲೆ ಭೌತಶಾಸ್ತ್ರಜ್ಞರು ತದ್ವಿರುದ್ಧ ಪ್ರಭಾವದ ಶಕ್ತಿಯನ್ನು—ಅಂದರೆ ಅಯಸ್ಕಾಂತದ ವಿದ್ಯುತ್ಪ್ರಭಾವ ಲಕ್ಷಣಗಳನ್ನು—ತಿಳಿಯಲು ತವಕಪಟ್ಟರು. ಅರ್ಥಾತ್ ಅವರು 'ಜೋದನೆ'ಯನ್ನು ತಿಳಿಯಲು ಪ್ರಯೋಗಗಳಲ್ಲಿ ತಲ್ಲೀನರಾದರು. ಅಯಸ್ಕಾಂತವೊಂದನ್ನು ವಿದ್ಯುತ್ಪ್ರವಾಹ ಹೊತ್ತ ತಂತಿಯಬಳಿಯಿಟ್ಟಾಗ ಸೋಜಿಗವೇನಾದರೂ ಸಂಭವಿಸುವುದೆಂಬ ತಪ್ಪು ಕಲ್ಪನೆಯಿಂದ ಅವರು ಪ್ರಯೋಗಗಳಲ್ಲಿ ಉದ್ಯುಕ್ತರಾಗಿದ್ದುದರಿಂದ ಅವರ ಶ್ರಮಕ್ಕೆ ಪ್ರತಿಫಲದ ಮಾತಿರಲಿ, ಪರಿಣಾಮವು ಕೂಡ ಸಿಕ್ಕಿರಲಿಲ್ಲ. ವಿದ್ಯುದ್ವಾಹಕದ ಬಳಿಯಲ್ಲಿನ ಜಡ ಅಯಸ್ಕಾಂತವು ವಿದ್ಯುತ್ಪ್ರವಾಹವನ್ನು ಉತ್ಪಾದಿಸಲಾರದು. ಅದರೆ ವಿದ್ಯುದ್ವಾಹಕ ತಂತಿ ಮತ್ತು ಅಯಸ್ಕಾಂತವು

ಸಾಪೇಕ್ಷ ಚಲನೆಯಲ್ಲಿದ್ದಾಗ ವಿದ್ಯುಚ್ಛಕ್ತಿಯುಂಟಾಗುವುದೆಂದು ಮೈಕೆಲ್ ಫ್ಯಾರಡೆ ೧೮೩೧ ರಲ್ಲಿ ತೋರಿಸಿಕೊಟ್ಟನು. ಆಂಡ್ರೆಮೇರಿ ಆಂಪಿಯರ್ ತನ್ನ ಇನ್ನಿತರ ಪ್ರಯೋಗಗಳಲ್ಲಿ ಈ ವಿದ್ಯುತ್ಕಾಂತಿಯ ಚೋದನೆಯನ್ನು ಕಂಡರೂ ಗುರುತಿಸಲಾರದೆ ಹೋಗಿದ್ದನು. ಫ್ಯಾರಡೆ ತನ್ನ ಶೋಧವನ್ನು ಪ್ರಕಟಿಸಿದಾಗ ಆಂಪಿಯರ್ ತನ್ನ ಮೌಢ್ಯವನ್ನು ತಾನೇ ತಿಳಿದುಕೊಂಡು ಆತನಿಗೆ ಪತ್ರಬರೆದನು.

## ಶೋಧನೆಯಲ್ಲಿರುವ ಸೂಕ್ಷ್ಮ ವ್ಯತ್ಯಾಸ

ಕೇವಲ ಗೋಚರವಾಗುವುದಕ್ಕೂ ಶೋಧನೆಯಾಗುವುದಕ್ಕೂ ಇರುವ ಸೂಕ್ಷ್ಮವ್ಯತ್ಯಾಸವನ್ನು ಇಂದು ಸಿಹಿಮೂತ್ರರೋಗದ ಉಪಶಮನಕ್ಕಾಗಿ ಬಳಸಲಾಗುತ್ತಿರುವ, ಮೇದೋಜೀರಕಾಂಗದ ಲ್ಯಾಂಗರ್‌ಹಾನ್ಸ್ ಎಂಬ ಜೀವಕಣಗಳಿಂದ ಜಿನುಗುವ ಹಾರ್ಮೋನ್, ಇನ್‌ಸುಲಿನ್‌ನ ಚರಿತ್ರೆಯಿಂದ ನಾವು ತಿಳಿಯಬಹುದಾಗಿದೆ. ಜರ್ಮನಿಯ ಶರೀರವಿಜ್ಞಾನಿ ಮಿಂಕೊವಿಸ್ಕಿ ಮತ್ತು ಆತನ ಸಹೋದ್ಯೋಗಿ ಫ್ಯಾನ್‌ಮೇರಿಂಗ್ ೧೮೮೯ ರಲ್ಲಿ ನಾಯಿಗಳಲ್ಲಿನ ಮೇದೋಜೀರಕಾಂಗವನ್ನು ಶಸ್ತ್ರಕ್ರಿಯೆಯಿಂದ ಹೊರತೆಗೆದು ಅವುಗಳಲ್ಲಿ ಕೃತಕವಾಗಿ ಸಿಹಿಮೂತ್ರರೋಗವನ್ನುಂಟು ಮಾಡಿದರು. ಆದರೆ ಈ ರೋಗಕ್ಕೆ ಕಾರಣ ಮೇದೋಜೀರಕಾಂಗದಲ್ಲಿನ ಇನ್‌ಸುಲಿನ್ ಎಂಬುದನ್ನು ಅವರು ಗುರುತಿಸದೇ ಹೋದರು. ಇದಾದ ೩೩ ವರ್ಷಗಳ ಬಳಿಕ ಕೆನಡಾದ ಫ್ರೆಡ್‌ರಿಕ್ ಬಾಂಟಿಂಗ್ ಮತ್ತು ಆತನ ಸಹೋದ್ಯೋಗಿಗಳು ಮೇದೋಜೀರಕಾಂಗದಿಂದ ಇನ್‌ಸುಲಿನ್‌ನ್ನು ಹೊರಸೆಳೆದರಲ್ಲದೆ ಈ ಹಾರ್ಮೋನು ಮಿಂಕೊವಿಸ್ಕಿಯ ಪ್ರಾಯೋಗಿಕ ಸಿಹಿಮೂತ್ರರೋಗವನ್ನು ಮಾತ್ರವಲ್ಲದೆ ಇತರ ಎಲ್ಲ ಬಗೆಯ ಸ್ವಯಂ ಮೂಡಿದ ಸಿಹಿಮೂತ್ರರೋಗಗಳನ್ನೂ ಉಪಶಮನಗೊಳಿಸಬಲ್ಲುದೆಂಬದನ್ನು ಗೊತ್ತುಹಿಡಿದರು.

ಈ ಸಂಗತಿ ಪ್ರಚುರವಾದ ಬಳಿಕ ಫ್ರೆಂಚ್ ಶರೀರವಿಜ್ಞಾನಿ ಮಾರ್ಸೆಲ್ ಯೂಜಿನ್ ಎಮಿಲಿ ಗ್ಲೇ ತಾನು ಹದಿನೇಳು ವರ್ಷಗಳ ಹಿಂದೆಯೇ ಬಾಂಟಿಂಗ್ ರೀತಿಯ ಪ್ರಯೋಗಗಳನ್ನು ನಡೆಯಿಸಿ ಆ ಸಂಬಂಧದ ಪ್ರತ್ಯೇಕ ಪತ್ರಗಳನ್ನು ಮುಚ್ಚಿ ಮುದ್ರೆ ಹಾಕಿದ ಲಕೋಟಿಯಲ್ಲಿ ಜೀವಶಾಸ್ತ್ರಸಂಸ್ಥೆಯಲ್ಲಿಟ್ಟಿದ್ದ ಸಂಗತಿಯನ್ನು ಹೊರಗೆಡಹಿದರು. ಬಾಂಟಿಂಗರ ಶೋಧ ಪ್ರಚುರವಾದ ನಂತರವೇ ಗ್ಲೇ ತಮ್ಮ ಪತ್ರವನ್ನು ಹೊರತೆಗೆದು ಪ್ರಕಟಿಸಲು ಅಪ್ಪಣೆಯಿತ್ತಿದ್ದರು. ನಿಜಕ್ಕೂ ಅವರ ಪತ್ರ ಇನ್‌ಸುಲಿನನ್ನು ಮೊತ್ತಮೊದಲಿಗೆ ಗೊತ್ತುಹಿಡಿದುದನ್ನು ಸುಸ್ಪಷ್ಟವಾಗಿ ಹೇಳುತ್ತಿತ್ತು. ಆದರೆ ನಿರೀಕ್ಷಿಸಿದ ಆದರಣೆ, ಮೆಚ್ಚುಗೆಯನ್ನು ಗ್ಲೇ ಗಳಿಸಲಿಲ್ಲ. ತಮಗಾದ ಈ ಅನ್ಯಾಯವನ್ನು ಪ್ರತಿಭಟಿಸಿ ಕೂಗಾಡುತ್ತಿದ್ದಾಗ ಮಿಕೊವಿಸ್ಕಿ, "ನಿಮ್ಮ ಭಾವನೆ ಹೇಗಿರುವುದೆಂದು ನನಗರ್ಥವಾಗಿದೆ, ಇನ್‌ಸುಲಿನ್ ಶೋಧಕ್ಕೆ ಅತಿ ಸಮೀಪವಾಗಿ ಬಂದೂ ಅದನ್ನು ಕಂಡುಹಿಡಿಯದಿದ್ದುದನ್ನು ನೆನೆಸಿಕೊಂಡರೆ ನನ್ನನ್ನು ನಾನೇ ಒದ್ದುಕೊಳ್ಳುವಂತಾಗುತ್ತದೆ" ಎಂದಿದ್ದರು.

ವಾಸ್ತವದಲ್ಲಿ ಗ್ಲೇ ತಮಗೆ ಗೋಚರವಾಗಿದ್ದುದನ್ನೂ ಗುರುತಿಸದೆ ಇನ್‌ಸುಲಿನ್ನಿನ ಶೋಧಕ್ಕೆ ಕಾರಣರಾಗದೆ ಹೋದರು. ಅದರಲ್ಲಿ ಅಡಕವಾಗಿದ್ದ ನಿಗೂಢ ವೈದ್ಯಕೀಯ ಬಳಕೆಯತ್ತ ಅವರ ಮನಸ್ಸು ಓಡಿರಲಿಲ್ಲ. ಅಂತಲೇ ಅವರು ಅದನ್ನು ಮೊಹರ ಒತ್ತಿ ಮುಚ್ಚಿದ ಲಕೋಟಿಯೊಳಗೆ ಜೋಪಾನವಾಗಿಟ್ಟಿದ್ದುದು. ಈ ನಡುವಣ ಕಾಲದಲ್ಲಿ ಇನ್‌ಸುಲಿನ್‌ನ ಕೊರತೆಯಿಂದಾಗಿ ಅನೇಕರ ಸಾವಿಗೆ ಅವರು ಕಾರಣರಾಗಿದ್ದರೆಂದರೆ ಅದೇನು ತಪ್ಪಲ್ಲ. ಅದೊಂದು ಘಾತಕಕೃತ್ಯವೇ ಸರಿ. ಹಾಗಿಲ್ಲದೆ ಗ್ಲೇ ಅದನ್ನುಮುಚ್ಚಿಡಲು ಕಾರಣವಾದರೂ ಏನುಂಟು? ಅದರ ಅರ್ಥವಿವೇಚನೆಯಿಲ್ಲವೆಂದು ತಾನೇ? ಗ್ಲೇ ವಾಸ್ತವದಲ್ಲಿ ಇನ್‌ಸುಲಿನ್ ಶೋಧಕ್ಕೆ ಕಾರಣರಾಗದೆ ಉಳಿದರು ಮಾತ್ರವಲ್ಲ ಅದರ ಶೋಧಕ್ಕೆ ತಮ್ಮಲ್ಲಿದ್ದ ಅಶಕ್ತತೆಯನ್ನೂ ಇದರಿಂದಾಗಿ ಪ್ರದರ್ಶಿಸಿದ್ದರು. ಆಕಸ್ಮಿಕವಾಗಿ ಅವರು ಇನ್‌ಸುಲಿನ್ ಕಂಡಿದ್ದರು. ಆದರೆ ಅದರ "ಶೋಧ" ಅವರಿಂದಾಗದೆ ಉಳಿಯಿತು.

## ಅನ್ವೇಷಣಾಪೂರ್ವಕ ಮನಸ್ಸಿನ ಪ್ರಯತ್ನ

ಪರಮಾಣು ಭೌತವಿಜ್ಞಾನದ ಪ್ರಗತಿಯನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಅಲ್ಲಿ ಆಕಸ್ಮಿಕ ಮತ್ತು ಅನ್ವೇಷಣಾಪೂರ್ವಕ ಮನಸ್ಸಿನ ಪ್ರಯತ್ನಗಳ ಪ್ರತಿಫಲವನ್ನು ನಾವು ಕಾಣಬಹುದಾಗಿದೆ. ಇವೆರಡೂ ಬಗೆಯ ಭಾವನಾ ಮತ್ತು ಕಲ್ಪನಾ ಪ್ರಕ್ರಿಯೆಗಳಿಗೆ ಈ ಕ್ಷೇತ್ರ ಅತ್ಯುತ್ತಮ ಉದಾಹರಣೆಗಳನ್ನು ನೀಡಬಲ್ಲುದು. ನ್ಯೂಟ್ರಾನ್, ಕೃತಕ ರೇಡಿಯೋ ವಿಕಿರಣ ಮತ್ತು ಯುರೇನಿಯಂ ಪರಮಾಣು ವಿದಳನ ಒಂದು ಬಗೆಯಲ್ಲಿ ಅನಿರೀಕ್ಷಿತವಾಗಿ ನಡೆದುದು ಆಕಸ್ಮಿಕವೂ ಅಹುದು. ಆದರೆ ಈ ಪ್ರತಿಶೋಧನೆಯಲ್ಲಿಯೂ ಶೋಧಕ ಅಸಾಮಾನ್ಯ ಕುಶಾಗ್ರಮತಿಯಾಗಿದ್ದನು. ಅವರು ಒಂದು ಸಮಸ್ಯೆಯನ್ನು ತಮ್ಮ ಮುಂದಿಟ್ಟುಕೊಂಡು ಆ ದಿಸೆಯಲ್ಲಿ ತಮ್ಮ ಪ್ರಯೋಗಗಳನ್ನು ಕೈಕೊಂಡಿದ್ದರು. ಆಲ್ಫ ಕಣಗಳು ಬೆರಿಲಿಯಂನೊಂದಿಗೆ ಸಂಘರ್ಷಣೆ ಹೊಂದಿದಾಗ ನಡೆಯುವ ಭೌತಕ್ರಿಯೆಗಳನ್ನು ಅಧ್ಯಯನ ಮಾಡತೊಡಗಿದ್ದ ಚಾಡ್‌ವಿಕ್ ೧೯೩೨ ರಲ್ಲಿ ಆ ಕ್ರಿಯೆಯಿಂದ ಕಠಿಣವಾದ ಗ್ಯಾಮ ಕಿರಣಗಳು ಹೊಮ್ಮುವುವೆಂದು ತಿಳಿದನು. ಈ ಅಂಶಗಳನ್ನೇ

ಮತ್ತೂ ಸೂಕ್ಷ್ಮವಾಗಿ ವಿಚಾರಮಾಡಿ ಪ್ರಯೋಗ, ಅಧ್ಯಯನಗಳಲ್ಲಿ ತೊಡಗಿದಾಗ ತಾನು ಕಂಡು ಹಿಡಿದಿರುವುದು ನ್ಯೂಟ್ರಾನ್ ವಿನಾ ಗ್ಯಾಮ ಕಿರಣಗಳಲ್ಲವೆಂದರಿತನು.

ಫರ್ಮಿ ಮತ್ತು ಆತನ ಸಹೋದ್ಯೋಗಿಗಳು ಯುರೇನಿಯುಮ್ಮಿನ ಮೇಲೆ ನ್ಯೂಟ್ರಾನ್‌ಗಳನ್ನು ಹಾಯಿಸಿದ್ದರಿಂದಾಗುವ ವಿಕಿರಣಾಪರಿಣಾಮಗಳೇನೆಂಬುದನ್ನು ಪ್ರಯೋಗಗಳಿಂದ ಪರಿಶೀಲಿಸುತ್ತಿದ್ದರು. ಹಾನ್ ಮತ್ತು ಸ್ಟ್ರಾಸ್‌ಮಾನ್ ಈ ಪ್ರಯೋಗಗಳನ್ನೇ ಮುಂದುವರಿಸಿದರು. ಯುರೇನಿಯಂ-ನ್ಯೂಟ್ರಾನ್‌ಗಳ ಸಂಘರ್ಷಣೆಯ ಪರಿಣಾಮವಾಗಿ ಯುರೇನಿಯಂ ಆಲ್ಫ ಕಣಗಳನ್ನು ಹೊರಹೊಮ್ಮಿಸಿ ರೇಡಿಯಂ ಆಗಿ ಪರಿವರ್ತಿತವಾಗುವುದೆಂದು ಅವರು ತಿಳಿದಿದ್ದರು. ಹೀಗೆ ರೇಡಿಯಂ ಪ್ರತ್ಯೇಕವಾಗಬೇಕಿದ್ದರೆ ಅದಕ್ಕೆ ಮೊದಲು ರೇಡಿಯಂ ಬೇರಿಯಂ ಲವಣದೊಂದಿಗೆ ಪ್ರಕ್ಷೇಪಗೊಳ್ಳಬೇಕು. ಆ ಬಳಿಕ ಈ ಮಿಶ್ರಣದಿಂದ ರೇಡಿಯಂ ಮತ್ತು ಬೇರಿಯಂ ಅನ್ನು ಬೇರೆ ಬೇರೆ ಹರಳುಗಳ ರೂಪದಲ್ಲಿ ಪ್ರತ್ಯೇಕಿಸಬಹುದು. ಆದರೆ ಹಾನ್ ಮತ್ತು ಸ್ಟ್ರಾಸ್‌ಮೊನ್ ೧೯೩೯ ರಲ್ಲಿ ನಡೆಸಿದ ತಮ್ಮ ಈ ಪ್ರಯೋಗಗಳಿಂದ ಪ್ರಕ್ಷೇಪವಾಗಿ ಪಡೆದ ವಸ್ತುವನ್ನು ಬೇರಿಯಂನಿಂದ ಪ್ರತ್ಯೇಕಿಸಲಾಗುತ್ತಿರಲಿಲ್ಲ. ಹಲವು ಪ್ರಯೋಗಗಳ ನಂತರ ಅವರು ತಾವು ಯುರೇನಿಯುಂನಿಂದ ಬೇರಿಯಂ ಪಡೆದುದಾಗಿ ತಿಳಿಸಿದರು. ಒಂದು ದೃಷ್ಟಿಯಿಂದ ಇದು ಆಕಸ್ಮಿಕವಾಗಿತ್ತು, ಅದೃಷ್ಟವಾಗಿತ್ತು; ಆದರೆ ಪೂರ್ಣವಾಗಿರಲಿಲ್ಲ. ಅವರು ತಮ್ಮ ಪ್ರಯೋಗಗಳಲ್ಲಿ ಯುರೇನಿಯಂ ರೇಡಿಯೋ ವಿಕಿರಣಕ್ಕೊಳಗಾದಾಗ ರೇಡಿಯಂ ಉತ್ಪತ್ತಿಯಾಗುವುದೇ ಎಂಬ ಸಂಶೋಧನೆಯಲ್ಲಿ ತೊಡಗಿದ್ದರು. ಅವರ ಪ್ರಯೋಗಗಳ ಫಲಿತಾಂಶವು ಏನೇ ಆಗಿದ್ದರೂ ಅದು ಮಹತ್ತ್ವದ್ದಾಗಿರುತ್ತಿತ್ತು. ಅವರೇನಾದರೂ ರೇಡಿಯಂಅನ್ನೇ ಪಡೆದಿದ್ದರೆ ಅದು ಅತ್ಯಂತ ಮಹತ್ತ್ವದ್ದಾಗುತ್ತಿತ್ತು.

## ಕಿನ್ನರ ಕಥೆಯ ಸೆರೆಂಡಿಪಿಟಿ

ಹೀಗೆ, ಅನಿರೀಕ್ಷಿತವಾಗಿ ಅನಪೇಕ್ಷಿತವಾಗಿ, ಆಕಸ್ಮಿಕವೋ ಎಂಬಂತೆ, ಕಾಕತಾಳೀಯನ್ಯಾಯದಿಂದ ಮಹತ್‌ಶೋಧನೆ ಗೋಚರವಾದರೆ ಅದನ್ನು ಆಂಗ್ಲಭಾಷೆಯಲ್ಲಿ ಸೆರೆಂಡಿಪಿಟಿ (Serendipity) ಎನ್ನುತ್ತಾರೆ. ಆ ಶಬ್ದದ ವ್ಯುತ್ಪತ್ತಿಗೆ ಆಂಗ್ಲಸಾಹಿತಿ ಹೋರೆಸ್ ವಲ್‌ಪೋಲ್ ಕಾರಣಪುರುಷ. ಕಿನ್ನರ ಕಥೆಯೆನ್ನಿಸುವ ಸೆರೆಂಡಿಪ್ ದೇಶದ ಮೂವರು ರಾಜಕುಮಾರರು ತಾವು ಬಯಸದೇ ಇದ್ದರೂ ನಿರೀಕ್ಷಿಸದೆ ಇದ್ದರೂ ತಮಗನುವಾದ ಮತ್ತು ಮಹತ್ವದ್ದೂ ಅತ್ಯುಪಯುಕ್ತವೂ ಆದ 'ನಿಧಿ'ಯನ್ನು ಆಕಸ್ಮಿಕವಾಗಿಯೋ ಅತೀಂದ್ರಿಯ ಪ್ರಜ್ಞೆಯಿಂದಲೋ ಪಡೆಯುತ್ತಿದ್ದರಂತೆ.

ಕೌತುಕಗಳಿಂದ ಕೂಡಿದ ಕಿನ್ನರ ಕಥೆಗಳಲ್ಲಿ ಅದು ಸಾಧ್ಯವಿರಬಹುದೇನೋ. ವೈಜ್ಞಾನಿಕ ಶೋಧಗಳಲ್ಲಿಯೂ ಸೆರೆಂಡಿಪಿಟಿ ಸುಮಾರಾಗಿಯೇ ಸೇರಿಹೋಗಿದೆ. ಆದರೆ ವಿಜ್ಞಾನದ ಪ್ರಗತಿಯನ್ನು ಸೆರೆಂಡಿಪಿಟಿಗಳ ಸರಪಣಿಯೆನ್ನಲಾಗದು. ವಾಸ್ತವದಲ್ಲಿ ವಿಜ್ಞಾನದ ಪ್ರತಿ ವಿಭಾಗದ ಪ್ರಗತಿಯೂ ಅತ್ಯಂತ ಎಚ್ಚರಿಕೆಯಿಂದ ಕ್ರಮಬದ್ಧವಾಗಿ ನಡೆಯಿಸಿದ ಪ್ರಯೋಗಪರಂಪರೆಯ ಪರಿಣಾಮವಾಗಿ ಫಲಿಸಿದೆಯೇ ವಿನಾ ಅದೃಷ್ಟಗಳ ಮಾಲೆಯಾಗಿ ಬೆಳೆದು ಬಂದಿಲ್ಲ. 'ಮಾಡಿದ್ದುಣ್ಣೋ ಮಹಾರಾಯ' ಎಂಬ ಗಾದೆಗನುಸಾರವಾಗಿ ಸಂಶೋಧಕ ತನ್ನ ಪ್ರಯೋಗಗಳಲ್ಲಿ ತುಂಬುವ ಆಲೋಚನೆ, ಸಿದ್ಧತೆ, ತಾರ್ಕಿಕ ವಿಚಾರ, ಪ್ರಯೋಗಶೀಲತೆ, ವಿಶ್ಲೇಷಣೆಗಳಿಗನುಸಾರವಾದ ಪ್ರತಿಫಲವನ್ನೇ ಆತ ಪಡೆಯುತ್ತಾನೆ. ಸೆರೆಂಡಿಪಿಟಿ ಸೂಕ್ಷ್ಮ ಹಾಗೂ ಸಿದ್ಧಮನಸ್ಸಿಗೆ ಸಿಗುವ ಲಾಭಾಂಶ ಮಾತ್ರ; ಅದೆಂದೂ ಕಠಿಣತರ ಕಾರ್ಯಪ್ರವೃತ್ತಿಗೆ ಪ್ರತಿಯಾಗಲಾರದು.





# ನಿಮಗೆ ಭೂಸಾಗುವಳಿಯಿಂದ ಹೆಚ್ಚಿನ ಲಾಭ ಬೇಕೆ?

**ಹಾಗಾದರೆ ನಿಮಗೆ ಬೇಕಾದ ಟ್ರ್ಯಾಕ್ಟರ ಇಲ್ಲಿದೆ—ಮ್ಯಾಸ್ಸಿ-ಫರ್ಗುಸನ್ ೧೦೩೫!**

ಇಂದು ಜಗತ್ತಿನಲ್ಲಿ ಯಾವದೇ ಟ್ರ್ಯಾಕ್ಟರುಗಳಿಗಿಂತ ಹೆಚ್ಚು ಮ್ಯಾಸ್ಸಿ-ಫರ್ಗುಸನ್ ಟ್ರ್ಯಾಕ್ಟರಗಳು ಮಾರಲ್ಪಡುತ್ತಿವೆ. ಭಾರತದಲ್ಲಿ ಮಾರಾಟವಾದ ಪ್ರತಿ ಎರಡು ಟ್ರ್ಯಾಕ್ಟರಗಳಲ್ಲಿ ಒಂದು—ಮ್ಯಾಸ್ಸಿ-ಫರ್ಗುಸನ್—೧೦೩೫—ಫರ್ಗುಸನ್ ಸಿಸ್ಟಮದಿಂದ ಪೂರ್ಣ ಅಳವಡಿಸಲ್ಪಟ್ಟದ್ದು ಇರುತ್ತದೆ.

ಮ್ಯಾಸ್ಸಿ-ಫರ್ಗುಸನ್ ೧೦೩೫ ಟ್ರ್ಯಾಕ್ಟರ ಈಗ ಭಾರತದಲ್ಲಿಯೇ ತೀವ್ರ ಖ್ಯಾತಿ ಪಡೆದ ಮ್ಯಾಸ್ಸಿ-ಫರ್ಗುಸನ್ ಸಂಸ್ಥೆಯು ಸಹಕಾರದೊಂದಿಗೆ ಮದ್ರಾಸದಲ್ಲಿ ಅತ್ಯಾಧುನಿಕ ಕಾರಖಾನೆಯಲ್ಲಿ ಟ್ರ್ಯಾಕ್ಟರ್ಸ ಆ್ಯಂಡ ಫಾರ್ಮ ಇಕ್ವಿಪ್‌ಮೆಂಟ ಲಿಮಿಟೆಡ್ ಇವರಿಂದ ತಯಾರಿಸಲ್ಪಡುತ್ತಿವೆ.

**ಈ ಕೂಡಲೇ ಪೂರ್ಣ ವಿವರಗಳಿಗಾಗಿ ನಮ್ಮೊಡನೆ ಸಂಪರ್ಕ ಬೆಳೆಸಿರಿ**




**MASSEY-FERGUSON**

## ದೇಸಾಯಿ ಮತ್ತು ಕಂಪನಿ

ಹುಬ್ಬಳ್ಳಿ

ಶಾಖೆಗಳು :

ಬಾಗಲಕೋಟ :: ಫೋರ್ಟ ರೋಡ, ಬೆಳಗಾವಿ



ನಮ್ಮ ಗ್ರಾಹಕವೃಂದಕ್ಕೆಲ್ಲ ದೀಪಾವಳಿಯು ಸುಖಸಂಪದಭಿವೃದ್ಧಿಯನ್ನೀಯಲಿ !

ಲೇಖಕರು :

**ದ. ಲ. ಕೆರೂರ**

**ಹುಬ್ಬಳ್ಳಿ**

# ಮೋಕ್ಷ

ಆಧುನಿಕ ರೋಮಿಯೊ ಒಬ್ಬ ಜುಲಿಯೆಟ್‌ಳಿಗಾಗಿ ತವಕಿಸುತ್ತಿದ್ದವ ಹಣದ ಮಬ್ಬಿನಲ್ಲಿ ಹುಚ್ಚೆದ್ದು ಕುಣಿದ. ತಾನು ಕಾಲೇಜ ವಿದ್ಯಾರ್ಥಿಯೆಂಬುದನ್ನು ಮರೆತು ವರ್ತಿಸಿದ. ಆ ಹಕ್ಕಿ ತನ್ನದಾಗುವುದು ಎಂದು ಎಣಿಸಿದ. ಕಲ್ಪನಾ ಸಾಮ್ರಾಜ್ಯದಲ್ಲಿ ವಿಹರಿಸಿದ. ಆದರೆ ಆ ಹಕ್ಕಿ ಅವನಿಗೆ ದಕ್ಕಲಿಲ್ಲ. ಅವನ ಹುಚ್ಚು ಕುಣಿತಕ್ಕೆ ತಕ್ಕ ವರಪ್ರಸಾದವನ್ನು ಅವಳು ಕರುಣಿಸಿದಳು. ಪತ್ರಗಳ ಮೂಲ-ಕವೇ ಕಥೆ ಹೇಳುವ ತಂತ್ರವನ್ನುಪಯೋಗಿಸಿ ಸ್ವಚ್ಛಂದ ಜೀವನ ಬಯಸುವ ಇಂತಹ ತರುಣರಿಗೆ ಲೇಖಕರಿಲ್ಲಿ ಉದ್ಬೋಧಕ ಪಾಠ ನೀಡಿದ್ದಾರೆ.

---

ಹುಬ್ಬಳ್ಳಿ
೧೬-೮-೬೦

ರಾಜ,

ಸ್ವಾತಂತ್ರ್ಯೋತ್ಸವ ದಿನ, ನಿನ್ನೆ ದಿನ ನಮ್ಮದೂ ಝಂಡಾ ಫಡ ಫಡಾಯಿಸಿತು. ನಿನಗೆ ಗೊತ್ತಾಗಿರ ಬಹುದು, ನಾನೀಗ ಬ್ಯಾಡ್ಮಿಂಟನ್ ಸೆಕ್ರೆಟರಿ. ನೀನು ಇದ್ದಿದ್ದರ ಇನ್ನೂ ಮಜಾ ಬರುತ್ತಿತ್ತು. ಹಂ, ಈ ಸಲ ಇಲೆಕ್ಶನ್ ಅಷ್ಟೇನೂ ತುರುಸಿನದಾಗಲಿಲ್ಲ ಅನ್ನು. ಆದರೆ ೬೦೦ ರೂ. ಕೈಬಿಟ್ಟವು. ಮತ್ತೆ ನಮ್ಮ ಮಿನಿ ಎಲ್ಲ ಲೇಡೀಜ ಹೋಟು ಕೊಡಿಸಿದ್ದ ರಿಂದ ಆರಿಸಿ ಬಂದೆ ಎಂದೂ ಹೇಳಬೇಕು. ಇಲೆಕ್ಶನ್ ಡಿನ್ನರ ನಿನ್ನೆ ವುಡ್‌ಲ್ಯಾಂಡ್ಸನಲ್ಲಿ ಕೇವಲ ಜೀವಸ್ಯ ಕಂಠಶ್ಯ ಮಿತ್ರರಿಗಾಗಿ ಇಟ್ಟುಕೊಂಡಿದ್ದೆ. ಡಿನ್ನರ ಮುಗಿದ.ನಂತರ ಮೋಹನದಲ್ಲಿ ಚೌದವಿಕಾ ಚಾಂದ ಪ್ರೋಗ್ರಾಂ. ನಾವು ಆರು ಮಂದಿ ಫ್ರೆಂಡ್ಸ ಜೊತೆಗೆ, ಮಿನಿ ಆಕೆಯ ಇಬ್ಬರು ಸ್ನೇಹಿತೆಯರೂ ಇದ್ದರು. ಅಂದಿನ ಪ್ರೋಗ್ರಾಂಗೆ ಆ ಇಪ್ಪತ್ತು ರೂ. ಏನು ಮಹಾ. ನನ್ನ ಪಕ್ಕದಲ್ಲಿಯೆ ಮಿನಿ ಸಿನೇಮಾ ಮುಗಿಯುವ ವರೆಗೂ ಕುಳಿತಿದ್ದಳು. ಅಂತೇ ಏನೊ ಗುರುದತ್ತನ ಆ ಹಾಡು 'ಚೌದವೀಕಾ ಚಾಂದ' ಬಹಳ ರೋಮಾಂಚಕಾರಿ ಎನಿಸಿತು. ನಿನಗೂ ಅನಿಸುವದಿಲ್ಲವೆ ನಾನೂ ಇದ್ದಿದ್ದರೆ ಚನ್ನಾಗಿತ್ತು ಅಂತ. ಹೋಗಲಿ, ಕಾಲೇಜ ಸುರುವಾಗಿ ಎರಡು ತಿಂಗಳಾದರೂ ಇನ್ನೂ ನಿನ್ನಿಂದ ಒಂದು ಪತ್ರ ಕೂಡಾ ಇಲ್ಲ. ಬೆಂಗಳೂರಲ್ಲಿ ನಿನ್ನದು ಹೇಗೆ ನಡೆದಿದೆ? ನಿನಗೇನು ಸ್ಕಾಲರ, ಎಲ್ಲಿ ಹೋದರೂ ಮೆರೆಯುವವನೇ. ನೀನೇ ಏನೋ ಹೇಳತಿದ್ದೆಲ್ಲ ವಿದ್ಯಾ ಗುರೂಣಾಂ ಗುರು ಅಂತ.ಹೌದು, ಅಲ್ಲಿಯೂ ಒಬ್ಬ ವಿದ್ಯಾ ಏನಾದರೂ ಸಿಕ್ಕಾಳೋ ಹ್ಯಾಂಗ? ಕಾಲೇಜ ಅಭ್ಯಾಸ ಸುರು ಆಗಿರಬೇಕು. ಇಲ್ಲಿ ಇನ್ನೂ ಆಗುವದರಲ್ಲಿದೆ. ನಾಳೆ ಎದ್ದ ಕೂಡಲೆ ಕಾಲೇಜಕ್ಕೆ ಹಾಜರಾಗಬೇಕಲ್ಲ. ನಿದ್ದೆಯ ಗುಂಗಿನೊಳಗ ಬರದೀನಿ. ಉತ್ತರ ಹಾಕತೀದೊ ಅಥವಾ ಮರೆತುಬಿಡತೀಯೊ ನೀನೂ ನಾನಾ ಗುಂಗಿನಾಗ. ಬೆಂಗಳೂರು ದೊಡ್ಡ ಊರು ಮಾಹಾರಾಯಾ. ನಮಸ್ತೇಜಿ.

ನಿನ್ನ ಕಂಠಶ್ಯ,
**ಶೇಖರ**

೩

ಹುಬ್ಬಳ್ಳಿ,
೧೯-೮-೬೦.

ಲತಾ,

ರಾಜಧಾನಿಯಲ್ಲಿ ಇರುವ ನೀನು ಸ್ವಾತಂತ್ರ್ಯೋ-ತ್ಸವವನ್ನು ಆನಂದದಿಂದ ಕಳೆದಿರಬೇಕು. ಇಲ್ಲಿ ನನಗೆ ಮಾತ್ರ ನೀನಿಲ್ಲದೆ ಭಣ ಭಣ ಆಯಿತು. ವಾಡಿಕೆಯಂತೆ ಧ್ವಜವಂದನ, ಭಾಷಣ ಕಾರ್ಯಕ್ರಮಗಳೇನೊ ಆದವು. ಸಂಜೆಗೆ ಮಾತ್ರ ಏನೂ ಬಿಡುವಿರಲಿಲ್ಲ. ನೋಡು- ನಿನ್ನ ಶೇಖರ, ಈಗ ನನ್ನ ಬೆನ್ನು ಹತ್ತಿದ್ದಾನೆ. ಇಲೆಕ್ಶನ್ನಿನಲ್ಲಿ ಬ್ಯಾಡ್ಮಿಂಟನ್ ಸೆಕ್ರೆ-ಟರಿ ಆಗಿ ಆರಿಸಿ ಬಂದಿದ್ದಾನೆ, ನಾನು ಕೊಡಿಸಿದ ಲೇಡಿಜ ಹೋಟುಗಳ ಪುಣ್ಯದಿಂದ ಅಂತ. ಅಂದು ರಾತ್ರಿ ವುಡ್‌ಲ್ಯಾಂಡಿನಲ್ಲಿ "ಜಾನಿದೋಸ್ತೊಂಕೆಲಿಯೆ" ಭೋಜನ ಇಟ್ಟುಕೊಂಡಿದ್ದ. ನಾನೂ ನಿಮಾ, ಸುಮಾ ಹೋಗಿದ್ದೆವು. ಮುಂದೆ ಗುರುದತ್ತನ ಚೌಧವಿಕಾ ಚಾಂದ ಸಿನೇಮಾನೂ ತೋರಿಸಿದ. ಅಂದಿನ ಸಮಾರಂಭಕ್ಕೆ ಎಷ್ಟಾದರೂ ಯಜಮಾನ ಅಲ್ಲ ಅವನು. ಥಿಯೇಟರಿನಲ್ಲಿ ಮೂರು ತಾಸು ನನ್ನ ಪಕ್ಕದಲ್ಲಿಯೆ ಕುಂಡಿಸಿದ್ದ. ಆತ ಅಂದೊಂದೇ ದಿನ ಒಂದು ಹಸರು ನೋಟು ಹಾರಿಸಿರಬೇಕು. ವಿದ್ಯಾರ್ಜನೆಯ ಕಾಲಕ್ಕೆ ಹೀಗೆ ಪೋಲು ಮಾಡಲಿಕ್ಕೆ ಹಣವಾದರೂ ಇವರಿಗೆ ಹೇಗೆ ದೊರೆಯುತ್ತದೆಯೊ?

ನಿಮ್ಮ ತಂದೆಯವರಿಗೆ ಬೆಂಗಳೂರಿಗೆ ವರ್ಗವಾಗಿ ನೀನು ನನಗೆ ದೂರವಾದೆ, ಆದರೂ ನನ್ನನ್ನು ಮರೆಯಲಿಕ್ಕಿಲ್ಲವೆಂದು ನಂಬಿದ್ದೇನೆ.

ನಿನ್ನ ಪ್ರೀತಿಯ
**ಸೌದಾಮಿನಿ**

೨

ಹುಬ್ಬಳ್ಳಿ
೧೯-೮-೬೦

ರಾಜ,

ಬೆಂಗಳೂರಿಗೆ ವರ್ಗವಾದ ನಿನ್ನ ಅಣ್ಣನ ಜೊತೆಯಲ್ಲಿ ಹೋಗಿಬಿಟ್ಟ ನಿನ್ನಿಂದ ಕಾಲೇಜ ಸುರುವಾಗಿ ಎರಡು ತಿಂಗಳ ಮೇಲಾದರೂ ಒಂದೂ ಪತ್ರವಿಲ್ಲ-ದ್ದಕ್ಕೆ ಬಹಳ ವಿಷಾದವೆನಿಸಿದೆ. ನೀನೂ ಇಲ್ಲ, ಕಾಂಚನಲತಾನೂ ಇಲ್ಲ. ಹೀಗೆ ಇಬ್ಬರನ್ನೂ ಅಗಲಿದ ನನಗೆ ಇಲ್ಲಿ ಬಹಳ ಬೇಜಾರವಾಗಿದೆ. ಕಾಲೇಜಿನಲ್ಲಿ ಅಭ್ಯಾಸವಾದರೂ ಪ್ರಾರಂಭವಾಗಿದ್ದರೆ ಎಷ್ಟೊ ಒಳಿತಾಗುತ್ತಿತ್ತು. ಹೀಗೆ ವಿರಾಮ ಕಾಲದಲ್ಲಿ ಶೇಖರನ ಕಾಟ ತಡೆದುಕೊಳ್ಳುವದೊಂದು ಸಾಕುಸಾಕಾಗಿದೆ. ಹೋದ ವರ್ಷ ನೀನು ಇಲ್ಲಿ ಇದ್ದಿದ್ದಾಗ ಆತನು ಸಂಯಮದಿಂದಿದ್ದ. ಈ ಸಲ ಲಗಾಮಿಲ್ಲದ ಕುದುರೆಯಾಗಿದ್ದಾನೆ. ಬಾಕಿ, ಹಾಗೆಲ್ಲ ನನಗೇನೂ ಮಾಡಬಲ್ಲ. ನೀನು ಆತನಿಗೆ ಬರೆಯಲು ಹೋಗಬೇಡ. ಆದರೆ ನನಗೆ ಮಾತ್ರ ಉತ್ತರ ಬರೆಯಲು ಮರೆಯಬೇಡ.

ಇಂತೀ ನಿನ್ನ
**ಸೌದಾಮಿನಿ**

೪

ಬೆಂಗಳೂರು
೨೨-೮-೬೦

ಮಿನಿ,

ನಿನ್ನ ಪತ್ರ ಮುಟ್ಟಿತು. ಓದಿ ಅರ್ಥವಾಯಿತು. ನನಗೂ ಹಾಗೇ ಆಗಿದೆ. ಸ್ವಾತಂತ್ರ್ಯೋತ್ಸವ ದಿನದ

ಮನೋರಂಜನ ಕಾರ್ಯಕ್ರಮದಲ್ಲಿ, ರೆವ್ಹೆನ್ಯೂ ಸೆಕ್ರೆಟರಿಯ ಮಗಳೆಂದು ಮೊದಲಸಾಲಿನಲ್ಲಿಯೆ ಸ್ಥಳ ದೊರೆತಿತ್ತು. ಆದರೇನು? ಗೋಪೀಕೃಷ್ಣ-ರಾಧೆಯ ವೇಷದಲ್ಲಿ ರಂಗದ ಮೇಲೆ ಸೊಗಸಾಗಿ ನರ್ತನ ಮಾಡಿದಾಗ ನಾನು ಮೈಮರೆತು ಆವೇಶದಲ್ಲಿ, ನೀನೇ ಎಂದು ಪಕ್ಕಕ್ಕಿದ್ದವಳ ಬೆನ್ನು ತಟ್ಟಲಾಗಿ ಆಕೆ ಅರಚಿದ "ಶಟ್ ಅಪ್" ನನ್ನ ಎದೆ ಸೀಳಿತು, ಯಾವುದೋ ಕೆಂಪುಮೂತಿಯ ಲಂಗತೊಟ್ಟ ಹೆಣ್ಣಾಗಿತ್ತು ಅದು. ನಿನ್ನೊಂದಿಗೇ ನಾನು ಥಿಯೇಟರಿನಲ್ಲಿದ್ದೇನೆ ಎಂದು ಭಾಸವಾಗಿತ್ತು. ಇಷ್ಟೊಂದು ಏಕಜೀವವಾಗಿದ್ದೀಯೆ ನೀನು ನನ್ನಲ್ಲಿ. ನಿನ್ನನ್ನು ಪ್ರಯತ್ನಪೂರ್ವಕ ಮರೆಯಬೇಕಷ್ಟೆ.

ಇಲ್ಲಿ ಎಲ್ಲ ಹೊಸದು, ರಾಜ್ಯ ಒಂದಾದರೂ ಮೇಲಿನಿಂದ ಬಂದ ಜನರನ್ನು ಇಲ್ಲಿಯವರು ಅಷ್ಟೊಂದು ಹಚ್ಚಿಕೊಂಡುಹೋಗುವದಿಲ್ಲ. ಆದರೂ ನನ್ನ ಅರ್ಹತೆಗಳು ನಿನಗೆ ಗೊತ್ತೇ ಇವೆಯಲ್ಲ. ಅಂತೇ ತುಸು ಇಂಪ್ರೆಶ್ಯನ್ ಒಗೆಯಲು ಸಾಧ್ಯವಾಗ ಹತ್ತಿದೆ,

ಹಂ! ರಾಜ ಯಾವಾಗಾದರೊಮ್ಮೆ ಭೆಟ್ಟಿಯಾಗುತ್ತಿರುತ್ತಾನೆ. ಅಲ್ಲಿ ನಮ್ಮನ್ನು ಹಚ್ಚಿಕೊಂಡಿದ್ದವ ಇಲ್ಲಿ ಏಕೊ ದೂರ ದೂರ ಇರುತ್ತಾನೆ. ಹೊಸ ಊರಲ್ಲಿ ಹರಲಿ ಬೇಡವೆಂದೇನೊ! ಇರಲಿ, ಶೇಖರನ ಬಗ್ಗೆ ಬರೆದಿದ್ದೀಯಲ್ಲ, ಆದರೆ ಜೋಕೆ.

ಮತ್ತೆ ಬರೆಯುವೆ.

ಇಂತೀ ನಿನ್ನ
**ಕಾಂಚನಲತಾ**



೫

ಬೆಂಗಳೂರು
೧೪-೮-೬೦

ಮಿನಿ,

ಅಲ್ಲಿದ್ದಾಗ ನಿನ್ನನ್ನು ಕರೆಯುತ್ತಿದ್ದಂತೆಯೆ ಈಗ ಪತ್ರದಲ್ಲಿಯೂ ಬರೆದದ್ದಕ್ಕೆ ಸಿಟ್ಟಿಲ್ಲ ತಾನೆ? ಯಥಾ ಕಾಷ್ಠಂಚ ಕಾಷ್ಠಂಚ ಎಂಬಂತೆ ಹುಬ್ಬಳ್ಳಿಯಲ್ಲಿ ಎರಡು ವರ್ಷ ಕೂಡಿದ್ದ ನಾವು ಈಗ ಅಗಲಿದ್ದೇವೆ. ಅನಿವಾರ್ಯ. ಇಲ್ಲಿ ಕಾಲೇಜೇನೊ ಒಗ್ಗಿದೆ. ಆದರೆ ಉಂಡಕೂಡಲೆ ಎರಡು ಮೈಲು ಕಾಲೇಜಿಗೆ ಓಡಬೇಕು. ನಿತ್ಯ ಬಸ್ಸಿಗೆಲ್ಲಿಂದ ಹಣ ತರಬೇಕು? ಬೆಂಗಳೂರಿನ ಬಗ್ಗೆ ಬಹಳಷ್ಟು ಕೇಳಿದ ನಾನು ನನ್ನ ಸ್ನೇಹಿತರ ಬಗ್ಗೆ ಕೂಡ ಜಾಗರೂಕನಾಗಿರಬೇಕಾಗಿದೆ. ಹಾಗೆ ನೋಡಿದರೆ ಆ ತೊಂದರೆಯೆ ಇಲ್ಲವೆನ್ನು. ವಿದ್ಯಾರ್ಜನೆಯ ಕಾಲದಲ್ಲಿ ಇತರ ಹವ್ಯಾಸಗಳಾದರೂ ಏಕೆ? ಅಭ್ಯಾಸಕ್ಕೆ ಹೆಚ್ಚು ವೇಳೆಯಾದರೂ ದೊರೆಯುತ್ತದೆ. ಪುಸ್ತಕ ತೆರೆದು ಓದಲು ಕುಳಿತಕೂಡಲೆ, ನಿತ್ಯ ನಿನ್ನ ನೆನಪಾಗುತ್ತದೆ. ನನ್ನ ನೋಟ್ಸ ಬೇಡಿ ಕಾಡುವವರು ಇಲ್ಲಿ ಯಾರೂ ಇಲ್ಲವಲ್ಲ ಎಂದು: ಮೃದು ಮಧುರಸ್ಮೃತಿಗಳ ಆಧಾರದಿಂದ ಜೀವಿಸಬಹುದಲ್ಲವೆ?

ಶೇಖರ ದುರ್ಜಯನಾದರೆ ಬರೆ, ನಾನು ಆತನಿಗೆ ಬರೆಯುತ್ತೇನೆ.

ಗುರುರಾಜ

೬

ಬೆಂಗಳೂರು
೧೬-೮-೬೦

ಶೇಖರ,

ನಿನ್ನ ಇಲೆಕ್ಶ್ಯನ್ ವಿಕ್ರಮ ಕೇಳಿ ಸಂತೋಷವಾಯಿತು. ನಿನ್ನ ಆ ವೆಚ್ಚದ ಒಂದು ಪರ್ಸೆಂಟನ್ನಾದರೂ ನನಗೂ ಕಳಿಸಿದ್ದರೆ ನಾನೂ ನಿನ್ನ ಹೆಸರಿನಿಂದ ಇಲ್ಲಿ ವುಡ್‌ಲ್ಯಾಂಡ್ಸಿನಲ್ಲಿ ಭೋಜನ ಹೊಡೆದು ಅಲಂಕಾರದಲ್ಲಿ ಯಾವದಾದರೊಂದು ಪಿಕ್ಚರ ನೋಡುತ್ತಿದ್ದೆ. ಹೋಗಲಿ, ಅಷ್ಟಾದರೂ ಅಲ್ಲಿಯ ನಿನ್ನ ಸಹವಾಸದ ಮಜಾ ಇಲ್ಲಿ ಹೇಗೆ ಬಂದೀತು, ಗೋಲ್ಡುಫ್ಲೇಕ್ ಕೊಟ್ಟು "ಸೇದೊ ರಾಜಾ" ಎಂದು ಪೀಡಿಸುವವರು ಇಲ್ಲಿ ಯಾರು ನನಗೆ? ಇಲ್ಲಿಯ ಹೊಸ ವಾತಾವರಣದಲ್ಲಿ ಹೊಂದಿಕೊಳ್ಳಲು ಪ್ರಯತ್ನಿಸುತ್ತೇನೆ. ನಗರ ವಿಶಾಲವಾಗಿದೆ, ಕಬ್ಬನ್ ಪಾರ್ಕ್, ಲಾಲಬಾಗಗಳಿವೆ. ಹೊತ್ತು ಹೋಗಲು ಏನೂ ತೊಂದರೆಯಿಲ್ಲ. ಕೊನೆಯ ವರ್ಷ ಅಭ್ಯಾಸಕ್ಕೆ ಸಾಕಷ್ಟು ಏಕಾಂತ ಕೂಡ ದೊರೆಯುತ್ತದೆ. ಇಲೆಕ್ಶ್ಯನ್ನಿನ ಅಬ್ಬರದಲ್ಲಿ ಇದು ನಿನ್ನ ಪದವೀ ಪರೀಕ್ಷೆಯ ಕೊನೆಯ ವರ್ಷ ಎಂಬುದನ್ನು ಮರೆತೀಯಾ. ಇನ್ನು ಮೇಲಾದರೂ ಓದಿನ ಕಡೆಗೆ ಚಿತ್ತ ಹರಿಸು. ಏನು ಮತ್ತೆ ಬ್ಯಾಡ್ಮಿಂಟನ್, ಮಿನಿ, ಫ್ರೆಂಡ್ಸ್ ಅಂತ ಹಾರಾಡತನಾ ಇರ್‍ತೀಯೊ?

ಏನಾದರೂ ಕುಬೇರನ ಮಗನಪ್ಪ ನೀನು. ಕೊನೆಯ ವರ್ಷದ ಕ್ಲಾಸಿನಲ್ಲಿಯೆ ಕುಳಿತುಕೊಳ್ಳುವ ರಿಕಾರ್ಡ್ ಬ್ರೆಕ್ ಮಾಡಿದರೂ ಮಾಡಬಹುದು ನೀನು. ನಿನ್ನ ಪುರಾಣಾನೇ ಬರೆದು ತಿಳಿಸುತ್ತಿರು. ನನ್ನದೇನನ್ನು ಬರೆಯಬೇಕು. ಅಂಥಾದೇನೂ ಇಲ್ಲ. ಬೇಕಾದರೆ ಬೆಂಗಳೂರಿಗೆ ಬಾ; ಊರು ತೋರಿಸಿಕೊಂಡು ಬರ್‍ತೀನಿ. ನೀನು ಈಗಾಗಲೇ ದೀಪಾವಳಿ ಸೂಟಿ ಹಾದೀ ನೋಡುತ್ತಿರಬಹುದು.

ನಿನ್ನವನೇ
ರಾಜ

೭

ಹುಬ್ಬಳ್ಳಿ
೩೦-೯-೬೦

ಲತಾ,

ನಿನ್ನ ಪತ್ರಕ್ಕೆ ಈ ಮೊದಲೇ ಉತ್ತರ ಬರೆಯಬೇಕಾಗಿತ್ತು. ಆದರೆ ಇಲ್ಲಿ ಶೇಖರನ ಶುಕ್ಲಕಾಷ್ಠ ಬೆನ್ನು ಹತ್ತಿದೆ. ಈ ಎರಡು ತಿಂಗಳುಗಳಲ್ಲಿ ನನ್ನ ಉಪಾಹಾರದ ಬಿಲ್ಲು–ಬಸ್ಸಿನ ಸುಂಕ, ಅರ್ಧಕರ್ಧ ಕಡಿಮೆಯಾಗಿದೆ – ಅಂದರೆ ಶೇಖರನೇ ಕೊಡುತ್ತಿದ್ದಾನೆ ಬೇಡವೆನ್ನುವ ಮೊದಲೇ ಕೊಟ್ಟು ಪಾರಾಗಿ

ರುತ್ತಾನೆ. ಮತ್ತೆ ಮೇಲೆ ಮಂಗನಗೆ! ಹೇಗೆ ಪಾರಾಗಬೇಕೊ ತಿಳಿಯದಾಗಿದೆ. ಪ್ರಿನ್ಸಿಪಾಲರ ಕಿವಿಗೆ ಹಾಕಿದರೆ ಇಲ್ಲದ ಹರಲಿ. ನೀನೂ ಇದ್ದಿದ್ದರೆ ಆತನಿಗೇನಾದರೂ ಬುದ್ಧಿ ಕಲಿಸಬಹುದಿತ್ತು. ಬಸ್ಸಿನಲ್ಲಿ, ಹೋಟಲುಗಳಲ್ಲಿ ನಮ್ಮ ಎದುರಿನಲ್ಲಿ ಏನು ಮಂಗತನ, ನೋಡಿದವರಿಗೆ ನಾಚಿಕೆಯಾಗಿ ಕಣ್ಣು ಮುಚ್ಚಬೇಕು. ನಮಗಂತೂ ಜೀವ ಹಿಂಡಿದಂತಾಗುತ್ತದೆ. ಇವರ ಹಿರಿಯರು ಇವರನ್ನು ಕಾಲೇಜಿಗೆ ಕಳಿಸುತ್ತಿರುವದು! ನಮ್ಮಂಥವರ ಗೋಳು ಹೊಯ್ದುಕೊಳ್ಳಲಿಕ್ಕೇನೊ? ಇರಲಿ, ನೋಡೋಣ.

ನಾನು ಬಿಟ್ಟಮಾತ್ರಕ್ಕೆ ನೀನು ತಕ್ಷಣ ಮಾರೋಲೆ ಬರೆಯಲು ಮರೆಯಬೇಡ.

ಇಂತೀ ನಿನ್ನ,
ಸೌದಾಮಿನಿ

೮

ಹುಬ್ಬಳ್ಳಿ
೧-೧೦-೬೦

ರಾಜ,

ನಿನ್ನ ಪತ್ರ ಓದಿಕೊಂಡೆ. ಅಳಬೇಕೋ ನಗಬೇಕೊ ತಿಳಿಯಲಿಲ್ಲ. ಕೊನೆಯ ವರ್ಷವಂತೆ. ಕಾಲೇಜ ಜೀವನ ಇದ್ದಷ್ಟು ವರ್ಷವೂ ಬೇಕೆನ್ನುವ ನನಗೆ ಕೊನೆಯ ವರ್ಷದ ಎಚ್ಚರಿಕೆ ಮಾಡಿಕೊಡುತ್ತಿಯಾ? ಹೌದು ಅನ್ನು, ನಾಳೇ ಸಾಯುವೆನೆಂಬ ಭವಿಷ್ಯ ಕೇಳಿದವನ ಜೀವನದ ಮೋಜನ್ನೆಲ್ಲ ಇಂದೇ ಅನುಭವಿಸಿಬಿಡುವಂತೆ ನಾವೂ ಈ ಕೊನೆಯ ವರ್ಷವನ್ನು ಕಳೆಯಬೇಕು ಅನ್ನುತ್ತೀಯಾ. ಅಡ್ಡಿಯಿಲ್ಲ ಸೂಚನಾ ಮಸ್ತ ಅದ. ನಾನಂತೂ ಹಂಗs ನಡಸಿಬಿಟ್ಟೇನಿ. An ounce of action is worth more than tons of thoughts. ಪಾಕೆಟ್ ಎಕ್ಸಪೆನ್ಸ ಈಗ ಡಬ್ಬಲ್ ಆಗೇದ. ಹಂ! ಮೀನೀದೂ ರೆಸ್ಟೋರಂಟ್ ಚಾರ್ಜಿಸ್ ಎಲ್ಲ ಈಗ ನಂದೇ. ಮೀನ ಬಲಿಗೆ ಬಿದ್ದಹಾಂಗ ಆಗೇದ. ನಾ ಬಿಲ್ಲು ಕೊಟ್ಟರ, ಏಕೆ ಕೊಟ್ಟಿ ಅಂತ ಹಾರ್‍ಯಾಡತಾಳ, ಸಿಟ್ಟಿಗೇಳತಾಳ. ಅದೆಲ್ಲ ನಾಟಕನೊ ರಾಜಾ, ಮಂದಿ ಕಣ್ಣಾಗ ಮಣ್ಣು ಹಾಕಲಿಕ್ಕೆ. ಹಂಗಾದರ ಅಕೀದಸಿಂದಾದರೂ ಈ ವರ್ಷ ಕಾಲೇಜು ದಾಟಬೇಕು ಅಂತೀಯಾ. ನೋ ನೊ, ಏಕೆ ಸೌದಾಮಿನಿ ಗಯೇ ತೊ ಕ್ಯಾ ಸೌ ಮಿನಿ ಮುಝು ಮಿಲೇಂಗೆ. ಹಣ ಇಲ್ಲದವ ಬೇಕಾದರೆ ಹೆಣ ಆಗಲಿ. ನಾನು ಲೈಫ್ ಅಂಬೋದು ಏನದ ನೋಡಿಯೇ ಬಿಡತೀನಿ. ಹುಟ್ಟಿ ಬಂದದ್ದಕ್ಕೂ ಜೀವನ ಸಾರ್ಥಕ ಆಗಲಿ.

ನಿಮ್ಮ ಬೆಂಗಳೂರಿನ ಬಗ್ಗೆ ಬಹಳ ಕೇಳೀನಿ. ಒಬ್ಬನೇ ಬಂದರೇನು ಮಜಾ; ತಡಿ, ಇನ್ನೊಂದು ತಿಂಗಳೊಪ್ಪತ್ತು. ಮಿನಿ ಸಹಿತ ನಮ್ಮ 'ಚೈತ್ರಯಾತ್ರೆ' ಹೊರಡತದ ಬೆಂಗಳೂರು-ಮೈಸೂರಿಗೆ.

ಹೊಟ್ಟೆಕಿಚ್ಚು ಪಡತೀಯೇನು? ಪುನಃ ಬಾ ಅಂದರೆ ಬಂದೀತೇನು ಈ ವಯಸ್ಸು, ನೀ ಇದ್ದಿದ್ದರ ಅಷ್ಟು ಸಂಸ್ಕೃತ ಶ್ಲೋಕ ಹೇಳಿ ಅಮಲೇರಿಸತಿದ್ದಿ. ಹೋಗಲಿ ಹೇಗಾದರೂ ನಾವೇ ಅಲ್ಲಿಗೆ ಬರ್‍ತೀವಲ್ಲ.

ನಿನ್ನ,
ಶೇಖರ

೯

ಬೆಂಗಳೂರು
೫-೯-೬೦

ಸೌದಾಮಿನಿ,

ಲತಾ ನಿನ್ನ ಪತ್ರ ತೋರಿಸಿದಳು. ಶೇಖರ ಉದ್ದಾಮನಾಗುತ್ತಿದ್ದಾನೆ ಎಂದು ಗೊತ್ತಾಯಿತು. ಏನಾದರೂ ಸೌದಾಮಿನಿ, ವಿದ್ಯುಲ್ಲತೆ ಅಲ್ಲವೆ ನೀನು. ಕಂಡವರ ಕಣ್ಣು ಕುಕ್ಕುವದು ಸಹಜ. ಆದರೆ ಮಿಂಚು ಎರಗಿದರೆ ಏನಾದೀತು ಎಂಬ ಎಚ್ಚರ ಕೂಡ ಇರಬೇಕಲ್ಲವೆ. ನೀನು ಕಂಗಾಲಾಗಬೇಡ. ಹಣ ಹೇಗೆ ವೆಚ್ಚ ಮಾಡಬೇಕು ಎಂಬುದು ತಿಳಿಯದೆ ಪೋಲು ಮಾಡುತ್ತಿದ್ದಾನೆ ಶೇಖರ. ಪರಿಸ್ಥಿತಿ ವಿಪರೀತಕ್ಕಿಟ್ಟುಕೊಂಡರೆ ಪ್ರಿನ್ಸಿಪಾಲರಿಗೆ ತಿಳಿಸಲಿಕ್ಕೂ ಹಿಂದೆ-ಮುಂದೆ ನೋಡಬೇಡ. ಸ್ವಾತಂತ್ರ್ಯ ಯುಗದ ಯುವತಿಯರಿಗೆ ಹೇಳಿಕೊಡಬೇಕಾದುದೇನೂ ಇಲ್ಲ.

ಈಗ ನಾನು ಶೇಖರನಿಗೆ ಬರೆದರೆ ನಿನಗೆ ಮತ್ತಿಷ್ಟು ತೊಂದರೆಯಾಗಬಹುದು. ಏನಿದ್ದರೂ ನನಗೂ ಪತ್ರ ಗೀಚು. ಇಷ್ಟೇ ಬೇಡಿಕೆ.

ಗುರುರಾಜ

೧೦

ಬೆಂಗಳೂರು
೮-೧೦-೬೦

ಮಿನಿ,

ನಿನ್ನ ಪತ್ರಕ್ಕೆ ಬೇಗನೆ ಉತ್ತರ ಹಾಕಲಿಕ್ಕಾಗಲಿಲ್ಲ

ಕ್ಷಮಿಸು. ನನ್ನ ಸಂಭ್ರಮದಲ್ಲಿ ನಿನ್ನನ್ನು ಮರೆತು ತಾಗಿತ್ತು. ಈ ಅವಧಿಯಲ್ಲಿ ನನ್ನ ಮದುವೆಯ ನಿಶ್ಚಿತಾರ್ಥ ನಡೆದುಹೋಯಿತು. ಬೆಂಗಳೂರಲ್ಲಿ ಗಂಡುಗಳಿಗೇನು ಕಡಿಮೆ! ನಮ್ಮವರು ಎಂ. ಈ. ಆಗಿ ಕೈತುಂಬ ಸಂಬಳ ಸಂಪಾದಿಸುವ ಸರಕಾರಿ ನೌಕರರಾಗಿದ್ದಾರೆ. ಮಂತ್ರಿಗಳ ಸಂಬಂಧಿಕರೂ ಆಗಿದ್ದಾರೆ. ನನ್ನ ಬಿ. ಎ. ಪರೀಕ್ಷೆ ಆದ ನಂತರ ವೈಶಾಖದಲ್ಲಿ ವಿವಾಹ ನಡೆಯಲಿದೆ. ಅಲ್ಲಿಯ ವರೆಗೆ ಎಂ. ಈ. ಪ್ರಾಣಿಯನ್ನೂ ಪರೀಕ್ಷಿಸಬಹುದಲ್ಲವೆ?

ನಾನೇ ಒಂದೆರಡು ದಿನ ಬಂದು ಶೇಖರನಿಗೆ ಬುದ್ಧಿಗಲಿಸಿ ಹೋಗಲೇನು ನಾನೆಂದರೆ ಹಾವಿಗೆ ಗರುಡನ ಗೆರೆ ಇದ್ದ ಹಾಗೆ.

ಹೋಗಲಿ, ದಸರೆಗೆ ನೀನಾದರೂ ಇಲ್ಲಿಗೆ ಬಂದಿದ್ದರೆ ನಾಲ್ಕು ದಿನ ಹಾಯಾಗಿ ಇದ್ದು ಹೋಗಬಹುದಾಗಿತ್ತು.

ಇಂತಿ ನಿನ್ನ
ಕಾಂಚನಲತಾ

೧೧

ಹುಬ್ಬಳ್ಳಿ
೨೦-೧೦-೬೦

ರಾಜ,

ಶೇಖರನನ್ನು ಚಪ್ಪಲಿಯಿಂದ ಬಸ್ಸಿನಲ್ಲಿ ಹೊಡೆದು ಬಿಟ್ಟೆ ರಾಜಣ್ಣ, ಕ್ಷಮಿಸು. ಮೊನ್ನೆ ರಾತ್ರಿ ಚಲಚ್ಚಿತ್ರ ಕಲಾವಿದರ ನಾಟಕಕ್ಕೆಂದು ಕೊನೆಯ ಬಸ್ಸಿನಿಂದ ಥಿಯೆಟರಿಗೆ ಹೊರಟಿದ್ದೆವು. ಶೇಖರ ನನಗಾಗಿ ಹತ್ತು ರೂಪಾಯಿ ಕೊಟ್ಟು ಫರ್ಸ್ಟ್‌ಕ್ಲಾಸಿನ ಟಿಕೀಟು ತೆಗೆದಿದ್ದರೂ ನಾನು ಒಪ್ಪದೆ,ಆತ ನನ್ನು ತಪ್ಪಿಸಿ ಸ್ನೇಹಿತೆಯೊಡನೆ ನಾಟಕಕ್ಕೆ ಹೊರಟಿದ್ದೆ. ಬಸ್ಸಿನಲ್ಲಿ ನಾನು ನಿಮಾ ಕುಳಿತಿದ್ದ ಲೇಡೀಜ ಸೀಟಿನಲ್ಲಿ ಒಂದು ಸ್ಥಳ ತೆರವಿತ್ತು. ಬಸ್ಸು ಬಿಡುವಾಗ ಶೇಖರ ಎಂದಿನಂತೆ ಓಡಿಬಂದು ಜಗಿದು ಬಸ್ಸು ಹತ್ತಿ ನನ್ನ ಪಕ್ಕದಲ್ಲಿ ಮಂಡಿಸಿದ. ಕಂಡಕ್ಟರನ ಕೈಗೆ ಐದರ ನೋಟಿಟ್ಟು ನಮ್ಮಿಬ್ಬರ ತಿಕೀಟುಗಳನ್ನೂ ತೆಗೆಸಿದ. ಚಿಲ್ಲರೆ ಇಲ್ಲ ಎಂದ ಕಂಡಕ್ಟರನಿಗೆ, ನೀನೇ ಚಿಲ್ಲರೆ ಇಟ್ಟುಕೊ ಎಂದು ಹೇಳಿದ. ಗೋಲ್ಡಫ್ಲೇಕ್ ಹೊತ್ತಿಸಿ ನನ್ನನ್ನು ಕೆಣಕಹತ್ತಿದ. ಅಷ್ಟರಲ್ಲಿ ಹೊಸೂರ ಸ್ಟಾಪ್ ಬಂದಿತು. ಒಂದು ಮುದುಕಿ ಹತ್ತಿ ಬಂದು ಶೇಖರನಿಗೆ ಹತ್ತಿಕೊಂಡು ನಿಂತಿತು. ಅಷ್ಟೇ ನೆವ ಮಾಡಿ ಆತ ಇನ್ನಷ್ಟು ನನ್ನ ಬದಿಗೆ ಸರಿದ. "ಯಪ್ಪಾ ಮುದುಕಿಗೆ ಜಾಗಾ ಕೊಡೊ" ಎಂದು ಅದು ಹಲುಬಿದರೂ ಶೇಖರ ತನ್ನ ಠೀವಿಯಲ್ಲಿಯೆ ಕುಳಿತಿದ್ದ. ಆ ಕೊನೆಗೆ ಹೋಗಿದ್ದ ಕಂಡಕ್ಟರ ಅಷ್ಟರಲ್ಲಿ ಬಂದು "ಇದು ಲೇಡೀಜ್ ಸೀಟು, ನೀವು ಏಳಿರಿ" ಎಂದು ಶೇಖರನಿಗೆ ನುಡಿದ. ಆಗ ಶೇಖರ, "ನೋ ನೋ ನಾವು ಒಂದೇ ಕಾಲೇಜಿನವರು, ಫ್ರೆಂಡ್ಸ್, ಏಳೋದಿಲ್ಲ" ಎಂದ ಯಾವ ಅಮಲು ತಲೆಗೆ ಏರಿತ್ತೋ, ಕಂಡಕ್ಟರನೂ ಅಷ್ಟೇ ದರ್ಪದಿಂದ ಪ್ರತಿಭಟಿಸಿ ಏಳಲು ಹೇಳಿದ. ಆಗಲಾದರೂ ಶೇಖರ ಎದ್ದಿದ್ದರೆ ದುರ್ಘಟನೆ ತಪ್ಪಬಹುದಾಗಿತ್ತೇನೊ. ಶೇಖರ ಏಳಲೇ ಇಲ್ಲ, ಅಲ್ಲದೆ, "what ಮಿಸಿ, ಆತಂಕಪಡೆಯು ನಾನಿಲ್ಲಿ ಕುಳಿತುಕೊಂಡರೆ?" ಎಂದು ಕೇಳಿದ, ನಂತರ ನನ್ನ ಎಡಗಾಲಲ್ಲಿಯ ಚಪ್ಪಲಿ ನನ್ನ ಕೈಗೆ ಬಂದದ್ದು ಅದರಿಂದ ಆತನಿಗೆ ಕಪಾಳ ಮೋಕ್ಷವಾದುದು ಹೇಗೆ ಎಂಬುದು ನನಗೇ ತಿಳಿಯದಂತೆ ಮಿಂಚಿನಂತೆ ಘಟನೆ ನಡೆದು ಹೋಯಿತು. ಶೇಖರ ಕೆಕ್ಕರಿಸಿ ನೋಡಿ ಜಾಗ ಬಿಟ್ಟದ್ದ ರಾಜಣ್ಣ, ಬಸ್ಸಿನಲ್ಲೆಲ್ಲ ಕಾಲೇಜ ಹುಡುಗರೇ. ಅವರ ಅಬ್ಬರ ಅಟ್ಟಹಾಸಕ್ಕೆ ಬಸ್ಸು ಬಿರಿಯುವಂತಾಯಿತು. ಪಾಪ ಕಂಡಕ್ಟರ ಗಾಬರಿಯಾಗಿ ಬಸ್ಸನ್ನು ಪೋಲೀಸ ಸ್ಟೇಷನ್ನಿಗೆ ಒಯ್ದ.

ಅಲ್ಲಿದ್ದ ಎಸ್. ಪಿ. ಸಾಹೇಬರು ಎಲ್ಲವನ್ನು ಕೇಳಿಕೊಂಡು ಶೇಖರನಿಗೆ ವಾರ್ನಿಂಗ ಕೊಟ್ಟು ನನ್ನನ್ನು ನಿಮಾಳನ್ನು ಅಲ್ಲಿಯೇ ನಿಲ್ಲಿಸಿಕೊಂಡರು. ನಾಟಕಕ್ಕೆ ಹೋಗಬೇಕಾಗಿದೆ ನಮ್ಮನ್ನು ಬಿಡಿರಿ ಎಂದು ಕೇಳಿದಾಗ "ನೊ ನೊ ಐ ಮಸ್ಟ್ ಫರ್ಸ್ಟ್ ಕಾಂಗ್ರಾಚ್ಯುಲೇಟ ಯು ಆನ್ ಯುವರ್ ಬ್ರೇವರಿ" ಎಂದು ನುಡಿದು ಚಹ ತರಿಸಿ ಕುಡಿಸಿ ತಮ್ಮ ಜೀಪಿನಲ್ಲಿ ಥಿಯೇಟರಿಗೆ ಕರೆದೊಯ್ದರು. ಜೀಪಿನಲ್ಲಿ ನಡೆದ ಸಂಭಾಷಣೆಯಿಂದ ಅವರು ನಮ್ಮೂರವರೇ ಎಂಬುದು ಗೊತ್ತಾಯಿತು. ಅವರೂ ನಾಟಕಕ್ಕೆಂದೇ ಬಂದಿದ್ದರು ಧಾರವಾಡದಿಂದ. ಅನಾಯಾಸವಾಗಿ

ಪೋಲೀಸ ಕಾವಲು ದೊರೆಯಿತು. ತಿರುಗಿ ಹಾಸ್ಟೆಲಿಗೆ ಮುಟ್ಟಿಸಿ ಹೋದರು.

ಪತ್ರ ದೊಡ್ಡದಾಯಿತು. ಆದರೂ ನಿನಗೆ ಎಲ್ಲವನ್ನೂ ತಿಳಿಸದೆ ಚಿತ್ತಕ್ಕೆ ಶಾಂತಿ ದೊರೆಯಲಾರದೆಂದು ಬರೆದಿದ್ದೇನೆ. ಕ್ಷಮಿಸುವಿಯಲ್ಲವೆ ರಾಜಣ್ಣ? ಏನು ಹಾಳು ಕಾಲೇಜಜೀವನವೊ !

ಇಂತಿ ನಿನ್ನ ತಂಗಿ
ಮಿನಿ

೧೨

ಹುಬ್ಬಳ್ಳಿ
೨೪-೧೧-೬೦

ಲತಾ,

ಮಿಂಚು ಮಿಂಚಿತು, ಶೇಖರನಿಗೆ ಪಾದರಕ್ಷೆ ಪೂಜೆಯಾಯಿತು. ಅದೂ ಕೂಡ ಕಾಲೇಜ ಹುಡುಗರಿಂದ ತುಂಬಿದ ಬಸ್ಸಿನಲ್ಲಿಯೆ. ಬಹುಶಃ 'ಜಯ ಕಾಂಚನ' ಎಂದು ನಿನ್ನ ಹೆಸರು ಹೇಳಿಯೆ ನಾನು ಆ ಕಾರ್ಯ ಪೂರೈಸಿರಬೇಕು. ಇನ್ನು ಆತ ನನ್ನ ಉಸಾಬರಿಗೆ ಬರಲಿಕ್ಕಿಲ್ಲ. ಏಕೆ, ಎಂತು ಎಂಬುದನ್ನೆಲ್ಲ ಬರೆದು ನಿನ್ನನ್ನು ಆಯಾಸಕ್ಕೆ ಗುರಿಪಡಿಸುವದಿಲ್ಲ. ಗೊತ್ತಿದೆಯಲ್ಲ ನಿನಗೆ ಅವನ ಖೋಡಿ ಸ್ವಭಾವ. ನೀನಂದಂತೆಯೆ ಆತನಿಗೆ ಪಾಠ ಕಲಿಸಿದಂತಾಯಿತು ಎಂದುಕೊಂಡಿದ್ದೇನೆ. ಬಾಕಿ ಎಲ್ಲ ನೆಟ್ಟಗೆ. ಪೋಲೀಸ ಸುಪರಿಂಟೆಂಡೆಂಟರಿಂದ ಛೀ-ಮಾರಿ ಹಾಕಿಸಿಕೊಂಡ ಆತನು ಇನ್ನು ಮೆತ್ತಗಾಗಬಹುದು.

ಇನ್ನು ಅಭ್ಯಾಸದ ಕಡೆಗೆ ಮನಸ್ಸು ಹಾಕಲು ಅವಕಾಶ ತುಂಬ ದೊರೆತೀತು. ನಿನ್ನ ವಿಚಾರ ಎಲ್ಲಿಗೆ ಬಂತು ? ವಿಹಾರಕ್ಕೆ ಬೆಂಗಳೂರು ಸಾಲದಾಗಿದ್ದೀತು ನಿನಗೆ.

ವಿಶೇಷವೇನಾದರೂ ಇದ್ದರೆ ಬರೆಯುತ್ತಿರು.

ಇಂತೀ ನಿನ್ನ
ಸೌದಾಮಿನಿ

೧೩

ಹುಬ್ಬಳ್ಳಿ
೪-೧೧-೬೦

ಗುರುರಾಜಾಚಾರ್ಯರೆ,

ಪ್ರೇಮದೇವತೆಯ ಪ್ರಸಾದವಂತೂ ಸಿಕ್ಕಿತು. ಇನ್ನೆಲ್ಲಿ ಹೋಗುತ್ತಾಳೆ. ಏನೊ ಇರಲಿ ಎಂದು ಇಷ್ಟುದಿನ ಕೈಕಾದಿದ್ದೆ. ಈ ಘಟನೆ ನಡೆದ ಮೇಲೂ ನಾನು ಸುಮ್ಮನಿರಬಹುದೆ? ರಾಜಕುಮಾರನ ನಾಟಕದಲ್ಲಿ ಮುಂದಿನ ಸೋಫಾದಲ್ಲಿಯೆ ಆ ಪೋಲೀಸ ಸುಪರಿಂಟೆಂಡೆಂಟನೊಡನೆ ಕುಳಿತುಕೊಳ್ಳುವದೇನು? ಆತನ ಜೀಪಿನಲ್ಲಿಯೆ ಹಾಸ್ಟೆಲಿಗೆ ರಾತ್ರಿಯಲ್ಲಿ ಹಿಂತಿರುಗುವದೇನು. ನಮ್ಮ ಚಾಂಡಾಲ ಚೌಕಡಿಯ ಕೈಯೊಳಗಿಂದ ಪಾರಾಗುವಳೆ? ನಿನಗೆ ಆಕೆ ಎಲ್ಲ ಬರೆದು ತಿಳಿಸಿರಲಿಕ್ಕೆಸಾಕು. ನನಗೆ ಇಷ್ಟೊಂದು ದಂಡಹಾಕಿ ಹಾಗೇ ದಾಟಿಕೊಳ್ಳಬಲ್ಲಳೆ? ಸತಿಯ ಮೇಲೆ ಸವತಿನ್ನ ತಂದ ಶಿವನ ಹೆಸರಿನವ ನಾನು. ಹಂ ! ತಡೆದು ನೋಡು.

ನಿನ್ನ
ಚಂದ್ರಶೇಖರ

೧೪

ಬೆಂಗಳೂರು
೧೦-೧೧-೬೦

ತಂಗಿ ಮಿನಿ,

ಇಷ್ಟೆಲ್ಲ ಸಾಹಸ ಗೈದ ನಿನ್ನನ್ನು ಹೇಗೆ ಅಭಿನಂದಿಸಬೇಕೊ ತಿಳಿಯದಾಗಿದೆ. ಶೇಖರನಿಗೆ ಯೋಗ್ಯ ದಂಡನೆಯೆ ಆಯಿತು. ಆತನ ಪತ್ರವೂ ಬಂದಿದೆ. ಕೆರಳಿ ಅರಳಿದ ಕೆಂಡವಾಗಿದ್ದಾನೆ. ಜೋಕೆ, ನಿನಗಿನ್ನೂ ಹೇಳಬೇಕಾದ ಕಾರಣವೇ ಇಲ್ಲ. ಲತಾ ಬಂದು ನಿನ್ನ ಪತ್ರ ನೋಡಿಕೊಂಡು ಹೋದಳು. ನಿನ್ನ ಪತ್ರವನ್ನು ಸೂಕ್ಷ್ಮವಾಗಿ ಅವಲೋಕಿಸಿದಲ್ಲಿ ನಿನ್ನ ಅಣ್ಣನಿಗಾಗಿ ಇನ್ನೂ ಒಂದು ಆಶ್ಚರ್ಯವನ್ನು ಕಾದಿರಿಸಿರುವೆ ಎಂದು ನನಗೇಕೊ ಹೊಳೆಯುತ್ತಿದೆ.

ಅದು ನಡೆದರೂ ಸಂತೋಷವೆ. ಪತ್ರಿಕೆಯಲ್ಲಿಯೂ ಹೆಸರು ಮೂಡಿಸಿಕೊಂಡುಬಿಟ್ಟೆ. ನಿನಗೆ ಶತಶಃ ಅಭಿನಂದನೆಗಳು.

ನಿನ್ನ ಅಣ್ಣ
ಗುರುರಾಜ

೧೫

ಬೆಂಗಳೂರು
೧೦-೧೧-೬೦

ಮಿನಿ,

ಥ್ರೀ ಚೀಅರ್ಸ್ ಫಾರ್ ಯು! ನಿನ್ನ ಸಮಾಚಾರ ನಮ್ಮವರಿಗೆ ಹೇಳಲಾಗಿ ಅವರು ನಿನ್ನ ಫೋಟೊ ಪ್ರಕಟವಾದ ಪತ್ರಿಕೆಯನ್ನೇ ನನ್ನ ಮೋರೆಗೆ ಹಿಡಿದು, "ಇವಳೇ ಏನು ನಿನ್ನ ಗೆಳತಿ, ಪರವಾಯಿಲ್ಲ" ಎಂದು ಪ್ರಶಂಸಿಸಿದರು. ಅಂತೂ ಶೇಖರನ ಪೀಡೆ ಕಳೆಯಿತೆನ್ನು. ಈ ಹುಡುಗರ ಹಣೆಬರಹವೇ ಅಷ್ಟು. ನೆಲವಿಗೆ ಹಾರದ ಬೆಕ್ಕು ಸ್ವರ್ಗಕ್ಕೆ ಹಾರಿದಂತೆ ಚಲ್ಲಾಟ ನಡೆಸುತ್ತಾರೆ. ಯಾವ ಹುತ್ತಿನಲ್ಲಿ ಯಾವ ಹಾವಿರುತ್ತದೆಂಬುದು ಅವರಿಗೇನು ಗೊತ್ತು. ಹೀಗೇ ಆಗಬೇಕು ಇವರಿಗೆ, ಇಂಥವರಿಗೆ. ಭಾಪು, ಭಳಿರೇ ಸೌದಾಮಿನಿ ನೀನೆನ್ನ ಕಣ್ಮಣಿ, ಅನಂತ ಅಭಿನಂದನೆಗಳು.

ಇಂತೀ ನಿನ್ನ
ಕಾಂಚನಮಾಲಾ

ದಿನಾಂಕ ೯-೧೧-೬೦ ರಂದು ಹುಬ್ಬಳ್ಳಿಯ ಪ್ರಮುಖ ಪತ್ರಿಕೆಯಲ್ಲಿ ಫೋಟೋ ಸಹಿತ ಈ ಕೆಳಗಿನ ವಾರ್ತೆ ಮುಖಪುಟದಲ್ಲಿ ಪ್ರಕಟವಾಗಿತ್ತು.

**ನೂತನ ದಂಪತಿಗಳು**

ಧಾರವಾಡ ಜಿಲ್ಲಾ ಪೋಲೀಸ ಸುಪರಿಂಟೆಂಡೆಂಟರಾದ ಶ್ರೀ ಅರುಣಕುಮಾರ ನಾಯಕರ ವಿವಾಹವು ಹುಬ್ಬಳ್ಳಿಯ ಕಾಲೇಜ್ ಕ್ವೀನ್ ಕೆ. ಸೌದಾಮಿನಿ ಎಂಬವರೊಡನೆ ನಿನ್ನೆ ದಿನ ರಜಿಸ್ಟರ್ ಪದ್ಧತಿಯಿಂದ ನೆರವೇರಿತು. ತನ್ನಿಮಿತ್ತ ವುಡ್‌ಲ್ಯಾಂಡ್ಸದಲ್ಲಿ ಏರ್ಪಡಿಸಲಾಗಿದ್ದ ಭೋಜನಕೂಟಕ್ಕೆ ದಂಪತಿಗಳ ಮಾತಾಪಿತೃಗಳು, ಆಪ್ತೇಷ್ಟರು, ಗಣ್ಯನಾಗರಿಕರು, ಪತ್ರಿಕೋದ್ಯಮಿಗಳು ನೆರೆದಿದ್ದರು. ಶ್ರೀ ಅರುಣಕುಮಾರರು ತಮ್ಮ ಶಾಖೆಯಲ್ಲಿ ಉಚ್ಚಶಿಕ್ಷಣಕ್ಕಾಗಿ ಇದೇ ತಿಂಗಳಿನಲ್ಲಿ ಬ್ರಿಟನ್ನಿಗೆ ತೆರಳಲಿರುವದರಿಂದ ವಿವಾಹ ಸಮಾರಂಭವನ್ನು ಆಧುನಿಕ ಪದ್ಧತಿಯಿಂದ ಜರುಗಿಸಲಾಗಿದೆಯಂತೆ. ಅವರು ಸಪತ್ನೀಕರಾಗಿ ಬ್ರಿಟನ್ನಿಗೆ ತೆರಳುವರು. ಅವರ ಈ ಮಧುಚಂದ್ರದ ಪ್ರಯಾಣ ಸುಖಕರವಾಗಲಿ ಎಂದು ಹಾರೈಸುತ್ತೇವೆ.

ಈ ವಾರ್ತೆಯನ್ನು ಓದಿದ ಶೇಖರ, ಗುರುರಾಜ, ಸೌದಾಮಿನಿ, ಕಾಂಚನಲತಾ ನಾಲ್ವರೂ ತಂತಮ್ಮ ಮನಸ್ಸಿನಲ್ಲಿ ಅಂದುಕೊಂಡಿರಬೇಕು.

"ಮಾರ್ ಡಾಲಾ"

ಲೇಖಕರು :
**ಮಾಧವ. ನಾ. ಮಹಿಷಿ**
ಬಿ. ಎ., ಎಲ್ ಎಲ್. ಬಿ.
ಹುಬ್ಬಳ್ಳಿ

# ನಮ್ಮ ಆರ್ಥಿಕ ಅಭಿವೃದ್ಧಿಗೆ ಇನ್ನೂ ಭದ್ರ ನೆಲೆ ಬೇಕು

"The adoption of the socialistic pattern of society as the national objective, as well as the need for planned and rapid development, require that all industries of basic and strategic importance, or in the nature of public utility services, should be in the Public Sector. Other industries which are essential and require investment on a scale which only the State, in present circumstances, could provide, have also to be in the Public Sector. The State has, therefore, to assume direct responsiblity for the future development of industries over a wider area."

[ ಸಮಾಜವಾದೀ ಸ್ವರೂಪದ ಸಮಾಜನಿರ್ಮಾಣವನ್ನು ರಾಷ್ಟ್ರೀಯ ಗುರಿಯೆಂದು, ಹಾಗು ಯೋಜಿತ ಮತ್ತು ತ್ವರಿತಗತಿಯ ಅಭಿವೃದ್ಧಿಯ ಅವಶ್ಯಕತೆಯನ್ನು ಮನ್ನಿಸಿದಾಗ, ಮೂಲಭೂತ ಹಾಗು ಆಯಕಟ್ಟಿನ ಮಹತ್ವದ ಉದ್ದಿಮೆಗಳು ಇಲ್ಲವೆ ಸಾರ್ವಜನಿಕ ಲೋಕೋಪಯೋಗಿ ಮಹತ್ವದ ಸೇವೆಗಳು ಸರಕಾರಿರಂಗದಲ್ಲಿರಬೇಕಾದುದು ಅವಶ್ಯಕವೆನಿಸುತ್ತದೆ. ಅತ್ಯವಶ್ಯಕವಾದ ಮತ್ತು ಸದ್ಯದ ಪರಿಸ್ಥಿತಿಯಲ್ಲಿ ಸರಕಾರಕ್ಕೆ ಮಾತ್ರ ಸಾಧ್ಯವಾದಷ್ಟು ದೊಡ್ಡ ಪ್ರಮಾಣದಲ್ಲಿ ಬಂಡವಾಳ ತೊಡಗಿಸಬೇಕಾಗುವ ಇನ್ನಿತರ ಕೆಲವು ಉದ್ದಿಮೆಗಳೂ ಸರಕಾರಿರಂಗದಲ್ಲಿ ಇರಬೇಕಾಗುತ್ತದೆ. ಅಂತೆಯೆ ಸರಕಾರವಿನ್ನೂ ಹೆಚ್ಚು ವಿಶಾಲವಾದ ಕ್ಷೇತ್ರದಲ್ಲಿ ಉದ್ದಿಮೆಗಳ ಅಭಿವೃದ್ಧಿಯ ಹೊಣೆಯನ್ನು ನೇರವಾಗಿಯೇ ವಹಿಸಬೇಕಿದೆ. ]

ಭಾರತದಲ್ಲಿ ಸರಕಾರಿರಂಗದ ಗಾತ್ರ ದಿನದಿನಕ್ಕೆ ಹೆಚ್ಚುತ್ತಿದೆ. ಉದ್ದಿಮೆಗಳಲ್ಲಿ ಹೆಚ್ಚಿನವು ಸರಕಾರಿರಂಗದಲ್ಲಿಯೇ ಇವೆ. ಆದರೆ ಅವುಗಳಿಂದ ಬಂಡವಾಳನಿರ್ಮಾಣ ಅಪೇಕ್ಷಿತ ರೀತಿಯಲ್ಲಿ ಆಗುತ್ತಿಲ್ಲ. ಅದೇ ಕಾಲಕ್ಕೆ ಲಾಭವನ್ನೂ ಗಳಿಸುತ್ತಿಲ್ಲ. ಸಾರ್ವಜನಿಕರಿಗೆ ಇವು ನ್ಯಾಯ ಸಲ್ಲಿಸಬೇಕಾದರೆ ಅವು ಖಾಸಗಿ ಉದ್ದಿಮೆಗಳ ವ್ಯಾಪಾರಿ ಮತ್ತು ಮೌಲ್ಯಮಾಪನ ತತ್ತ್ವಗಳನ್ನು ಅನುಸರಿಸುವುದು ಅವಶ್ಯ. ಹಾಗಾದಲ್ಲಿ ಮಾತ್ರ ನಮ್ಮ ಆರ್ಥಿಕ ಅಭಿವೃದ್ಧಿಗೆ ಭದ್ರ ನೆಲೆ ದೊರೆತೀತು.

---

ಎಪ್ರಿಲ್ ೧೯೫೬ ರಲ್ಲಿ ಭಾರತ ಸರಕಾರವು ತನ್ನ ಔದ್ಯಮಿಕ ಧೋರಣೆಯ ಗೊತ್ತುವಳಿಯನ್ನು ಸಂಸತ್ತಿನಲ್ಲಿ ಮಂಡಿಸುತ್ತ, ಉದ್ದಿಮೆರಂಗದಲ್ಲಿ ಸರಕಾರಿ ವಲಯಕ್ಕೀಯಲಾದ ಹೊಸ ಸ್ಥಾನ-ಮಹತ್ವವನ್ನು ಕುರಿತು ಮೇಲಿನಂತೆ ವಿವರಣೆಯಿತ್ತಿತ್ತು. ಆದರೆ ಈ ಗೊತ್ತುವಳಿ ನಮ್ಮ ಸಂಸತ್ತಿನಲ್ಲಿ ಸ್ವೀಕರಿಸಲ್ಪಡುವ ಮೊದಲು ಸಹ ಉದ್ದಿಮೆಯಲ್ಲಿ ಸರಕಾರಿರಂಗವೆಂಬುದು ಅಸ್ತಿತ್ವದಲ್ಲಿದ್ದೇ ಇತ್ತು. ರೇಲ್ವೆ, ಅಂಚೆ ಮತ್ತು ತಂತಿ, ಶಸ್ತ್ರಾಸ್ತ್ರೋತ್ಪಾದನೆ, ಆಕಾಶವಾಣಿ, ಉಪ್ಪು, ಮೊದಲಾದುವು ಸರಕಾರಿರಂಗಕ್ಕೆ ಮಾತ್ರ ಮೀಸಲಾಗಿದ್ದುವು. ಇವು ಸ್ವಾತಂತ್ರ್ಯಪೂರ್ವಕಾಲದಲ್ಲೂ ಸರಕಾರದ ಸೊತ್ತುಗಳೇ ಆಗಿದ್ದುವು. ೧೯೪೭ ರ ನಂತರ, ದೇಶದ ಔದ್ಯಮಿಕ ಅಭಿವೃದ್ಧಿ ತ್ವರಿತಗತಿಯಿಂದ ಸಾಧ್ಯವಾಗಬೇಕಾದರೆ ಸರಕಾರ ಉದ್ದಿಮೆಯ ಕೆಲವೊಂದು ಅಂಗಗಳಲ್ಲಿ ಭಾಗವಹಿಸದೆ ಗತ್ಯಂತರವಿಲ್ಲವೆಂದು ಬಗೆಯಲಾಯಿತು. ಆದರೆ ಮುಂದೆ 'ಸಮಾಜವಾದೀ ಸ್ವರೂಪದ ಸಮಾಜ' ನಿರ್ಮಾಣವೇ ಗುರಿಯೆಂದು ನಿರ್ಧಾರವಾದ ನಂತರವೇ ನಮ್ಮ ಉದ್ದಿಮೆರಂಗದಲ್ಲಿ ಸರಕಾರಿ ವಲಯವೊಂದು ನಿರ್ಮಾಣವಾಯಿತಲ್ಲದೆ ಮೇಲೆ ಎತ್ತಿ ಹೇಳಲಾದ ಗೊತ್ತುವಳಿಯ ಮೂಲಕ ರಾಷ್ಟ್ರದ ಔದ್ಯಮಿಕ ಚಿತ್ರದಲ್ಲಿ ಮೂಲಭೂತ ಮಹತ್ವದ ಬದಲಾವಣೆಗಳನ್ನೇ ಮಾಡಲಾಯಿತು. ದೇಶಕ್ಕೆ ಮೂಲಭೂತ ಹಾಗು ಆಯಕಟ್ಟಿನ ಮಹತ್ವವುಳ್ಳ, ಇಲ್ಲವೆ ಲೋಕೋಪಯೋಗೀ ಮಹತ್ವದ ಉದ್ದಿಮೆಗಳು ಇನ್ನು ಮುಂದೆ ಸರಕಾರಿ ವಲಯಕ್ಕೆ ಮಾತ್ರ ಮೀಸಲಿರತಕ್ಕದ್ದೆಂದು ನಿರ್ಧರಿಸಲಾಯಿತಲ್ಲದೆ, ಖಾಸಗಿ ವಲಯದ ಶಕ್ತಿ ಮೀರಿದಷ್ಟು ಬೃಹದ್ಗಾತ್ರದಲ್ಲಿ ಬಂಡವಾಳ ತೊಡಗಿಸಬೇಕಾಗುವಂತಹ ಇನ್ನು ಕೆಲವು ಉದ್ದಿಮೆಗಳೂ ಸರಕಾರಿ ವಲಯದಲ್ಲಿಯೇ ಇರಬೇಕೆಂದು ನಿಶ್ಚಯಿಸಲಾಯಿತು. ಇದರಿಂದ ಭಾರತದ ಔದ್ಯಮಿಕ ಇತಿಹಾಸದಲ್ಲಿಯೇ ಹಿಂದೆಂದೂ ಇಲ್ಲದಷ್ಟು ದೊಡ್ಡ ಪ್ರಮಾಣದಲ್ಲಿ ಸರಕಾರ ಉದ್ದಿಮೆಗಳಲ್ಲಿ ಪಾಲುಗೊಂಡಿತು.

## ಕನಿಷ್ಠ ಹೊಣೆ

ಸಮಾಜವಾದೀ ಸ್ವರೂಪದ ಸಮಾಜನಿರ್ಮಾಣದ ಗುರಿಯೊಂದಿಗೆ ಸರಕಾರ ಉದ್ದಿಮೆರಂಗದಲ್ಲಿ ಕಾಲಿರಿಸುವುದರೊಂದಿಗೆಯೇ ಕೆಲವೊಂದು ಹೊಸ ಹೊಣೆಗಳನ್ನು ವಹಿಸಿಕೊಂಡಂತಾಯಿತು. ಬಂಡವಾಳ ಕೆಲವೇ ವ್ಯಕ್ತಿಗಳ ಕೈಗಳಲ್ಲಿ ಕೂಡಿಬೀಳುವುದನ್ನು ತಪ್ಪಿಸುವುದಲ್ಲದೆ ಅದರ ಫಲವಿತರಣೆಯು ಸಾಮಾನ್ಯ ಜನತೆಯಲ್ಲಿ ನ್ಯಾಯ್ಯವಾದರೀತಿಯಲ್ಲಾಗಬೇಕೆಂಬುದೂ ಇದೆ. ಆದರೆ ನಮ್ಮ ಅರ್ಥವ್ಯವಸ್ಥೆಯು ಸಂಪೂರ್ಣ ರಾಷ್ಟ್ರೀಕೃತವಲ್ಲವಾದ್ದರಿಂದ ಈ ಎರಡು ಗುರಿಗಳ ಸಾಧ್ಯಾಸಾಧ್ಯತೆಯು ಚರ್ಚಾಸ್ಪದ ವಿಷಯವಾಗಿ ಉಳಿದುಕೊಳ್ಳುವುದು ಅನಿವಾರ್ಯ. ಇಂತಹ ಪರಿಸ್ಥಿತಿಯಲ್ಲಿ, ಸಾರ್ವಜನಿಕರ ಪ್ರತಿನಿಧಿಯಾಗಿ ಸರಕಾರ ಉದ್ದಿಮೆಗಳಲ್ಲಿ ಅಪಾರ ಸಾರ್ವಜನಿಕ ಹಣವನ್ನು ತೊಡಗಿಸುತ್ತಿರುವಾಗ, ಅದು ನಿರ್ವಹಿಸಲೇಬೇಕಾದ ಕನಿಷ್ಠ ಹೊಣೆಯೆಂಬುದೊಂದುಂಟು. ಅದೆಂದರೆ ಸರಕಾರಿ ವಲಯದಲ್ಲಿಯ ಉದ್ದಿಮೆಗಳು ರಾಷ್ಟ್ರದ ಆರ್ಥಿಕ ಅಭಿವೃದ್ಧಿಗೆ ಪೂರಕವಾದ ರೀತಿಯಲ್ಲಿ ನಡೆಸಲ್ಪಡಬೇಕು ಎಂಬುದು.

ರಾಷ್ಟ್ರದ ಆರ್ಥಿಕ ಅಭಿವೃದ್ಧಿಯೇ ಸರಕಾರಿ ವಲಯನಿರ್ಮಾಣದ ಮುಖ್ಯ ಉದ್ದೇಶವಿರುವಾಗ ಅದರಲ್ಲಿನ ಉದ್ದಿಮೆಗಳು ರಾಷ್ಟ್ರದ ಆರ್ಥಿಕ ಅಭಿ-

ವೃದ್ಧಿಗೆ ಪೂರಕವಾದ ರೀತಿಯಲ್ಲಿ ನಡೆಸಲ್ಪಡಬೇಕು ಎಂದು ಹೇಳುವುದರ ಔಚಿತ್ಯವನ್ನು ಯಾರೂ ಪ್ರಶ್ನಿಸಬಹುದು. ಆದರೆ ಇಂದು ಲಭ್ಯವಿರುವ ಅನೇಕ ಅಂಕಿ ಸಂಖ್ಯೆಗಳು ಹಾಗು ಇತರ ಕೆಲವು ಸಂಗತಿಗಳನ್ನು ಪರಿಶೀಲಿಸಿದಾಗ ಸರಕಾರಿ ವಲಯದಲ್ಲಿನ ಉದ್ದಿಮೆಗಳ ಕಾರ್ಯನಿರ್ವಹಣೆ ಇರಬೇಕಾದಷ್ಟು ಸಮಾಧಾನಕಾರಕವಿಲ್ಲವೆಂದು ಕಂಡುಬರುತ್ತದೆ.

ಆರ್ಥಿಕ ಅಭಿವೃದ್ಧಿಯೆಂದರೆ ನಾಡಿನಲ್ಲೆಲ್ಲಲ್ಲೂ ನಾಯಿಕೊಡೆಗಳಂತೆ ಕಾರಖಾನೆಗಳನ್ನು ಹಬ್ಬಿಸುವುದಲ್ಲ. ಈ ಕಾರಖಾನೆಗಳಲ್ಲಿ ವ್ಯಾಪಾರೋದ್ಯಮದ ಉಚ್ಚ ತತ್ತ್ವಗಳಿಗನುಸಾರವಾಗಿ ಉತ್ಪಾದನಾ ಕಾರ್ಯ ನಡೆಯಬೇಕು. ಅಲ್ಲಿ ಉತ್ಪಾದಿಸಲ್ಪಟ್ಟ ವಸ್ತುಗಳು ಪ್ರಮಾಣಿತ ಮಟ್ಟದವಿರಬೇಕು ಮಾತ್ರವಲ್ಲ, ಖಾಸಗಿ ವಲಯದಲ್ಲಿ ಕಂಡುಬರುವ ಕಾರ್ಯಕ್ಷಮತೆಯು ಅಲ್ಲೂ ವ್ಯಕ್ತವಾಗಬೇಕು. ಅಂದರೆ ಉತ್ಪಾದನೆಯು ಲಾಭದಾಯಕವಾಗಿ ಹೊಸ ಬಂಡವಾಳನಿರ್ಮಾಣಕ್ಕೆ ಅವಕಾಶ ಮಾಡಿಕೊಡಬೇಕು. ಹೊಸ ಬಂಡವಾಳನಿರ್ಮಾಣದಿಂದ ಇದ್ದ ಉದ್ದಿಮೆಗಳ ವಿಸ್ತರಣೆ ಮಾತ್ರವಲ್ಲ, ಹೊಸ ಅಭಿವೃದ್ಧಿ ಯೋಜನೆಗಳ ಪ್ರಾರಂಭಕ್ಕೂ ಅನುವಾಗುವುದು. ಈ ವಿಶಾಲ ತತ್ತ್ವಕ್ಕೆ ಚ್ಯುತಿ ಬರುತ್ತಿದ್ದಲ್ಲಿ ಸರಕಾರಿ ವಲಯದಲ್ಲಿಯ ಉದ್ದಿಮೆಗಳು ರಾಷ್ಟ್ರದ ಆರ್ಥಿಕ ಅಭಿವೃದ್ಧಿಗೆ ಪೂರಕವಾದ ರೀತಿಯಲ್ಲಿ ನಡೆಸಲ್ಪಡುತ್ತಿರುವವೆಂಬುದು ಸಂಶಯಾಸ್ಪದವೆಂದೇ ಹೇಳಬೇಕು.

ಈ ವಿಶಾಲ ತತ್ತ್ವದ ವರೆಗಲ್ಲಿಗೆ ತಿಕ್ಕಿ ಇಂದು ಸರಕಾರಿ ವಲಯದಲ್ಲಿಯ ಉದ್ದಿಮೆಗಳು ಹೊಸ ಬಂಡವಾಳನಿರ್ಮಾಣದಲ್ಲಿ ಎಷ್ಟು ಮಟ್ಟಿಗೆ ಸಹಾಯಕವಾಗಿವೆಯೆಂಬುದನ್ನೇ ಇಲ್ಲಿ ಪ್ರಾಮುಖ್ಯವಾಗಿ ಪರಾಮರ್ಶಿಸೋಣ.

### ಅತಿ ದೊಡ್ಡ ಉದ್ದಿಮೆದಾರ

ಮೊದಲನೆಯ ಪಂಚವಾರ್ಷಿಕ ಯೋಜನೆಯ ಪೂರ್ವದಲ್ಲಿ ಸರಕಾರವು ಸಾರಿಗೆ ಹಾಗೂ ಉದ್ದಿಮೆಗಳಲ್ಲಿ ತೊಡಗಿಸಿದ್ದ ಹಣ ೧೦೦೦ ಕೋಟಿ ರೂಪಾಯಿಗಳಾದರೆ ಮೊದಲ ಯೋಜನೆಯಲ್ಲಿ ೯೫೯ ಕೋಟಿ, ಎರಡನೆಯ ಯೋಜನೆಯಲ್ಲಿ ೨೪೫೬ ಕೋಟಿ ರೂಪಾಯಿಗಳನ್ನು ತೊಡಗಿಸಲಾಯಿತು. ಮೂರನೆಯ ಯೋಜನೆಯಲ್ಲಿ ೪೦೦೬ ಕೋಟಿ ರೂಪಾಯಿಗಳನ್ನು ತೊಡಗಿಸಲಾಗುತ್ತಿದೆ.

ಗಮನಿಸಲೇಬೇಕಾದ ಇನ್ನೊಂದು ಅಂಶವೆಂದರೆ ೧೯೬೧-೬೨ ಹೊತ್ತಿಗೆ ನಮ್ಮ ದೇಶದಲ್ಲಿ ಉದ್ದಿಮೆಗಳಲ್ಲಿ ತೊಡಗಿಸಲಾದ ಬಂಡವಾಳದಲ್ಲಿ ೯೭% ರಷ್ಟು ಕೇಂದ್ರ ಸರಕಾರದ ಪಾಲಾಗಿದ್ದರೆ ಉಳಿದ ೩% ಮಾತ್ರ ರಾಜ್ಯ ಸರಕಾರಗಳು ಮತ್ತು ದೇಶಿ, ವಿದೇಶಿ ಖಾಸಗಿ ಮೂಲಗಳಿಂದ ಬಂದಿದೆಯೆಂಬುದು. ಕೇಂದ್ರ ಸರಕಾರವೇ ಇಂದು ನಮ್ಮಲ್ಲಿ ಅತಿ ದೊಡ್ಡ ಉದ್ದಿಮೆದಾರನೆನಿಸಿದೆ. ಹೀಗಿರುವಾಗ ಇಷ್ಟೊಂದು ಅಪಾರ ಹಣ, ಅದನ್ನು ಒಂದಿಲ್ಲೊಂದು ರೂಪದಲ್ಲಿ ತೆತ್ತುವ ಜನಸಾಮಾನ್ಯದ ಪರಮಾವಧಿ ಕಲ್ಯಾಣಕ್ಕಾಗಿಯೇ ವ್ಯಯವಾಗುತ್ತಿದೆಯೇ ಎಂದು ಕೇಳುವುದು ಅಪ್ರಸ್ತುತವೆಂದೂ ಅನಿಸಲಾರದು.

ಮೂರನೆಯ ಯೋಜನೆಯ ಪ್ರಾರಂಭದ ವರೆಗೆ ಒಟ್ಟು ಸುಮಾರು ೫೦೦೦ ಕೋಟಿ ರೂಪಾಯಿಗಳು ತೊಡಗಿಸಲ್ಪಟ್ಟವೆಂದು ಮೇಲಿನ ಅಂಕಿ ಸಂಖ್ಯೆಗಳಿಂದ ಕಂಡುಬರುವುದು. ಅದರಲ್ಲಿ ಕೇಂದ್ರ ಸರಕಾರದ ನೇರವಾದ ಪಾಲು ೨೬೭೦ ಕೋಟಿ ರೂಪಾಯಿಗಳು. ಇದರಲ್ಲಿ ರೇಲ್ವೆಗಳಿಗಾಗಿ ತೊಡಗಿಸಿದ ೧೫೫೯ ಕೋಟಿ ಹಾಗು ಅಂಚೆ ಮತ್ತು ತಂತಿ ಶಾಖೆಗಾಗಿ ತೊಡಗಿಸಿದ ೧೩೦ ಕೋಟಿ ರೂಪಾಯಿಗಳು ಸೇರಿವೆ. ಇದಲ್ಲದೆ ಕೇಂದ್ರ ಪಬ್ಲಿಕ್ ಕಾರ್ಪೊರೇಶನ್ನುಗಳು ಹಾಗೂ ಸರಕಾರಿ ಕಂಪನಿಗಳು ೫೬೦ ಕೋಟಿ ಮತ್ತು ಕೇಂದ್ರ ಸರಕಾರವು ಸಾಲಗಳ ಮೂಲಕ ೪೪೧ ಕೋಟಿ ರೂಪಾಯಿಗಳನ್ನೆತ್ತಿ ತೊಡಗಿಸಿದವು. ಅದುವರೆಗೆ ರಾಜ್ಯ ಸರಕಾರಗಳು ಒಟ್ಟು ೬೫೦ ಕೋಟಿ ರೂಪಾಯಿಗಳನ್ನು ತೊಡಗಿಸಿದ್ದವು.

ಆದರೆ ಯೋಜನಾ ಆಯೋಗವು ಮೂರನೆಯ ಯೋಜನೆಗಾಗಿ ಲಭ್ಯವಾಗಬಹುದಾದ ಸಾಧನ ಸಂಪತ್ತಿನ ಗಣನೆ ಮಾಡುವಾಗ ರೇಲ್ವೆಗಳನ್ನೊಳಗೊಂಡು ಎಲ್ಲ ಸರಕಾರಿ ಉದ್ದಿಮೆಮೂಲಗಳಿಂದ ೫೫೦ ಕೋಟಿ ರೂಪಾಯಿ ಹೊಸ ಬಂಡವಾಳ ನಿರ್ಮಾಣವಾಗಿ ದೊರೆಯಬಹುದೆಂದು ಲೆಕ್ಕ ಹಾಕಿದೆ.

ಎರಡನೆಯ ಯೋಜನೆಯ ಕೊನೆಯ ವರೆಗೆ ತೊಡಗಿಸಲಾದ ಒಟ್ಟು ಬಂಡವಾಳದಿಂದ ೫೫೦ ಕೋಟಿ ರೂಪಾಯಿಗಳು ಮಾತ್ರ ಹೊಸ ಬಂಡವಾಳವೆಂದು ದೊರೆಯುವುದಾದರೆ ವರುಷಕ್ಕೆ ಸುಮಾರು ೨.೬% ರಷ್ಟು ಮಾತ್ರ ಉಳಿತಾಯವಾದಂತಾಯಿತು.

೩೭ ಸರಕಾರಿ ಉದ್ದಿಮೆಗಳನ್ನು ಪರಿಶೀಲಿಸಿದಾಗ ಲಾಭಾಂಶದ ಪ್ರಮಾಣವೂ ಕಡಿಮೆಯಾದುದು ಕಂಡುಬಂದಿದೆ. ಬಂಡವಾಳ ವೆಚ್ಚವನ್ನೊಳಗೊಂಡು ಈ ಉದ್ದಿಮೆಗಳಿಂದ ೧೯೫೯-೬೦ ರಲ್ಲಿ ೬.೧೩ ಕೋಟಿ ರೂಪಾಯಿಗಳು ಲಾಭವಾಗಿದ್ದರೆ ೧೯೬೦-

೬೧ ರಲ್ಲಿ ಅದು ೭.೦೧ ಕೋಟಿ ರೂಪಾಯಿಗಳಿಗಿಳಿಯಿತು. ಇದು ಬಂಡವಾಳದ ಮೇಲೆ ಅನುಕ್ರಮವಾಗಿ ೩.೨% ಹಾಗು ೨.೪% ಆಗುತ್ತದೆ.

## ಬಂಡವಾಳನಿರ್ಮಾಣದ ಅಸಾಮರ್ಥ್ಯ

ಕೇಂದ್ರ ಸರಕಾರದ ೨೩ ಔದ್ಯಮಿಕ ಹಾಗು ವ್ಯಾಪಾರಿ ಸಂಸ್ಥೆಗಳ ಕಾರ್ಯಸಮೀಕ್ಷೆಯ ಪ್ರಥಮ ವಾರ್ಷಿಕ ವರದಿಯು ಕೆಲವು ಸ್ವಾರಸ್ಯಕರ ಸಂಗತಿಗಳನ್ನು ಹೊರಗೆಡಹಿದೆ. ಈ ೨೩ ಸಂಸ್ಥೆಗಳಲ್ಲಿ ಆರು ತಮ್ಮ ಶೇರುಬಂಡವಾಳದ ಮೇಲೆ ೩.೩% ಕ್ಕಿಂತ ಕಡಿಮೆ ಲಾಭಗಳಿಸಿದರೆ, ಮೂರು ೩.೩% ದಿಂದ ೫.೨%; ಎಂಟು ೫.೨% ಗಿಂತ ತುಸು ಹೆಚ್ಚು ಲಾಭ ಪಡೆದುವು. ಆದರೆ ಅದೇ ಖಾಸಗಿ ವಲಯದಲ್ಲಿಯ ಉದ್ದಿಮೆಗಳು ಇದೇ ಅವಧಿಯಲ್ಲಿ ಕರ ಕೊಡುವ ಮೊದಲು ಪಡೆದ ಲಾಭಾಂಶ ೨೭.೪% ಆಗುತ್ತದೆ. ಸರಕಾರಿ ಉದ್ದಿಮೆಗಳಿಗೂ ಖಾಸಗಿ ಉದ್ದಿಮೆಗಳಿಗೂ ಲಾಭ ಗಳಿಕೆಯಲ್ಲಿ ಹಾಗು ತನ್ಮೂಲಕ ಬಂಡವಾಳನಿರ್ಮಾಣದಲ್ಲಿ ಇರುವ ಅಂತರ ಇಲ್ಲಿ ಸ್ಪಷ್ಟವಾಗಿ ವ್ಯಕ್ತವಾಗುತ್ತದೆ.

ಸರಕಾರಿ ವಲಯದಲ್ಲಿಯ ಉದ್ದಿಮೆಗಳು ವ್ಯಕ್ತಪಡಿಸುವ ಬಂಡವಾಳನಿರ್ಮಾಣದ ಈ ಅಸಾಮರ್ಥ್ಯದಿಂದಾಗಿ ಸರಕಾರ ಅವುಗಳಿಗೆ ಸಹಾಯಧನವನ್ನು ಹಾಗು ವೆಚ್ಚಗಳಲ್ಲಿಯ ಕೆಲವಂಶವನ್ನು ಕೊಡಬೇಕಾಗಿ ಬರುತ್ತದೆ. ವಿಶಾಖಾಪಟ್ಟಣದಲ್ಲಿಯ ಹಡಗು ಕಟ್ಟುವ ನೆಲೆಯೇ ಇದಕ್ಕೆ ದೊಡ್ಡ ಉದಾಹರಣೆ. ಹಿಂದುಸ್ತಾನ ಆ್ಯಂಟಿಬಯೋಟಿಕ್ಸ್ ಹಾಗು ಹಿಂದುಸ್ತಾನ ವಿಮಾನ ನಿರ್ಮಾಣ ಕಾರಖಾನೆಗಳಲ್ಲಿ ತನಗೆ ಸಲ್ಲಬೇಕಾದ ಡಿವಿಡೆಂಡುಗಳನ್ನು ಪಡೆಯದೆಯೆ ಕೇಂದ್ರ ಸರಕಾರ ಸಹಾಯ ನೀಡಬೇಕಾಗಿ ಬಂದಿದೆ. ಕೇಂದ್ರ ಸರಕಾರದ ಬಂಡವಾಳ ಅತಿ ಹೆಚ್ಚಾಗಿ ತೊಡಗಿಸಲ್ಪಟ್ಟಿರುವ ಮೂರು ಉಕ್ಕಿನ ಕಾರಖಾನೆಗಳಿಗಾಗಿ ಅದು ೧೯೬೨ ರ ಮಾರ್ಚ್ ೩೧ ರ ವರೆಗೆ ೩೦೦ ಕೋಟಿ ರೂಪಾಯಿಗಳಷ್ಟು ಬಡ್ಡಿ ರಹಿತ ಸಾಲವನ್ನಿತ್ತಿದೆ. ಇವುಗಳನ್ನು ನಡೆಸುತ್ತಿರುವ ಸಂಸ್ಥೆಯಾದ ಹಿಂದುಸ್ತಾನ ಸ್ಟೀಲ್ ಲಿಮಿಟೆಡ್‌ಗೆ ತನ್ನ ಬಂಡವಾಳ ವೆಚ್ಚವನ್ನು ಕೆಲ ವರುಷಗಳ ವರೆಗಾದರೂ ತೂಗಿಸಲು ಸಾಧ್ಯವಾಗುತ್ತಿಲ್ಲವೆಂಬುದನ್ನೇ ಸರಕಾರದ ಈ 'ಔದಾರ್ಯ' ತೋರ್ಪಡಿಸುತ್ತದೆ. ಈ ೩೦೦ ಕೋಟಿಯ ಮೇಲೆ ಸರಕಾರಕ್ಕೆ ಸಾಮಾನ್ಯವಾದ ೬% ದರದಂತೆ ಬರಬೇಕಾಗಿದ್ದ ೧೮ ಕೋಟಿ ರೂಪಾಯಿ ಬಡ್ಡಿಯ ಭಾರವನ್ನು ಸಾಮಾನ್ಯ ಜನ ಒಂದಿಲ್ಲೊಂದು ರೂಪದಲ್ಲಿ ಹೊರಲೇಬೇಕಲ್ಲವೆ?

ಖಾಸಗಿ ವಲಯದಲ್ಲಿನ ಉದ್ದಿಮೆಗಳ ಪ್ರಮಾಣದಲ್ಲಲ್ಲದಿದ್ದರೂ ಸರಕಾರಿ ಉದ್ದಿಮೆಗಳು ವರುಷಕ್ಕೆ ಕನಿಷ್ಠ ೮ ರಿಂದ ೧೦% ಲಾಭವನ್ನು ತೊಡಗಿಸಲಾದ ಬಂಡವಾಳದ ಮೇಲೆ ತೋರಿಸಬೇಕೆಂದು ಅಪೇಕ್ಷಿಸಿದರೆ ತಪ್ಪಾಗಲಾರದು. ಇಷ್ಟಾದರೆ ವರುಷವೊಂದಕ್ಕೆ ೪೦೦ ರಿಂದ ೫೦೦ ಕೋಟಿ ಬಂಡವಾಳ ನಿರ್ಮಾಣವಾಗಿ ಐದು ವರುಷಗಳಲ್ಲಿ ೨,೦೦೦ ದಿಂದ ೨,೫೦೦ ಕೋಟಿ ರೂಪಾಯಿಗಳಷ್ಟು ಬಂಡವಾಳ ದೊರೆಯಬಹುದು. ಮೂರನೆಯ ಯೋಜನೆಯಲ್ಲಿ ದೊರೆಯಬೇಕೆಂದು ಯೋಜನಾ ಆಯೋಗ ಲೆಕ್ಕ ಹಾಕಿರುವ ೫೫೦ ಕೋಟಿ ರೂಪಾಯಿಗಳು ಎಷ್ಟು ಮಾತ್ರಕ್ಕೂ ಸಾಲದು.

ಸರಕಾರಿ ವಲಯದಲ್ಲಿಯ ಉದ್ದಿಮೆಗಳಿಂದ ಲಾಭಾಂಶ ಇಷ್ಟೊಂದು ಕಡಿಮೆಯಾಗಿರುವುದಕ್ಕೆ ಅವುಗಳ ಉತ್ಪಾದನೆಗಳ ಮಾರಾಟದ ಬೆಲೆಯನ್ನು ಉದ್ದೇಶಪೂರ್ವಕವಾಗಿಯೇ ಕಡಿಮೆಯಿರಿಸಿರುವುದೂ ಒಂದು ಮಹತ್ವದ ಕಾರಣವೆನಿಸಿದೆ. ಹಿಂದುಸ್ತಾನ ಮಶಿನ್‌ಟೂಲ್ಸ್‌ನಲ್ಲಿ ಉತ್ಪಾದಿಸಲಾದ ವಸ್ತುಗಳನ್ನು ಅವೇ ತರಗತಿಯ ಹಾಗು ಅವೇ ಮೌಲ್ಯದ ವಿದೇಶಿ ವಸ್ತುಗಳಿಗಿಂತ ೧೦ ರಿಂದ ೨೦% ಕಡಿಮೆ ಬೆಲೆಗೆ ಮಾರಲಾಗುತ್ತಿದೆ. ಹಿಂದುಸ್ತಾನ ಆ್ಯಂಟಿಬಯೋಟಿಕ್ಸ್‌ನ ಉತ್ಪಾದನೆಗಳನ್ನು ಪೇಟೆಯ ಬೆಲೆಗಿಂತ ೧೫% ರಷ್ಟು ಕಡಿಮೆ ದರಕ್ಕೆ ಮಾರಲಾಗುತ್ತಿದೆ. ಉತ್ಪಾದಿತ ವಸ್ತುಗಳ ಬೆಲೆಯನ್ನು ಯಾವಾಗಲೂ ಅವುಗಳ ಉತ್ಪಾದನಾ ವೆಚ್ಚದ ಮೇಲೆಯೇ ನಿರ್ಧರಿಸಬೇಕು ಎಂಬುದನ್ನು ಸರಕಾರಿ ಉದ್ದಿಮೆಗಳು ಮರೆತಂತೆ ತೋರುತ್ತದೆ. ಇತರ ಅಂಶಗಳಿಗಿಂತ ಈ ಅಂಶ ಬೆಲೆ ನಿರ್ಧಾರದಲ್ಲಿ ಮಹತ್ವದ ಪಾತ್ರವನ್ನಾಡಬೇಕಾದುದು ಯೋಗ್ಯ.

## ವ್ಯಾಪಾರೀ ಅಂಶಗಳಿಗೆ ಗಮನಬೇಕು

ಇದಲ್ಲದೆ ಸರಕಾರಿ ವಲಯದಲ್ಲಿಯ ಉದ್ದಿಮೆಗಳಲ್ಲಿ ಉತ್ಪಾದನಾ ವೆಚ್ಚವನ್ನು ಹೆಚ್ಚಿಸುವಂತಹ ಇನ್ನೂ ಕೆಲ ಸಂಗತಿಗಳಿವೆ. ಕಾರ್ಮಿಕ ಕಲ್ಯಾಣಕ್ಕಾಗಿ ಸರಕಾರಿ ಉದ್ದಿಮೆಗಳು ಖಾಸಗಿ ಉದ್ದಿಮೆಗಳಿಗಿಂತ ಬಹಳ ಹೆಚ್ಚು ವ್ಯಯ ಮಾಡುತ್ತವೆ. ಹಾಗು ಅವಶ್ಯಕತೆಗಿಂತ ಹೆಚ್ಚು ಜನ ಕೆಲಸಗಾರರನ್ನು ನಿಯಮಿಸಿಕೊಳ್ಳುವುದೂ ಕಂಡುಬಂದಿದೆ. ಸಿಂದ್ರಿ ಗೊಬ್ಬರ ಕಾರಖಾನೆ, ಬೆಂಗಳೂರಿನ ಟೆಲಿಫೋನ್ ಕಾರಖಾನೆ ಹಾಗು ದಿಲ್ಲಿಯ ಅಶೋಕ ಹೋಟೆಲ್ ಅವಶ್ಯವಿದ್ದುದಕ್ಕಿಂತ ಬಹಳ ಹೆಚ್ಚು ಜನ ಕಾರ್ಮಿಕರನ್ನು ಹೊಂದಿವೆ. ಇಂಡಿಯನ್ ಏರ್‌ಲೈನ್ಸ್ ಕಾರ್ಪೋರೇಶನ್ನಿನ ಇಂಜನಿಯರಿಂಗ್ ಹಾಗು ಸ್ಟೋರ್ಸ್ ವಿಭಾಗವೊಂದರಲ್ಲಿಯೇ ೭೦೦ ಜನ ಅನಾವಶ್ಯಕ ಕೆಲಸಗಾರರಿದ್ದುದು ಇತ್ತೀಚೆಗೆ ಬಯಲಿಗೆ ಬಂದಿದೆ. ವಿಶಾಖಾಪಟ್ಟಣದ ಹಡಗು ಕಟ್ಟುವ ನೆಲೆಯಲ್ಲಂತೂ—ಅಲ್ಲಿನ ಕಾರ್ಮಿಕ ಸಂಖ್ಯೆಗೆ ಹಾಗು ಅದರ ಉತ್ಪಾದನಾಸಾಮರ್ಥ್ಯಕ್ಕೆ ಸಂಬಂಧವೇ ಇರದಷ್ಟು ಹೆಚ್ಚು ಜನರನ್ನು ನಿಯಮಿಸಿಕೊಳ್ಳಲಾಗಿದೆ.

ಕಾರ್ಮಿಕ ಕಲ್ಯಾಣಕ್ಕಾಗಿ ಖಾಸಗಿ ಉದ್ದಿಮೆಗಳಿಗಿಂತ ಸರಕಾರಿ ಉದ್ದಿಮೆಗಳು ಹೆಚ್ಚು ವೆಚ್ಚ ಮಾಡುತ್ತಿರುವುದನ್ನು ಸಮರ್ಥಿಸಬಹುದಾದರೂ ಅವು ಉದ್ದಿಮೆಯ ವ್ಯಾಪಾರೀ ಅಂಶವನ್ನೇ ಕಡೆಗಣಿಸಿರುವುದು ಮಾತ್ರ ಎಷ್ಟೂ ಸಮರ್ಥನೀಯವೆನಿಸದು. ಸಂಸತ್ತು ಹಾಗು ರಾಜ್ಯಗಳ ವಿಧಾನಮಂಡಳಗಳ ಪಬ್ಲಿಕ್ ಅಕೌಂಟ್ಸ್ ಕಮಿಟಿಗಳು ಮತ್ತು ಇನ್ನೂ ಅನೇಕ ವಿಚಾರಣಾಸಮಿತಿಗಳು ಈ ಅಂಶಗಳನ್ನು ವರುಷವರುಷವೂ ಪದೇ ಪದೇ ಎತ್ತಿ ತೋರುತ್ತಿದ್ದರೂ ಪರಿಸ್ಥಿತಿಯಲ್ಲಿ ಸುಧಾರಣೆ ಏಕಾಗುತ್ತಿಲ್ಲವೆಂಬುದು ಆಶ್ಚರ್ಯಕರ.

ತಮ್ಮ ಬಂಡವಾಳದ ಮೇಲೆ ವರುಷಕ್ಕೆ ೧೦ ರಿಂದ ೧೨% ಲಾಭಾಂಶ ತೋರಿಸಿ ಹೊಸ ಬಂಡವಾಳನಿರ್ಮಾಣ ಮಾಡದಿದ್ದಲ್ಲಿ ಸರಕಾರಿ ಉದ್ದಿಮೆಗಳು ಸಾರ್ವಜನಿಕರಿಗೆ ಅನ್ಯಾಯ ಬಗೆದಂತಾಗುವುದಿಲ್ಲವೆ ?

ಬಹುಶಃ ಕಮ್ಯೂನಿಸ್ಟ್ ದೇಶಗಳನ್ನುಳಿದು ಇತರತ್ರ ಎಲ್ಲೆಡೆಗಳಲ್ಲೂ ಉದ್ದಿಮೆಗಳಲ್ಲಿ ಅನುಸರಿಸಲಾಗುವ ಸಾಮಾನ್ಯ ವ್ಯಾಪಾರಿ ಹಾಗು ಮೌಲ್ಯಮಾಪನ ತತ್ತ್ವಗಳನ್ನೇ ನಮ್ಮ ಸರಕಾರಿ ಉದ್ದಿಮೆಗಳಲ್ಲೂ ಅನುಸರಿಸಿದರೆ ಈ ಸಮಸ್ಯೆ ಬಹುಮಟ್ಟಿಗೆ ನಿವಾರಣೆಯಾಗಬಹುದು. ಉದಾಹರಣೆಗೆಂದು ಬೇಕಾದರೆ ಬ್ರಿಟನ್ನಿನಲ್ಲಿಯ ಸರಕಾರಿ ಕಾರ್ಪೋರೇಶನ್ನುಗಳನ್ನು ನೋಡಬಹುದು. ಅಲ್ಲಿ ಅವು ರಾಷ್ಟ್ರಕ್ಕಾಗಿ ಬಂಡವಾಳ ನಿರ್ಮಿಸುವಲ್ಲಿ ಬಹು ಮಹತ್ವದ ಪಾತ್ರವನ್ನು ನಿರ್ವಹಿಸುತ್ತವೆ. ಅದಕ್ಕೆ ಕಾರಣ ಉತ್ಪಾದನೆ, ವ್ಯವಸ್ಥಾಪನೆ, ಮಾರಾಟ ಮತ್ತು ಮೌಲ್ಯಮಾಪನಗಳಲ್ಲಿ ಖಾಸಗಿ ಉದ್ದಿಮೆಗಳಲ್ಲಿ ಅನುಸರಿಸಲಾಗುವ ತತ್ತ್ವಗಳನ್ನೇ ಅಲ್ಲಿಯೂ ಅನುಸರಿಸುತ್ತಿರುವುದೇ ಆಗಿದೆ. ಹಾಗಾದಾಗಲೇ ನಮ್ಮ ಸರಕಾರಿ ಉದ್ದಿಮೆಗಳು ನಮ್ಮ ನಿಜವಾದ ಆರ್ಥಿಕ ಅಭಿವೃದ್ಧಿಗೆ ಸುಭದ್ರ ನೆಲೆಯೊದಗಿಸಬಲ್ಲವು.

ನ್ಯೂಟ್ರನ್ನಿಗಿಂತ ದೇವಿಕಾ ಮನೋಹರಿಯೆಂದು ನೀವು ಹೇಳಿದರೆ ನಾವು ಅದನ್ನು ಒಪ್ಪಿಕೊಳ್ಳಲು ಸಿದ್ಧರಿದ್ದೇವೆ.

ಆದರೆ, ಸಿಹಿಯ ಅನೇಕ ನಮೂನೆಗಳನ್ನು ತುಲನೆ ಮಾಡುವಾಗ 'ದೇವಿಕಾ' ಚಿತ್ರಪ್ರಪಂಚದ ಸುಂದರ ತಾರೆ, ಹೇಳುವದೇನಂದರೆ:

"ನ್ಯೂಟ್ರನ್ ಮಿಠಾಯಿಗಳು ಅತ್ಯುತ್ತಮವಾದವು. ಉತ್ಕೃಷ್ಟ ಹೆಣ್ಣಿನ ಪರಿಮಳವುಳ್ಳ ಮತ್ತು ಕ್ರೀಮೀ ಟಾಫಿಗಳನ್ನು ನಾನು ಪ್ರೀತಿಸುತ್ತೇನೆ. ನ್ಯೂಟ್ರನನ್ನು, ಯಾವ ಸಮಯಕ್ಕೂ ಎಲ್ಲ ಕಾಲಕ್ಕೂ ನನಗೆ ಕೊಡಿರಿ"





ದೀಪಾವಳಿಯು ಸರ್ವರಿಗೂ ಸುಖದಾಯಕ-ವಾಗಲಿ........







ಒಳ್ಳೇ ರುಚಿಗಾಗಿ...

...ನ್ಯೂಟ್ರನ್ ಕೊಳ್ಳಿರಿ

ನ್ಯೂಟ್ರನ್ ಕನ್‌ಫೆಕ್ಶನರಿ ಕಂಪನಿ ಪ್ರಾ. ಲಿ.
ಚಿತ್ತೂರ .... ..... (ಆಂ.ಪ್ರ.)

---

ಕುಶಲ ಕೈಗಾರಿಕಾಗ್ರಾಹಕರೆಲ್ಲರಿಗೂ ನಮ್ಮ ದೀಪಾವಳಿಯ ಶುಭಾಶಯಗಳು



Shows without Belt Guard

ಯಾವುದೇ ಕುಶಲ ಕೈಗಾರಿಕೆಗಾಗಲಿ ಉತ್ತಮ ದರ್ಜೆಯ

# ಮೆಷಿನರಿ ಉಪಕರಣಗಳು

ಬೇಕೇಬೇಕು

ನಿಮ್ಮ ಬೇಡಿಕೆಗಳು ಯಾವುದೇ ಆಗಿರಲಿ

ಲೀಡ್ಸ್:—

- ಡ್ರಿಲ್ಲಿಂಗ್ ಮೆಷಿನ್ಸ್
- ಸ್ಲಾಟಿಂಗ್ ಮೆಷಿನ್ಸ್
- ಮಿಲ್ಲಿಂಗ್ ಮೆಷಿನ್ಸ್
- ಹೈ ಪ್ರೆಷರ ಬ್ಲೋವರ್ಸ್
- ಹ್ಯಾಕ್ ಸೂಯಿಂಗ್ ಮೆಷಿನ್ಸ್
- ಷೀಟ್ ಮೆಟಲ್ ಮೆಷಿನರಿ
- ವುಡ್ ವರ್ಕಿಂಗ್ ಮೆಷಿನ್ಸ್

— ಇತ್ಯಾದಿಗಳಿಗೆ ದಯವಿಟ್ಟು ನಮ್ಮಲ್ಲಿ ಸಂಪರ್ಕವಿಡಿರಿ. —

# ವಿ. ಆರ್. ಅಂಡ್ ಸನ್ಸ್

ಮೆಷಿನರಿ ಮತ್ತು ಉಪಕರಣಗಳ ಮಾರಾಟಗಾರರು

ಶ್ರೀ ನರಸಿಂಹರಾಜಾ ರಸ್ತೆ . . ಬೆಂಗಳೂರು - 2

ಲೇಖಕರು .

ಶ್ರೀ ಗಿರೀಶ ಕಾರ್ನಾಡ

# ಇಂಗ್ಲಂಡಿನ ಇತ್ತೀಚಿನ ನಾಟಕ ಸಾಹಿತ್ಯ

ಇಂಗ್ಲಂಡದಲ್ಲಿ ಮೊದಲು ನಾಟಕಗಳನ್ನು ಪ್ರಯೋಗಿಸಿ ನಂತರ ಆ ಸಾಹಿತ್ಯವನ್ನು ಪ್ರಕಟಿಸುತ್ತಾರೆ. ಹೀಗಾಗಿ ಅಲ್ಲಿ ನಾಟಕಸಾಹಿತ್ಯ ಪ್ರಯೋಗಗಳಿಂದಲೇ ಬೆಳೆದುಬರುತ್ತಿದೆ. ಸಮಾಜದ ವೈಷಮ್ಯವನ್ನು ಚಿತ್ರಿಸುವ ಹಲವಾರು ನಾಟಕಗಳು ಇಂದು ಪ್ರಯೋಗಿಸಲ್ಪಡುತ್ತಿವೆ. ವಾದ–ವಿವಾದಗಳೂ ನಡೆಯುತ್ತಿವೆ. ಆ ದೇಶದಲ್ಲಿ ಮೂರು ವರುಷ ಕಾಲ ಇದ್ದುಬಂದ ಲೇಖಕರು ಇಂಗ್ಲಂಡಿನ ಈಚಿನ ನಾಟಕ ಸಾಹಿತ್ಯದ ಒಂದು ಚಿತ್ರವನ್ನು ಇಲ್ಲಿ ಕೊಟ್ಟಿದ್ದಾರೆ.

ಲಂಡನ "ವೆಸ್ಟ ಎಂಡ" ದಲ್ಲಿ ಕಾಲಿಟ್ಟರೆ, ಯಾವ ನಾಟಕರಸಿಕನಿಗೂ ಆನಂದವಾಗಬೇಕು. ರಾಜಮಾರ್ಗದ ಎರಡೂ ಬದಿಗಳಲ್ಲಿ ಸಾಲಾಗಿ ನಿಂತ ನಾಟ್ಯಗೃಹಗಳಲ್ಲಿ ಶೇಕ್ಸಪಿಯರನಿಂದ ಹಿಡಿದು ಎಲಿಯಟ್ಟನ ವರೆಗಿನ ನಾಲ್ಕು ನೂರು ವರುಷಗಳಲ್ಲಿ ಹುಟ್ಟಿದ ನಾಟಕಕಾರರ ವಿವಿಧ ಕೃತಿಗಳು ತುಂಬಿದ ಮನೆಗಳಿಗೆ ಆಡುತ್ತಿವೆ. ಒಂದು ನಾಟಕ ಗೃಹದಲ್ಲಿ The Representative ಎಂಬ ವಿವಾದಜನಕ ಜರ್ಮನ ನಾಟಕದ ಭಾಷಾಂತರ ನಡೆದಿದ್ದರೆ, ಇನ್ನೊಂದರಲ್ಲಿ ಬ್ರೆಖ್ಟನ ಸಂಗೀತಿಕೆಯೊಂದು. ಮತ್ತೊಂದರಲ್ಲಿ "ಶಾ" ನ Pygmalin ( ಪಿಗ್ಮಲಿಯನ್ ) ನಾಟಕದ ಆಧಾರದಿಂದ ಬರೆದ "ಮಾಯ ಫೆಅರ ಲೇಡಿ" ( My Fair -Lady ) ಆರು ವರುಷಗಳ ವರೆಗೆ ನಡೆದಿದ್ದರೆ. ಇನ್ನೊಂದೆಡೆಗೆ ಎಗಾಥಾ ಕ್ರಿಸ್ತಿ ಬರೆದ "ಮೌಸಟ್ರೆಪ" ( Mouse trap ) ನಾಟಕ ಹದಿನೆರಡನೆಯ ವರುಷದಲ್ಲಿ ಕಾಲಿಟ್ಟಿದೆ. ಲಂಡನ್ನಿನ ರಂಗಭೂಮಿಯ ಮೇಲೆ ಎಂದಿನ ವೈಭವ ಇಂದೂ ಕಾಣುತ್ತಿದೆ.

ಆದರೆ ರಂಗಭೂಮಿಯ ಅತ್ತ ನಾಟಕ ಸಾಹಿತ್ಯ ನೋಡಿದಾಗ ಮಾತ್ರ ಕಣ್ಣಿಗೆ ಕಾಣುವದು ಅಲ್ಲಿಯ ಅಸಮಾಧಾನ ಮಾತ್ರ, ಈ ವಿರೋಧಾಭಾಸ ಏಕೆ ಎಂಬ ಪ್ರಶ್ನೆಯನ್ನು ಉತ್ತರಿಸಲು ಈಗ ಸ್ಥಳ ಕಾಲಗಳಿಲ್ಲದಿದ್ದರೂ, ಈ ಅಸಮಾಧಾನದ ಪರಿಶೀಲನ ಮನೋರಂಜಕವಾಗಬಹುದೇನೋ !

ಇಂಗ್ಲೀಷ ನಾಟಕ ಸಾಹಿತ್ಯದ ಕಳೆದ ಹದಿನೈದು ವರುಷಗಳ ಪ್ರಗತಿಯನ್ನು ಪರಿಶೀಲಿಸಿದಾಗ ಮೊದಲು ಕಣ್ಣಿಗೆ ಕಟ್ಟುವ ಕೃತಿ ಎಂದರೆ ಜಾನ ಓಸಬೋರ್ನ ( Jon Osborne ) ನು ಬರೆದ " ಲುಕ ಬ್ಯಾಕ ಇನ್ ಎಂಗರ" (Look back in Anger ರೊಚ್ಚಿನಿಂದ ಹಿಂದೆ ನೋಡು ) ಎಂಬ ನಾಟಕ.

ನಾನು ಇಂಗ್ಲಂಡಿಗೆ ಹೋಗುವ ಮೊದಲೇ ಭಾರತದಲ್ಲಿ ಈ ನಾಟಕವನ್ನು ಓದಿದ್ದೆ. ಆಗ ಅದು "ಅಷ್ಟೇನೂ ಕೆಟ್ಟದಿಲ್ಲ" ಎನಿಸಿದ್ದರೂ ಅದರಲ್ಲಿ ಯುಗಪ್ರವರ್ತಕವಾದಂಥ ಯಾವ ಗುಣಗಳನ್ನೂ ಕಂಡಿದ್ದಿಲ್ಲ. ಅದೇ ನಾಟಕವನ್ನು ಇಂಗ್ಲಂಡಿನಲ್ಲಿ ಎರಡು ವರುಷ ಇದ್ದು ಅಲ್ಲಿಯ ಸಾಮಾಜಿಕ ಪರಿಸ್ಥಿತಿಯನ್ನರಿತು ಕಂಡಾಗ ಅದರ ಮಹತ್ವ ಮನದಟ್ಟಾಯಿತು. ಈ ಎರಡು 'ರಸಾನುಭವಗಳಲ್ಲಿದ್ದ ವ್ಯತ್ಯಾಸದಲ್ಲೇ ಇಂದಿನ ಇಂಗ್ಲಿಷರಂಗ ಈಗ ಸಾಹಿತ್ಯದ ಯಶಸ್ಸಿನ ಬೀಜವನ್ನೂ ಹಾಗೆಯೇ ಅದರ ಅಯಶಸ್ಸಿನ ಕಾರಣಗಳನ್ನೂ ಕಾಣಬಹುದೇನೋ.

'Look back in Anger' ಆರಂಭಿಸಿದ ಸಾಹಿತ್ಯಿಕ ಕ್ರಾಂತಿಯ ಅರ್ಥವಾಗಬೇಕಾದರೆ ನಾವು ಮೊದಲು ಇಂಗ್ಲಿಷ ಸಮಾಜದತ್ತ ದೃಷ್ಟಿಹಾಕಬೇಕು. ಆಗ ಅಲ್ಲಿ ಕಾಣುವ ವೈಶಿಷ್ಟ್ಯ ಎಂದರೆ ಆ ಸಮಾಜದಲ್ಲಿಯ ವರ್ಗಭೇದ. "ಮೇಲು ವರ್ಗ" ( ಇಲ್ಲವೆ ಮಧ್ಯಮ ವರ್ಗ ) ಮತ್ತು "ಶ್ರಮಿಕ ವರ್ಗ" ಈ ಎರಡು ವರ್ಗಗಳಲ್ಲಿ ಈ ಸಮಾಜ ಒಡೆದುಹೋಗಿದೆ. ಇಂಗ್ಲಂಡಿನ ಕಳೆದ ನೂರು ವರ್ಷಗಳ ಇತಿಹಾಸ ಈ ವರ್ಗಭೇದದಿಂದುಂಟಾದ ಜಗಳಗಳಿಂದ ತುಂಬಿ ಹೋಗಿದೆ.

## ಸಮಾಜಭಿನ್ನತೆಯ ಪರಿಣಾಮ

ಈ ಭಿನ್ನತೆಯ ತಳಹದಿಯಾದರೂ ಏನು ಎಂಬ ಪ್ರಶ್ನೆ ಏಳುತ್ತದೆ. ಇಪ್ಪತ್ತೈದು ವರುಷಗಳ ಹಿಂದಿನ ವರೆಗೆ ಈ ಭೇದ ಮುಖ್ಯವಾಗಿ ಸಂಪತ್ತಿನ ಮೇಲೆ ಆಧಾರಿಸಿದ್ದುದಾಗಿತ್ತು. ಮೇಲುವರ್ಗದವರು ಶ್ರೀಮಂತರು! ಶ್ರಮಿಕರು ಬಡವರು! ಭೇದ ಸ್ಪಷ್ಟವಾಗಿತ್ತು. ಆದರೆ ಎರಡನೇ ಮಹಾಯುದ್ಧದ ನಂತರದ ಇಂಗ್ಲಂಡಿನಲ್ಲಿ ಸಮಾಜವಾದೀ ಸರಕಾರ ಬಂದಂದಿನಿಂದ ಶ್ರಮಿಕರ ಬಡತನವೂ ಕಡಿಮೆಯಾಯಿತು. ಈಗ ಶ್ರಮಿಕ ಮನೆಗಳಲ್ಲಿ ಟೆಲಿವ್ಹಿಜನ ಸೆಟ್ಟು ಬಂದಿವೆ. ಕಾರುಗಳು ಬಂದಿವೆ. ಅದರೊಡನೆ ಶನಿವಾರ-ರವಿವಾರದ ವಾರಾಂತ್ಯದ ಸೂಟಿಯಲ್ಲಿ ಸಮುದ್ರತೀರಕ್ಕೋ ಬೇರೆಲ್ಲಿಗೋ ವಿಹಾರಕ್ಕಾಗಿ ಹೋಗುವ ಸಾಮರ್ಥ್ಯವೂ ಬಂದಿದೆ.

ಆದರೆ ವರ್ಗಭೇದ ಮಾಯವಾಗಿಲ್ಲ !

ಅಷ್ಟೇ ಅಲ್ಲ, ಸಂಪತ್ತಿನ ವಿಷಮತೆ ಕಡಿಮೆಯಾದಂತೆ ಈ ಭೇದ ಸಮಾಜದ ಎಲ್ಲ ಭಾಗಗಳಲ್ಲಿ ಹೇಗೆ ಅಡಗಿಕೊಂಡಿದೆ ಎಂಬ ಮಾತು ಸ್ಪಷ್ಟವಾಗಹತ್ತಿದೆ.

ಈ ವರ್ಗಗಳ ರೀತಿ ನಡತೆಗಳನ್ನೇ ನೋಡಿದರೆ, ಅಲ್ಲಿ ವಿಭಿನ್ನತೆ ಕಾಣುತ್ತದೆ. ಚಹ ಮಾಡುವಾಗ ಕಪ್ಪಿನಲ್ಲಿ ಮೊದಲು ಹಾಲು ಹಾಕಿ ಆ ಮೇಲೆ ಚಹ ಸುರಿಯುವದು ಶ್ರಮಿಕ ವರ್ಗದ ಪದ್ಧತಿಯಾಗಿದ್ದರೆ, ಮೇಲು ವರ್ಗದ ಪದ್ಧತಿ ಅದರ ವಿರುದ್ಧ ! ಮದ್ಯಪಾನ ಮಾಡುವ ಮೊದಲು "ಚಿಅರ್ಸ" ಎಂದು ಅಭಿವಂದಿಸುವದು ಶ್ರಮಿಕ ವರ್ಗದ ಲಕ್ಷಣ.

ಶಿಕ್ಷಣ ಕ್ಷೇತ್ರದಲ್ಲೂ ಈ ಭೇದ ಹೊಕ್ಕಿದೆ. ಧನಿಕರಿಗಾಗಿ "ಪಬ್ಲಿಕ" ಶಾಲೆಗಳು. ಇಲ್ಲಿ ವಿದ್ಯಾರ್ಥಿ ಹಾಸ್ಟೆಲಿನಲ್ಲಿದ್ದು, ಮೇಲು ವರ್ಗದ ರೀತಿಯ ಶಿಕ್ಷಣ ಪಡೆಯುತ್ತಾನೆ. ಅದೇ ರೀತಿ-ನಡತೆ ಕಲಿಯುತ್ತಾನೆ. ಮಕ್ಕಳ ಶಿಕ್ಷಣಕ್ಕಾಗಿ ಇಷ್ಟೊಂದು ರೊಕ್ಕ ಖರ್ಚು ಮಾಡಲಾಗದವರಿಗಾಗಿ "ಗ್ರಾಮರ" ಶಾಲೆಗಳು. "ಸೆಕೆಂಡರಿ ಮಾಡರ್ನ" ಸಾಲೆಗಳು. ಮನೆಯಲ್ಲೇ ಇದ್ದು, ದಿನ ನಿತ್ಯ ಸಾಲೆಗೆ ಹೋಗಿ ವಿದ್ಯಾರ್ಥಿ ಇಲ್ಲಿ ಶಿಕ್ಷಣ ಪಡೆಯುತ್ತಾನೆ. ಈ ಶಾಲೆಗಳ ಬಳಿಗೆ 'ಪಬ್ಲಿಕ್' ಸಾಲೆಗಳಷ್ಟು ರೊಕ್ಕವಿರದ್ದರಿಂದ, ಇಲ್ಲಿಯ ಶಿಕ್ಷಣ ಮಟ್ಟವು ಸ್ವಲ್ಪ ಕೆಳಗೇ !

ವಿಶ್ವವಿದ್ಯಾಲಯಗಳಲ್ಲೂ ಆಕ್ಸಫರ್ಡ-ಕೆಂಬ್ರಿಜ್ ಇವೆರಡು ಮೇಲು ವರ್ಗದ ಸೊತ್ತಾಗಿ "ಆಕ್ಸಬ್ರಿಜ" ಎಂಬ ಸನ್ಮಾನದ ಹೆಸರು ಪಡೆದಿದೆ. ಕೀಲ, ಲೀಡ್ಸ

ಇತ್ಯಾದಿ ಉಳಿದ ವಿಶ್ವವಿದ್ಯಾಲಯಗಳಿಗೆ ಕೆಂಪು ಇಟ್ಟಿಂಗಿ "ರೆಡ್ ಬ್ರಿಕ್" ( Red Brick ) ಎಂಬ ತಿರಸ್ಕಾರದ ಹೆಸರು. ಆಕ್ಸಬ್ರಿಜ ಮತ್ತು ರೆಡ್ ಬ್ರಿಕ್‌ಗಳ ನಡುವಿನ ವಾದ, ಪರಸ್ಪರ ಅವಹೇಳನೆ, ೧೯೫೦ ರ ದಶಕದಲ್ಲಿ ಗಟ್ಟಿಯಾಗಿದ್ದವು.

ಹೀಗೆ ಸಮಾಜದಲ್ಲೆಲ್ಲ ಈ "ಮೇಲುವರ್ಗ", ಶ್ರಮಿಕವರ್ಗಗಳ ದ್ವೈತ ಹರಡಿದ್ದರೂ, ಈ ವಾದದಿಂದ ಇಂಗ್ಲಿಷ ರಂಗಭೂಮಿ ಮೊನ್ನೆ ಮೊನ್ನೆಯ ವರೆಗೆ ದೂರವಾಗಿದ್ದಿತು. ನೊಎಲ ಕಾವರ್ಡ (Noel Coward), ಟೆರೆನ್ಸ ರೆಟಿಗನ (Terence Rattigan) ಮುಂತಾದ ನಾಟಕಕಾರರು ಕೇವಲ ಮೇಲುವರ್ಗದ ಜೀವನದ ಬಗ್ಗೆ ಮಾತ್ರ ನಾಟಕಗಳನ್ನು ಬರೆಯುತ್ತಿದ್ದರು. ಇಲ್ಲಿ ಕೆಳವರ್ಗದ ಪಾತ್ರಗಳು ಬಂದರೂ ಕೆಲಸದವನೆಂದೋ, ಶೋಫರನೆಂದೋ "ತಮಗೆ ತಕ್ಕ" ಸ್ಥಳದಲ್ಲೇ ಮೂಡಬೇಕು. ಶ್ರಮಿಕರ ಜೀವನಕ್ಕೆ ಇಂಗ್ಲಿಷ ರಂಗಭೂಮಿಯಮೇಲೆ ಸ್ಥಾನವೇ ಇರಲಿಲ್ಲ.

## ರಂಗಭೂಮಿಗೆ ಕೆಳವರ್ಗದ ಅರಿವು

ಈ ತರಹದ ಸಂಕುಚಿತತೆಯನ್ನು ಒಡೆದು ರಂಗಭೂಮಿಗೆ ಕೆಳವರ್ಗದ ಅರಿವನ್ನು ತಂದ ನಾಟಕ Look Back in Anger. ಜೊನ ಓಸಬೋರ್ನ ಈ ಒಂದು ಅರಿವನ್ನು ತಂದು ಮಾತ್ರ ತೃಪ್ತನಾಗಲಿಲ್ಲ, ಇಡಿಯ ವರ್ಗಭೇದದ ವಾದವನ್ನೇ ರಂಗದ ಮೇಲೆ ಬಿಚ್ಚಿ ಇಟ್ಟ.

ಈ ನಾಟಕದ ನಾಯಕ್ ಜಿಮ್ಮಿಪೋರ್ಟರ. ಇವನು ಶ್ರಮಿಕ ವರ್ಗದ ತರುಣ. "ಗ್ರಾಮರ" ಸಾಲೆಯ ವಿದ್ಯಾರ್ಥಿ. "ರೆಡಬ್ರಿಕ" ವಿದ್ಯಾಪೀಠವೊಂದರ ಪದವೀಧರ. ಇಡಿಯ ನಾಟಕ ಇವನ ಅಂತರಂಗದ ಕಳವಳದಿಂದುಂಟಾದ ಕಿರಿಚಾಟದಿಂದ ತುಂಬಿದೆ. ಮೇಲುವರ್ಗದ ಮೇಲೆ ತನ್ನ ಸೇಡನ್ನು ತೀರಿಸಿಕೊಳ್ಳಲಿಕ್ಕೆಯೇ ಎಂಬಂತೆ ಮೇಲುವರ್ಗದ ಹುಡಿಗೆಯನ್ನು ಮದುವೆಯಾಗಿದ್ದಾನೆ. ಅವಳ ಪ್ರೇಮವನ್ನು ಲೆಕ್ಕಿಸದೆ. ಅವಳನ್ನು ಅವಳ ವರ್ಗದ ಸಂಕೇತ ಎಂದೆಣಿಸಿ ಅವಳಮೇಲೆ ವಿಷ ಸುರಿಸುತ್ತಾನೆ. ಬಯ್ಯುತ್ತಾನೆ, ಹೀಯಾಳಿಸುತ್ತಾನೆ. ಇದಕ್ಕೆಲ್ಲ ಬೇಸತ್ತು ಅವಳು ಗರ್ಭವತಿಯಾಗಿದ್ದಾಗ ತವರುಮನೆಗೆ ಓಡಿ ಹೋದಾಗ, ಎಷ್ಟೂ ವಿಚಲಿತನಾಗದೆ ಜಿಮ್ಮಿ ಅವಳ ಮೇಲುವರ್ಗದ ಗೆಳತಿಯೊಬ್ಬಳನ್ನು ತನ್ನ ಒಡತಿಯಾಗಿ ಇಟ್ಟುಕೊಳ್ಳುತ್ತಾನೆ. ಮಧ್ಯಮ ವರ್ಗದೊಡನೆ ಅದರ ನೀತಿಮತ್ತೆಯನ್ನೂ ಧಿಕ್ಕರಿಸುತ್ತಾನೆ.

ನಾಟಕದ ಅಂತ್ಯ ಸದೋಷವಾಗಿದೆ. ಜಿಮ್ಮಿಯ ಹೆಂಡತಿಗೆ ಗರ್ಭಪಾತವಾಗುತ್ತದೆ. ಪರಿಣಾಮವಾಗಿ ಅವಳು ಬಂಜೆಯಾಗುತ್ತಾಳೆ. ಗಂಡನೆಡೆಗೆ ಮರಳಿ ಬರುತ್ತಾಳೆ. ಗರ್ಭಪಾತದಿಂದ ಅವಳಲ್ಲಿ ಉಂಟಾದ ವೇದನೆಯಲ್ಲಿ ತನ್ನ ವೇದನೆಯ ಪ್ರತಿಬಿಂಬ ಕಂಡು ಜಿಮ್ಮಿ ಅವಳನ್ನು ಪ್ರೀತಿಯಿಂದ ಬರಮಾಡಿಕೊಳ್ಳುತ್ತಾನೆ. ಮುಂದೆ ಅವರ ಜೀವನ ಸುಖಮಯವಾಗುತ್ತದೆ ಎಂಬ ಸೂಚನೆ ನಾಟಕದ ಕೊನೆಗೆ ಇದೆ. ಆದರೆ ಸಾಮಾಜಿಕ ವಿಷಮತೆಯಿಂದ ಜಿಮ್ಮಿಯ ಸಂಸಾರದಲ್ಲಿ ಉಂಟಾದ ಆವಿದ್ಧತೆಗೆ ವೈಯಕ್ತಿಕ ಅನುಭವದ ಉತ್ತರ ಸೂಚಿಸಿದ್ದರಿಂದ, ತಾನು ಕೇಳಿದ ಪ್ರಶ್ನೆಯನ್ನು ಎದುರಿಸದೆ ನಾಟಕಕಾರ ಪಾರಾಗಿದ್ದಾನೆ. "ಜಿಮ್ಮಿಯ ಸಂಸಾರವೇನೋ ಸುಖದಾಯಕವಾಯಿತು. ಆದರೆ ಅವನನ್ನು ಕಾಡಿದ ಸಾಮಾಜಿಕ ವೈಷಮ್ಯಕ್ಕೇನು ಉತ್ತರ?" ಎಂಬ ಪ್ರಶ್ನೆ ಹಾಗೆಯೇ ಉಳಿಯುತ್ತದೆ.

ಹೀಗಿದ್ದರೂ ನಾಟಕವನ್ನು ಲಂಡನ್ನಿನಲ್ಲಿ ಆಡಿದ ಮರುದಿನವೇ ಜಿಮ್ಮಿ ಪೋರ್ಟರ ಒಂದು ರಾಷ್ಟ್ರೀಯ ವ್ಯಕ್ತಿಯಾದ. ನಾಟಕದಲ್ಲಿ ನಿರೂಪಿತವಾದ ಅವನ ನಡತೆಯೆಲ್ಲ ಕೌತುಕಾಸ್ಪದವಲ್ಲ ಎಂದು ನಾಟಕಕಾರನೇ ಸೂಚಿಸಿದ್ದರೂ ಅವನ ಆಕ್ರಂದನ ಅಲ್ಲಿಯ ವರೆಗೆ ಹುದುಗಿದ್ದ ಸಾಮಾಜಿಕ ವೇದನೆಗೆ ಬಾಯಿಕೊಟ್ಟಿತು.

## ವರ್ಗವೈಷಮ್ಯ ಸಾಹಿತ್ಯದ ಪ್ರವಾಹ

ಅದರೊಡನೆ ಆಂಗ್ಲಸಾಹಿತ್ಯದಲ್ಲಿ ಆವೇಶದ ಹೊಸಗಾಳಿ ಬೀಸಿತು. ಈ ವರ್ಗವೈಷಮ್ಯವನ್ನು ಕುರಿತು ಬರೆದ ನಾಟಕಗಳ ಮತ್ತು ಕಾದಂಬರಿಗಳ ಪ್ರವಾಹವೇ ಆರಂಭವಾಯಿತೆನ್ನಬಹುದು. ಈ ನಾಟಕ-ಕಾದಂಬರಿಕಾರರ ಪೀಳಿಗೆಗೆ Angry young men "ರೊಚ್ಚಿಗೆದ್ದ ತರುಣರು" ಎಂಬ ಪದವಿಯೇ ದೊರೆಯಿತು.

ಈ ರೊಚ್ಚಿಗೆದ್ದ ತರುಣರ ಸಾಮಾಜಿಕ ವಿಶ್ಲೇಷಣೆ ವರ್ಗಭೇದದ ವಿಶ್ಲೇಷಣೆಗಷ್ಟೇ ಪರಿಮಿತವಾಗಿರಲಿಲ್ಲ. Look Back in Anger ದಲ್ಲಿ ಜಿಮ್ಮಿ ಪೋರ್ಟರನ ರೊಚ್ಚಿಗೆ ಈ ವೈಷಮ್ಯವಲ್ಲದೆ ಇನ್ನೂ ಹಲವಾರು ಕಾರಣಗಳಿವೆ. ಸಮಾಜವಾದದೊಡನೆ ಇಂಗ್ಲಂಡಿನಲ್ಲಿ ಬಂದ Welfare stateನಲ್ಲಿ ಸುಖಸಂಪತ್ತುಗಳಿದ್ದರೂ ತರುಣರಿಗೆ ಯಾವ ಧ್ಯೇಯಕ್ಕೂ ಆಸ್ಪದವಿಲ್ಲ. ಯಾವ ಹಿರಿಯ ಕಾರ್ಯಕ್ಕೂ ಆಸ್ಪದವಿಲ್ಲ. ಬರೇ ಯಾಂತ್ರಿಕ ಅಸ್ತಿತ್ವದ ಹೊರತು ಬೇರೆ ಯಾವ ವೈವಿಧ್ಯಪೂರ್ಣ ಜೀವನಕ್ಕೆ ಗತಿಯಿಲ್ಲ ಎಂಬ ಕಳವಳವೂ ಇದೆ.

ಇದೇ ಮುಖ್ಯ ಎಳೆಯನ್ನು ತೆಗೆದುಕೊಂಡು ಬೇರೆ ತರುಣ ನಾಟಕಕಾರರು ಹಲವಾರು ಮಾಲೆಗಳನ್ನು ಹೆಣೆದಿದ್ದಾರೆ. ಆರ್ನೋಲ್ಡ ವೆಸ್ಕರ (Arnld Wesker) ನಾಟಕಕಾರನ 'ಬೇರುಗಳು' "ರೂಟ್ಸ" (Roots) ಎಂಬ ನಾಟಕವನ್ನೇ ಉದಾಹರಣೆಗಾಗಿ ತೆಗೆದುಕೊಳ್ಳಬಹುದು.

ಕಲ್ಯಾಣ ರಾಷ್ಟ್ರ (Welfare State)ದ ಪರಿಣಾಮವಾಗಿ ಶ್ರಮಿಕರಿಗೂ ಟೆಲಿವಿಜನ್-ಕಾರುಗಳು ದೊರೆತಿವೆ. ಈ ಅನಪೇಕ್ಷಿತ "ವೈಭವ" ಅಫೀಮಿನಂತೆ ಶ್ರಮಿಕರನ್ನು ನಿದ್ರೆಗೊಳಿಸಿದೆ. ಹೀಗಾಗಿ ಶ್ರಮಿಕ ವರ್ಗಕ್ಕೂ ಒಂದು ವಿಶಿಷ್ಟ ಸಂಸ್ಕೃತಿ ಇದೆ. ಲಾವಣಿ, ಕುಣಿತಗಳಂಥ ಕಲಾಮಾರ್ಗಗಳಿವೆ. ಅವನ್ನಿನ್ನೂ ಬದುಕಿಸಬೇಕು, ಬೆಳೆಸಬೇಕು ಎಂಬುದನ್ನು ಈ ವೈಭವದಲ್ಲಿ ಉಪಭೋಗದಲ್ಲಿ ಶ್ರಮಿಕರು ಮರೆತಿದ್ದಾರೆ. ಒಂದು ದಿನದಿಂದ ಇನ್ನೊಂದಕ್ಕೆ ಎಂಬಂತೆ ನಿರುತ್ಸಾಹ, ಸಂಕುಚಿತ ಜೀವನ ನಡೆಸುತ್ತಿದ್ದಾರೆ ಎಂಬ ವಾದ ಇಲ್ಲಿದೆ

ಏನಿದ್ದರೂ ಈಗೀಗ ಈ ರೊಚ್ಚಿಗೆದ್ದ ತರುಣರು ದಣಿದಂತೆ ಕಾಣುತ್ತಿದ್ದಾರೆ. ಅವರು ಇಂಗ್ಲಿಷ ಸಾಹಿತ್ಯದಲ್ಲಿ ಹೊಸದೊಂದು ಪ್ರಕರಣ ಬರೆದಿದ್ದರೂ ಇನ್ನೂ ಐವತ್ತು ವರುಷಗಳ ನಂತರ ಓದಬಹುದಾದ ಒಂದೂ ನಾಟಕ ಬರೆದಿಲ್ಲ ಎಂಬ ಗೊಣಗಾಟ ಎಲ್ಲ ಕಡೆಯಲ್ಲಿ ಕೇಳಿಬರಹತ್ತಿವೆ.

ಇದಕ್ಕೆ ಕಾರಣ ಸ್ಪಷ್ಟವಾಗಿದೆ. ಇಂದಿನ ಇಂಗ್ಲಿಷ ಸಮಾಜದ ಟೀಕೆ ಮಾಡುವುದೇ ಇವರ

ಉದ್ದೇಶವಾಗಿದ್ದರಿಂದ, ೧೯೫೦ ರ ದಶಕದ ಸಾಮಾಜಿಕ ಪ್ರಶ್ನೆಗಳಿಗಷ್ಟೇ ಇವರು ತಮ್ಮ ವಿಶ್ಲೇಷಣೆ ಪರಿಮಿತಗೊಳಿಸಿದ್ದಾರೆ. ಹೀಗಾಗಿ ಅವರ ಸಾಹಿತ್ಯದಲ್ಲಿ ಉಚ್ಚ ಸಾಹಿತ್ಯದಲ್ಲಿ ಎಂದಿಗೂ ಇರಬೇಕಾದ ವಿಶ್ವ ಸಾಹಿತ್ಯಕತೆ (Universality) ಕಂಡು ಬರುವದಿಲ್ಲ. ಇಷ್ಟೇ ಏನು, ಬೇಕೆಂದೇ ಅದು ಬರದಂತೆ ಇವರು ನೋಡಿಕೊಂಡಿದ್ದಾರೋ ಎಂಬ ಸಂದೇಹವೂ ಉಂಟಾಗುತ್ತದೆ.

ಇಂಗ್ಲಿಷ ರಂಗಭೂಮಿಯಲ್ಲಿ ಹೊಸ ಚೇತನೆಯುಂಟಾಗಲು ಈ ಬೊಚ್ಚಿಗೆದ್ದ ತರುಣರ ನಾಟಕಗಳಷ್ಟೇ ಕಾರಣವಾದವು ಎಂದರೆ ಅದು ಪೂರ್ಣ ಸತ್ಯವಾಗಲಾರದು. ಇವರ ಸಮಾಜ ವಿಮರ್ಶೆಯ ನಾಟಕ ಪದ್ಧತಿಯೊಡನೆ ಇನ್ನೊಂದು ನಾಟಕ ಪದ್ಧತಿಯೂ ಬೆಳೆದು ಬಂದಿದೆ. ಆದರೆ ಈ ಎರಡೂ ಎಳೆಗಳ ಅರ್ಥ ನಮಗಾಗಬೇಕಾದರೆ ನಾವು ಐರೋಪ್ಯ ನಾಟಕ ಸಾಹಿತ್ಯದಲ್ಲೇ ನಡೆದ ವಾದವೊಂದರತ್ತ ಕಣ್ಣು ತಿರುಗಿಸಬೇಕು,

## ನಾಟಕದ ಸಾಹಿತ್ಯದ ವಾದ

ಈ ವಾದದ ಒಂದು ಅರ್ಥದಲ್ಲಿ ಬರ್ಟೋಲ್ಡ ಬ್ರೆಖ್ಟ ಎಂಬ ಜರ್ಮನ್ ನಾಟಕಕಾರ ಮತ್ತು ಅವನ ಶಿಷ್ಯರು ನಿಂತಿದ್ದಾರೆ. ಇವರ ಸಂಪ್ರದಾಯಕ್ಕೆ Theatre of Commitment ಎಂದು ಹೆಸರು. ಇನ್ನೊಂದು ಅರ್ಥದಲ್ಲಿ ಯೂಜೀನ್ ಇಯೊನೆಸ್ಕೊ ಎಂಬ ಫ್ರೆಂಚ್ ನಾಟಕಕಾರ ಮತ್ತು ಶಿಷ್ಯವೃಂದ ನಿಂತಿದೆ. ಇಂದಿನ ಐರೋಪ್ಯ ಸಂಸ್ಕೃತಿ ಒಟ್ಟು ಹುಳ ಹಿಡಿದಂತಾಗಿ ಪೊಳ್ಳಾಗಿದೆ, ಸಮಾಜಕ್ಕೆ ಸಾಂಪ್ರದಾಯಿಕವಾಗಿ ಇದ್ದ ನೈತಿಕ ತಳಹದಿ ಈಗ ಕುಸಿದುಬಿದ್ದಿದೆ ಎಂಬುದರ ಬಗ್ಗೆ ಎರಡೂ ತಂಡಗಳ ಒಮ್ಮತವಿದೆ. ಆದರೆ ವಾದವೆದ್ದಿದ್ದು ಈ ದುಃಸ್ಥಿತಿ ನೀಗಿಸಲು ಉಪಾಯವೇನು ಎಂಬ ಪ್ರಶ್ನೆಯ ಸುತ್ತ.

ಬ್ರೆಖ್ಟನ ಸಾಹಿತ್ಯಿಕ ಗುರಿ ಕಾರ್ಲ ಮಾರ್ಕ್ಸನ ಪರಿಣಾಮವಾಗಿ ಹುಟ್ಟಿದ್ದು. ಸಾಹಿತಿ ತನ್ನ ಸುತ್ತಲಿನ ಸಮಾಜವನ್ನು, ಅದರ ತತ್ಕಾಲೀನ ಸಮಸ್ಯೆಗಳನ್ನು ಮರೆಯಕೂಡದು. ಮನುಷ್ಯನ ಚಾರಿತ್ರ್ಯ ಅವನ ಪರಿಸರದ ಪರಿಣಾಮವಾಗಿ ರೂಪುಗೊಳ್ಳುವುದಾದ್ದರಿಂದ ಮನುಷ್ಯನ ಅಂತರಂಗದ ವಿಶ್ಲೇಷಣೆ ಕೊನೆಗೆ ಬಹಿರಂಗ ಸಮಾಜದ ವಿಶ್ಲೇಷಣೆಯಾಗಿಯೇ ಮೂಡಬೇಕು. ಸಾಹಿತಿ ಕಲಾಕಾರನೆಷ್ಟೋ ಅಷ್ಟೇ ಸಮಾಜ ಸುಧಾರಕ ರಾಜಕೀಯ ವಿಮರ್ಶಕ. ರಾಜಕಾರಣ, ಸಮಾಜ ಶಾಸ್ತ್ರಗಳಿಗೆ ಸಂಬಂಧವಿರದ ಕಲೆ ಕಲೆಯೇ ಅಲ್ಲಎಂದು ಇವರ ವಾದ.

ಇದಕ್ಕೆ ಪ್ರತಿಯಾದ ಇಯೊನೆಸ್ಕೋನಿಗೆ ರಾಜಕಾರಣ ವಿರಹಿತ ಕಲೆಯಲ್ಲಿ ಯಾವ ಸ್ವಯಂ ವಿರೋಧವೂ ಕಾಣವುದಿಲ್ಲ. ಕಲೆ ರಾಜಕೀಯ, ತಾತ್ವಿಕ, ಸಾಮೂಹಿಕ ಪ್ರಚಾರದ ಸಾಧನವಲ್ಲ. ಅದಕ್ಕೊಂದು ಸ್ವತಂತ್ರ ಅಸ್ತಿತ್ವ ಇದೆ. ನಾಟಕವಿರಲಿ, ಕಾದಂಬರಿಯಿರಲಿ ಕೊನೆಗೆ ಪ್ರತ್ಯಕ್ಷಗೊಳಿಸುವದು ಮಾನವನ ಅಂತಃಕರಣವನ್ನೇ ಹೊರತು, ಸಾಮಾಜಿಕ ತತ್ತ್ವಗಳನ್ನಲ್ಲ. ಇಂದಿನ "ಬೂರ್ಜ್ವಾ" (ಸಮಧ್ಯಮವರ್ಗೀಯ) ಸಮಾಜದ ದೌರ್ಬಲ್ಯ ಕೇವಲ ಸಾಮಾಜಿಕವಾದದ್ದಲ್ಲ. ಮಾನಸಿಕ ದೌರ್ಬಲ್ಯವಿದು. ಕದಾಚಿತ್ ಆಧ್ಯಾತ್ಮಿಕವಾಗಿದ್ದರೂ ಇರಬಹುದು ಎಂದು ಇಯೊನೆಸ್ಕೋ ಸೂಚಿಸಿದ್ದಾನೆ.

ಈ ತತ್ತ್ವಗಳು ಈ ತಂಡದ ತಂತ್ರಗಳಲ್ಲಿಯೇ ಪ್ರತಿಬಿಂಬಿತವಾಗಿವೆ. ಬ್ರೆಖ್ಟನ ನಾಟಕಗಳು ಸೋದ್ದಿಶ್ಯವಾಗಿಯೇ ರಾಜಕೀಯ ಪಾಠಗಳಂತೆ ಕಾಣುತ್ತವೆ. ಹಲವು ಸಲ ನಾಟಕಕಾರ ಪ್ರೇಕ್ಷಕರನ್ನು ಮೈಮರೆಸಕೂಡದು. ಪ್ರೇಕ್ಷಕರು ನಾಟಕವನ್ನು ನೋಡುವಾಗ ಅದರಲ್ಲೇ ತನ್ಮಯರಾಗಿ ಬಿಟ್ಟರೆ, "ನಾಟಕಗಳಲ್ಲಿ ತಾವೊಂದು ಸಾಮಾಜಿಕ ವಿಶ್ಲೇಷಣೆ ಕಾಣುತ್ತೇನೆ. ಪಾಠ ಕಲಿಯಬೇಕು." ಎಂಬುದನ್ನೇ ಮರೆತಾರು ಎಂಬ ಭಯ ಅವನಿಗೆ. ಹೀಗಾಗಿ ತನ್ನ ನಾಟಕಗಳಲ್ಲಿ ಮಾಯಾದೀಪ, ಚಲಚ್ಚಿತ್ರಗಳನ್ನು ಉಪಯೋಗಿಸಿಕೊಳ್ಳುತ್ತಾನೆ. ಪಾತ್ರಗಳು ಅಲ್ಲಲ್ಲಿ ಭಾಷಣ ಕೊಡುತ್ತವೆ. ಅವನ "ಗೆಲೀಲಿಯೋ" ಎಂಬ ಅತ್ಯುತ್ತಮ ನಾಟಕದಲ್ಲಿ ಪ್ರತಿಯೊಂದು ದೃಶ್ಯದ ಮೊದಲು ಆ ದೃಶ್ಯದಲ್ಲಿ ನಡೆಯಲಿರುವ ಘಟನೆಗಳ ಸಾರಾಂಶ, ಅದರ ಮೇಲೊಂದು ಟಿಪ್ಪಣೆ ಇಷ್ಟೆಲ್ಲವನ್ನೂ ಮಾಯಾದೀಪದ ಮುಖಾಂತರ ರಂಗಸ್ಥಳದ ಮೇಲೆ ತೋರಿಸಲಾಗುತ್ತದೆ.

ಇಂಗ್ಲಿಷ ರಂಗಭೂಮಿಯ ದೃಷ್ಟಿಯಿಂದ ನೋಡಿದಾಗ "ರೊಚ್ಚಿಗೆದ್ದ ತರುಣರು" ಬ್ರೆಖ್ಟನನ್ನು ಗುರುಸ್ಥಾನದಲ್ಲಿ ಏಕೆ ಎಣಿಸುತ್ತಾರೆ ಎಂಬುದು ಸ್ಪಷ್ಟವಾಗುತ್ತದೆ. ಇಯೊನೆಸ್ಕೋನ Theatre of the absurd ದ ಸಂಪ್ರದಾಯೆದಲ್ಲಿ ಬೆಕೆಟ ಎಂಬ ನಾಟಕಕಾರ Waiting for godon (ಗೊಡೋನ ಪ್ರತೀಕ್ಷೆ) ಎಂಬ ಸುಪ್ರಸಿದ್ಧ ನಾಟಕ ಬರೆದಿದ್ದಾನೆ. ಆದರೆ ಬ್ರೆಖ್ಟನಿಗೆ ದೊರೆತಂತೆ ಇಯೊನೆಸ್ಕೋನಿಗೆ ದೊಡ್ಡದೊಂದು ಶಿಷ್ಯವೃಂದ ಇಂಗ್ಲಂಡಿನ ಲೇಖಕರಲ್ಲಿ ದೊರೆತಿಲ್ಲ. ಇದು ಹೀಗೇಕೆ ಎಂಬ ಪ್ರಶ್ನೆಯ ಉತ್ತರ ಇಂಗ್ಲಂಡಿನ ಅನುಭವಪ್ರಧಾನ ತತ್ತ್ವ-ಸಂಪ್ರದಾಯದಲ್ಲಿರಬಹುದು ಇಲ್ಲವೆ ಸಾಮಾಜಿಕ ಸಮಸ್ಯೆಗಳಲ್ಲಿರಬಹುದು.

## ಎರಡು ಪಂಥಗಳು

ಅದೇನೇ ಇದ್ದರೂ ಇವೆರಡು ಪಂಥಗಳು ಮೊದಲ ದೃಷ್ಟಿಗೆ ಎನಿಸುವಷ್ಟು ಪರಸ್ಪರ ವಿರೋಧಿಯಾಗಿಲ್ಲ ಎಂಬ ಅರಿವೂ ಈಗೀಗ ಹುಟ್ಟಿದೆ. ಎರಡೂ ಪಂಥಗಳ ಗುರಿ ಸಾಮಾಜಿಕ ವಿಮರ್ಶೆಯೇ ಆಗಿದೆ. ಎರಡೂ ಪಂಥದ ನಾಟಕಕಾರರು ಮನುಷ್ಯನ ರೀತಿ ನಡತೆ, ವಿಶೇಷತಃ ಅವನಾಡುವ ಭಾಷೆ ಹೇಗೆ ಅವನ ಅಂತರಂಗವನ್ನು ಬಿಚ್ಚಿತೋರಿಸಲು ಅಸಮರ್ಥ-ವಾಗಿವೆ ಎಂಬ ಮಾತನ್ನೇ ತೋರಿಸಿದ್ದಾರೆ. ಎಲ್ಲಕ್ಕೂ ವಿಶೇಷವಾಗಿ ಎರಡೂ ಪಂಥದವರು ರಂಗಭೂಮಿಯನ್ನು ನೈಸರ್ಗಿಕ ಜೀವನದ ಪ್ರತಿಬಿಂಬವಾಗಿ ಬಳಸದೆ, ನಾಟಕವೆಂದರೆ ಕೃತ್ರಿಮ ಸೃಷ್ಟಿಯೆಂಬುದನ್ನು ಒತ್ತಿ ಒತ್ತಿ ಹೇಳಿದ್ದಾರೆ.

ಈ ಸಮನ್ವಯ ಯತ್ನಿಸಿದವರಲ್ಲಿ ಆರ್ಡೆನ ಮತ್ತು ಪಿಂಟರ ಈ ಇಬ್ಬರು ಲೇಖಕರು ವಿಶೇಷವಾಗಿ ಮನಸೆಳೆದಿದ್ದಾರೆ. ಉದಾಹರಣೆಗೆ ಪಿಂಟರನ The Care taker (ಕೆರ ಟೇಕರ) ಎಂಬ ನಾಟಕವನ್ನೇ ತೆಗೆದುಕೊಳ್ಳಬಹುದು.

ಈ ನಾಟಕದಲ್ಲಿ ಮುರುಕು ಮನೆಯೊಂದರಲ್ಲಿ ವಾಸಿಸುವ ಇಬ್ಬರು ಅಣ್ಣ ತಮ್ಮಂದಿರ ಜೀವನ ತೋರಿಸಿದೆ ಅಣ್ಣತಮ್ಮಂದಿರಿಗೆ ಪರಸ್ಪರರ ಬಗ್ಗೆ ಯಾವ ಪ್ರೀತಿಯೂ ಇದ್ದಂತಿಲ್ಲ. ಅವರು ಪರಸ್ಪರರೊಡನೆ ಮಾತನ್ನೂ ಆಡುವದಿಲ್ಲ. ಅಷ್ಟೇ ಅಲ್ಲ, ಒಬ್ಬ ತಲೆತಿರುಕನಾದರೆ ಇನ್ನೊಬ್ಬನ ಮಾತಿನಲ್ಲಿ ಏನೋ ಕುಂದು ಇದೆ.

ಒಂದು ದಿನ ತಮ್ಮ ಒಬ್ಬ ಮುದುಕನನ್ನು ಕಂಡು, ಕರುಣೆಗೊಂಡು ಮನೆಗೆ ತರುತ್ತಾನೆ. ಮುದುಕನಿಗೂ ತನ್ನದೇ ಒಂದು ಕನಸಿದೆ. ಯಾ-ವುದೋ ಮಠದಲ್ಲಿ ತನ್ನ ಕಾಗದಪತ್ರಗಳಿವೆ. ಆ ಕಾಗದಪತ್ರಗಳು ತನಗೆ ದೊರೆತರೆ ತನ್ನ ಭವಿತ-ವ್ಯವೇ ಬದಲಾಗುತ್ತದೆ. ಎಂಬ ಹುಚ್ಚು ಅವನಿಗೆ. ಆದರೆ ಅಣ್ಣತಮ್ಮಂದಿರಲ್ಲಿದ್ದ ಅನಾಸ್ಥೆ ಕಂಡು ಆ ಮುದುಕ ಅವರನ್ನು ಬೇರ್ಪಡಿಸಲು ಎಳಸುತ್ತಾನೆ. ಇದ್ದುದನ್ನೆಲ್ಲ ತಾನೇ ಪಡೆಯಲು ಹವಣಿಸುತ್ತಾನೆ. ಆದರೆ ಕೊನೆಗೂ ಅವನ ಕುತಂತ್ರ ಯಶಸ್ವಿಯಾಗುವುದಿಲ್ಲ. ಆ ಬಂಧುಗಳಲ್ಲಿ ವ್ಯಕ್ತಿಪ್ರೀತಿಗಿಂತ ಹೆಚ್ಚು ಆಳವಾದ ಆತ್ಮೀಯತೆಯಿದೆ ಎಂಬುದು ಸ್ಪಷ್ಟವಾ-ಗುತ್ತದೆ. ಆದರೆ ಇದನ್ನು ತಿಳಿಯಲು ಆ ಮುದುಕ ಅಸಮರ್ಥ. ಈ ಅರಿಯಲಾಗದ ಬಾಂಧವ್ಯ ಕಂಡು ಕಕ್ಕಾವಿಕ್ಕಿಯಾಗುತ್ತಾನೆ. ಕೊನೆಗೆ ಮನೆಬಿಟ್ಟು ಹೋಗುವ ಪ್ರಸಂಗ ಬಂದಾಗ, ಕಣ್ಣೀರ್ಗರೆದು ತಾನು ಆ ಕಾಗದಪತ್ರಗಳನ್ನು ತಂದರೆ ಇಲ್ಲಿ ತಿರುಗಿ ಬರಬಹುದೇ ಎಂದು ಕಾಲ್ಬಿದ್ದು ಕೇಳುತ್ತಾನೆ.

ನಾಟಕದಲ್ಲಿ ಇಯೊನೆಸ್ಕೋನ ಸ್ಪಷ್ಟ(obvious) ಸಾಂಕೇತಿಕತೆ, ಅವನ ನಿರಾಶಾವಾದಗಳು ಕಂಡು ಬರುವುದಿಲ್ಲ. ಬ್ರೆಖ್ಟನ ಪ್ರಚಾರ ಸಾಹಿತ್ಯದ ಪದ್ಧ-ತಿಯೂ ಕಾಣುವುದಿಲ್ಲ. ಆದರೆ ಅವರಲ್ಲಿಯಂತೆ ಇಲ್ಲಿಯೂ ಸಮಾಜದ ಒಂದು ದೌರ್ಬಲ್ಯದ ವಿಶ್ಲೇ-ಷಣೆಯಿದೆ. ಅಂತರಂಗದ ಭಾವನೆಗಳನ್ನು ವ್ಯಕ್ತಪಡಿಸಲು ಯುಕ್ತ ಭಾಷೆ ಎಷ್ಟು ಅಸಮರ್ಥವಾ-ಗಿದೆ ಎಂಬುದನ್ನು ತೋರಿಸುವ ಹವಣಿಕೆಯಿದೆ. ಅಂತೆಯೇ ನಾಟಕ ಸಜೀವವಾಗಿ ಕಾಣುತ್ತದೆ.

ಇದೆಲ್ಲ ನೋಡಿ, ತಮ್ಮ ನಾಟಕ ಸಾಹಿತ್ಯ ತನ್ನ ಅರ್ಧಮೃತಾವಸ್ಥೆ ಕಳೆದುಕೊಂಡು ಮತ್ತೆ ಚೈತನ್ಯಯುಕ್ತವಾಗಬಹುದೇನೋ ಎಂಬ ಆಸೆ ಇಂಗ್ಲಂಡಿನಲ್ಲಿ ಹುಟ್ಟಿದೆ. ಅದು ಎಷ್ಟರಮಟ್ಟಿಗೆ ನಿಜವೆಂಬುದನ್ನು ಮಾತ್ರ ಇನ್ನೂ ಕಾಣಬೇಕಾಗಿದೆ.

ಲೇಖಕರು :
**ಪಿ. ಆರ್. ಪಂಢರಿ,**
ಬಿ. ಎ., ಬಿ. ಕಾಮ್.
ಹುಬ್ಬಳ್ಳಿ

# ಸ್ವಾತಂತ್ರ್ಯಾನಂತರದಲ್ಲಿ ವಿದೇಶಗಳೊಡನೆ ಭಾರತದ ವ್ಯಾಪಾರ

ಮೊದಮೊದಲು ಭಾರತದ ನಿರ್ಯಾತ ವ್ಯಾಪಾರವು ಆಯಾತಕ್ಕಿಂತ ಕಡಿಮೆ ಇದ್ದುದರಿಂದ ಪ್ರತಿಕೂಲ ವ್ಯಾಪಾರದ ಪರಿಸ್ಥಿತಿಯನ್ನು ಎದುರಿಸಬೇಕಾಗುತ್ತಿತ್ತು. ಈಗೀಗ ಪರಿಸ್ಥಿತಿ ಕೆಲಮಟ್ಟಿಗೇನೊ ಸುಧಾರಿಸುತ್ತಿದೆ. ಆದರೆ ನಮ್ಮ ನಿರ್ಯಾತ ಅಪೇಕ್ಷಿತ ರೀತಿ ಹೆಚ್ಚದಿರಲು ಅನೇಕ ಕಾರಣಗಳಿವೆ. ಪ್ರಮಾಣಿತ ಸರಕು ಕಳಿಸದಿರುವುದೊ ಒಂದು ಇಂದು ನಿರ್ಯಾತವ್ಯಾಪಾರದಲ್ಲಿ ೧೫ ನೇ ಸ್ಥಾನದಲ್ಲಿರುವ ಭಾರತವು ಇವೆಲ್ಲ ಕೊರತೆ ನೀಗಿಸಿಕೊಂಡರೆ ಮೇಲಿನ ಸ್ಥಾನ ಪಡೆವಲ್ಲಿ ಸಂದೇಹವಿಲ್ಲ.

ವಿದೇಶಗಳೊಡನೆ ಇರುವ ಭಾರತದ ವ್ಯಾಪಾರೀ ಸಂಬಂಧವು ಇಂದು ನಿನ್ನೆಯದಲ್ಲ. ಕ್ರಿ. ಶ. ಪೂ. ಕಾಲದಿಂದಲೂ ರೋಮನ್‌ಸಾಮ್ರಾಜ್ಯ ಪೌರ್ವಾತ್ಯ ಪಾಶ್ಚಿಮಾತ್ಯರಾಷ್ಟ್ರಗಳೊಡನೆ ಭಾರತವು ವ್ಯಾಪಾರ ಮಾಡುತ್ತಲೇ ಬಂದಿದೆ. ಆದರೆ ಇಂಗ್ಲಿಷರ ಸತ್ತೆಯು ಇಲ್ಲಿ ಸ್ಥಿರವಾಗಿ ಕಾಲೂರಿದ ನಂತರ ಅವರು ಮಾಡಿದ ಮೊದಲ ಕೆಲಸ ತಮ್ಮಲ್ಲಿ ಉತ್ಪಾದನೆ ಹೊಂದುವ ವಸ್ತುಗಳನ್ನು ಇಲ್ಲಿ ಮಾರಾಟ ಮಾಡಲು ಕ್ರಮಗಳನ್ನು ಕೈಕೊಂಡುದುದು ಎಂದು ಹೇಳಬಹುದು. ಇದರಿಂದ ವಿದೇಶಗಳಲ್ಲಿ ಅದರಲ್ಲೂ ಬ್ರಿಟನ್ನದಲ್ಲಿ ತಯಾರಾದ ವಸ್ತುಗಳು ಭಾರತೀಯ ಪೇಟೆಗಳನ್ನು ವ್ಯಾಪಿಸಿದವು.

ಪೂರ್ಣ ತಯಾರಿಸಿದ ವಸ್ತುಗಳನ್ನು ವಿದೇಶಗಳಿಗೆ ಕಳಿಸುತ್ತಿದ್ದ ಭಾರತವು ಅವುಗಳನ್ನೇ ಆಯಾತ ಮಾಡತೊಡಗಿತು. ಕಚ್ಚಾವಸ್ತುಗಳನ್ನು ಮತ್ತುಹತ್ತಿ ಇತ್ಯಾದಿ ಕೃಷಿಪದಾರ್ಥಗಳನ್ನುನಿರ್ಯಾತ ಮಾಡಿ ಅವುಗಳಿಂದ ತಯಾರಿಸಲ್ಪಟ್ಟ ವಸ್ತುಗಳನ್ನು ಭಾರತವು ಆಯಾತಮಾಡಹತ್ತಿತು. ಸ್ವಾತಂತ್ರ್ಯಪೂರ್ವದಲ್ಲಿ ಭಾರತದ ವ್ಯಾಪಾರವೆಲ್ಲ ಬ್ರಿಟನ್ನದೊಡನೆಯೇ ಇತ್ತೆಂಬುದು ನಿಜ. ಕಳೆದೆರಡು ಶತಕಗಳಲ್ಲಿ ವಿಜ್ಞಾನ ಮತ್ತು ಯಾಂತ್ರಿಕ ಜ್ಞಾನಗಳಲ್ಲಿ ಪ್ರಗತಿಯಾಗಿ ಪಾಶ್ಚಿಮಾತ್ಯರಾಷ್ಟ್ರಗಳು ಅದರ ಲಾಭವನ್ನು ಪಡೆದುಕೊಂಡವು. ಅಸ್ವತಂತ್ರಭಾರತವು ಅವೆಲ್ಲವುಗಳಿಗಿಂತ ಹಿಂದೆಯೆ ಉಳಿಯಿತು. ಔದ್ಯಮಿಕ ಅಭಿವೃದ್ಧಿ ಸಾಧಿಸಿದ ಬ್ರಿಟನ್ನು ಭಾರತದ ಕಚ್ಚಾವಸ್ತುಗಳನ್ನು ಆಯಾತ ಮಾಡಿಕೊಂಡು ಅವುಗಳನ್ನೆ ತಯಾರಿಸಿ ಮರಳಿ ನಿರ್ಯಾತಮಾಡತೊಡಗಿತು. ಹೀಗಿದ್ದರೂ ಭಾರತದ ನಿರ್ಯಾತವು ಆಯಾತಕ್ಕಿಂತ ಹೆಚ್ಚಿರುತ್ತಿದ್ದುದರಿಂದ ವ್ಯಾಪಾರದಲ್ಲಿ ಒಳ್ಳೆಸ್ಥಾನ ಪಡೆದಿತ್ತು. ಭಾರತವು ಆಗ ಹೆಚ್ಚಾಗಿ ಬಳಕೆಯ ವಸ್ತುಗಳನ್ನೇ ಆಯಾತ ಮಾಡುತ್ತಿತ್ತು. ಇದು ದ್ವಿತೀಯ ಮಹಾಯುದ್ಧ ಮುಗಿದು ಸ್ವಾತಂತ್ರ್ಯ ಬರುವ ವರೆಗೆ ನಡೆದಿತ್ತು.

೧೫ ಅಗಸ್ಟ, ೧೯೪೭ ರಲ್ಲಿ ಭಾರತವು ಸ್ವಾತಂತ್ರ್ಯವನ್ನು ಪಡೆದಾಗ ವಿಭಜನೆಯಿಂದ ಕೆಲವು ಸಮಸ್ಯೆಗಳೂ ಹುಟ್ಟಿದವು. ಕಚ್ಚಾಸಣಬು, ಹತ್ತಿಬೆಳೆಯುತ್ತಿದ್ದ ಪ್ರದೇಶವು ಪಾಕಿಸ್ತಾನಕ್ಕೆ ಹೋಯಿತು. ಭಾರತದಲ್ಲಿಯ ಕಾರಖಾನೆಗಳಿಗೆ ಸಣಬು ಹತ್ತಿಯನ್ನು ಪಾಕಿಸ್ತಾನದಿಂದ ಕೊಂಡು ಪೂರೈಸಬೇಕಾಯಿತು. ಆ ಮೊದಲು ಈ ಕಚ್ಚಾವಸ್ತುಗಳನ್ನು ನಿರ್ಯಾತಮಾಡುತ್ತಿದ್ದ ಭಾರತವು ಆಯಾತಮಾಡಬೇಕಾಗಿ ಬಂದಿತು.

## ಸ್ವಾತಂತ್ರ್ಯಾನಂತರ ಬದಲಾವಣೆ

ಸ್ವಾತಂತ್ರ್ಯಾನಂತರದಲ್ಲಿ ಭಾರತವು ಔದ್ಯಮೀಕರಣಕ್ಕೆ ಹೆಚ್ಚು ಲಕ್ಷವಿತ್ತುದರಿಂದ ವಿದೇಶಗಳೊಡನೆ ಇದ್ದ ಅದರ ವ್ಯಾಪಾರದಲ್ಲಿ ಬಹಳಷ್ಟು ಬದಲಾವಣೆಗಳಾದವು. ಅಲ್ಲದೆ ಬೆಳೆ ಸರಿಯಾಗಿ ಬಾರದ್ದರಿಂದ ಮತ್ತು ಫಲವತ್ತಾದ ಪ್ರದೇಶಗಳು ಪಾಕಿಸ್ತಾನಕ್ಕೆ ಹೋದುದರಿಂದ ವಿದೇಶಗಳಿಂದ ಆಹಾರ ಧಾನ್ಯಗಳನ್ನು ಆಯಾತ ಮಾಡಬೇಕಾಯಿತು. ೧೯೪೭-೪೮ ರಲ್ಲಿ ೪೪೬ ಕೋಟಿ ರೂ. ಗಳ ಬೆಲೆಯ ಪದಾರ್ಥಗಳನ್ನು ಆಯಾತ ಮಾಡಿ ೪೦೮ ಕೋಟಿ ರೂ. ಗಳ ಬೆಲೆಯ ಪದಾರ್ಥಗಳನ್ನು ನಿರ್ಯಾತ ಮಾಡಿದ್ದರೆ, ೧೯೪೮-೪೯ ರಲ್ಲಿ ೫೪೩ ಕೋಟಿ ರೂ. ಗಳ ಬೆಲೆಯ ವಸ್ತುಗಳನ್ನು ಆಯಾತಮಾಡಿ ೪೨೩ ಕೋಟಿ ರೂ. ಗಳ ಸರಕುಗಳನ್ನು ನಿರ್ಯಾತಮಾಡಿತು.

ಸಪ್ಟಂಬರ ೧೯೪೯ ರಲ್ಲಿ ಭಾರತವು ಇಂಗ್ಲಂಡದ ಹಾದಿಯನ್ನನುಸರಿಸಿ ತನ್ನ ರೂಪಾಯಿಯ ಮೌಲ್ಯ ವಿಚ್ಛೇದನವನ್ನು ಮಾಡಿಕೊಂಡಿತಷ್ಟೆ. ಅದರ ಪರಿಣಾಮ ತುಂಬ ಅನುಕೂಲವಾಯಿತು. ಮುಂದೆ ಕೋರಿಯದ ಯುದ್ಧ ಪ್ರಾರಂಭವಾಗುತ್ತಲೇ ಭಾರತದ ನಿರ್ಯಾತವ್ಯಾಪಾರ ಹೆಚ್ಚಿ ಪ್ರತಿಕೂಲ ವ್ಯಾಪಾರವು (Adverse Balance of Trade) ಇಲ್ಲದಾಗಿ ಹೆಚ್ಚಿಗೆ ಹಣ ಉಳಿಯುವಂತಾಯಿತು. ೧೯೫೦-೫೧ ರಲ್ಲಿಯ ಆಯಾತ-ನಿರ್ಯಾತಗಳ ಅಂಕಿ-ಸಂಖ್ಯೆಯು ಇದನ್ನು ಸ್ಪಷ್ಟೀಕರಿಸುವದು. ನಮ್ಮ ನಿರ್ಯಾತವು ೬೦೧ ಕೋಟಿ ರೂ. ಗಳಿಗೇರಿದ್ದರೆ ಆಯಾತವು ೫೬೫ ಕೋಟಿ ರೂ. ಗಳಷ್ಟಿತ್ತು. ಆಹಾರದ ಆಯಯತ ಕಡಿಮೆಯಾದರೂ ಪಂಚವಾರ್ಷಿಕ ಯೋಜನೆಗಳನ್ವಯ ಔದ್ಯಮಿಕ ಅಭಿವೃದ್ಧಿಗಾಗಿ-ಯಂತ್ರಸಲಕರಣೆ, ಲೋಹಗಳು ಮತ್ತು ಕಚ್ಚಾವಸ್ತುಗಳನ್ನು ಆಯಾತ ಮಾಡುವದು ಹೆಚ್ಚಿದ್ದರಿಂದ ಬಾಬತ್ತುಗಳಶಿಲ್ಕು ಉಳಿಯುಲಿಲ್ಲ. ಮುಂದೆ ೧೯೫೧-೫೨ ರಿಂದ ನಮ್ಮ ವ್ಯಾಪಾರಿ ಸಮತೋಲ ತಪ್ಪಿದ್ದು ಸರಿಯಾಗಲೇ ಇಲ್ಲ.

ಕೆಳಗಿನ ಅಂಕಿ-ಸಂಖ್ಯೆಗಳು ಇದನ್ನು ಪುಷ್ಟೀಕರಿಸುವವು : (ಕೆಲವು ವರ್ಷಗಳನ್ನು ಮಾತ್ರ ತೆಗೆದುಕೊಳ್ಳಲಾಗಿದೆ.)

| | ಆಯಾತ ಕೋಟಿ ರೂ. | ನಿರ್ಯಾತ ಕೋಟಿ ರೂ. | ವ್ಯಾಪಾರಿ ಸಮತೋಲ + ಅಥವಾ- |
|---|---|---|---|
| ೧೯೫೩ | ೫೭೦ | ೫೩೧ | -೩೯ |
| ೧೯೫೭ | ೧೦೨೯ | ೬೧೦ | -೪೧೯ |
| ೧೯೫೯ | ೮೮೭ | ೬೨೩ | -೨೬೪ |
| ೧೯೬೧-೬೨ | ೧೧೦೭ | ೬೭೭ | -೪೩೦ |
| ೧೯೬೨-೬೩ | ೧೦೮೧ | ೭೧೦ | -೩೭೧ |

೧೯೫೩ ರಿಂದ ೫೭ ರ ವರೆಗೆ ಆಯಾತ ಕಡಿಮೆಯಾಯಿತೇನೊ ನಿಜ. ಆದರೆ ೧೯೫೫ ರ ವರೆಗೆ ನಿರ್ಯಾತವೂ ಹೆಚ್ಚಲಿಲ್ಲ. ಮುಂದೆ ಹೆಚ್ಚಿದರೂ ಆಯಾತ ನಿರ್ಯಾತಗಳಲ್ಲಿ ಸಮತೋಲ ಉಂಟಾಗಲಿಲ್ಲ. ವಿದೇಶಿವಿನಿಮಯದ ಬಾಬತ್ತು (Foreign Exchange bill) ಹೆಚ್ಚುತ್ತ ನಡೆದಿದೆ.

## ಆಯಾತದಲ್ಲಿ ಹೆಚ್ಚು ಕಡಿಮೆ

ಭಾರತವು ಆಯಾತ ಮಾಡುತ್ತಿರುವ ಪದಾರ್ಥಗಳಲ್ಲಿ ಕೂಡ ಸ್ವಾತಂತ್ರ್ಯಾನಂತರ ಬಹು ಹೆಚ್ಚು ಕಡಿಮೆಯಾಗಿರುವದು. ಆ ಮೊದಲು ಪೂರ್ಣ ತಯಾರಿಸಿದ ವಸ್ತುಗಳನ್ನು ಹಾಗು ಬಳಕೆ ವಸ್ತು (Consumers goods) ಗಳನ್ನು ಆಯಾತ ಮಾಡುತ್ತಿದ್ದರೆ ಈಗ ಅವುಗಳ ಪ್ರಮಾಣ ಕಡಿಮೆಯಾಗಿ ಯಾಂತ್ರಿಕ ಮತ್ತು ಔದ್ಯೋಗಿಕ ವಸ್ತು ಲೋಹಗಳು ಹಾಗು ಕಳೆದ ದಶಕದ ಕೊನೆಯ ವರೆಗೆ ಆಹಾರಧಾನ್ಯಗಳು ಆಯಾತದಲ್ಲಿ ವಿಶೇಷ ಪ್ರಮಾಣದಲ್ಲಿದ್ದವು. ೧೯೩೭-೩೮ ರಲ್ಲಿ ಭಾರತವು ೫೯೧ ಕೋಟಿ ಗಜ ಬಟ್ಟೆಯನ್ನು ೧೨ ಕೋಟಿ ರೂ. ಗಳಿಗೆ ಆಯಾತ ಮಾಡಿದ್ದರೆ, ೧೯೫೯ ರಲ್ಲಿ ಅದು ಕೇವಲ ೬೦ ಲಕ್ಷ ಗಜ ಬಟ್ಟೆಯನ್ನು ೧ ಕೋಟಿ ರೂ. ಗೆ ಆಯಾತ ಮಾಡಿತ್ತು. ಬಳಕೆಯ ವಸ್ತುಗಳಾದ ಸಾಬೂನು, ಸಿಗರೇಟು- ಆಟಿಗೆ ಇತ್ಯಾದಿವಸ್ತುಗಳ ಆಯಾತ ಈಗ ಪೂರ್ಣವಾಗಿ ನಿಂತುಹೋಗಿದೆ ಎನ್ನಬಹುದು.

೧೯೫೨ ರಿಂದ ೫೭ ರ ವರೆಗೆ ಆಯಾತ ಮಾಡಿದ ವಸ್ತುಗಳಲ್ಲಿ ಆಹಾರಧಾನ್ಯಗಳು, ಸಣಬು ಮತ್ತು ಹತ್ತಿಗಳು ಪ್ರಮುಖವಾಗಿದ್ದರೆ ಅನಂತರದ್ವಿತೀಯ ಪಂಚವಾರ್ಷಿಕ ಯೋಜನೆಯಲ್ಲಿ ಅವುಗಳಿಗೆ ಮಹತ್ವ ಕಡಿಮೆಯಾಗಿ ಯಂತ್ರಗಳು ಯಾಂತ್ರಿಕ ಸಲಕರಣೆ, ಧಾತುಗಳು ಹಾಗು ಸಾರಿಗೆ ಉಪಕರಣಗಳು ಪ್ರಮುಖ ಸ್ಥಾನವನ್ನು ಪಡೆದವು. ೧೯೬೧, ೬೨, ೬೩ ರ ಆಯಾತಗಳನ್ನು ಗಮನಿಸಿದಾಗ ಔದ್ಯೋಗಿಕ ಕಚ್ಚಾವಸ್ತುಗಳು ಬಂಡವಾಳದ ಪದಾರ್ಥಗಳು ಪ್ರಮುಖವಾಗಿವೆ. ಅವುಗಳ ನಂತರದ ಸ್ಥಾನ ಆಹಾರಧಾನ್ಯ ಹಾಗು ಬಳಕೆಯ ವಸ್ತುಗಳದಾಗಿದೆ.

ವಿಲಾಸಿವಸ್ತುಗಳು, ವಾಚು, ಪೆನ್ನು, ಉಣ್ಣೆ ಬಟ್ಟೆ, ರೇಜರ, ತಂಬಾಕು ಮೊದಲಾದವುಗಳಲ್ಲದೆ ಕೆಲವು ಬಗೆಯ ಕಬ್ಬಿಣದ ಪೈಪು ತಾಮ್ರದಪೈಪು, ಕೊಳವೆ, ಆ್ಯಸ್‌ಬೆಸ್ಟಾಸ್ ಕಟ್ಟಿಗೆ, ಕೇಬಲ್, ಹಾಲಿನಪುಡಿ ಇತ್ಯಾದಿ ವಸ್ತುಗಳ ಆಯಾತವನ್ನು ಪೂರ್ಣ ನಿಲ್ಲಿಸಲಾಗಿದೆ, ಇಲ್ಲವೆ ಬಹುಕಡಿಮೆ ಪ್ರಮಾಣದಲ್ಲಿ ತರಿಸಲಾಗುತ್ತಿದೆ.

ವಿದೇಶಿ ವಿನಿಮಯವನ್ನು ಉಳಿಸಲು ಬಳಕೆ ವಸ್ತುಗಳ ಮೇಲೆ ಸರಕಾರವು ಆಯಾತ ಪ್ರತಿಬಂಧ ಹೇರಿದೆ. ಈಗ ನಮ್ಮ ಆಯಾತದ ನೀತಿಯನ್ನು ಔದ್ಯಮಿಕ ಅಭಿವೃದ್ಧಿ ಸಾಧಿಸಿ ನಾಡಿನ ಆರ್ಥಿಕಸ್ಥಿತಿ ಸುಧಾರಿಸುವಂತೆ ರೂಪಿಸಿದೆ.

ಸ್ವಾತಂತ್ರ್ಯಾನಂತರದಲ್ಲಿ ಭಾರತಕ್ಕೆ ನಿರ್ಯಾತ ಮಾಡುವ ದೇಶಗಳು ಮೊದಲಿನವೇ ಆಗಿ ಉಳಿದಿಲ್ಲ. ಇಂಗ್ಲಂಡದೊಡನೆ ಭಾರತವು ಎಂದಿನಂತೆ ವ್ಯಾಪಾರಿ ಸಂಬಂಧವನ್ನಿಟ್ಟುಕೊಂಡಿದ್ದರೂ ಅದೀಗ ಬದಲಾಗುತ್ತಿದೆ. ೧೯೪೮ ರ ವರೆಗೆ ಇಂಗ್ಲಂಡ ಭಾರತಕ್ಕೆ ಹೆಚ್ಚು ವಸ್ತುಗಳನ್ನು ಕಳಿಸುತ್ತಿತ್ತು. ಆದರೆ ಅನಂತರ ಅಮೇರಿಕೆಯಿಂದ ಭಾರತವು ಆಯಾತ ಮಾಡುತ್ತಿರುವ ಪ್ರಮಾಣವು ಹೆಚ್ಚುತ್ತ ನಡೆದಿದೆ. ೧೯೫೨ ರಲ್ಲಿ ಅಮೇರಿಕೆಯಿಂದ ೨೭೭ ಕೋಟಿ ರೂ. ಗಳ ಬೆಲೆಯುಷ್ಟು ವಸ್ತುಗಳನ್ನು ಆಯಾತ ಮಾಡಿದ್ದರೆ ಆಗ ಇಂಗ್ಲಂಡದಿಂದ ೧೫೨ ಕೋಟಿ ರೂ. ಗಳ ಬೆಲೆಯುಷ್ಟು ವಸ್ತುಗಳನ್ನು ಆಯಾತ ಮಾಡಿತು. ೧೯೫೯ರಲ್ಲಿ ಅಮೇರಿಕೆಯಿಂದ ೧೯೫ ಕೋಟಿ ರೂ. ಗಳ ಹಾಗು ಇಂಗ್ಲಂಡದಿಂದ ೧೭೩ ಕೋಟಿ ರೂ. ಗಳ ಬೆಲೆಯುಷ್ಟು ವಸ್ತುಗಳನ್ನು ಆಯಾತ ಮಾಡಿದೆ. ಯುರೋಪದಲ್ಲಿಯ ಇತರ ದೇಶಗಳ ಹಾಗು ಸೋವಿಯತ್ ರಶಿಯ ಯುಗೊಸ್ಲಾವಿಯಾ, ಝೆಕೊಸ್ಲೊವಾಕಿಯಾ ಪೋಲಂಡ, ಪೂರ್ವ ಜರ್ಮನಿ ಮೊದಲಾದ ಕಮ್ಯುನಿಸ್ಟ ದೇಶಗಳು ಹಾಗು ಜಪಾನಗಳಿಂದ ನಾವೀಗ ಆಯಾತ ಮಾಡುತ್ತಿರುವೆವು.

## ನಿರ್ಯಾತ ಸರಕುಗಳಲ್ಲಿ ವೈವಿಧ್ಯ

ಸ್ವಾತಂತ್ರ್ಯಪೂರ್ವಕಾಲ ಹಾಗು ಸ್ವಾತಂತ್ರ್ಯಾನಂತರ ಭಾರತವು ವಿದೇಶಗಳಿಗೆ ನಿರ್ಯಾತ ಮಾಡುತ್ತಿರುವ ಸರಕುಗಳಲ್ಲಿ ವೈವಿಧ್ಯ ಕಂಡುಬಂದರೂ ಕೆಲವೇ ವಾಡಿಕೆಯ ಸರಕುಗಳು ಮಾತ್ರಇಂದಿಗೂ ನಿರ್ಯಾತದಲ್ಲಿ ಬಹು ಪ್ರಾಮುಖ್ಯವನ್ನು ಪಡೆದಿವೆ. ೧೯೪೭ಕ್ಕಿಂತ ಮೊದಲಿಗೆ ಹೆಚ್ಚಾಗಿ ಕಚ್ಚಾ ವಸ್ತುಗಳನ್ನೇ ಕಳಿಸುತ್ತಿತ್ತು. ಅನಂತರ ಮಾತ್ರ ಸಿದ್ಧ ವಸ್ತುಗಳ ನಿರ್ಯಾತ ಹೆಚ್ಚಿತು. ೧೯೪೮ ರಲ್ಲಿ ಕಚ್ಚಾ ಹತ್ತಿಯನ್ನು ೧೬೩,೦೦೦ ಟನ್ನುಗಳನ್ನು ನಿರ್ಯಾತ ಮಾಡಿದ್ದರೆ ೧೯೫೯ ರಲ್ಲಿ ಕೇವಲ ೧೮,೦೦೦ ಟನ್ನುಗಳನ್ನು ಅದು ಕೂಡ ಚಿಕ್ಕ ಎಳೆಯ ಅರಳೆಯನ್ನು ನಿರ್ಯಾತ ಮಾಡಲಾಗಿದೆ. ಸ್ವಾತಂತ್ರ್ಯಪೂರ್ವ ಹಾಗು ಅನಂತರ ಕೆಲಕಾಲದ ವರೆಗೆ ಎಣ್ಣೆಕಾಳುಗಳನ್ನು ನಿರ್ಯಾತ ಮಾಡುತ್ತಿದ್ದರೂ ಬರಬರುತ್ತ ಅವುಗಳ ನಿರ್ಯಾತ ಕಡಿಮೆಯಾಗುತ್ತ ಈಗ ನಿಂತೇ ಹೋಗಿದೆಯೆನ್ನುವ ಮಟ್ಟಿಗೆ ಬಂದಿದೆ. ಭಾರತವೀಗ ನಿರ್ಯಾತ ಮಾಡುವ ವಸ್ತುಗಳು ಸಣಬಿನ ತಯಾರಿಕೆಗಳು, ಉಣ್ಣೆ ಮತ್ತು ಅರಳೆ ಬಟ್ಟೆ, ತೊಗಲು ಮೊದಲಾದ ಪಾರಂಪರಿಕ ಸರಕುಗಳು, ಚಿಕ್ಕ ಚಿಕ್ಕ ಎಂಜಿನೀಯರಿಂಗ ಹಾಗು ವಿದ್ಯುತ್ ಸಲಕರಣೆಗಳು ಸಣಬಿನ ಕಾರಖಾನೆಗಳ ಯಂತ್ರಗಳು, ಡಿಜೈಲ ಎಂಜಿನ್‌ಗಳು, ಹೊಲಿಗೆಯ ಯಂತ್ರ, ವಿದ್ಯುತ್‌ಬೀಸಣಿಕೆ, ದೀಪ, ಸಂಗೀತ ವಿಜ್ಞಾನಗಳ ಉಪಕರಣಗಳು ಇತ್ಯಾದಿ. ವಿಭಜನೆಯಾಗುತ್ತಲೆ ಭಾರತದ ನಿರ್ಯಾತ ವ್ಯಾಪಾರಕ್ಕೆ ಹೊಡೆತ ಬಿದ್ದರೂ ಈಗ ಭಾರತವು ಮೊದಲಿನ ಮಟ್ಟವನ್ನು ಮುಟ್ಟುತ್ತಲಿದೆ.

ದ್ವಿತೀಯ ಮಹಾಯುದ್ಧಕ್ಕಿಂತ ಮೊದಲಿಗೆ ನಮ್ಮ ನಿರ್ಯಾತಗಳಲ್ಲಿ ನೂರಕ್ಕೆ ೩೦ ರಷ್ಟು ಮಾತ್ರ ಸಿದ್ಧ ಸರಕುಗಳಾಗಿದ್ದರೆ, ಇಂದು ಅದು ೪೦ ಕ್ಕಿಂತ ಹೆಚ್ಚಿಗೇರಿದೆ. ಅರ್ಧ ತಯಾರಿಸಿದ ಹಾಗು ಪೂರ್ಣ ತಯಾರಿಸಿದ ವಸ್ತುಗಳು ನಿರ್ಯಾತದಲ್ಲಿ ಹೆಚ್ಚು ಪಾಲು ವಹಿಸುತ್ತಿರುವವು.

## ವ್ಯಾಪಾರದ ಮುಖ್ಯ ಗಿರಾಕಿಗಳು

ಭಾರತದ ಸರಕುಗಳಿಗೆ ಮುಖ್ಯ ಗಿರಾಕಿಯೆಂದರೆ ಇಂಗ್ಲಂಡ. ಎಂದಿನಿಂದಲೂ ಅದೇ ಇದೆ. ೧೯೫೯ ರಲ್ಲಿ ನಮ್ಮ ನಿರ್ಯಾತದಲ್ಲಿ ಅದು ನೂರಕೆ ೩೦ ರಷ್ಟು ಪಾಲುಗೊಂಡಿತ್ತು. ಅಮೇರಿಕೆ' ಜಪಾನ ರಶಿಯಗಳು ಕ್ರಮವಾಗಿ ೨೮%, ೪.೫% ಮತ್ತು ೩% ರಷ್ಟು ಪಾಲುಗೊಂಡಿದ್ದವು. ೧೯೫೨ ರಲ್ಲಿ ೧೨೬.೫೮ ಕೋಟಿ ರೂ. ಗಳ, ೧೯೫೯ ರಲ್ಲಿ ೧೭೨.೧೭ ಕೋಟಿ ರೂ. ಗಳ ಬೆಲೆಯ ಸರಕುಗಳನ್ನು ಇಂಗ್ಲಂಡಕ್ಕೆ ನಿರ್ಯಾತ ಮಾಡಿದೆ. ಇವೆರಡೂ ವರುಷಗಳಲ್ಲಿ ನಮ್ಮ ಹೆಚ್ಚು ಸರಕುಗಳನ್ನು ಕಾಮನ್‌ವೆಲ್ಥ ರಾಷ್ಟ್ರಗಳೇ ಆಯಾತ ಮಾಡಿಕೊಂಡಿವೆ. ಅವುಗಳ ನಂತರದ ಸ್ಥಾನವು ವ್ಯಾಪಾರಿ ಒಪ್ಪಂದ ಮಾಡಿಕೊಂಡ ರಶಿಯ, ಇಜಿಪ್ತ, ಜಪಾನ ಪಶ್ಚಿಮ ಜರ್ಮನಿ, ಪೂರ್ವಜರ್ಮನಿ, ಚಿಲಿ ಇತ್ಯಾದಿ ದೇಶಗಳದು. ಹೀಗಿದ್ದರೂ ಇಂಗ್ಲಂಡಕ್ಕೆ ಮೊದಲಿನಷ್ಟುಪ್ರಮಾಣದಲ್ಲಿ ಭಾರತವು ನಿರ್ಯಾತ ಮಾಡುತ್ತಿಲ್ಲ. ಅಮೇರಿಕೆಯು ನಮ್ಮ ನಿರ್ಯಾತ ಪೇಟೆಯಲ್ಲಿ ಆಸ್ಥೆ ವಹಿಸುತ್ತಿರುವದು. ೧೯೫೨ ರಲ್ಲಿ ಅಮೇರಿಕೆಗೆ ೧೧೭ ಕೋಟಿ ರೂ. ಗಳ ಬೆಲೆಯ ಸರಕುಗಳನ್ನು ನಿರ್ಯಾತ ಮಾಡಿದ್ದರೆ ನಂತರದ ವರುಷಗಳಲ್ಲಿ ೯೦ ರಿಂದ ೧೦೦ ಕೋಟಿ ರೂ. ಗಳ ಬೆಲೆಯ ಸರಕುಗಳನ್ನು ನಿರ್ಯಾತ ಮಾಡಲಾಗಿದೆ. ಆಫ್ರೀಕಿಯದ ರಾಷ್ಟ್ರಗಳೊಡನೆ ನಮ್ಮ ವ್ಯಾಪಾರ ಸಂಬಂಧ ಕುದುರಿಸಲು ಪ್ರಯತ್ನಗಳು ನಡೆದಿವೆ.

ದ್ವಿತೀಯ ಮಹಾಯುದ್ಧಕ್ಕಿಂತ ಮೊದಲಿಗೆ ನಮ್ಮ ಭಾರತದ ವಿದೇಶ ವ್ಯಾಪಾರವು (ಆಯಾತ ಮತ್ತು ನಿರ್ಯಾತ) ಇಂಗ್ಲಂಡದೊಂದಿಗೆ ನೂರಕ್ಕೆ ೪೦ ರಷ್ಟಿದ್ದರೆ ಈಗ ನೂರಕ್ಕೆ ೨೬ ರಷ್ಟಿದೆ. ಇವುಗಳ ನಡುವಣ ಅಂತರವನ್ನು ಅಮೇರಿಕೆ ಹಾಗು ಪಶ್ಚಿಮ ಜರ್ಮನಿಗಳು ತುಂಬಿವೆ. ಅಮೇರಿಕೆಯು ನಮ್ಮ ಆಯಾತದಲ್ಲಿ ನೂರಕ್ಕೆ ೧೬ ರಷ್ಟು ನಿರ್ಯಾತದಲ್ಲಿ ನೂರಕ್ಕೆ ೨೨ ರಷ್ಟು ಪಾಲು ಹೊಂದಿದೆ.

ಇತ್ತೀಚಿನ ವರುಷಗಳಲ್ಲಿ ಭಾರತದ ವಿದೇಶ ವ್ಯಾಪಾರದಲ್ಲಿಯ ಹೊಸ ಸಂಗತಿಯೆಂದರೆ ರಶಿಯ ಮತ್ತು ಪೂರ್ವ ಯುರೋಪದ ರಾಷ್ಟ್ರಗಳೊಡನೆ ವ್ಯಾಪಾರಸಂಬಂಧ. ೧೯೫೫ರ ವರೆಗೆ ನಮ್ಮವ್ಯಾಪಾರವು ರಶಿಯದೊಡನೆ ಕೇವಲ ೫ ಕೋಟಿ ರೂ, ಗಳಷ್ಟಿತ್ತು. ೧೯೫೯ ರಲ್ಲಿ ೧೬.೬ ಕೋಟಿ ರೂ. ಗಳಷ್ಟು ಬೆಲೆಯ ವಸ್ತುಗಳ ಆಯಾತ ಮಾಡಿದ್ದರೆ ೩೦.೩೬ ಕೋಟಿ ರೂ. ಗಳ ಬೆಲೆಯ ವಸ್ತುಗಳನ್ನು ನಿರ್ಯಾತ ಮಾಡಿದೆ. ಏಶಿಯ ಆಫ್ರಿಕೆಗಳಲ್ಲಿ ನಮ್ಮೊಡನೆ ವ್ಯಾಪಾರ ಮಾಡುವ ರಾಷ್ಟ್ರಗಳಲ್ಲಿ ಬ್ರಹ್ಮದೇಶ, ಸಿಲೋನ, ಪಾಕಿಸ್ತಾನ, ಕೆನ್ಯಾ, ಇಜಿಪ್ತ, ಇರಾಣ ಸೌದಿ ಅರೇಬಿಯಾ ಮತ್ತು ಆಸ್ಟ್ರೇಲಿಯಾ ಮೊದಲಾದವು.

## ಇತರ ದೇಶಗಳೊಡನೆ ಸ್ಪರ್ಧೆ

ಭಾರತವು ಜಗತ್ತಿನ ಬಹುಸಂಖ್ಯಾಕ ರಾಷ್ಟ್ರಗಳೊಡನೆ ವ್ಯಾಪಾರಸಂಬಂಧವನ್ನಿಟ್ಟುಕೊಂಡಿದೆಯಷ್ಟೆ. ಈಗ ಅದಕ್ಕೆ ಬೇರೆ ಬೇರೆ ಪೇಟೆಗಳಲ್ಲಿ ಸ್ಪರ್ಧೆ ಕಾದಿದೆ. ಯುರೋಪದ ಪ್ರಮುಖ ಪೇಟೆಗಳಲ್ಲಿ ನಮ್ಮ ಬಟ್ಟೆಯೊಡನೆ ಜಪಾನಿನ ಬಟ್ಟೆಯೂ ಸ್ಪರ್ಧಿಸುತ್ತಿರುವದು. ಸಣಬು ಸ್ವಾತಂತ್ರಪೂರ್ವ ಕಾಲದಲ್ಲಿ ಅವಿಭಾಜ್ಯ ಭಾರತದ ಒಂದು ಗುತ್ತಿಗೆಯಾಗಿತ್ತೆಂದರೆ ಅತಿಶಯೋಕ್ತಿಯೇನಲ್ಲ. ಈಗ ಪಾಕಿಸ್ತಾನವು ಭಾರತದ ಸಣಬಿನೊಡನೆ ಸ್ಪರ್ಧಿಸುತ್ತಿದೆಯಲ್ಲದೆ ಅಮೇರಿಕೆ ಮೊದಲಾದ ಕೆಲ ರಾಷ್ಟ್ರಗಳಲ್ಲಿ ಸಣಬಿನ ಬದಲಾಗಿ ಬೇರೆ ವಸ್ತುಗಳನ್ನು ಉಪಯೋಗಿಸಲು ಪ್ರಯೋಗಗಳು ನಡೆದಿವೆ.

ಇವೆಲ್ಲಕ್ಕಿಂತ ಹೆಚ್ಚಿನ ಭಯ ಯುರೋಪಿನ ಸಾಮಾನ್ಯ ಪೇಟೆಯ ರಾಷ್ಟ್ರಗಳದು. ಅಲ್ಲಿ ಭಾರತದ ಸರಕುಗಳಿಗೆ ತುಂಬ ಸ್ಪರ್ಧೆಯಿದೆ. ಎರಡನೆಯ ರಾಷ್ಟ್ರಗಳ ಸರಕುಗಳ ಮೇಲೆ ಎಲ್ಲೆಡೆಗೆ ಒಂದೇ ಬಗೆಯ ಭಾರಿ ಸುಂಕವನ್ನು ಹೇರಿರುವ ಈ ಆರು ರಾಷ್ಟ್ರಗಳು (Inner six) ಪರಸ್ಪರರ ಸರಕುಗಳ ಮೇಲೆ ಬಹುಕಡಿಮೆ, ಸುಂಕವನ್ನು ಹೇರಿರುವವು. ೧೯೫೬—೫೭ ರಿಂದ ೧೯೬೨—೬೩ ರ ವರೆಗೆ ಪಶ್ಚಿಮ ಯುರೋಪಕ್ಕೆ ಭಾರತದ ನಿ ರ್ಯಾ ತ ವು ಕೇವಲ ೧೦ ಕೋಟಿ ರೂ. ಗಳಷ್ಟು ಹೆಚ್ಚಿದೆ. ಅದರಲ್ಲಿ ಇಟಲಿಯೊಂದಕ್ಕೆ ೨.೬ ಕೋಟಿ ರೂ. ಗಳಷ್ಟು ಹೆಚ್ಚು ನಿರ್ಯಾತ ಮಾಡಲಾಗಿದೆ. ಫ್ರಾನ್ಸಕ್ಕೆ ೮ ರಿಂದ ೯ ಕೋಟಿ ರೂ. ಗಳ ಬೆಲೆಯ ವಸ್ತುಗಳನ್ನು ಮಾತ್ರ ಈ ವರುಷಗಳಲ್ಲಿ ನಿರ್ಯಾತ ಮಾಡುತ್ತಿರುವದು. ಪಶ್ಚಿಮ ಜರ್ಮನಿಯೊಡನೆ ನಮ್ಮ ವ್ಯಾಪಾರಿ ಸಂಬಂಧವಿರುವದಷ್ಟೆ. ಆದರೆ ಯಾವಾಗಲೂ ಅದರೊಡನೆ ಭಾರತದ ವ್ಯಾಪಾರ ಪ್ರತಿಕೂಲ ಇರುವುದು. ೧೯೫೬-೫೭ ಗಲ್ಲಿ ಭಾರತದ ನಿರ್ಯಾತಕ್ಕಿಂತ ಜರ್ಮನಿಯಿಂದ ನಾವು ಆಯಾತ ಮಾಡಿದುದು ೭೪·೯೭ ಕೋಟಿ ರೂ. ಗಳಷ್ಟು ಹೆಚ್ಚಿದ್ದರೆ ೧೯೬೨-೬೩ ರಲ್ಲಿ ೮೦·೦೮ ಕೋಟಿ ರೂ. ಗಳಷ್ಟು ಹೆಚ್ಚು ವಸ್ತುಗಳನ್ನು ನಾವು ಆಯಾತ ಮಾಡಿದ್ದೇವೆ. ಸಾಮಾನ್ಯ ಪೇಟೆಯಲ್ಲಿ ಆ ರಾಷ್ಟ್ರಗಳ ಸಂಯುಕ್ತ ಸುಂಕದಿಂದಾಗಿ ಭಾರತೀಯ ವಸ್ತುಗಳ ವ್ಯಾಪಾರ ಹೆಚ್ಚುತ್ತಿಲ್ಲ. ಬ್ರಿಟನ್ನವೂ ಸಾಮಾನ್ಯ ಪೇಟೆಯನ್ನು ಸೇರಿದ್ದರೆ, ಭಾರತದ ನಿರ್ಯಾತ ವ್ಯಾಪಾರದ ಮೇಲೆ ಆಗುತ್ತಿದ್ದ ದುಷ್ಪರಿಣಾಮವು ಅಷ್ಟಿಷ್ಟಲ್ಲ. ಬ್ರಿಟನ್‌ವೊಂದರಲ್ಲಿ ಭಾರತೀಯ ವಸ್ತುಗಳಿಗೆ ಸುಂಕ ರಿಯಾಯತಿ ದೊರೆಯುತ್ತಿದೆ. ಅಂತೆಯೆ ಅಗ್ಗದಲ್ಲಿ ತಯಾರಾಗುವ ಜಪಾನಿನ ವಸ್ತುಗಳೊಂದಿಗೆ ಭಾರತೀಯ ವಸ್ತುಗಳು ಪೇಟೆಯಲ್ಲುಳಿದಿವೆ.

ಭಾರತದ ನಿರ್ಯಾತ ಮತ್ತು ಆಯಾತಗಳನ್ನು ಇಡಿಯಾಗಿ ಲಕ್ಷಿಸಿದಾಗ ನಿರ್ಯಾತಕ್ಕಿಂತ ಆಯಾತವೇ ಹೆಚ್ಚು ಎಂಬುದು ಕಂಡುಬರುವದು. ಈ ಪ್ರತಿಕೂಲ ವ್ಯಾಪಾರವನ್ನು ಹಾಗೆಯೇ ಮುಂದುವರಿಸಿಕೊಂಡು ಹೋಗುವದು ದೇಶದ ಆರ್ಥಿಕ ಪರಿಸ್ಥಿತಿಯ ಮೇಲೆ ಒಳ್ಳೆಯ ಪರಿಣಾಮ ಬೀರದು. ಆದುದರಿಂದ ನಮ್ಮ ಆಯಾತಗಳನ್ನು ಕಡಿಮೆಮಾಡಿ ನಿರ್ಯಾತಗಳನ್ನು ಹೆಚ್ಚಿಸುವದು ಈಗ ತುಂಬ ಅವಶ್ಯವಿದೆ. ಭಾರತದ ಆಯಾತ ಹೆಚ್ಚಲು ಔದ್ಯಮಿಕ ಕಚ್ಚಾ ಸರಕು, ಯಂತ್ರಸಾಮಗ್ರಿಗಳನ್ನು ತರಿಸುವದು ಮುಖ್ಯ ಕಾರಣವಾಗಿದೆ. ಆದರೆ ಉಳಿದ ಸರಕುಗಳನ್ನು ಪೂರ್ಣವಾಗಿ ಆಯಾತಮಾಡದೆ ಇಲ್ಲಿಯೇ ತಯಾರಿಸಲು ಯೋಗ್ಯ ಕ್ರಮಗಳನ್ನು ಕೈಕೊಳ್ಳುವದು ಬಹು ಅಗತ್ಯ. ವ್ಯರ್ಥವಾಗಿ ವಿದೇಶಿ ವಿನಿಮಯ ಖರ್ಚಾಗದಂತೆ ಚೆನ್ನಾಗಿ ನಿರ್ಬಂಧ ಹೇರುವದೂ ಅಷ್ಟೇ ಅಗತ್ಯವಾಗಿದೆ.

## ನಿರ್ಯಾತ ಹೆಚ್ಚಿಸಲು ಕ್ರಮಗಳು

ನಿರ್ಯಾತಗಳನ್ನು ಹೆಚ್ಚಿಸಲು ಭಾರತ ಸರಕಾರವು ಅನೇಕ ಕ್ರಮಗಳನ್ನು ಕೈಗೊಂಡಿರುವದು. ನಿರ್ಯಾತ ಹೆಚ್ಚಲು ಉದ್ದಿಮೆದಾರರು, ಜನರು ಹಾಗು ಸರಕಾರ ಎಲ್ಲರೂ ಸಹಕರಿಸುವದು ಮತ್ತು ಪ್ರಯತ್ನಿಸುವದು ಕರ್ತವ್ಯವಾಗಿದೆ. ಸರಕಾರವು ನಿರ್ಯಾತ ಹೆಚ್ಚಿಸುವ ಉಪಾಯಗಳನ್ನು ಕಂಡುಹಿಡಿಯಲು ಇತ್ತೀಚೆ ೧೯೬೨ ರಲ್ಲಿ ಮುದಲಿಯಾರ ಸಮಿತಿಯನ್ನು ನಿಯಮಿಸಿತ್ತು. ೧೯೪೮ ರಲ್ಲಿ ನಿರ್ಯಾತ ಹೆಚ್ಚಿಸುವ ಸಮಿತಿಯ ಹಾದಿಯಲ್ಲಿ ಇದು ಎರಡನೆಯದು. ಆಯಾತ ನಿರ್ಯಾತಗಳ ಸಮತೋಲ ನಿಧಿ, ಲೈಸೆನ್ಸ, ರೇಲ್ವೆದರ ರಿಯಾಯತಿ ಇತ್ಯಾದಿ ವಿಷಯಗಳನ್ನು ಕುರಿತು ಅವು ವರದಿ ಒಪ್ಪಿಸಿವೆ.

Export Promotion Councils (ನಿರ್ಯಾತ ಅಭಿವೃದ್ಧಿ ಮಂಡಳ) Export Risks Insurance (ನಿರ್ಯಾತ ವಿಮೆ) Foreign Trade Board (ವಿದೇಶ ವ್ಯಾಪಾರಿ ಮಂಡಳ), Export Promotion Directorate (ನಿರ್ಯಾತ ಅಭಿವೃದ್ಧಿ ಡೈರೆಕ್ಟೊರೇಟ) ಮೊದಲಾದ ಸಮಿತಿ ಸಂಸ್ಥೆಗಳನ್ನು ನಿರ್ಯಾತ ಹೆಚ್ಚಿಸಲು ಸರಕಾರವು ಸ್ಥಾಪಿಸಿದೆ. ಶಿಷ್ಟಮಂಡಳಗಳು, ಪ್ರತಿನಿಧಿಗಳು ಬೇರೆ ಬೇರೆ ದೇಶಗಳಿಗೆ ಹೋಗಿ ಭಾರತೀಯ ವಸ್ತುಗಳಿಗೆ ಪೇಟೆ ಇರುವ ಕುರಿತು ಅಭ್ಯಸಿಸಿಬಂದಿವೆ, ಅಭ್ಯಸಿಸುತ್ತವೆ. ನಿರ್ಯಾತಮಾಡುವ ವಸ್ತುಗಳ ಕಚ್ಚಾ ಸರಕುಗಳ ಆಯಾತದ ಮೇಲೆ ಕರ ರಿಯಾಯತಿಯನ್ನು ತೋರಲಾಗುತ್ತಿದೆಯಲ್ಲದೆ ಸಣಬು ತಯಾರಿಕೆ, ಮ್ಯಾಂಗನೀಜ ಅದಿರು, ಸಿಗಾರ, ಸೇಂಗಾ, ಸೇಂಗಾದೆಣ್ಣೆ, ಹಿಂಡಿ ಇತ್ಯಾದಿ ವಸ್ತುಗಳ ಮೇಲಿನ ನಿರ್ಯಾತ ಕರವನ್ನು ತೆಗೆಯಲಾಗಿದೆ. ವಿದೇಶಿ ಪೇಟೆಗಳನ್ನಭ್ಯಸಿಸಲು ಹಾಗು ವಿದೇಶಿ ಪೇಟೆಗಳನ್ನು ದೊರಕಿಸಲು ಹೋಗುವ ಯಾವದೇ ಸಂಘಸಂಸ್ಥೆಗಳ ಪ್ರತಿನಿಧಿಗಳಿಗೆ ವಿದೇಶಿವಿನಿಮಯದ ಸೌಲಭ್ಯವನ್ನು ಒದಗಿಸುತ್ತಿರುವದು.

ನಿರ್ಯಾತ ವ್ಯಾಪಾರ ಹೆಚ್ಚಿಸಲು ಇನ್ನು ಕೆಲ ಕ್ರಮಗಳನ್ನು ತೆಗೆದುಕೊಳ್ಳಬೇಕು. ಭಾರತೀಯ ವಸ್ತುಗಳ ಗುಣ ನಿಯಂತ್ರಿಸಲು ಹಾಗು ಕಾಯ್ದುಕೊಳ್ಳಲು ಅನೇಕ ಪ್ರಮಾಣ ಸಂಸ್ಥೆ (Standard Institutions) ಗಳನ್ನು ಸ್ಥಾಪಿಸಿರುವದು. ಈ ಸಂಸ್ಥೆಗಳು ವಿದೇಶಗಳಿಗೆ ಹೋಗುವ ವಸ್ತುಗಳ ಗುಣವೈಶಿಷ್ಟ್ಯಗಳನ್ನು ಪರೀಕ್ಷಿಸುತ್ತವೆ. ಕೃಷಿ ವಸ್ತುಗಳ ಮೇಲೆ ಇರುವ ಅಗ್‌ಮಾರ್ಕ (Ag mark) ಬಟ್ಟೆಗಳ ಮೇಲಿರುವ ITEX ಆ ಸಂಸ್ಥೆಗಳ ಗುರುತುಗಳು, ಹೀಗಿದ್ದರೂ ವಿದೇಶಗಳಿಗೆ ಹೋಗುವ ಅನೇಕ ಭಾರತೀಯ ವಸ್ತುಗಳ ಗುಣವು ಕಡಿಮೆ ಮಟ್ಟದ್ದಿರುವುದು. ನಮ್ಮಲ್ಲಿ ಬಳಕೆಗೆಂದು ಒಳ್ಳೆಯವಿಟ್ಟುಕೊಂಡು ಒಳ್ಳೆಯವಲ್ಲದ ವಸ್ತುಗಳನ್ನು ವಿದೇಶಕ್ಕೆ ಕಳಿಸುತ್ತಿರುವಾಗ ಅವುಗಳ ಮಾರಾಟ ಹೇಗೆ ಹೆಚ್ಚಬೇಕು? ನಿರ್ಯಾತ ಹೆಚ್ಚಿಸಲು ಕೆಲಮಟ್ಟಿಗೆ ಬಳಕೆಯನ್ನು ಭಾರತೀಯರು ಕಡಿಮೆ ಮಾಡಿದರೆ ಒಳಿತು. ನಿರ್ಯಾತ ಮಾಡುವ ವಸ್ತುಗಳನ್ನು ತಯಾರಿಸಲು ಹಾಗು ಬೆಳೆಸಲು ಕ್ರಮಗಳನ್ನು ಕೈಗೊಳ್ಳಬೇಕು. ನಮ್ಮ ನಿರ್ಯಾತ ವ್ಯಾಪಾರದಲ್ಲಿ ಪಾರಂಪರಿಕ ವಸ್ತುಗಳೇ ಪ್ರಮುಖವಾಗಿರುವವು. ಆದರೆ ಇನ್ನುಳಿದ ವಸ್ತುಗಳ ನಿರ್ಯಾತ ಹೆಚ್ಚಿಸಲು ಮತ್ತು ಹಳೆಯ ಪದ್ಧತಿಯ ನಿರ್ಯಾತವನ್ನು ಅವಲಂಬಿಸದಿರಲು ಪ್ರಯತ್ನಮಾಡಬೇಕು. ಭಾರತದ ನಿರ್ಯಾತ ವ್ಯಾಪಾರ ಹೆಚ್ಚಿಸಲು ಕೇವಲ ಪಾಶ್ಚಿಮಾತ್ಯ ರಾಷ್ಟ್ರಗಳನ್ನವಲಂಬಿಸದೆ ಆಫ್ರಿಕೆ ಏಶಿಯಗಳ ಅನಭಿವೃದ್ಧ ರಾಷ್ಟ್ರಗಳೊಡನೆ ಹಾಗೂ ಕಮ್ಯುನಿಸ್ಟರಾಷ್ಟ್ರಗಳೊಡನೆ ವ್ಯಾಪಾರ ಹೆಚ್ಚಿಸಲು ಸೂಕ್ತ ಕ್ರಮಗಳನ್ನು ಕೈಗೊಳ್ಳುವದು ಅವಶ್ಯವಿದೆ.

ದ್ವಿತೀಯ ಪಂಚವಾರ್ಷಿಕ ಯೋಜನೆಯಲ್ಲಿ ಪ್ರತಿವರ್ಷ ಸರಾಸರಿ ೬೧೨ ಕೋಟಿ ರೂ. ಗಳಷ್ಟು ಭಾರತವು ನಿರ್ಯಾತ ವ್ಯಾಪಾರ ಮಾಡಿದ್ದರೆ ತೃತೀಯ ಪಂಚವಾರ್ಷಿಕ ಯೋಜನೆಯಲ್ಲಿ ಪ್ರತಿವರುಷ ಸರಾಸರಿ ೭೪೦ ಕೋಟಿ ರೂ. ಗಳಷ್ಟು ವಸ್ತುಗಳನ್ನು ನಿರ್ಯಾತ ಮಾಡಬೇಕೆಂದಿರುವದನ್ನು ಇಲ್ಲಿ ನೆನೆಸಿಕೊಳ್ಳಬೇಕು. ಭಾರತದ ವಿದೇಶಿ ವ್ಯಾಪಾರದ ಅವಶ್ಯಕತೆಯೆಂದರೆ ನಿರ್ಯಾತ- ಕೇವಲ ನಿರ್ಯಾತ- ಹೆಚ್ಚಿಸುವದು.

ವಿದೇಶಿ ವ್ಯಾಪಾರದಲ್ಲಿ ಭಾರತದ ಸ್ಥಾನವು ಜಗತ್ತಿನ ಒಟ್ಟು ರಾಷ್ಟ್ರಗಳಲ್ಲಿ ಹದಿನೈದನೆಯದು. ಪ್ರತಿವರುಷ ನಮ್ಮ ವಿದೇಶಿ ವ್ಯಾಪಾರದ ಪಾಲು ಸಾವಕಾಶವಾಗಿ ಹೆಚ್ಚುತ್ತಲಿದೆ. ಹೀಗಿದ್ದರೂ ತಲಾ ವಿದೇಶಿ ವ್ಯಾಪಾರವು ಬಹು ಕಡಿಮೆ ಇರುವದು. ಆದರೆ ವಿದೇಶಿ ವ್ಯಾಪಾರವು ದೇಶದ ಅಭಿವೃದ್ಧಿಯನ್ನು ಸೂಚಿಸುವದಿಲ್ಲ. ಸಿರಿವಂತ ರಾಷ್ಟ್ರ ಅಮೇರಿಕೆ ಮತ್ತು ರಶಿಯಗಳ ಪಾಲು ಜಾಗತಿಕ ವಿದೇಶಿ ವ್ಯಾಪಾರದಲ್ಲಿ ಅಷ್ಟಾಗಿಲ್ಲವೆಂಬುದನ್ನು ಇಲ್ಲಿ ಗಮನಿಸಬಹುದು. ನಮ್ಮ ವಿದೇಶಿ ವ್ಯಾಪಾರ ಹೆಚ್ಚಿದೆಯೆಂಬುದೇನೊ ನಿಜ. ಆದರೆ ನಿರ್ಯಾತಕ್ಕಿಂತ ಆಯಾತವೇ ಹೆಚ್ಚಿದೆ. ಈ ಪ್ರತಿಕೂಲ ವ್ಯಾಪಾರವನ್ನು ಸನಿಪದಲ್ಲಿ ಸರಿಯಾಗಿ ಮಾರ್ಪಡಿಸುವದೇ ಇಂದಿನ ಆವಶ್ಯಕತೆಯಾಗಿದೆ.



# ಪ್ರೇಮಪತ್ರ ಬರೆಯುವುದು

ಇಟಗಿ ರಾಘವೇಂದ್ರ

ಧಾರವಾಡ

ಭಾಷಣ ಬರೆದುಕೊಡಬಹುದು, ಮಾನಪತ್ರಬರೆದುಕೊಡಬಹುದು, ಬೇರೆ ಏನನ್ನೂ ಬರೆಯಬಹುದು. ಆದರೆ ಪ್ರೇಮಪತ್ರ ಬರೆಯುವದೆಂದರೆ ಮಾತ್ರ ಯಾರೂ ಹಿಂದೇಟು ಹಾಕುವರು; ಸುಸ್ತಾಗುವರು, ಅದು ಅಷ್ಟು ಕಠಿಣವೆಂದೇನೂ ಅಲ್ಲ; ಆದರೆ ಪ್ರೇಮಪತ್ರದ ಒಕ್ಕಣಿಕೆ ಸ್ವಲ್ಪ ಹೆಚ್ಚುಕಡಿಮೆಯಾದರೂ ಬರೆದವ ಸಿಕ್ಕಿಹಾಕಿಕೊಳ್ಳುತ್ತಾನೆ. ಅಂತೇ ಅವುಗಳಲ್ಲಿ ತುಂಬ ವೈವಿಧ್ಯ. ಸಾಂಕೇತಿಕ ಪ್ರೇಮಪತ್ರಗಳೂ ಉಂಟು. ಈ ಕಲೆಯನ್ನು ನೀವು ಕರಗತಮಾಡಿಕೊಳ್ಳಬಯಸುವಿರಾದರೆ ಈ ಲೇಖನ ನಿಮಗೆ ಮಾರ್ಗದರ್ಶನ ಮಾಡುವುದು,

---

Mr. Rao. ಎಂದರೆ ರಾಜಕಾರಣಿಗಳಿಗೆ, ವರ್ತಕ-ವಕೀಲರುಗಳಿಗೆ ತುಂಬ ಆದರ, ವಿಶ್ವಾಸ! ಯಾಕಂದರೆ, ರಾಜಕಾರಣಿಗಳ ರಾಜಕೀಯ ಹೇಳಿಕೆ, ಅವರ ಅಧ್ಯಕ್ಷ ಭಾಷಣ, ಹೈಕಮಾಂಡನಿಂದ ಬರುವ ಒದೆ-ಪ್ರಶ್ನೆಗಳಿಗೆ ವಿವರಣೆ-ಉತ್ತರ, ವರ್ತಕರ ವಾರ್ಷಿಕ ಅಧ್ಯಕ್ಷ ಭಾಷಣ, ವಕೀಲರ ನಾಡಹಬ್ಬ ಭಾಷಣ- ಇವನ್ನೆಲ್ಲ ಬರೆದು ಕೊಡುವವರು, ಗಿಳಿಪಾಠಮಾಡಿಸುವವರು ಇವರೇ. ಇವರಿಲ್ಲದಿದ್ದರೆ ಅವರೆಲ್ಲರ ಕೈ ಮುರಿದು ಹೋಗುತ್ತದೆ; ನಾಲಗೆ ತತ್ತರಿಸಿಹೋಗುತ್ತದೆ. ಭಾಷಣಕ್ಕೆ ಬದಲು ಬೆವರು ಸುರಿಯತೊಡಗುತ್ತದೆ; ಹೇಳಿಕೆಗಳಿಗೆ ತಾಳ—ಮೇಳ ಇಲ್ಲದೆ ಹೋಗುತ್ತದೆ. ಹೈಕಮಾಂಡುಗಳ ಒದೆ-ಪ್ರಶ್ನೆ ಅಲ್ಲೆ ಉಳಿಯತ್ತದೆ. ಇವುಗಳನ್ನೆಲ್ಲ ನಿಭಾಯಿಸುವುದರಲ್ಲಿ Mr. Rao ನಿಷ್ಣಾತರು. ಮಧ್ಯರಾತ್ರಿಯಲ್ಲಿ, ಗಾಢನಿದ್ರೆಯಿಂದ ಎಬ್ಬಿಸಿ ಇವರಿಂದ ಧೈರ್ಯವಾಗಿ ಹೇಳಿಕೆ ಬರೆಸಿಕೊಂಡು ಹೋಗಬಹುದು: ಭಾಷಣದ ಪ್ರತಿಗಳನ್ನು ಸಿದ್ಧ ಮಾಡಿಟ್ಟುಕೊಳ್ಳಬಹುದು. ಸ್ವಲ್ಪಾದರೂ ತಡವರಿಸದ ಮಹಾಪ್ರಾಣಿ ಈತ! ಇಂಥವರು-ಈ ರಾವ್— ಒಮ್ಮೆ ಒಳ್ಳೆ ಪೇಚಿನಲ್ಲಿ ಸಿಕ್ಕಿಕೊಂಡರು, ಏನನ್ನು ಬೇಕಾದರೂ ಹೇಗೆ ಬೇಕಾದರೂ ಎಷ್ಟು ಬೇಕಾದರೂ ಬರೆಯಬಲ್ಲೆ ಎಂಬ ಜಂಭವುಳ್ಳ ಇವರು ಬಾಯಿ ಬಾಯಿ ಬಿಡತೊಡಗಿದರು! ಮಟ ಮಟ ಮಧ್ಯಾಹ್ನ ಬಿಸಿಲು ಬಲು ಚುರುಕಾಗಿತ್ತು. Rao ಅವರ ಮನೆಯಲ್ಲೇ ನಿಂಬಿಹಣ್ಣಿನ ಪಾನಕ ಗಿಟ್ಟಿಸುವದನ್ನು ನಿರ್ಧಾರ ಮಾಡಿಕೊಂಡು ಹೋದೆ. ಕುರ್ಚಿಯ ಬೆನ್ನಿಗೆ ಆತು, ಹಲ್ಲಿನಲ್ಲಿ ಪೆನ್ಸಿಲ್ ಸಿಕ್ಕಿಸಿಕೊಂಡು, Table ಮೇಲೆ ಕಾಲುಗಳನ್ನು ವಿಶ್ರಮಿಸಲು ಬಿಟ್ಟು, ಬಹು ವಿಚಾರಮಗ್ನ-ಭಂಗಿಯಲ್ಲಿದ್ದರು ರಾವ್! "ಏನ್ರೀ ಯಾಕೋ ಬಹಳ ಆಲೋಚನೆಯೊಳಗ ಬಿದ್ದಾಂಗ ಅದ!"— ಎಂದೆ, ಹಲ್ಲುಕಿರಿದು.

ಮೇಷ್ಟ್ರನ್ನು ಕಂಡ ಹುಡುಗನಂತೆ ಬೆದರಿದ ಅವರು. ಸರ್ರನೆ ಕೆಳಗೆ ಕಾಲುಬಿಟ್ಟು 'ಬನ್ನಿ, ಬನ್ನಿ'—ಎಂದು ಸಲಿಗೆಯಿಂದ ದೂರ ಸರಿದವರಂತೆ ಮಾತಾಡಿದರು. ಎಂದೂ ಹೀಗೆ ಕರೆದಿದ್ದಿಲ್ಲ.— 'ಇವತ್ತೇನು? ಇದು?' ಎಂದು ಗಾಬರಿಯಾದೆ. ಅಷ್ಟರಲ್ಲಿ ಶ್ರೀಮತಿ ರಾವ್ ಬಂದು, 'ಇವೊತ್ತು ಬೆಳಗಿಂದ ಹೀಗೆ ಇದ್ದಾರ್ರೀ, ಊಟ ಇಲ್ಲ. ಇನ್ನೂ ಸ್ನಾನ ಕೂಡಾ ಇಲ್ಲ.' ಎಂದು ದೂರುಕೊಟ್ಟರು. ಏನು ರಾಯರೇ, 'ಏನು ಸಮಾಚಾರ!' ಎಂದೆ. ಎತ್ತೋ ಧ್ಯಾನ-ಏನೋ ವಿಚಾರ—'ಆ' ಎಂದರು ಅಷ್ಟೇ. ಕಾರಣ ಆ ಮೇಲೆ ಗೊತ್ತಾಯಿತು—ಅವರಿಗೆ ಒಂದು 'ಪ್ರೇಮಪತ್ರ' ಬರೆದುಕೊಡಬೇಕಾಗಿತ್ತಂತೆ, ತಮ್ಮ ಬಬ್ಬ ಹಳೆ ಸ್ನೇಹಿತರಿಗೆ. ಹೇಳಿಕೆ, ರಾಜೀನಾಮೆ, ಭಾಷಣಗಳನ್ನು, ಭುರ್ರೆಂದು ಬರೆದುಕೊಡುವ ಈ ಲೇಖನಿಪಟು ಬೆಳಗಿನಿಂದ ಒದ್ದಾಡಿದರೂ ಹೇಗೆ ಪ್ರೇಮಪತ್ರವನ್ನು ಆರಂಭಿಸಬೇಕು, ಅದೂ ತನ್ನೊಬ್ಬ ಅತ್ಯಂತ ಆತ್ಮೀಯ ಸ್ನೇಹಿತನಿಗೆ—ಎಂಬುದು ಹೊಳೆದಿರಲಿಲ್ಲ! ಅವರ ಸ್ಥಿತಿ ನೋಡಿ ಕನಿಕರ ಎನಿಸಿತು, ನನಗೆ. ಪ್ರೇಮಪತ್ರ ಬರೆವುದು ನಿಜವಾಗಿಯೂ ಇಷ್ಟು ಕಠಿಣವೆ!

*

(ನೀನು ಒಪ್ಪಿದರೆ, ನಾನು ಮದುವೆಯಾಗಬೇಕೆಂದಿರುವ) ಸಖಿಯೇ, ನಿನ್ನನ್ನು ಕಂಡಾಗಿನಿಂದ ನನ್ನಲ್ಲಿ ಹೊಸ ಚೈತನ್ಯ ಮೂಡಿದೆ. ನಿನ್ನ ಮಾತು ನನಗೆ ಅಮೃತಸಮ! ನಿನ್ನ ರೂಪು ಮಗಮಗಿಸುವ ಮಲ್ಲಿಗೆ ನನ್ನ ಕಣ್ಣಿಗೆ, ಮನಸ್ಸಿಗೆ; ನಿನ್ನ ನಡಿಗೆ, ನಿನ್ನ ಜಡೆ, ನಿನ್ನ ಬೆಡಗು, ಜಬರು ಎಲ್ಲವುಗಳಿಂದ ಮೋಹಿತನಾದ ನಾನು, ನಿನ್ನನ್ನೂ ಏನೆಂದು ಕರೆಯಲಿ, ತಿಳಿಯದಾಗಿದೆ— ರಾಣಿ, ಎನ್ನಲೇ, ನೀನು ಒಪ್ಪುವಿಯೋ ಇಲ್ಲವೋ; (ಪ್ರಿಯೆ — ಎಂದರೆ ನಾನು ನಿನಗೆ ಅಪ್ರಿಯನೋ ಏನೋ, ನನಗೆ ಸಂಸ್ಕೃತ ಬಾರದು, ಕನ್ನಡ ತಿಳಿಯದು (ಕೆ. ಎಸ್.) ನರಸಿಂಹಸ್ವಾಮಿಯ ಚೆನ್ನೆ — ಚೆಲುವಾಗಿಲ್ಲ. ಮತ್ತೇನೆಂದು ಕರೆಯಬೇಕೋ ತಿಳಿಯದಲ್ಲ ಇರಲಿ, ಸಖಿಯೇ ನಿನ್ನನ್ನು ಕಾಣಲು ನಿನ್ನ ಮಾತು ಕೇಳಲು...

ಇತಿ ನಿನ್ನ—?"—

—ಇದೊಂದು ಪ್ರೇಮಪತ್ರದ ಸ್ಯಾಂಪಲ್. ಮದುವೆಗೆ ಮುನ್ನ ನನ್ನ ಶೋ—ಳಿಗೆನಾನು ಬರೆದ ಮೊದಲ ಪತ್ರ ಇದು—ಎಂದೇ ಭಾವಿಸಿಕೊಳ್ಳಿ! ಯಾವ ಬಗೆಯ ಪತ್ರವನ್ನಾದರೂ ಬರೆಯಬಹುದು.ಆದರೆ ಪ್ರಣಯಪತ್ರ ಬರೆಯುವುದು ಅಷ್ಟುಸುಲಭವಲ್ಲ. ಈ ಸಲ ಹಾಸ್ಟೆಲ್ ಫೀ ಹೆಚ್ಚಿಸಿದ್ದಾರೆ. ಎಕ್ಸಕರ್ಷನ್‌ಗೆ ಹೋಗಬೇಕಾಗಿದೆ. N. C. C. Uniform ಬೇಕು ಎಂದು ಮುಂತಾಗಿ ತಂದೆಯಿಂದ ಹಣ ಕೇಳುವ ಪತ್ರಗಳನ್ನು ಮಾರ್ಮಿಕವಾಗಿ ಬರೆಯಬಹುದು. ಮಳೆ ಆಗಿಲ್ಲ; ಬೆಳೆ ಸಾಧಾರಣ; ನಿಮ್ಮ ತಂಗಿ ಮದುವೆಯ ಸಾಲ ಇನ್ನೂ ತೀರಿಲ್ಲ; ನಿಮ್ಮಮ್ಮನ ಅಣ್ಣನಿಗೆ ಅಷ್ಟು ಹಣ ಕಳಿಸಿದೆ- ಕಾರಣ ನೀನು ಕೇಳಿದ ೩೦೦ ರೂ. ಗಳನ್ನು ಕಳಿಸಲು ಆಗುವದಿಲ್ಲ. ೧೫೦ ರೂ. ಗಳಲ್ಲಿಯೇ ಹೇಗಾದರೂ ನಿರ್ವಹಿಸಿಕೋ— ಎಂದು ತಂದೆ ತನ್ನ ಮಗನಿಗೆ ಬರೆಯಬಹುದು. ಮೈಯಲ್ಲಿ ಹುಷಾರಿಲ್ಲ; ಮನೆಯಲ್ಲಿ ಹೆಂಡತಿಗೆ ಕಾಯಿಲೆ, ಮಕ್ಕಳನ್ನ ಆಸ್ಪತ್ರೆಗೆ ಕರೆದುಕೊಂಡು ಹೋಗಬೇಕಾಗಿದೆ, ನಮ್ಮಜ್ಜಿಯ ತಮ್ಮನ ಮೊಮ್ಮಗಳ ಮದುವೆ— ಎಂಬ ರಜಾಪತ್ರಗಳನ್ನೂ ಬಹು ಸುಂದರವಾಗಿ, ಸುದೀರ್ಘವಾಗಿ ಮನಕರಗುವಂತೆ ಬರೆಯಬಹುದು, ನಿಮ್ಮ ಬಾಕಿ ಸಂದಾಯವಾಗಿಲ್ಲ; ಪ್ರೀಮಿಯಂ ಕೊನೆಯ ದಿನ ಇದು; ಹುಡುಗನ ಫೀ ಕೊಟ್ಟಿಲ್ಲ—ನಾಳೆ ಕೊನೆ ತಾರೀಖು, ಕೊಡದಿದ್ದರೆ ಹೆಸರು ತೆಗೆಯಬೇಕಾಗುತ್ತದೆ; ನಿಮ್ಮ ಕೆಲಸ ತೃಪ್ತಿದಾಯಕವಿಲ್ಲ, ಆದ್ದರಿಂದ ಮುಂದಿನ ತಿಂಗಳಿಂದ ಕೆಲಸಕ್ಕೆ ಬರುವ ಅಗತ್ಯವಿಲ್ಲ; ನಿಮ್ಮ ಸಲಹೆಗೆ ತುಂಬ ಕೃತಜ್ಞತೆಗಳು— ಎಂಬ ಸಂಕ್ಷೇಪ ಒಕ್ಕಣಿಕೆಗಳನ್ನು ಕ್ಷಣಾರ್ಧದಲ್ಲಿ ಬರೆದು ಬಿಡಬಹುದು.

ಆದರೆ ಪ್ರೇಮಪತ್ರಗಳನ್ನು ಬರೆಯುವದು

ಸುಲಭವೂ ಅಲ್ಲ—ಸರಳವೂ ಅಲ್ಲ! ತುಟಿ ಕಚ್ಚಿಕೊಂಡು ಕುಳಿತರೂ ಪ್ರೇಮಪತ್ರವನ್ನು ಹೇಗೆ ಆರಂಭಿಸಬೇಕು, ಎಲ್ಲಿಗೆ ಮುಕ್ತಾಯಗೊಳಿಸಬೇಕು—ಎಂಬುದು ಹೊಳೆಯದೆ ಹೋಗುತ್ತದೆ. ಸಂಕೇತಪತ್ರವಂತೂ ಇನ್ನೂ ಕಠಿಣ. "ಒಂದೇ ಮಾತು ಬರೆದುಬಿಡಬೇಕೆಂದು ಕುಳಿತರೆ, ಒಂದು ಹೊತ್ತಿಗೆಯಷ್ಟನ್ನೇ ಬರೆಯತೊಡಗಿದ್ದೇನೆ-ಅಯ್ಯೋ ಪ್ರೇಮವೆ ನಿನ್ನ ಪ್ರಭಾವವೇ ಅಂಥಾದ್ದು"--ಎಂದು ಒಬ್ಬ ಕವಿ ಉದ್ಗಾರ ತೆಗೆದಿದ್ದಾನೆ. ಬಲಿತ ಪ್ರಣಯದ ಪತ್ರಗಳನ್ನು ಬರೆಯುವದು ಅಷ್ಟೇನೂ ಕಷ್ಟಕರ ಅಲ್ಲವಂತೆ. ನಿರ್ಗಾಯಕ ಪ್ರೇಮಪತ್ರ ರಾಜರತ್ನಂ ಅವರ ಚುಟುಕವಾಗಬಹುದು—

**ಬರುವೆನೆಂದೆಯಾ ಅರಲೊಂದ ಕಳುಹು !**
**ಬರಲಾರೆನೆಂದೆಯಾ ಸರಳೊಂದ ಕಳುಹು**

ಬರೆದು ರುಜು ಕೂಡ ಹಾಕದೇ ಮುಗಿಸಿಬಿಡಬಹುದು. ಆದರೆ ಆರಂಭದ ಪ್ರಣಯದುಂಬಿಯಂತೆ ಸದಾ ಗುಂಯ್‌ಗುಡುತ್ತಿರುತ್ತದೆ; ಸದಾ ಹೂವನ್ನು ಮುತ್ತುವ ಗುಂಗು ಅದಕ್ಕೆ. ಆಫೀಸು, ಕಾಲೇಜು, ಮನೆ ಇದಕ್ಕೆ ಅವಕಾಶ ನೀಡುವುದಿಲ್ಲ. ಆದ್ದರಿಂದ ಆ ಗುಂಗಿಯ ಕಡಿತವನ್ನು ಪತ್ರ ಬರೆದು ಹಗುರು ಮಾಡಿಕೊಳ್ಳುವುದು ಅನಾದಿಕಾಲದಿಂದಲೂ ನಡೆದುಬಂದ ರೂಢಿ. ಕಮಲನಾಳದಿಂದ ಕಮಲಪತ್ರದ ಮೇಲೆ ಕಮಲಾಕ್ಷಿಯುಳ್ಳ ಕೋಮಲಾಂಗಿಯರು ತಮ್ಮ ಪ್ರಿಯತಮರಿಗೆ ಪತ್ರ ಬರೆದು ಪ್ರೇಮವನ್ನು ತೋಡಿಕೊಳ್ಳುತ್ತಿದ್ದರು ಎಂಬುದಕ್ಕೆ ಕಾವ್ಯಗಳೇ ಸಾಕ್ಷಿ, ಶಕುಂತಲೆಯೇ ಇದರ ಅಮರಸಂಕೇತ! ಆಗಿನ ಕಾಲದ 'ಹಂಸ' ಪ್ರೇಮಪತ್ರಗಳನ್ನು ಒಯ್ಯುವ ವಿಶ್ವಾಸಾರ್ಹ ದೂತ ಆಗಿರಬೇಕು. ದಮಯಂತಿ ಕಳಿಸಿದ ಪ್ರೇಮಸಂದೇಶವನ್ನು ಹೊತ್ತ 'ಹಂಸ' ಪ್ರೇಮಿಗಳಿಗೆ, ಕವಿಗಳಿಗೆ ಸ್ಫೂರ್ತಿಯ ಚಿಂತನಸೆಲೆ—ಪ್ರೇಮೋನ್ಮತ್ತನಾದ ಕಾಳಿದಾಸನ ಯಕ್ಷನಿಗೆ, ಯಾರಾದರೂ ವ್ಯಕ್ತಿ ಸಿಕ್ಕುವವರೆಗೂ ಕಾಯುವಷ್ಟು ವ್ಯವಧಾನವಿಲ್ಲ. ಒಂದು ಮೇಘ ರಾಮಗಿರಿಯ ಮೇಲೆ ತೂನೆದಾಡುತ್ತ ಬಂತು. ಅದರೊಂದಿಗೆ ತನ್ನ ಪ್ರಣಯಿನಿಗೆ ಒಂದು ಪ್ರೇಮಸಂದೇಶ ಕಳಿಸಿಕೊಟ್ಟ— ಚೇತನಾಚೇತನಗಳ ಪರಿವೆ ಇಲ್ಲದೆ! ನನ್ನೊಬ್ಬ ಕವಿಮಿತ್ರ ಇದ್ದಾರೆ—ಈಚೆಗೆ ಅವರು ಪ್ರಣಯಕೊಳ್ಳದಲ್ಲಿ ಬಿದ್ದುಬಿಟ್ಟಿದ್ದಾರೆ. ಆದಕ್ಕಾಗಿ ಯಾವಾಗಲೂ ಪ್ರಣಯಿನಿಯೊಂದಿಗೆ ಇರಬಯಸುತ್ತಾರೆ—ಇಲ್ಲವೆ ಅವಳ ನೆನಹಿನಲ್ಲಿ ಅದ್ದಿಕೊಂಡಿರಬಯಸುತ್ತಾರೆ. ಲಾಲಬಾಗಿನ ಯಾವುದೋ ನವಿಲೋ ಗಿಳಿಯೋ ಕೆಲವು ಸಲ ಸಿಂಹ-ಹುಲಿಗಳಾಕಾರದ ಗಿಡಕಂಟಿಗಳ ನೆರಳಿನಲ್ಲಿದ್ದುಕೊಂಡು! ಅವರನ್ನು ನೋಡಿದಾಗಲೆಲ್ಲ ಅವರು ಏನನ್ನೊ ಕಳೆದುಕೊಂಡ ಶಾಲಾಬಾಲಕನಂತೆ ಕಾಣುತ್ತಾರೆ!

ಹೋದ ಭಾನುವಾರ ನನ್ನ ಶೋ— ಊರಲ್ಲಿ ಇರಲಿಲ್ಲ. ಶ್ರೀರಂಗಪಟ್ಟಣದಲ್ಲಿಯ ತನ್ನ ನೆಂಟರನ್ನು ನೋಡಿಕೊಂಡು, ಮಂಡ್ಯದಲ್ಲಿ ತನ್ನ ಸೋದರ ಮಾವನ ಮಲತಂಗಿಯ ಮಗಳ ಮೊದಲ ಮಗುವಿನ ನಾಮಕರಣ ಮುಗಿಸಿಕೊಂಡು ಬುಧವಾರವೋ







ಅಟರ ಮರುದಿನವೋ ಬರುವವಳಿದ್ದಳು. ರಜಾ ದಿನ ಒಬ್ಬನೇ ಇರಲು ಬೇಸರವಾಗಿ ನನ್ನ ಈ ಕವಿ ಮಿತ್ರರನ್ನು ಹುಡುಕಿಕೊಂಡು ಹೊರಟೆ. ಈ ಬೇಟಿಗೆ ಅವರ ಕವನದ ಕೊರೆತ ಇರದೆ ಕಿವಿಗಳು ಒಂದು 'ತರಹೆ' ಆಗಿದ್ದವು. ಅವುಗಳಿಗೆ ಸ್ವಲ್ಪ ಶಾಸ್ತಿ ಮಾಡಿಸಬೇಕೆಂದು ಇಚ್ಛೆ ಇತ್ತು. ಮನೆಯಲ್ಲಿ ಸಿಕ್ಕಲಿಲ್ಲ, ಹಾಗಾದರೆ ಇನ್ನೆಲ್ಲಿರಬಹುದು ಈ ಕವಿಶಿಖಾಮಣಿ?— ಎಂದು ಯೋಚಿಸುವ ಮೊದಲೇ ಕಾಲುಗಳು ಲಾಲ್‌ಬಾಗ ಕಡೆ ಹೊರಟುನಿಂತಿದ್ದವು. ಸಮಯ ಸಿಕ್ಕಾಗಲೆಲ್ಲ ನಾವಿಬ್ಬರು ಅಲ್ಲಿಗೆ ಹೋಗುವುದು ಒಂದು ರೂಢಿ. ಈ ಕೆಲ ದಿನಗಳಿಂದ ನಾನು ಹೋಗಿರಲಿಲ್ಲ. ಹೋದಾಗಲೆಲ್ಲ ಗ್ಲಾಸ್‌ಹೌಸ್ ಬಳಿ ಅಲ್ಲೆಲ್ಲ ಕುಳಿತು ಹರಟೆ ಹೊಡೆಯುತ್ತಿದ್ದೆವು. ಈಗಲೂ ಹಾಗೇ ಎಂದು ಅಲ್ಲಿಗೆ ಹೋದೆ. ಆಸಾಮಿ ಇರಲಿಲ್ಲ. ಸುತ್ತ ಎಲ್ಲ ಕಡೆ ಹುಡುಕಿದೆ. ಕಮಲವಿರದ ತಾವರೆ ಕೊಳದ ಬಳಿ ಕುಳಿತಿದ್ದರು ಕವಿವರ್ಯರು. ಹಿಂದಿನಿಂದ ಹೋಗಿ ಏನಯ್ಯಾ ಎಂದು ಜೋರಾಗಿ ಕೂಗಿದೆ. ಬೆಚ್ಚಿಬಿದ್ದು ಕವಿಗಳು ಸ್ವಲ್ಪ ಆಚೆ ಹಾರಿ 'ಯಾರು?' ಎನ್ನುತ್ತ ಭೂಲೋಕಕ್ಕೆ ಬಂದರು. ಮಗ್ಗುಲಲ್ಲೆ ಇದ್ದ ಹಲವಾರು ಹಾಳೆಗಳು ಈಚೆ ಸೆರೆತಪ್ಪಿಸಿಕೊಂಡ ಳಾರ ಚಳವಳಿಗಾರರಂತೆ, ಹೊರಬಂದವು. ಅವುಗಳನ್ನು ಚಂಗನೆ ಹಾರಿ ನನ್ನ ವಶಪಡಿಸಿಕೊಂಡೆ. ಅವರು ದಮ್ಮಯ್ಯ ಗುಡ್ಡೆ ಹಾಕಿದರೂ ಜಗ್ಗಲಿಲ್ಲ. ಅವುಗಳ ತುಂಬ ಆತುರದ ಕಣ್ಣು ಹೊರಳಿಸಿ ಓದಿದೆ. 'ಎಂದು ಬರುವೆ ರನ್ನೆ!' 'ಕೈಬಿಡದಿರು— ಗೆಳತಿ!' 'ತುಂತುರ ಹನಿಗಳು ಬೆವರಿನ ಮಣಿಗಳ ಹಣೆಯಲಿ ಧರಿಸಿಹ ತಾವರೆ' 'ಅರಳಿ ನಿಂತ ಕಮಲ' 'ಪ್ರೇಮದೇವಿ' ಎಂಬ ತಲೆಬರಹದ ಕಟ್ಟು ಅದು. ಕಟ್ಟಳೆ

ಇಲ್ಲದೆ ಬರೆದವುಗಳು...... ಏನಯ್ಯ ಇವೆಲ್ಲ? ಎಂದೆ ಜೋರಾಗಿ! ಕವಿಗಳು ನಕ್ಕರು ಮಾತ್ರ. ನಿನಗೇನು ತಿಳಿಯುತ್ತೆ? ಎಂಬ ಭಾವ ಅವರಲ್ಲಿ ಅಡಗಿತ್ತು. ಈ ಕವಿಗಳ ಅಭಿಪ್ರಾಯದಲ್ಲಿ ಪ್ರೇಮಕಾವ್ಯ ಬರೆಯುವುದು ತುಂಬ ಸುಲಭವಂತೆ, ಪ್ರೇಮಪತ್ರ ಬರೆಯಲು ತೊಡಗಿದರೆ ಅದಾವುದೋ ಶಕ್ತಿ ತಡೆದು ನಿಲ್ಲಿಸಿ ಪದ್ಯ ಬರೆ ಎಂದು ಹೇಳುತ್ತದಂತೆ. ಆಸಾಮಿಗೆ ನಿಶ್ಚಿತವಾಗಿಯೂ ಪ್ರೇಮ ತಲೆಗೇರಿದೆ ಎಂದುಕೊಂಡು ಅವರನ್ನು ಅಲ್ಲಿಯೇ ಬಿಟ್ಟು ನಾನು ರೆಸ್ಟೋರೆಂಟಿಗೆ ಹೋಗಿ ಕಾಫಿ ಕುಡಿದೆ.

ಪ್ರೇಮಪತ್ರದ ಒಕ್ಕಣಿಕೆಯಲ್ಲಿ ಪ್ರಾರ್ಥನೆ ಮೊದಲ ಮೆಟ್ಟಲು ನಿರೀಕ್ಷೆ. ಮುಂದಿನದು ಅಭಿವಚನ ಮೂರನೆಯದು. ಹುಸಿಮುನಿಸು ನುಸಳಲೂಬಹುದು. ಸರ್ವಾರ್ಪಣ ಆಗದ ಕೊನೆಯ ಮೆಟ್ಟಲು ಒಬ್ಬರೊಬ್ಬರನ್ನು ನೆಚ್ಚಿರದಿದ್ದರೂ ನೀನೇ ನನ್ನ ಸರ್ವಸ್ವ, ನೀನಿಲ್ಲದ ಬಾಳು ಬರಿದಾಗುವದು ಎಂಬ ಮಾತು ಅಲ್ಲಿ ಬರಲೇಬೇಕು. ಅಂತೆಯೇ ಪ್ರೇಮಿ ಕವಿಯಾಗುತ್ತಾನೆ. ಕವಿ ಹುಚ್ಚನಾಗುತ್ತಾನೆ. ಆದ್ದರಿಂದಲೇ "ಪ್ರೇಮಿ ಹುಚ್ಚು" ಎಂದು ಯಾಕೆ ಅನ್ನಬಾರದು ಎಂದ

ನನ್ನ ಗಣಿತಜ್ಞ ಮಿತ್ರರು ಒಂದು ಸಲ ವಾದಿಸಿದರು. ಅವರಲ್ಲಿ ನೀವು ಒಬ್ಬರು ಎಂದು ಒಪ್ಪಿಕೊಂಡೆ ಅನ್ನಿ! ನಾನೇಕೆ, ನಿತ್ಯ ನಡೆಯುತ್ತಿರುವ ನೂರಾರು ಸಿನೇಮಾಗಳನ್ನು ನೋಡಿದ ನೀವೆಲ್ಲ ಒಪ್ಪಿಕೊಳ್ಳುತ್ತೀರಿ. ಖಂಡಿತವಾಗಿಯೂ!

*

"ಪ್ರಿಯಕರ, ಪರದೇಶಿ, (ಹಿಂದೀ ಮತ್ತೆ ಕನ್ನಡ ಅಲ್ಲ) ನೀನು ಹೊರಟುಹೋಗುವಾಗ ನನ್ನ ಹೃದಯವನ್ನೂ ಒಯ್ದೆ—ಆದರೆ ನಿನ್ನ ಹೃದಯವನ್ನು ನನಗೆ ಕೊಡದೇಹೋದೆ. ಮರೆತಿರಬೇಕು ಎಂದು ಭಾವಿಸುತ್ತೇನೆ. ಆದ್ದರಿಂದಲೇ ನಿನಗೆ ನನ್ನ ಪರಿವೆ ಇಲ್ಲ. ನಾನು ಇಲ್ಲಿ ಕೊರಗಿ ಕೊರಗಿ ಗಾಳಿಗನ ಕರುವಾಗಿದ್ದೇನೆ; ನೀನು ಮಾತ್ರ ಮಂತ್ರೀ ಪುತ್ರನಂತೆ ಮೆರೆಯುತ್ತಿದ್ದಿಯೇ! ಇದು ನ್ಯಾಯ್ಯವೇ? ನಿಮ್ಮ ಹೃದಯಬರವನ್ನೇ ಪ್ರತೀಕ್ಷಿಸುತ್ತಿರುವ,

ನಿನ್ನ ಹೃದಯಪ್ರಿಯೆ
**ಖಂಡಿತಭಾಷಿಣಿ**

—ಇದನ್ನೋದಿ, ಆ ಹಿಂದೀ 'ಪರದೇಶಿ'ಗೆ ಏನನ್ನಿಸಿತೋ—? ನನಗೆ ಮಾತ್ರ ಪ್ರೇಮಪತ್ರದ ಒಂದು ವಿಶಿಷ್ಟ ಮಾದರಿ ಸಿಕ್ಕಹಾಗಾಯಿತು.

*

ಇಷ್ಟು, ನಿರಾತಂಕವಾಗಿ, ನಿರ್ಭಯನಾಗಿ ಪ್ರೇಮಪತ್ರಗಳನ್ನು ಬರೆಯುವವರ ಮಾತಾಯಿತು. ಇನ್ನು ಕೆಲವು ಸಂಕೇತ ಇಲ್ಲವೆ ಸಂಜ್ಞಾಪ್ರೇಮಪತ್ರಗಳಿರುತ್ತವೆ. Code love letters ಎಂದು ಬೇಕಾದರೆ ಅನ್ನಬಹುದು ಅವಕ್ಕೆ. ಅಂಕಿ, ಚಿತ್ರಗಳನ್ನು, ಕಾಲಜ್ಞಾನಗಳಲ್ಲಿ, ಅಂಚೆ ಇಲಾಖೆಗಳಲ್ಲಿ ಚುನಾವಣೆಗಳಲ್ಲಿ ಉಪಯೋಗಿಸುವಂತೆ ಪ್ರೇಮಪತ್ರಗಳಲ್ಲಿಯೂ ಉಪಯೋಗಿಸಬಹುದು......... ಇದರಿಂದ ರಹಸ್ಯವನ್ನು ಕಾಪಾಡಿಕೊಳ್ಳಲು ತುಂಬ ಸಹಾಯವಾಗುತ್ತದೆ ಎಂದು ಕೆಲವು ಪ್ರಣಯಿಗಳು ವಾದಿಸುತ್ತಾರೆ. ಕರವಸ್ತ್ರ ತ್ರಿಕೋನಾಕಾರದಲ್ಲಿ ಎಂದು ಬರೆದಿದ್ದರೆ, ಲಾಲಬಾಗಿಗೆ ಇಂಥ ಸ್ಥಳದಲ್ಲಿ ಎಂದೂ, ಚೌಕಾಕಾರದಲ್ಲಿ ಮಡಿಕೆ ಎಂದಿದ್ದರೆ ಇಂಥ ಸಿನೇಮಾ ಮಂದಿರದಲ್ಲಿಯೂ ಇಂಥಾ 'ಬಾರ್‌ಡರ್' ಎಂದಿದ್ದರೆ, ಇಂಥ ಕಾಫಿ (Coffee) ಹೌಸಿನಲ್ಲಿ. ಮಲ್ಲಿಗೆಯ ಸರ ಎಂದು ಬಿಡಿಬಿಡಿಯಾಗಿ ಬರೆದಿದ್ದರೆ, ರೋಜಾಗೂ ಎಂದಿಷ್ಟೇ ಎಂದಿದ್ದರೆ, ಬೇರೆ ಬೇರೆ ಅರ್ಥಗಳು ಅವಕ್ಕಿರುತ್ತವೆ-ಎಂಬುದೇ ಇವರ ವಾದಸರಣಿ

ನನ್ನ ಮಿತ್ರ ಸಾಂಬಮೂರ್ತಿ ತುಂಬ ರಸಿಕ ಪ್ರಾಣಿ. ಒಳ್ಳೆಯ ಆಟಗಾರ ಮತ್ತು ಖ್ಯಾತ ನಟ. ಶನಿವಾರ ಸಾಯಂಕಾಲ ಒಂದು ಸಿನೇಮಾಕ್ಕೆ ಹೋಗಬೇಕೆಂದು ಇಬ್ಬರೂ ತಯಾರಿನಡೆಸಿದ್ದೆವು. ಇದ್ದಕ್ಕಿದ್ದಂತೆ ಕಿಟಕಿಯಿಂದ ಯಾರೊ ಒಂದು ಮಡಿಸಿದ ಹಾಳೆಯನ್ನು ತೂರಿಸಿ ಹೋಗಿಬಿಟ್ಟರು. ನಾನು ಹತ್ತಿರ ಇದ್ದದರಿಂದ ಕೈಗೆತ್ತಿಕೊಂಡೆ—ಬಿಡಿಸಿ ನೋಡಿದರೆ ಬರೀ ಹಾಳೆ. 'ಏನಯ್ಯಾ ಇದು!' ಎಂದೆ. ಮೂರ್ತಿ ಮಾತಾಡಲಿಲ್ಲ, ಬರಿ ನಕ್ಕ ಅಷ್ಟೆ! ಮುಂದೊಂದು ಕ್ಷಣಬಿಟ್ಟು 'ಇವೊತ್ತು ಸಿನೇಮಾ ಬೇಡ ಕಣೋ, ಯಾಕೋ ಇದ್ದಕ್ಕಿದ್ದಂತೆ ತಲೆನೋವು!'—ಎಂದು. 'ಎಲಾ ಇವನ, ಇಷ್ಟು ರಭಸದಿಂದ ತಯಾರಿ ಮಾಡಿಕೊಂಡು ಈಗ ಇದ್ದಕ್ಕಿದ್ದಂತೆ ಬೇಡ ಎನ್ನುವುದೆ?' ಮುಗ್ಧನಾದ ನನಗೆ ಹೊಳೆಯಲಿಲ್ಲ ಅವನ ಗತ್ತು!...ಅಂತೂ ಸಿನೇಮಾ ತಪ್ಪಿಸಿ, ಏನೇನೋ ನೆಪಹೇಳಿ ನನ್ನನ್ನು ಮಾತ್ರ ಸಾಗಹಾಕಿದ. ಹೋಗುವ ಅವಸರದಲ್ಲಿ ನನ್ನ ರೂಮಿನ ಬೀಗದ ಕೈ ಅವನ ರೂಮಿನಲ್ಲೇ ಮರೆತಿದ್ದೆ. ರೂಮಿಗೆ ಹೋಗಿ ಹಣೆ ಒಡೆದುಕೊಂಡು, ಮತ್ತೆ ಇವನ ರೂಮಿಗೆ ಧಾವಿಸಿದೆ ಕಿಟಕಿಯ ಬಳಿ ಒಂದೇ ಒಂದು ಗುಲಾಬಿಯನ್ನು ಮುಡಿದ ಜಡೆಕಾಣಸಿಗಬೇಕೆ?

ಪ್ರೇಮಪತ್ರ ಬರೆಯುವುದೂ ಒಂದು ಕಲೆ, ಅದು ನಮ್ಮಲ್ಲಿ ಸಾಕಷ್ಟು ಬೆಳೆದಿಲ್ಲವೆಂದೇ ನನ್ನ ಭಾವನೆ. ಇದಕ್ಕೆ ಕಾರಣ ಪ್ರೇಮದ ಅಭಾವ. ಅದಕ್ಕೆ ಕಾರಣ ಮಧುಮಹೋತ್ಸವಗಳ ಅಭಾವ! ಈ ಅಭಾವಗಳು ಬೇಗ ಮಾಯವಾಗಿ, ನಮ್ಮಲ್ಲಿಯೂ ಈ ಪತ್ರಲೇಖನ ಕಲೆ ಹುಲುಸಾಗಿ ಬೆಳೆಯುವದೆಂಬ ಪೂರ್ಣ ಭರವಸೆ ನನಗಿದೆ.

ಲೇಖಕರು :

ಶ್ರೀ ಮತ್ತೂರು ಕೃಷ್ಣಮೂರ್ತಿ

ಕಿರುಪರಿಚಯ

# ಕನ್ನಡನಾಡಿನ ಉದಯೋನ್ಮುಖ ನರ್ತಕಿ ಕುಮಾರಿ ಸುಧಾರಾಣಿ

ನಾಟ್ಯಕಲೆಗೆ ತನ್ನದೇ ಆದ ವೈಶಿಷ್ಟ್ಯವಿದೆ. ಈ ಕಲೆಯನ್ನು ಅಭ್ಯಸಿಸುವವರಿಗೆ— ಮುಖ್ಯವಾಗಿ ಸ್ತ್ರೀಯರಲ್ಲಿ ಕೆಲವು ವಿಶೇಷ ಅಂಶಗಳು ಇರಬೇಕಾದುದು ಅತ್ಯಗತ್ಯ. ಬೆಲೆಬಾಳುವ ಮುತ್ತುಗಳನ್ನು ಸಮುದ್ರದಿಂದ ತೆಗೆಯುವದು ಎಷ್ಟು ಕಷ್ಟವೋ ಈ ಕಲೆಗೆ ತಕ್ಕವರನ್ನು ಪಡೆಯುವುದೂ ಅಷ್ಟೇ ಕಷ್ಟ. ಸಂಗೀತ ಜ್ಞಾನ ಚೆನ್ನಾಗಿರಬೇಕು, ತಾಳಜ್ಞಾನ, ಲಯಜ್ಞಾನ ಅಸಾಧಾರಣವಾಗಿರಬೇಕು, ಅಭಿನಯಪಟುವಾಗಿರಬೇಕು, ಎಲ್ಲಕ್ಕಿಂತ ಹೆಚ್ಚಾಗಿ, ನರ್ತಕಿಯೆನಿಸಿಕೊಳ್ಳುವವರು ರತಿದೇವಿಯಂತೆ ಸುರಸುಂದರಿಯಾಗಿರಬೇಕು ! ಇವೆಲ್ಲದರ ಸಂಗಮವಾಗಿದ್ದರೇ ಅಂಥ ಕಲಾವಿದೆ ನಾಟ್ಯಕಲೆಯಲ್ಲಿ ಖ್ಯಾತಿಗಳಿಸಲು ಸಾಧ್ಯ.

ಕುಮಾರಿ ಸುಧಾರಾಣಿ ಇವೆಲ್ಲವುಗಳ ಸಂಗಮವಾಗಿದ್ದಾರೆಂದರೆ ಅತಿಶಯೋಕ್ತಿಯೇನಲ್ಲ. ಈ ಕಾರಣಕ್ಕಾಗಿಯೇ ಕೇವಲ ಹದಿನೆಂಟು ವರುಷದ ಸುಧಾರಾಣಿ ತಮ್ಮ ೫ನೇ ವಯಸ್ಸಿನಲ್ಲಿಯೇ ಭರತನಾಟ್ಯಕಲೆಯನ್ನು ಅಭ್ಯಸಿಸಲು ಮೊದಲುಮಾಡಿ ಇಂದು ಭಾರತದಾದ್ಯಂತ ಕೀರ್ತಿಗಳಿಸಿದ್ದಾರೆ. ಮೈಸೂರು ರಾಜ್ಯ ಸಂಗೀತ ನಾಟಕಅಕಡೆಮಿಯ ಗೌರವವೇತನ ಪಡೆದು ನೃತ್ಯಕಲೆಯಲ್ಲಿ ವಿಶೇಷ ಅಭ್ಯಾಸಮಾಡಿ ಅವರೀಗ ಕೇಂದ್ರ ಸರಕಾರದ ಸಂಸ್ಕೃತಿ ಶಾಖೆಯ ವೇತನ ಪಡೆಯುತ್ತಿದ್ದಾರೆ. ಅನೇಕ ವಿದೇಶಿಯ ಕಲಾರಾಧಕರು ಅವರ ನೃತ್ಯಕಲೆಯನ್ನು ಮೆಚ್ಚಿದ್ದಾರೆ. ಅಮೇರಿಕನ್ನರಿಗೆ ತುಂಬಾ ಮೆಚ್ಚಿಗೆ. ಅಮೇರಿಕದ ಲಿಂಚಬರ್ಗ ವರ್ಜೀನಿಯಾದ ರಾಂಡಾಲ್ಫ್ ಮೆಕಾನ್ ಮಹಿಳಾ ಕಾಲೇಜಿನ ವಿಶೇಷ ಆವ್ಹಾನದ ಮೇರೆಗೆ ನಾಟ್ಯಶಾಸ್ತ್ರದ ಅಧ್ಯಾಪಕಿಯಾಗಿ ಹೋಗುವ ಸಂಭವವೂ ಇದೆ. ಇಂಥ ಕಲಾವಿದೆಯನ್ನು ಭಾರತವು ಕಳಿಸಿ ಕೊಡಲು ತುಂಬ ಹೆಮ್ಮೆಪಡುವಲ್ಲಿ ಅಚ್ಚರಿಯೇನಿಲ್ಲ.

ತೀರ ಎಳಿತನದಲ್ಲಿ ಅಂದರೆ ಮೂರನೇ ವಯಸ್ಸಿನಲ್ಲಿಯೇ ಕುಮಾರಿ ಸುಧಾ ನಾಟ್ಯದಲ್ಲಿ ತನ್ನ ಇಷ್ಟವನ್ನು ವ್ಯಕ್ತಪಡಿಸಿದರು. “ನಾವು ನೋಡಿದ ಚಲಚ್ಚಿತ್ರವೊಂದರಲ್ಲಿ ಕುಮಾರಿ ಕಮಲಾಳು (ಕಮಲಾ ಲಕ್ಷ್ಮಣ) ನೀಡಿದ ನೃತ್ಯ ಕಂಡ ಸುಧಾ ಮನೆಗೆ ಬಂದು ಕನ್ನಡಿಯೆದುರು ನಿಂತು ಅನುಕರಣ ಮಾಡುತ್ತಿದ್ದಳು” ಎಂದು ಅವರ ತಾಯಿ ಆ ಸಂದರ್ಭವನ್ನು ಕುರಿತು ಹೇಳುತ್ತಾರೆ. ತಾಯಿ ಅಜ್ಜಿಯರು ಪುರಂದರದಾಸರ ದೇವರನಾಮಗಳನ್ನು ಹಾಡುವಾಗೆಲ್ಲ ಕೃಷ್ಣನ ಮುಂದೆ ಇವರು ನರ್ತಿಸುತ್ತಿದ್ದರಂತೆ. ಮಗಳ ಹಂಬಲವೇನೆಂಬುದನ್ನು ಅವರ ತಾಯಿ ಆಗಲೇ ಗುರುತಿಸಿಕೊಂಡರು. ಅದಕ್ಕನುಗುಣವಾಗಿ ಮಗಳಿಗೆ ನೃತ್ಯವನ್ನು ಕಲಿಸಲು ನಿರ್ಧರಿಸಿ ಗುರುವನ್ನು ಹುಡುಕತೊಡಗಿದರು.

ಹದಿನೈದು ಹದಿನಾರು ವರುಷಗಳ ಹಿಂದೆ ನಾಟ್ಯಕಲೆಯ ಮೇಲೆ ಜನರಿಗೆ ಒಳ್ಳೇ ಅಭಿಪ್ರಾಯವಿರಲಿಲ್ಲ. “ಇದು ಗೌರವಸ್ಥರಿಗೆ ಹೇಳಿದ್ದಲ್ಲ” ಎಂದು ಅಸಡ್ಡೆ ಇತ್ತು. ಹೀಗಾಗಿ ಮನೆಯ ಹಿರಿಯರು ಸುಧಾಳ ತಾಯಿಯ ನಿರ್ಣಯ ವಿರೋಧಿಸಿದರು. ಆದರೆ ತಂದೆ ತಾಯಿಗಳಿಬ್ಬರೂ ಸುಧಾರಿಸಿದವರು, ಕಲೆಯ ಆರಾಧಕರು. ಅವರು ಧೈರ್ಯ ಮಾಡಿ ಬೆಂಗಳೂರಲ್ಲಿ ಪ್ರಸಿದ್ಧರಾಗಿದ್ದ ಶ್ರೀಯುತ ಎಸ್. ಕೃಷ್ಣರಾಯರ ಬಳಿಗೆ ಕಳಿಸಿದರು. ಅವಳು ಕಲಾಪ್ರೇಮಿಗಳ ಮನ್ನಣೆಪಡೆಯತೊಡಗಿದಳು. ಅಷ್ಟರಲ್ಲಿ ಅದೃಷ್ಟವಶಾತ್ ತಮಿಳುನಾಡಿನ ಪ್ರಸಿದ್ಧ ನಾಟ್ಯಾಚಾರ್ಯರಾದ ಶ್ರೀ ಕಿಟ್ಟಪ್ಪನವರು ಬೆಂಗಳೂರಿನ ವರಪ್ರಸಾದವೊ ಎಂಬಂತೆ ಇಲ್ಲಿಗೆ ಬಂದು ನೆಲೆಸಿದರು.



ಸುಧಾರಾಣಿ : ನೃತ್ಯಭಂಗಿಯೊಂದರಲ್ಲಿ

ಅಂದಿನಿಂದ ಅಂದರೆ ಈಗ ಸುಮಾರು ನಾಲ್ಕು ವರ್ಷಗಳಿಂದ ಕುಮಾರಿ ಸುಧಾ ಅವರಲ್ಲಿ ಶಿಕ್ಷಣ ಪಡೆಯುತ್ತಿದ್ದಾರೆ. ವೈಜಯಂತಿಮಾಲಾ, ಇಂದಿರಾಣಿ ರಹಮಾನ್, ಯಾಮಿನಿ ಕೃಷ್ಣಮೂರ್ತಿ, ಮೃಣಾಲಿನಿ ಸಾರಭಾಯ್, ರೋಷನ್ ವಜಿಫ್‌ದಾರ್ ಮೊದಲಾದ ಖ್ಯಾತ ನರ್ತಕಿಯರಿಗೆಲ್ಲ ನೃತ್ಯ ಕಲಿಸಿರುವ ಶ್ರೀ. ಕಿಟ್ಟಪ್ಪನವರು ಕುಮಾರಿ ಸುಧಾರಾಣಿಯಲ್ಲಿ ಹುದುಗಿದ್ದ ಅದ್ಭುತ ಸಾಮರ್ಥ್ಯವನ್ನು ಕಂಡು ನೃತ್ಯ ಕಲಿಸಲು ತಾವಾಗಿ ಮುಂದೆ ಬಂದರೆಂಬುದನ್ನು ಕೇಳುವಾಗ ನಿಜಕ್ಕೂ ಅಚ್ಚರಿಯಾಗದಿರದು.

ಅವರ ಆಸಕ್ತಿಗೆ ತಕ್ಕಂತೆ ಸುಧಾರ ಖ್ಯಾತಿ ದಿನೇ ದಿನೇ ಎಲ್ಲೆಡೆಯೂ ವ್ಯಾಪಿಸಲಾರಂಭಿಸಿತ್ತು.

ಕೇಂದ್ರ ಸಂಸ್ಕೃತಿ ಶಾಖೆಯವರು ೧೯೬೧-೬೨ ರಲ್ಲಿ ಆರಿಸಿದ ಕೇವಲ ಐದುಮಂದಿ ಭರತನಾಟ್ಯ ಕಲಾವಿದರಲ್ಲಿ ಕುಮಾರಿ ಸುಧಾ ಮೊದಲಿಗರಾಗಿ ಅರ್ಹತೆಪಡೆದು ವಿಶೇಷ ಗೌರವವೇತನ ಪಡೆದರು.

ಅಲ್ಲದೆ ಎರಡನೇ ಬಾರಿಗೆ ೧೯೬೨-೬೩ನೇ ಸಾಲಿಗೂ ಇವರನ್ನು ಮುಂದುವರಿಸಲು ಕೇಂದ್ರವು ಕೇಳಿರುವುದು ಒಂದು ವಿಶೇಷ.

## ಜಾವಳಿ ಚಿತ್ರ ವಿವರಣೆ

◀ ಎಡಪುಟದಲ್ಲಿ
( ಎಡದಿಂದ ಬಲಕ್ಕೆ )

ಮೊದಲಿನ ಸಾಲು

೧. ಮಾತಾಡಬಾರದೇನೊ?
೨. ಮಾರಮಣನೆ
೩. ಪ್ರೀತಿಗೊಲಿದ ಪ್ರಾಣನಾಥನೆ
೪. ಬಂದು

ನಡುವಿನ ಸಾಲು

೧. ಬಂದು ಮಾತಾಡ ಬಾರದೇನೊ?
೨. ಅಂಗಳಕ್ಕೆ ಬೆಳದಿಂಗಳ್
೩. ಬಿಸಿಲಾಗಿ ತೋರ್ಪುದೆ

ಕೊನೆಯ ಸಾಲು

೧. ಭೃಂಗದ ರವ
೨. ಕೇಳಿ
೩. ಭೀತಿಯಾಗುತೆ
೪. ಸಾಮಿ?

---

ಬಲಪುಟದಲ್ಲಿ ▶
( ಎಡದಿಂದ ಬಲಕ್ಕೆ )

ಮೊದಲಿನ ಸಾಲು

೧. ಮಂದಮಾರುತ ಬಂದು
೨. ಮರುಳಮಾಡಿತೆ ಸಾಮಿ....
೩. ಅಂದವುಳ್ಳ ದೇಹ

ನಡುವಿನ ಸಾಲು

೧. ಶಾಂತಿಗುಂದಿತೆ ( ಸಾಮಿ ? )
೨. ಕಾಮಶರವು ಬನ್ನ

ಕೊನೆಯ ಸಾಲು

೧. ಕಾಯಕೆ ತಗುಲಿತು
೨. ನಾಮಗಿರಿ ವರಹರಿಗೆ
೩. ನ್ಯಾಯವೇನೊ ಸಾಮಿ?












ವೀರ



ಅದ್ಭುತ



ಬೀಭತ್ಸ



ಶಾಂತ

" ವಿದ್ಯಾರ್ಥಿದೆಸೆಯಲ್ಲಿರುವವರಿಗೆ ಈ ವಿಶೇಷ ಗೌರವ ವೇತನ ಕೊಡಲಾಗದು " ಎಂಬ ನಿಯಮ ಈಗ ಇದ್ದರೂ 'ನೃತ್ಯಕಲೆಯಷ್ಟೇ ವ್ಯಾಸಂಗವೂ ಮುಖ್ಯ' ಎನ್ನುವ ಸುಧಾರಾಣಿಗೆ ಕೇಂದ್ರವು ವಿಶೇಷ ರಿಯಾಯಿತಿ ತೋರಿಸಿರುವುದು ಮತ್ತೂ ವಿಶೇಷವೆನ್ನಬಹುದು. ಬಾಲ್ಯದಿಂದಲೂ ನೃತ್ಯ-ಸಂಗೀತದಲ್ಲಿ ಎಷ್ಟು ಅಭಿರುಚಿಯಿದೆಯೋ ವ್ಯಾಸಂಗದಲ್ಲೂ ಅಷ್ಟೇ ಅಭಿರುಚಿ ಇದೆ ಸುಧಾರಾಣಿಗೆ. ಬಿಶಪ್ ಕಾಟನ್ ಸ್ಕೂಲಿನಲ್ಲಿ ಕೇಂಬ್ರಿಜ್ ಪರೀಕ್ಷೆಯತನಕ ಕಲಿತು ಬಿ. ಎ. ಪದವಿಗಾಗಿ ಮಹಾರಾಣಿ ಕಾಲೇಜನ್ನು ಸೇರಿದ ಕುಮಾರಿ ಸುಧಾ, ಪ್ರಥಮ ತರಗತಿಯಿಂದಲೂ ಪ್ರಥಮ ದರ್ಜೆಯಲ್ಲೇ ಉತ್ತೀರ್ಣರಾಗುತ್ತ ಬಂದಿದ್ದಾರೆ!

ಜತೆಗೇ ಚಿತ್ರಕಲೆಯನ್ನೂ ಅಭ್ಯಸಿಸುತ್ತಿದ್ದಾರೆ. ಇವರ ಹಲವಾರು ವರ್ಣಚಿತ್ರಗಳನ್ನು ಇತ್ತೀಚಿನ ಏಷ್ಯನ್‌ಸೆಮಿನಾರಿಗೆ ಬಂದಿದ್ದ ವಿದೇಶಿಯರು ಕಂಡು, ಮೆಚ್ಚಿ, ಕೊಂಡೊಯ್ದಿದ್ದಾರೆ.

೯ ನೇ ವಯಸ್ಸಿನಲ್ಲೇ ಅರಂಗೇಟ್ರಲ್– ಅಂದರೆಪ್ರಥಮಬಾರಿಗೆ ರಂಗದ ಮೇಲೆ ಪ್ರದರ್ಶನ-ನೀಡಿದ ಕುಮಾರಿ ಸುಧಾ ಈಗಾಗಲೇ ನೂರಕ್ಕೂ ಹೆಚ್ಚು ಪ್ರದರ್ಶನ ನೀಡಿದಾರೆ; ಹಲವಾರು ಸಹಾಯಾರ್ಥ ಪ್ರದರ್ಶನನೀಡಿದಾರೆ.

ಪ್ರಧಾನಿ ನೆಹರೂರವರೇ ಆದಿಯಾಗಿ, ಇರಾನಿನ ಶಹಾ ಜೆಕ್‌ಪ್ರಧಾನಿ, ವಿಯಟ್ನಾಂ ಅಧ್ಯಕ್ಷ ಹೊ ಚಿ ಮಿನ್ಹ್, ಅಫಘಾನಿಸ್ತಾನದ ಜಾಹಿರ್ ಷಾ ಮೊದಲಾದವರ ಸಮ್ಮುಖದಲ್ಲಿ (ಅವರುಗಳು ಬೆಂಗಳೂರಿಗೆ ಭೆಟ್ಟಿಯಿತ್ತಾಗ) ಪ್ರದರ್ಶನ ನೀಡಿ ವಿಶೇಷ ಮನ್ನಣೆ ಪಡೆದಿದಾರೆ.

ವೇದಾಂತವನ್ನು ಐಚ್ಛಿಕವಾಗಿ ತೆಗೆದುಕೊಂಡಿರುವ ಸುಧಾ ಒಳ್ಳೆಯ ವಾಗ್ಮಿಯೂ ಹೌದು. ನಾಟ್ಯ ಪ್ರದರ್ಶನಗಳ ಮುನ್ನ, ಕೃತಿ ಹಾಗೂ ವಸ್ತುವಿನ ಕುರಿತು ಹಾಗೂ ನೃತ್ಯದ ಬಗೆಗೆ ಇವರೇ ಸ್ವತಃ ಪರಿಚಯ ಮಾಡಿಕೊಡುತ್ತಾರೆ.

ಭರತನಾಟ್ಯದಲ್ಲಿ ಸುಧಾರಾಣಿಯ ಅಭಿನಯ ಅದ್ಭುತವಾದದ್ದು ಎಂದು ಹಲವಾರು ವಿಮರ್ಶಕರು ಅಭಿಪ್ರಾಯಪಟ್ಟಿದ್ದಾರೆ. ಇವರ ಮುಖಮುದ್ರೆ, ಅಂಗವಿನ್ಯಾಸ, ಅಡವುಗಳು ವಿಶೇಷವಾಗಿರುತ್ತವೆ. ಕೈಗಳ ಚಲನವಲನ, ಅವುಗಳಿಗೆ ತಕ್ಕಂತೆ ಅವರ ಕಣ್ಣುಗಳ ಓಟ, ನೋಟ, ನೋಟಕ್ಕೆ ಹೊಂದಿಕೊಂಡಂಥ ಭಾವ, ಇವೆಲ್ಲ ಅದ್ಭುತವಾಗಿರುತ್ತವೆ ಇವರಲ್ಲಿ.

ಶುದ್ಧವಾದ ರೀತಿಯಲ್ಲಿ ಅಲರಿಪ್ಪುವಿನಿಂದ ಪ್ರಾರಂಭಿಸಿ ಶಬ್ದ, ಜತಿಸ್ವರ, ವರ್ಣ ಇವನ್ನೆಲ್ಲ ಶಾಸ್ತ್ರೀಯ ಸಂಪ್ರದಾಯಕ್ಕೆ

ವಾಗ ಅವರ ಬೆರಳುಗಳ ಓಟ, ಹುಬ್ಬುಗಳ ಆಟ, ಅಂಗಗಳ ಚಲನವಲನ ಸಾಹಿತ್ಯಕ್ಕೆ ತಕ್ಕಂತೆ ಕ್ಷಣಕ್ಷಣಕ್ಕೂ ಬದಲಾಗುವ ಮುಖಮುದ್ರೆ, ಅಭಿನಯ, ಹಾವಭಾವ, ಇವೆಲ್ಲವನ್ನು ವರ್ಣಿಸುದುವು ಕಷ್ಟಸಾಧ್ಯ.

" ಪುನೀತವಾದ ಭರತನಾಟ್ಯಕಲೆಗೆ ಈ ಕಲಾವಿದೆಯ ನರ್ತನದಲ್ಲಿ ಕಿಂಚಿತ್ತೂ ಅಪಚಾರವಾಗುವುದಿಲ್ಲೆಂದು" ದಕ್ಷಿಣ ಭಾರತದ ಪ್ರಸಿದ್ಧ ಕಲಾವಿಮರ್ಶಕರೊಬ್ಬರು ಹೇಳಿರುವರು.

' ಕೃಷ್ಣಾ ನೀ ಬೇಗನೆ ಬಾರೋ' ಎಂಬ ಪದಕ್ಕೆ ಸುಧಾರಾಣಿ ಕೊಡುವ ಭಾವಪೂರಿತ ಅಭಿನಯವನ್ನು ಕಂಡು ಮೆಚ್ಚಿರುವ ಕಲಾಪ್ರೇಮಿಗಳು ಕನ್ನಡನಾಡಿನಲ್ಲಿ ಹಲವರಿದ್ದಾರೆ.

ಅವರು ಇತ್ತೀಚೆಗೆ ಪ್ರದರ್ಶನಗಳಲ್ಲಿ ನೀಡಲು ಸಿದ್ಧಪಡಿಸಿಕೊಂಡಿರುವ ಕಮಾಚ್ ರಾಗದ ಮಾತಾಡಬಾರದೇನೋ ಮಾರಮಣನೆ?' ಎಂಬ ಜಾವಳಿ ಜನಪ್ರಿಯವಾಗುವಲ್ಲಿ ಸಂಶಯವಿಲ್ಲ.

ಈ ಅಮೋಘವಾದ ಜಾವಳಿಗೆ ಅವರಿತ್ತಿರುವ ಅಭಿನಯಗಳನ್ನು ನಾಟ್ಯಪ್ರಿಯರಿಗಾಗಿ ನಡುವೆ ಕೊಟ್ಟಿದ್ದೇವೆ. "ಕಲಾವಿದರು ಕಲೆಯೊಂದಿಗೆ ಒಂದಾಗಿಬೆರೆತರೇ ಕಲೆಯ ನಿಜ ಸ್ವರೂಪದ ದರ್ಶನವಾಗುತ್ತದೆ. ಹಾಗಿಲ್ಲದೆ 'ತಾವು ಬೇರೆ, ತಮ್ಮ ಕಲೆಯೇ ಬೇರೆ' ಎಂದಿರಬಾರದು. ಭಕ್ತರು ಭಗವಂತನಲ್ಲಿ ಲೀನವಾಗುವಂತೆ ಕಲಾವಿದರು ಕಲೆಯಲ್ಲಿ ತಲ್ಲೀನರಾಗಬೇಕು" ಎನ್ನುತ್ತಾರೆ ಹಿರಿಯರು. ಕುಮಾರಿ .ಸುಧಾರವರ ನೃತ್ಯಪ್ರದರ್ಶನವನ್ನು ನೋಡುವಾಗ ಹಿರಿಯರ ಮಾತಿನಂತೆ ಈ ಕಲಾವಿದೆ ಇದ್ದಾರೆ ಎಂಬುದರ ಅರಿವಾಗದಿರದು. 'ಕಲಾದೇವಿಯ ಅನುಗ್ರಹ ಇವರ ಮೇಲೆ ಸಂಪೂರ್ಣವಾಗಿರಬೇಕು. ಕನ್ನಡ ನಾಡಿನ ಹೆಮ್ಮೆಯ ಕಾಣಿಕೆಯಾಗಬೇಕು ಇವರು' ಎಂದು ಈ ಶುಭದಿನದಂದು ಕನ್ನಡ ಜನ ಇವರಿಗೆ ಹಾರೈಸುವರು.

ಗುರು ಕಿಟ್ಟಪ್ಪನವರೊಂದಿಗೆ



ಲೇಖಕರು:
**ಪ್ರೊ. ಬಾಬು ಚೆಂಡಿಗೇರಿ**
ಎಂ. ಎ., ಎಲ್ ಎಲ್. ಬಿ.
ಹುಬ್ಬಳ್ಳಿ

# ಕಾಮರಾಜ ವಿಜಯಂ

ದೇವತೆಗಳಿಗೆ ಪ್ರಿಯವಾದ ಭಾರತದಲ್ಲಿ : ಒಮ್ಮೆಲೇ ನಡೆದ ಅಧಿಕಾರ ತ್ಯಾಗದ ಸುದ್ದಿ ದೇವಲೋಕಕ್ಕೆ ತಲುಪಿದಾಗ ತ್ರಿಮೂರ್ತಿಗಳು ನಿಜವಾಗಿ ಗಾಬರಿಯಾದರು. ಅಗ್ನಿ ವರುಣ ಇಂದ್ರಾದಿಗಳು ತಮ್ಮ ಪದಚ್ಯುತಿಗೆ ಹವಣಿಸಿಯಾರೆಂದು ಮೊದಲೇ ತಾವು ಅಧಿಕಾರ ತ್ಯಾಗ ಮಾಡಿ ಮಾರುತಿಗೆ ಸರ್ವಾಧಿಕಾರ ಒಪ್ಪಿಸಿದರು. ಆಗ ನಡೆದುದೇನೆಂಬುದರ ಒಂದು ಕಾಲ್ಪನಿಕ ಚಿತ್ರವನ್ನೇ ಲೇಖಕರಿಲ್ಲಿ ಚಿತ್ರಿಸಿದ್ದಾರೆ.

ಅಂದು ದೇವಲೋಕದಲ್ಲಿ ಕೋಲಾಹಲವೇ ಕೋಲಾಹಲ. ರಾಕ್ಷಸರ ನಿರ್ನಾಮವಾದ ಮೇಲೆ ಎಂದೂ ಕೂಡಿರದಿದ್ದ ತ್ರಿಮೂರ್ತಿಗಳ ವರಿಷ್ಠ ಸಭೆ ಅಂದು ಸೇರಿತ್ತು. ದೇವಲೋಕಕ್ಕೆ ಮತ್ತೆ ಯಾವ ಗಂಡಾಂತರ ಕಾದಿದೆಯೋ ಎಂದು ದೇವಲೋಕದ ಗಣಗಳೆಲ್ಲ ಗಾಬರಿಯಾಗಿದ್ದವು. ಮತ್ತೆ ಶಿವನು ತನ್ನ ಹಣೆಗಣ್ಣನ್ನು ತೆರೆಯುವ ಪ್ರಸಂಗ ಬರಬಹುದೇ? ವಿಷ್ಣು ತನ್ನ ಸುದರ್ಶನ ಚಕ್ರವನ್ನು ಮತ್ತೆ ಪ್ರಯೋಗಿಸಬೇಕಾಗುವುದೇ ಎಂದು ಅನೇಕ ತರ್ಕವಿತರ್ಕಗಳು ನಡೆದಿದ್ದವು.

ತ್ರಿಮೂರ್ತಿಗಳ ಈ ಸಭೆಗೆ ಅಂಥ ಮಹತ್ವ ಬರಲೂ ಒಂದು ಕಾರಣವಿತ್ತು. ರಾಕ್ಷಸರ ನಾಶವಾದ ಮೇಲೆ ತ್ರಿಮೂರ್ತಿಗಳ ಮಧ್ಯ ಒಂದು ಸಣ್ಣ ಕಾರಣಕ್ಕಾಗಿ ಮನಸ್ತಾಪವುಂಟಾಗಿ ತ್ರಿಮೂರ್ತಿಗಳು ಪರಸ್ಪರ ಮಾತನಾಡುವುದನ್ನು ನಿಲ್ಲಿಸಿಬಿಟ್ಟಿದ್ದರು. ವರಿಷ್ಠರಲ್ಲಿಯೇ ಮನಸ್ತಾಪವಾದ ಮೇಲೆ ಅವರ ಶಿಷ್ಯರಲ್ಲಿ ಮನಸ್ತಾಪ ಆಗದೇ ಇರಲು ಹೇಗೆ ಸಾಧ್ಯ? ನಂದಿ, ಗರುಡ ಹಾಗೂ ಹಂಸಗಳು ಎಲ್ಲಿಯಾದರೂ ಮಾರ್ಗದಲ್ಲಿ ಎದುರುಬದರಾದರೆ ಒಂದನ್ನೊಂದು ಕೋಪದ ಕಣ್ಣಿನಿಂದ ತಿರಸ್ಕಾರಯುಕ್ತ ದೃಷ್ಟಿಯಲ್ಲಿ ನೋಡುತ್ತಿದ್ದವು. ಪಾರ್ವತಿ, ಲಕ್ಷ್ಮಿ ಹಾಗು ಸರಸ್ವತಿಯರಂತೂ ಒಬ್ಬರನೊಬ್ಬರು ನೋಡಿದೊಡನೆ ಬೇರೆಕಡೆ ಮುಖ ತಿರುಗಿಸುತ್ತಿದ್ದರು.

ಈ ಮನಸ್ತಾಪ ಆರಂಭವಾದುದು ಒಂದು ಕ್ಷುಲ್ಲಕ ಘಟನೆಯಿಂದ. ಒಂದು ದಿನ ಪಾರ್ವತಿ, ಲಕ್ಷ್ಮಿ, ಸರಸ್ವತಿಯರು ದೇವಲೋಕದ ಬಿಸಿ ಬಿಸಿ ಸುದ್ದಿಗಳನ್ನು ಮಾತನಾಡಿ ಮುಗಿಸಿದ ಮೇಲೆ ಹಿಂದಿನ ದಿನಗಳನ್ನು ಸ್ಮರಿಸಿಕೊಳ್ಳತೊಡಗಿದರು. ಆಗ ಪಾರ್ವತಿಯ ಮುಖದಿಂದ "ನನ್ನ ಪತಿ ಹಾಲಾಹಲ ವಿಷವನ್ನು ನುಂಗಿರದಿದ್ದರೆ ದೇವಲೋಕದ ಜನರೇಕೆ, ದೇವತೆಗಳೂ ಜೀವದಿಂದ ಉಳಿಯುತ್ತಿರಲಿಲ್ಲ" ಎಂಬ ಮಾತು ಹೊರಟಿತು. ಅದನ್ನು ಕೇಳಿದ ಲಕ್ಷ್ಮಿಗೆ ಸಿಟ್ಟನ್ನು ತಡೆಯುವುದಾಗಲಿಲ್ಲ." "ನನ್ನ ಪತಿಯ ಕಾರ್ಯವೇನೂ ಕಡಿಮೆಯದಲ್ಲ. ಆತನು ಒಂದಲ್ಲ ಹತ್ತು ಅವತಾರಗಳನ್ನು ಹೊಂದಬೇಕಾಯಿತು" ಎಂದು ಆಕೆ ಪ್ರತಿಭಟಿಸಿದಳು. ಇವರಿಬ್ಬರ ಆತ್ಮಪ್ರಶಂಸೆಯಲ್ಲಿ ತನ್ನನ್ನೇ ಮರೆತರಲ್ಲ ಎಂದು ಸರಸ್ವತಿ ವಿಷಾದಪಟ್ಟಳು.

ಮೂವರಿಗೂ ವಾಗ್ಯುದ್ಧ ಆರಂಭವಾಯಿತು. ಅವರು ಜಗಳಾಡುತ್ತಿದ್ದ ಸುದ್ದಿಯು ತ್ರಿಮೂರ್ತಿಗಳಿಗೆ ಮುಟ್ಟಿತು. ತತ್‌ಕ್ಷಣ ಅವರು ಆ ಜಗಳದ ಸ್ಥಾನಕ್ಕೆ ಧಾವಿಸಿ ತಮ್ಮ ಪತ್ನಿಯರಿಗೆ ತಿಳಿಹೇಳಿ ಕರೆದುಕೊಂಡು ಹೋದರು. ಆದರೆ ತಮ್ಮ ನಿವಾಸ ಸ್ಥಾನಕ್ಕೆ ಹೋದ ಮೇಲೆ ತಮ್ಮ ಪತ್ನಿಯರಿಂದ ಜಗಳದ ಸಂಪೂರ್ಣ ವರದಿಯನ್ನು ಕೇಳಿದ ಮೇಲೆ, ಅವರಿಗೆ ತಮ್ಮ ಪತ್ನಿಯರು ಅಂಥ ಯಾವ ತಪ್ಪನ್ನೂ ಮಾಡಿಲ್ಲವೆಂದೆನಿಸಿತು. ತ್ರಿಮೂರ್ತಿಗಳು ಅವರಿವರೆದುರು ಜಗಳದ ಬಗ್ಗೆ ಗೊಣಗಿದ ಮಾತುಗಳು ಅತಿರಂಜಿತವಾಗಿ ದೇವಲೋಕದ ತುಂಬೆಲ್ಲ ಹರಡಿದವು. ಹಿಂದೆ ರಾಕ್ಷಸರೊಂದಿಗೆ ಆದ ಯುದ್ಧದಂತೆಯೆ ಮತ್ತೊಂದು ಭೀಕರಯುದ್ಧ (ಅಂತಃಕಲಹ)ವಾಗುವುದೆಂದು ವದಂತಿ ಹಬ್ಬಿತು.

ಯುದ್ಧವೇ ಪರಿಹಾರವೇನೋ ಎನ್ನುವಂಥ ಸ್ಥಿತಿಗೆ ಬಂದಿದ್ದ ಈ ತ್ರಿಮೂರ್ತಿಗಳು ಒಮ್ಮೆಲೇ ಒಂದೆಡೆಗೆ ಸೇರಿದುದರ ಗೂಢಾರ್ಥವೇನು? ದೇವಲೋಕಕ್ಕೆ ಮತ್ತೆ ಯಾವ ಗಂಡಾಂತರ ಬಂದಿತು ಎಂದು ದೇವಲೋಕದ ನಾಗರಿಕರು ಹೌಹಾರಿದರು. ತ್ರಿಮೂರ್ತಿಗಳು ಯಾವ ವಿಷಯವನ್ನು ಕುರಿತು ಚರ್ಚಿಸಲಿದ್ದಾರೆಂಬ ಬಗ್ಗೆ ತ್ರಿಮೂರ್ತಿಗಳ ವಾಹನಗಳಿಗೆ ಕೇಳಿದರೆ ತಮಗೂ ಗೊತ್ತಿಲ್ಲವೆಂದು ಅವು ಹೇಳಿದವು. ಇಂಥ ಗುಪ್ತ ಸಂಗತಿ ಏನಿರಬೇಕೆಂದು ಹೆಚ್ಚು ಕುತೂಹಲಿಗರಾದ ದೇವತೆಗಳು ಹಾಗೂ ಭಕ್ತರು ತ್ರಿಮೂರ್ತಿಗಳ ಸಭಾಸ್ಥಳವಾದ ಕೈಲಾಸದ ಕಡೆಗೆ ತೆರಳಿದರು. ಆದರೆ ಬೆಟ್ಟದ ಕೆಳಗೇ ಯಮಧರ್ಮರಾಯ ಅಜ್ಞಗಾವಲು ನಿಂತಿದ್ದ. ಯಾರಾದರೂ ಮೇಲೆ ಹೋದುದಾದರೆ ಅವರಿಗೆ ಭೂಲೋಕದಲ್ಲಿ ಜನ್ಮನಿಶ್ಚಿತ ಎಂದು ಶಿಕ್ಷೆಯ ಹೆದರಿಕೆ ಹಾಕುತ್ತಿದ್ದ.

*

ಕೈಲಾಸ ಶಿಖರದ ಮೇಲೆ ಬ್ರಹ್ಮ, ವಿಷ್ಣು ಹಾಗೂ ಮಹೇಶ್ವರರು ಚಿಂತಾಮಗ್ನರಾಗಿ ಕುಳಿತಿದ್ದಾರೆ. ಅವರ ಮುಖದಲ್ಲಿ ಆನಂದದ ಕಳೆಯೇ ಇಲ್ಲ. ಹಿಂದಿನ ಮನಸ್ತಾಪದ ಸೂಚನೆಗಳೂ ಮುಖದ ಮೇಲೆ ಕಂಡುಬರುತ್ತಿಲ್ಲ.

ಬಹಳ ಕಾಲದ ಮೌನವನ್ನು ಮುರಿದು ವಿಷ್ಣು ಹೇಳಿದ "ನೀವು ಈ ಸಭೆ ಕರೆದುದು ಒಳ್ಳೆಯದಾಯಿತು. ನಿಜವಾಗಿಯೂ ಇಂಥ ಬೃಹತ್ ಸಮಸ್ಯೆಯನ್ನು ನಾವೆಂದೂ ಎದುರಿಸಿರಲಿಲ್ಲ. ಏನು ಮಾಡಬೇಕೆಂದು ನನಗೆ ಹೊಳೆಯುತ್ತಲೇ ಇಲ್ಲ."

ವಿಷ್ಣುವಿನಂತೆಯೇ ತನ್ನ ಸ್ಥಿತಿಯೂ ಇದೆ ಎಂದು ಬ್ರಹ್ಮ ತನ್ನ ಮುಖದ ಭಾವನೆಯಿಂದ ಸೂಚಿಸಿದ.

"ಇದು ಗಂಭೀರ ವಿಷಯ. ಹೀಗಾಗಲು ಸಾಧ್ಯವೇ ಇಲ್ಲ." ಎಂದು ಶಿವನು ಎರಡು ನಿಮಿಷ ಕಳೆಯುವುದರಲ್ಲಿಯೇ ಉದ್ಗಾರ ತೆಗೆದ.

"ಹೌದು ಹಾಗೆ ಸಾಧ್ಯವಾಗಲೂಬಾರದು. ಇಂದ್ರ, ಅಗ್ನಿ, ವರುಣ ಮುಂತಾದವರು ಈಗಾಗಲೇ ಅತೃಪ್ತರಾಗಿ ಕುಳಿತಿದ್ದಾರೆ. ಅವರಿಗೆ ನಾರದರು ಭೆಟ್ಟಿಯಾದರೆ, ಎಲ್ಲ ಮುಗಿದುಹೋಯಿತು. ಇಲ್ಲಿಯವರೆಗೆ ದೇವಲೋಕದ ಆಗುಹೋಗುಗಳನ್ನು ಭೂಲೋಕದ ಜನರು ಅನುಕರಿಸುತ್ತಿದ್ದರು. ಈಗ ದೇವಲೋಕದ ಜನರು ಭೂಲೋಕದ ಪ್ರಭಾವಕ್ಕೆ ಒಳಗಾಗುವ ಸಂದರ್ಭ ಬಂದಿತಲ್ಲ! ನರಲೋಕದ ಜನರಿಗೆ ನಾವು ಹೆದರಬೇಕಾಯಿತೇ?" ಎಂದು ಬ್ರಹ್ಮ ತನ್ನ ಧ್ವನಿಯನ್ನು ಸೇರಿಸಿದ.

"ನಾನೇನೋ ಕಾಮನನ್ನು ಸುಟ್ಟು ನಿರ್ದೇಹಿಯನ್ನಾಗಿ ಮಾಡಿದ್ದೆ. ಆದರೆ ನಾರದರು ಹೇಳುವ ಈ ಕಾಮರಾಜನಾರು?" ಎಂದು ಶಿವ ಕೋಪದಿಂದ ಬ್ರಹ್ಮನಿಗೆ ಕೇಳಿದ.

"ಈ ಕಾಮರಾಜ, ಭೂಲೋಕದ ಒಂದು ಭಾಗವಾದ, ನಮ್ಮ ಪ್ರಿಯದೇಶವಾದ ಭಾರತದಲ್ಲಿ

ಕ್ರಾಂತಿಯನ್ನೇ ಆರಂಭಿಸಿದ್ದಾನೆ. ಬಹು ವರ್ಷಗಳಿಂದ ಅಧಿಕಾರದಲ್ಲಿದ್ದವರು ಅಧಿಕಾರ ತ್ಯಾಗಮಾಡಬೇಕೆಂಬ ಹೊಸ ಯೋಜನೆಯೊಂದನ್ನು ಆತನು ಶೋಧಿಸಿದ್ದಾನೆ. ಆ ಯೋಜನೆಯ ಸುದ್ದಿ ನಮ್ಮ ಲೋಕಕ್ಕೆ ಗೊತ್ತಾದರೆ ಮೊದಲನೆಯ ಹಂತಕ್ಕೇ ನಾವು ಮೂವರೂ ಅಧಿಕಾರ ತ್ಯಜಿಸಬೇಕಾಗುವದು" ಎಂದು ಬ್ರಹ್ಮ ಹೇಳಿದ.

"ಬಹಳ ವರ್ಷಗಳಿಂದ ಅಧಿಕಾರದಲ್ಲಿದ್ದೇವೆಂಬುದೇನೋ ನಿಜ. ಆದರೆ ಆಡಳಿತ ನಡೆಸಿಕೊಂಡು ಹೋಗುವದು ಸಾಮಾನ್ಯ ಸಂಗತಿಯೇ? ರಕ್ಷಿಸುವ ಪೋಷಿಸುವ ಹಾಗೂ ಅವಶ್ಯವೆನಿಸಿದರೆ ನಾಶಮಾಡುವ ಹೊಣೆ ಸಾಮಾನ್ಯವೆ? ನಾವು ಮಾಡುತ್ತಿರುವ ಈ ಕಾರ್ಯವನ್ನು ಅಷ್ಟೇ ಯಶಸ್ವಿಯಾಗಿ ಯಾರಿಗೆ ಮಾಡಲು ಸಾಧ್ಯ? ಅಧಿಕಾರ ಎಲ್ಲರಿಗೂ ಬೇಕು. ಆದರೆ ಅದನ್ನು ನಡೆಸಿಕೊಂಡು ಹೋಗುವಂಥ ವ್ಯಕ್ತಿತ್ವ ಮಾತ್ರ ಯಾರಿಗೂ ಬೇಕಾಗಿಲ್ಲ" ವಿಷ್ಣು ತಿರಸ್ಕಾರಧ್ವನಿಯಲ್ಲಿ ಹೇಳಿದ.

"ಹಾಗಾದರೆ ಈಗ ಏನು ಮಾಡಬೇಕು? ಭೂಲೋಕದಿಂದ ಆ ಸುದ್ದಿ ದೇವಲೋಕಕ್ಕೆ ಬರದಂತೆ ಮುಂಜಾಗ್ರತೆ ಕೈಕೊಂಡರಾಯಿತು. ಭೂಲೋಕದಿಂದ ಜನರನ್ನು ಕರೆದುಕೊಂಡು ಬರುವ ಕಾರ್ಯವನ್ನು ಕೆಲ ದಿನಗಳವರೆಗೆ ಸ್ಥಗಿತಗೊಳಿಸಲು ಯಮರಾಜನಿಗೆ ಕೇಳಿಕೊಳ್ಳೋಣ. ಅಂದರೆ ಹೊಸ ವ್ಯಕ್ತಿಗಳ ಸಂಪರ್ಕವೇ ದೇವಲೋಕಕ್ಕೆ ತಪ್ಪಿಹೋಗುತ್ತದೆ. ಭೂಲೋಕದ ಜನರೂ ಮನಸ್ಸಿಲ್ಲದ ಮನಸ್ಸಿನಿಂದ ಸಾಯುತ್ತಿರುತ್ತಾರೆ. ಅವರಿಗೆ ಜೀವದಾನ ಮಾಡುವುದಾದರೆ ಅವರ ಇಚ್ಛೆಯೂ ನೆರವೇರಿದಂತಾಗುತ್ತದೆ" ಎಂದು ಶಿವನು ವಿಷ್ಣುವಿನ ಕಡೆಗೆ ನೋಡುತ್ತ ಹೇಳಿದ.

"ನೀವು ಹೇಳಿದುದೇನೋ ನಿಜ. ಆದರೆ ನಾರದರನ್ನು ನೀವು ಮರೆತುಬಿಟ್ಟಿರಲ್ಲ. ಇಲ್ಲಿಂದ ಹೊರಬೀಳುವದೊಂದೇ ತಡ, ಭಾರತದ ಹೊಸ ಸುದ್ದಿಯನ್ನು ಆತನು ಎಲ್ಲರಿಗೂ ಬೀರಲು ಆರಂಭಿಸಿರಬೇಕು. ಈಗಾಗಲೇ ನಮ್ಮನ್ನು ಒತ್ತಾಯದಿಂದ ಪದಚ್ಯುತಗೊಳಿಸುವ ಹಂಚಿಕೆಗಳೂ ಆರಂಭವಾಗಿರಬೇಕು" ಎಂದು ಬ್ರಹ್ಮ ಏನೋ ಜ್ಞಾಪಿಸಿಕೊಂಡವನಂತೆ ಹೇಳಿದ.

"ಈ ನಾರದರ ತೊಂದರೆ ಯಾವಾಗಲೂ ಇದ್ದದ್ದೆ. ಜನರನ್ನು ಹುರಿದುಂಬಿಸುವ ಕಾರ್ಯ ಬಹಳ ಸುಲಭ. ಜವಾಬ್ದಾರಿಯನ್ನು ಹೊತ್ತುಕೊಳ್ಳುವ ಕಾರ್ಯ ಅತಿ ಕಠಿಣ. ವಿಚಾರಕ್ಕೆಂದು ನಾವು ಅಧಿಕಾರವನ್ನು ತ್ಯಜಿಸಿದೆವೆಂದು ಇಟ್ಟುಕೊಳ್ಳೋಣ. ಮುಂದೆ ಭೂಲೋಕ ದೇವಲೋಕಗಳ ಗತಿ? ಅವುಗಳನ್ನು ನಮ್ಮಂತೆ ಯಾರು ಆಳಬಲ್ಲರು?" ಎಂದು ಶಿವ ಅಭಿಮಾನದಿಂದ ಕೇಳಿದ.

"ಹೌದು. ನೀವು ಹೇಳುವುದು ಯೋಗ್ಯವಾಗಿದೆ. ಎಲ್ಲರಿಗೂ ಸರಿಯಾದ ಪಾಠ ಕಲಿಸುವ ಕಾಲವೀಗ ಸನ್ನಿಹಿತವಾಗಿದೆ. ಭಾರತದಲ್ಲಿಯಂತೆ ನಾವೂ ಅಧಿಕಾರ ಬಿಟ್ಟುಬಿಡೋಣ. ನಾವು ಹಾಗೆ ಮಾಡಿದೊಡನೆಯೇ ಭೂಲೋಕದಲ್ಲಿಯೂ ದೇವಲೋಕದಲ್ಲಿಯೂ ಕೋಲಾಹಲವೇ ಉಂಟಾಗುವುದು. ಯಾವುದೂ ವ್ಯವಸ್ಥಿತವಾಗಿ ನಡೆಯುವುದಿಲ್ಲ. ಆಗ ನಮ್ಮ ಮಹತ್ವ ಗೊತ್ತಾಗಿ, ನಾವು ಬೇಡವೆಂದರೂ ದೇವಲೋಕದ ಹಾಗೂ ಭೂಲೋಕದ ಜನರು ನಮ್ಮನ್ನು ಒತ್ತಾಯದಿಂದ ಹಿಂತಿರುಗಿ ಕರೆದುಕೊಂಡು ಬರುವರು. ಹೇಗಿದೆ ನನ್ನ ಯೋಚನೆ" ಎಂದು ಬ್ರಹ್ಮನು ಶಿವ ಹಾಗೂ ವಿಷ್ಣುರನ್ನು ಕೇಳಿದ.

ಬ್ರಹ್ಮನ ವಿಚಾರದ ಬಗ್ಗೆ ಶಿವ ಹಾಗೂ ವಿಷ್ಣು ಸಂಶಯವನ್ನು ವ್ಯಕ್ತಮಾಡಲು ಇಚ್ಛಿಸಲಿಲ್ಲ. "ಬಹಳ ಚೆನ್ನಾಗಿದೆ. ಆದರೆ ನಾವು ಯಾರಿಗೆ ನಮ್ಮ ಅಧಿಕಾರವನ್ನು ಕೊಡಬೇಕು? ನಾವು ಹಿಂತಿರುಗಿ ಬಂದರೆ ಅಧಿಕಾರವನ್ನು ಕೊಡುವದಿಲ್ಲವೆಂದು ಛಲ ಹಿಡಿಯುವ ವ್ಯಕ್ತಿಗೆ ಅಧಿಕಾರ ಕೊಡುವದು ಬೇಡ" ಎಂದು ಶಿವ ಹಾಗೂ ವಿಷ್ಣು ಹೇಳಿದರು.

ಎಲ್ಲ ದೇವತೆಗಳೂ ಅವರ ಕಣ್ಣೆದುರು ಹಾದು ಹೋದರು. ಆದರೆ, ಅವರಲ್ಲಿ ಒಂದಿಲ್ಲ ಒಂದು ಕೊರತೆ ಕಂಡುಬರುತ್ತಲೇ ಇತ್ತು. ಕೊನೆಗೆ ಬ್ರಹ್ಮ ಹೇಳಿದ—"ಮಾರುತಿಗೆ ನಾವು ಅಧಿಕಾರ ವಹಿಸಿಕೊಟ್ಟರೆ ಹೇಗೆ? ಆತನಂತೂ ಬ್ರಹ್ಮಚಾರಿ. ತನ್ನ ಬಗ್ಗೆ ಯಾವ ಆಸೆ ಆಕಾಂಕ್ಷೆಗಳನ್ನೂ ಇರಿಸಿಕೊಂಡಿಲ್ಲ. ಅಲ್ಲದೆ ರಾಮಾಯಣದ ಕಾಲದಲ್ಲಿ ಆತನು ತನ್ನ ವಿಧೇಯತೆಯನ್ನು ಬಹು ಸ್ಪಷ್ಟವಾಗಿ ತೋರಿಸಿದ್ದಾನೆ. ಉಳಿದವರು ಆತನ ಮಟ್ಟಕ್ಕೆ ಬರಲು ಸಾಧ್ಯವಿಲ್ಲ."

ಬ್ರಹ್ಮ ಹೇಳಿದುದರಲ್ಲಿ ತಥ್ಯವಿದೆ ಎಂದು ಶಿವ ಹಾಗೂ ವಿಷ್ಣುವಿಗೆ ಅನಿಸಿತು.

ಮಾರುತಿಗೆ ಅಧಿಕಾರ ವಹಿಸಿಕೊಡುವುದೆಂದು ನಿರ್ಧಾರವಾಯಿತು.

ಸಭೆ ಮುಗಿಯಿತೆಂದು ಮೂವರೂ ಹೊರಡಲು ಸಿದ್ಧರಾದಾಗ ಬ್ರಹ್ಮ ಹೇಳಿದ— "ಈ ವಿಷಯವನ್ನು ನಾವು ನಮ್ಮ ಪತ್ನಿಯರೆದುರು ಹೇಳುವುದು ಬೇಡ. ಅವರಿಗೆ ಅದು ಮೊದಲೇ ತಿಳಿದರೆ ಅವರು ನಮ್ಮ ಮೇಲೆ ಪ್ರಭಾವ ಬೀರಿ ನಮ್ಮ ನಿರ್ಣಯವನ್ನು ರದ್ದುಪಡಿಸುವಂತೆ ಮಾಡಬಹುದು."

ಶಿವ ಹಾಗೂ ವಿಷ್ಣು "ಹೌದು. ಹೌದು" ಎಂದು ತಲೆ ಅಲ್ಲಾಡಿಸಿದರು.

*

ಆತ್ಮಸಂತೋಷದಿಂದ ಅಧಿಕಾರವನ್ನು ತ್ಯಜಿಸಿದ ತ್ರಿಮೂರ್ತಿಗಳನ್ನು ಹಾಗೂ ಹೊಸದಾಗಿ ಅಧಿಕಾರ ಸ್ವೀಕರಿಸಿದ ಮಾರುತಿಯನ್ನು ಸತ್ಕರಿಸುವ ಬೃಹತ್‌ಸಭೆಯೊಂದು ದೇವಲೋಕದಲ್ಲಿ ಸೇರಿತ್ತು. ಅದಕ್ಕೆ ನಾಗರಿಕರ ಸಭೆಯೆಂದು ಕರೆಯಲಾಗಿದ್ದರೂ ಅದನ್ನು ಏರ್ಪಡಿಸಿದ ಶ್ರೇಯಸ್ಸು ತ್ರಿಮೂರ್ತಿಗಳ ವಾಹನಗಳಿಗೇ ಸೇರಿರಬೇಕು.

ತಮ್ಮ ಒಡೆಯರಿಗೆ ತಾವು ತೋರಿಸುವ ಕೊನೆಯ ಉಪಕಾರಸ್ಮರಣೆಯೆಂದು ಅವು ಸತ್ಕಾರ ಸಮಾರಂಭವನ್ನು ಏರ್ಪಡಿಸಲು ಮುಂದಾಗಿದ್ದವು. ಆದರೆ ಈ ದುಃಖದ ಸತ್ಕಾರ ಸಭೆಗೆ ಹೆಚ್ಚು ಜನರು ಸೇರದೆ ಇರುವ ಸಾಧ್ಯತೆ ಇದೆಯೆಂದುಕೊಂಡು ಮಾರುತಿಯ ಸತ್ಕಾರವನ್ನೂ ತ್ರಿಮೂರ್ತಿಗಳ ಸತ್ಕಾರದೊಂದಿಗೆ ಸೇರಿಸಲಾಗಿತ್ತು.

ವಿಚಿತ್ರವಾದ ಈ ಎರಡು ಉದ್ದೇಶಗಳಿಂದ ಕೂಡಿದ ಸಭೆಗೆ ದೇವಲೋಕದ ನಾಗರಿಕರೆಲ್ಲ ಬಂದಿದ್ದರು. ಅಧಿಕಾರ ತ್ಯಜಿಸಿದವರ ಮುಖದಮೇಲೆ ಎಂಥ ಕಳೆ ಇದೆ ಎಂಬುದನ್ನು ನೋಡಲು ಕೆಲವರು ಸೇರಿದ್ದರೆ, ಬೇರೆ ಕೆಲವರು ಮಾರುತಿಯ ಮುಖದ ಮೇಲಿನ ಕಳೆಯನ್ನು ನೋಡಲು ಸೇರಿದ್ದರು. ಈ ಸಭೆಯ ಅಧ್ಯಕ್ಷತೆಯನ್ನು ಬೃಹಸ್ಪತಿ ವಹಿಸಲಿದ್ದನು.

ಅಧಿಕಾರ ವಹಿಸಿಕೊಟ್ಟ ಮೇಲೆ ಮಾಡಲು ಬೇರೆ ಏನೂ ಕೆಲಸವಿಲ್ಲದ್ದರಿಂದ ತ್ರಿಮೂರ್ತಿಗಳು ಸಭೆ ಆರಂಭವಾಗುವದಕ್ಕಿಂತ ಅರ್ಧ ತಾಸು ಮೊದಲೇ ಬಂದಿದ್ದರು. ಆದರೆ ಮುಖ್ಯ ಅತಿಥಿಯಾಗಿದ್ದ ಮಾರುತಿಯ ಸುಳಿವೇ ಇದ್ದಿರಲಿಲ್ಲ. ಆತನನ್ನು ಕರೆಕಳುಹಲು ಕಳಿಸಿದಾಗ ಆತನು ದೇವಲೋಕದ ಆಡಳಿತ ಕಚೇರಿಯವರು ಏರ್ಪಡಿಸಿದ ಸತ್ಕಾರ ಸಭೆಯಲ್ಲಿರುವುದಾಗಿ ಸುದ್ದಿ ಬಂದಿತು. ಆತನು ಬರುವವರೆಗೆ ತಡೆಯುವುದೇ, ಇಲ್ಲವೆ ಸಭೆಯನ್ನು ಆರಂಭಿಸುವುದೇ ಎಂಬ ಬಗ್ಗೆ ಸಭೆಯನ್ನು ಕರೆದ ಸಂಘಟಕರಲ್ಲಿ ಚರ್ಚೆ ಆರಂಭವಾಯಿತು. ಆದರೆ ಮಾರುತಿ ಬರುವವರೆಗೆ ಸಭೆಯನ್ನು ಆರಂಭಿಸಲೇ ಬಾರದೆಂಬುದಕ್ಕೆ ಹೆಚ್ಚಿನ ಬೆಂಬಲ ದೊರೆಯಿತು.

ಅಧಿಕಾರ ವಹಿಸಿಕೊಟ್ಟ ಕೆಲ ತಾಸುಗಳಲ್ಲಿಯೇ ತಮ್ಮ ಗೌರವಕ್ಕೆ ಧಕ್ಕೆ ಬಂದುದನ್ನು ನೋಡಿ ತ್ರಿಮೂರ್ತಿಗಳಿಗೆ ಬಹಳ ಕಸಿವಿಸಿಯಾಯಿತು.

ಸಭೆ ಆರಂಭವಾಗುವ ನಿಶ್ಚಿತ ಸಮಯ ದಾಟಿ ಹೋದರೂ ಮಾರುತಿಯ ಸುಳಿವು ಇರಲಿಲ್ಲ. ತ್ರಿಮೂರ್ತಿಗಳು ನಾವೇಕೆ ಇಲ್ಲಿಗೆ ಬಂದೆವೊ ಎನ್ನುವಂತೆ ಒಬ್ಬರ ಮುಖವನ್ನೊಬ್ಬರು ನೋಡಹತ್ತಿದರು. ಸಭೆಗೆ ಬಂದ ಜನರು ಹೇಗೆ ಸುಮ್ಮನೆ ಕುಳಿತಿದ್ದಾರೆಂಬುದೇ ತ್ರಿಮೂರ್ತಿಗಳಿಗೆ ತಿಳಿಯಲಿಲ್ಲ. ಮುಂದೆ ಏನು ಮಾಡುವುದೆಂದು ವಿಚಾರ ಮಾಡುತ್ತಿದ್ದಾಗಲೇ ಜನರೆಲ್ಲ ಗೋಣುಗಳನ್ನು ಮೇಲಕ್ಕೆತ್ತಿ ನೋಡಹತ್ತಿದರು.

ಏನಾಯಿತೆಂಬುದರ ಸ್ಪಷ್ಟ ಕಲ್ಪನೆ ತ್ರಿಮೂರ್ತಿಗಳಿಗೆ ಮೊದಲು ಬರಲಿಲ್ಲ. "ಬಂದರು, ಬಂದರು" ಎಂದು ಸಭಿಕರೆಲ್ಲ ಗುಜು ಗುಜು ಮಾಡುತ್ತಿದ್ದುದನ್ನು ಕೇಳಿದ ಮೇಲೆಯೇ ತ್ರಿಮೂರ್ತಿಗಳಿಗೆ ಮಾರುತಿ ಆಕಾಶದಲ್ಲಿ ಹಾರಿ ಬರುತ್ತಿರುವುದರ ಕಲ್ಪನೆ ಬಂದಿತು.

ಮಾರುತಿ ಆಕಾಶದಿಂದ ನೇರವಾಗಿ ವ್ಯಾಸಪೀಠಕ್ಕೇ ಇಳಿದ. ಸಭಿಕರು ಮಾರುತಿಯ ಆಗಮನವನ್ನು ಚಪ್ಪಾಳೆ ತಟ್ಟಿ ಸ್ವಾಗತಿಸಿದರು.

ವ್ಯಾಸಪೀಠದ ಮೇಲೆ ಅಂದಿನ ಅಧ್ಯಕ್ಷನಾದ ಬೃಹಸ್ಪತಿ, ತ್ರಿಮೂರ್ತಿಗಳು ಹಾಗೂ ಮಾರುತಿ ಕುಳಿತಿದ್ದರು. ಸಭಿಕರ ಮುಂದಿನ ಸಾಲಿನಲ್ಲಿ ಪಾರ್ವತಿ, ಲಕ್ಷ್ಮಿ ಹಾಗೂ ಸರಸ್ವತಿಯರು ನಿರುತ್ಸಾಹದಿಂದ ಕುಳಿತಿದ್ದರು.

ಗಣಪತಿಯ ಸ್ತೋತ್ರ ಇಲ್ಲವೆ ಸರಸ್ವತಿಯ ಸ್ತೋತ್ರ ಮೊದಲು ನಡೆಯುವುದೆಂದು ಎಣಿಸಿದ್ದ ತ್ರಿಮೂರ್ತಿಗಳಿಗೆ ನಿರಾಶೆಯಾಯಿತು. ಅದೇ ಸಮಾರಂಭಕ್ಕಾಗಿ ಕಟ್ಟಿದ್ದ ವಿಶೇಷ ಗೀತೆಯನ್ನು ತುಂಬುರನು ಹಾಡಿದನು. ಆ ಗೀತೆಯಲ್ಲಿ ತ್ರಿಮೂರ್ತಿಗಳ ಹೆಸರನ್ನು ಒಂದೆಡೆಗೆ ಮಾತ್ರ ಉಲ್ಲೇಖಿಸಲಾಗಿತ್ತು. ಉಳಿದುದೆಲ್ಲ ಮಾರುತಿಯ ಗುಣಗಾನವೇ ಆಗಿತ್ತು.

ಬೃಹಸ್ಪತಿ ಪ್ರಾಸ್ತಾವಿಕ ಭಾಷಣ ಮಾಡಿ "ನಮಗೆ ಇಂದು ವಿಷಾದ ಹಾಗೂ ಆನಂದಗಳೆರಡೂ ಏಕಕಾಲಕ್ಕೆ ಆಗಿವೆ" ಎಂದು ಹೇಳಿದ. ಆದರೆ ಆತನ ಮಾತಿನ ರೀತಿಯನ್ನು ನೋಡಿದರೆ ಆತನಿಗೆ ವಿಷಾದಕ್ಕಿಂತ ಆನಂದವೇ ಹೆಚ್ಚಾಗಿದೆಯೆಂಬ ಭಾವನೆ ಬರುವಂತಿತ್ತು.

ಭಾಷಣಗಳ ಮಾಲೆ ಆರಂಭವಾಯಿತು. ಮೊದಲು ನಂದಿಯ ಹೆಸರು ಕರೆಯಲ್ಪಟ್ಟಿತು. ಪಾಪ! ನಂದಿಗೆ ಏನು ಮಾತನಾಡಬೇಕೆಂಬುದೇ ತೋಚಲಿಲ್ಲ. ವೇದಿಕೆಯ ಮೇಲೆ ಬಂದು "ಇಂದು ನಮಗೆ ದುರ್ದಿನ" ಎಂದು ಹೇಳಿ ದುಃಖ ಒತ್ತರಿಸಿ ಬಂದುದರಿಂದ ಏನೂ ಮಾತನಾಡಲಾರದೆ ನಂದಿ ಕುಳಿತುಬಿಟ್ಟಿತು. ನಂದಿಯ ಕಣ್ಣಲ್ಲಿ ನೀರು ಧಾರಾಕಾರವಾಗಿ ಹರಿಯುತ್ತಿತ್ತು. ನಂದಿಯ ಈ ಸ್ಥಿತಿಯನ್ನು ನೋಡಿ ಶಿವನಿಗೆ ಸಂತೋಷವಾದರೂ ಮಾರುತಿಗೆ ಮಾತ್ರ ಕೋಪ ಬಂದಿತು. ತಾನು ಅಧಿಕಾರ ವಹಿಸಿದ ದಿನವನ್ನು ನಂದಿ ದುರ್ದಿನವೆಂದು ಕರೆಯಬೇಕೇ?

ಮಾರುತಿ ಕೋಪಗೊಳ್ಳುತ್ತಿರುವುದನ್ನು ನೋಡಿದ ಬೃಹಸ್ಪತಿ ಮಾರುತಿಯ ಪಂಗಡದವನೇ ಆಗಿದ್ದ ವಾಲಿಯ ಹೆಸರನ್ನು ಕೂಗಿದ.

ವಾಲಿಯ ಹೆಸರನ್ನು ಕೂಗಿದೊಡನೆಯೇ ವಿಷ್ಣುವಿಗೆ ಕೊಂಚ ಗಾಬರಿ ಎನಿಸಿತು. ರಾಮಾವತಾರದ ಕಾಲಕ್ಕೆ ನಡೆದುದೆಲ್ಲ ವಿಷ್ಣುವಿನ ಜ್ಞಾಪಕಕ್ಕೆ ಬಂದಿತು. ಆದರೆ ಆತನು ಏನು ಮಾತನಾಡುವನೆಂಬುದನ್ನು ಕೇಳಬೇಕೆಂಬ ಕುತೂಹಲದಿಂದ ವಿಷ್ಣು ಏಕಚಿತ್ತನಾಗಿ ಆಲಿಸಹತ್ತಿದ. ವಾಲಿ ಉತ್ಸಾಹದಿಂದ ಮಾತನಾಡಲು ಆರಂಭಿಸಿದ. "ಬಾಂಧವರೆ, ಇಂದಿನ ದಿನ ನಮ್ಮೆಲ್ಲರ ಜೀವನದಲ್ಲಿ ಸುವರ್ಣದ ದಿನ. ಇಂದು ನಮಗೆ ಆದಷ್ಟು ಸಂತೋಷ ಬೇರೆ ಎಂದೂ ಆಗಿರಲಿಲ್ಲ" ಎಂದು ವಾಲಿ ಹೇಳಿದೊಡನೆ ಸಭಾಮಧ್ಯದಿಂದ ಹರ್ಷೋದ್ಗಾರಗಳು ಕೇಳಿಬಂದವು. ತ್ರಿಮೂರ್ತಿಗಳು ಮುಖ ಚಿಕ್ಕದು ಮಾಡಿದರು. ವಾಲಿಯ ಭಾಷಣ ಮುಂದುವರೆದಿತ್ತು. "ಬಂಧುಗಳೆ, ಅತಿ ದೀನ ದಲಿತರಿಗೂ ಒಂದು ಕಾಲ ಬರುವುದೆಂಬಮಾತು ಇಂದು ಸತ್ಯವಾಗಿದೆ. ಮಾರುತಿಯಂಥ ವ್ಯಕ್ತಿ ಇಂದು ಸರ್ವಾಧಿಕಾರಿಯಾಗುವನೆಂದರೆ ತಾಳಿದವ ಬಾಳಿಯಾನು ಎಂಬ ಗಾದೆ ಸತ್ಯವಾದಂತಲ್ಲವೆ? ಮಾರುತಿ ಇಂದು ಅಂಥ ಅಧಿಕಾರಕ್ಕೆ ಬರಬೇಕಾದರೆ ತ್ಯಾಗ, ಸೇವೆಗಳ ಫಲವೆಂದೇ ಹೇಳಬೇಕು. ಮಾರುತಿಯವರ ನಿಷ್ಕಪಟ ಭಕ್ತಿ ನಮ್ಮೆಲ್ಲರಿಗೆ ದಾರಿದೀಪವಾಗಬೇಕು. ರಾಮನೊಂದಿಗೆ ಮಾರುತಿ ಸಹಕರಿಸಿದ ರೀತಿಯನ್ನು ನೋಡಿದರೆ ಅವರಿಗೆ ಈ ಹಿಂದೆಯೇ ದೊಡ್ಡ ಅಧಿಕಾರಸ್ಥಾನ ದೊರೆಯಬೇಕಾಗಿತ್ತು. ಆದರೆ ಅವರು ಎಂದೂ ಅಂಥ ಅಧಿಕಾರಸ್ಥಾನವನ್ನು ಬಯಸಿದವರಲ್ಲ. ರಾಮನಿಗೆ ರಾಜ್ಯ ಹಿಂತಿರುಗಿ ದೊರೆಯಿತು. ಪತ್ನಿ ದೊರೆತಳು. ಆದರೆ ಮಾರುತಿಗೆ ಏನು ದೊರೆಯಿತು? ಎಂದು ವಾಲಿ ಕೇಳಿದ. ["ಏನೂ ದೊರೆಯಲಿಲ್ಲ" ಎಂಬ ಉತ್ತರ ಸಭಾಮಧ್ಯದಿಂದ ಕೇಳಿಬಂದಿತು.] ಇದರಿಂದ ಹುರುಪುಗೊಂಡ ವಾಲಿ ತನ್ನ ಭಾಷಣವನ್ನು ಮುಂದುವರೆಸಿದ—

"ಇಂದು ಅವರು ಅಧಿಕಾರಕ್ಕೆ ಬಂದುದು ನ್ಯಾಯವಿನ್ನೂ ಸತ್ತಿಲ್ಲವೆಂಬುದರ ದ್ಯೋತಕವಾಗಿದೆ. ಇಲ್ಲಿಯ ವರೆಗೆ ನಮ್ಮ ಬಗ್ಗೆ ಬಹಳ ಲಘುವಾಗಿ ಮಾತನಾಡಲಾಗುತ್ತಿತ್ತು. ತಾವು ಮಾಡುವ ಹುಚ್ಚು ಕೃತಿಗಳಿಗೆ ಭೂಲೋಕದವರು "ಕಪಿಚೇಷ್ಟೆ" ಎಂಬ ಶಬ್ದವನ್ನೇ ನಿರ್ಮಾಣ ಮಾಡಿದ್ದಾರೆ. ಅಂಥ ಕಪಿಗಳ ಮುಖಂಡರೇ ಇಂದು ಅಧಿಕಾರಕ್ಕೆ ಬಂದಿದ್ದಾರೆಂಬುದನ್ನು ಭೂಲೋಕದವರೂ ಅರಿಯಬೇಕು. ಮಾರುತಿಯವರು ಅಧಿಕಾರಕ್ಕೆ ಬಂದ ಬಗ್ಗೆ ನನಗಿಂತ ಬೇರೆ ಯಾರಿಗೂ ಹೆಚ್ಚಿನ ಆನಂದವಾಗಿರಲಾರದು. ರಾಮಾಯಣದ ಸಂದರ್ಭದಲ್ಲಿ ಸುಗ್ರೀವನೊಂದಿಗೆ ಸೇರಿ ನನ್ನನ್ನು ಅಧಿಕಾರಚ್ಯುತನನ್ನಾಗಿ ಮಾಡಲು ಮಾರುತಿಯವರು ಪ್ರಯತ್ನಿಸಿರಬಹುದು. ಆದರೆ ಅವರು ಹಾಗೆ ಮಾಡಿದುದು ಪ್ರಾಮಾಣಿಕವಾದ ಭಿನ್ನಾಭಿಪ್ರಾಯದಿಂದ ಎಂಬುದು ನನಗೆ ಹಿಂದಿನಿಂದ ತಿಳಿದುಬಂದಿತು. ಅವರು ಅಧಿಕಾರಕ್ಕೆ ಬಂದದ್ದನ್ನು ನಾನು ಮುಕ್ತಮನಸ್ಸಿನಿಂದ ಸ್ವಾಗತಿಸುತ್ತೇನೆ"

ವಾಲಿಯ ಭಾಷಣ ಮುಗಿದಾಗ ಬಿಟ್ಟೂ ಬಿಡದ ಕರತಾಡನಗಳ ಸದ್ದು ಕೇಳಬರುತ್ತಿತ್ತು. ಮಾರುತಿಯ ಮುಖ ಪ್ರಫುಲ್ಲವಾಗಿತ್ತು. ತ್ರಿಮೂರ್ತಿಗಳು ಅಧಿಕಾರ ತ್ಯಜಿಸಿದ ಬಗ್ಗೆ ವಾಲಿ ಏನನ್ನೂ ಹೇಳಲಿಲ್ಲವೆಂಬುದನ್ನು ಸಭಾಧ್ಯಕ್ಷ ಹಾಗೂ ತ್ರಿಮೂ

ರ್ತಿಗಳು ಲಕ್ಷಿಸಿದ್ದರು. ಆದುದರಿಂದ ಗರುಡನ ಹೆಸರನ್ನು ಕರೆಯಲಾಯಿತು.

ಗರುಡ ವೇದಿಕೆಯ ಮೇಲೆ ಬಂದು "ಪೂಜ್ಯ ಹಿರಿಯರೆ, ಸ್ನೇಹಿತರೆ" ಎಂದು ಮಾತನಾಡಲು ಆರಂಭಿಸುವಷ್ಟರಲ್ಲಿಯೇ ಸಭೆಯಲ್ಲಿ ಗುಜುಗುಜು ಆರಂಭವಾಗಿತ್ತು.

ಗರುಡನ ಭಾಷಣವನ್ನು ಕೇಳಲು ಅವರು ಸಿದ್ಧರಿಲ್ಲವೇನೋ ಎಂಬ ಭಾವನೆ ಉಂಟಾಗುವಂತಿತ್ತು. ಗರುಡ ದುಃಖಪೂರ್ಣವಾದ ಧ್ವನಿಯಲ್ಲಿ ಮಾತನಾಡಹತ್ತಿದ "ಇಂದಿನಂಥ ದಿನ ಬರಬಾರದಾಗಿತ್ತು, ಲಕ್ಷಾವಧಿ ವರ್ಷಗಳ ವರೆಗೆ ಅಧಿಕಾರವನ್ನು ನಡಸಿ ಅಧಿಕಾರದ ಅನುಭವ ಇದ್ದವರು ಹೀಗೆ ಒಮ್ಮೆಲೆ ಅಧಿಕಾರವನ್ನು ಬಿಟ್ಟುಕೊಟ್ಟದ್ದು ನಮ್ಮೆಲ್ಲರನ್ನು ಅನಾಥರನ್ನಾಗಿ ಮಾಡಿದಂತಾಗಿದೆ" ಎಂದು ಗರುಡ ಹೇಳುವಷ್ಟರಲ್ಲಿ "ನೀನೊಬ್ಬನೇ ಅನಾಥನಾಗಿದ್ದೀ" ಎಂಬ ಶಬ್ದಗಳು ಸಭಾಮಧ್ಯದಿಂದ ಕೇಳಿಬಂದವು. ಗರುಡನಿಗೆ ಕೋಪ ಉಕ್ಕೇರಿ ಬಂತು. "ನೀವೆಲ್ಲ ಮೂರ್ಖರಿದ್ದೀರಿ" ಎಂಬ ವಾಕ್ಯ ಗರುಡನಿಗೆ ಗೊತ್ತಾಗದೆ ಬಾಯಲ್ಲಿ ಬಂದುಬಿಟ್ಟಿತು. ಗರುಡ ಆ ಮಾತನ್ನು ಹಿಂದಕ್ಕೆ ತೆಗೆದುಕೊಳ್ಳಬೇಕೆಂದು ಕೆಲವರು ಕೂಗಹತ್ತಿದರು. ಅಧ್ಯಕ್ಷತೆ ವಹಿಸಿದ್ದ ಬೃಹಸ್ಪತಿ ಎಷ್ಟೇ ವಿನಂತಿಸಿಕೊಂಡರೂ ಸಭೆಯಲ್ಲಿ ಶಾಂತಿ ಸ್ಥಾಪಿತವಾಗಲಿಲ್ಲ. ಕೊನೆಗೆ ಮಾರುತಿಗೇ ವಿನಂತಿಸಿಕೊಳ್ಳಲು ಕೇಳಲಾಯಿತು. ಮಾರುತಿ ರಾಜಠೀವಿಯಿಂದ ಗಂಭೀರವಾಗಿ ಎದ್ದುನಿಂತು "ಸುಮ್ಮನಿರಬೇಕು" ಎಂದು ಹೇಳಿದೊಡನೆಯೇ ಸಭೆಯಲ್ಲಿ ಶಾಂತಿ ಕಂಡುಬಂದಿತು. ಬೃಹಸ್ಪತಿ ಗರುಡನಿಗೆ ಕೂಡ್ರಲು ಹೇಳಿ ವಾಲಿಯ ಮಗನಾದ ಅಂಗದನಿಗೆ ಮಾತನಾಡುವಂತೆ ಕೇಳಿದ. ಅಂಗದ ಮಾರುತಿಗೆ ದೀರ್ಘದಂಡ ನಮಸ್ಕಾರ ಹಾಕಿ ತನ್ನ ಭಾಷಣವನ್ನು ಆರಂಭಿಸಿದ. "ಬಾಂಧವರೆ, ಈಗಾಗಲೇ ನನ್ನ ಹಿರಿಯರು ಮಾರುತಿಯವರ ಬಗ್ಗೆ ಹೇಳಿದ್ದಾರೆ. ಆದರೆ ನನ್ನ ಚಿಕ್ಕ ಬುದ್ಧಿಗೆ ತೋರಿದ ಒಂದು ವಿಚಾರವನ್ನು ನಾನು ಹೇಳುವೆ. ಇಲ್ಲಿಯವರೆಗೆ ನಮ್ಮನ್ನು ಆಳಿದವರೆಲ್ಲ ಕುಟುಂಬಗಳೇ ಆಗಿದ್ದಾರೆ. ಕೆಲವರಿಗೆ ಸಾವಿರಾರು ಪತ್ನಿಯರೂ ಇದ್ದುದುಂಟು. ಮಾರುತಿಯವರು ಬ್ರಹ್ಮಚಾರಿಗಳಾಗಿದ್ದರೂ ಪಕ್ಷಪಾತ ಮಾಡುವುದಿಲ್ಲವೆಂಬುದರ ಅರಿವು ನಮಗೆ ಇದೆ. ಆದರೆ ಈ ಆಡಳಿತೆ ನಡಸುವುದು ಅವರ ತಲೆಗೇ ಮುಗಿಯುವುದು ಬೇಡ. ಅವರು ಮದುವೆಯಾಗಿ ಅವರ ಮಕ್ಕಳೂ ಮೊಮ್ಮಕ್ಕಳೂ ನಮ್ಮನ್ನು ಆಳಬೇಕೆಂಬ ಹಿರಿಯ ಬಯಕೆ ನಮಗಿದೆ. ಆಡಳಿತವನ್ನು ನಡಸುವಂಥ ರಕ್ತವು ಅವರಲ್ಲಿರುವುದರಿಂದ ಅವರ ವಂಶವೂ ಅವರಷ್ಟೇ ಯಶಸ್ವಿಯಾಗಿ ಆಡಳಿತವನ್ನು ನಡಸಬಲ್ಲದು. ಪ್ರಜೆಗಳಾದ ನಾವು ಅವರಿಂದ ಬೇರೆ ಏನನ್ನೂ ಕೇಳುವುದಿಲ್ಲ. ಅವರು ಮದುವೆಯಾಗಿ ನಮ್ಮನ್ನು ಆಳಬಲ್ಲಂಥ ಪೀಳಿಗೆಯನ್ನು ನಿರ್ಮಿಸಬೇಕು. ತಮ್ಮ ನಿರ್ಧಾರವನ್ನು ಅವರು ಈ ಸಭೆಯಲ್ಲಿಯೇ ಮೊದಲು ಸಾರಬೇಕು."

ವಾಲಿ ಮಾತನಾಡಿದಾಗ ಕೇಳಿ ಬಂದ ಕರತಾಡನಗಳಿಗಿಂತ ಹೆಚ್ಚಿನ ಕರತಾಡನ ಈಗ ಕೇಳಿಬರುತ್ತಿತ್ತು. "ಹೌದು ಹೌದು" ಎಂದು ಇಡೀ ಸಭಾಭವನವೇ ಕೂಗಹತ್ತಿತು.

ಬೃಹಸ್ಪತಿ ಮಾರುತಿಗೆ ಕಿವಿಯಲ್ಲಿ ಏನೋ ಹೇಳುತ್ತಿದ್ದ. ತಾವು ಮಾತನಾಡುವ ಸರದಿ ಯಾವಾಗ ಬಂದೀತೋ ಎಂದು ಕಾಯುತ್ತ ಕುಳಿತಿದ್ದ ತ್ರಿಮೂರ್ತಿಗಳು ಮಾರುತಿ ಹಾಗೂ ಬೃಹಸ್ಪತಿಯ ಮಧ್ಯೆ ನಡೆದ ಮಾತುಕತೆಗಳನ್ನು ಆಶ್ಚರ್ಯಚಿತ್ತರಾಗಿ ಕೇಳುತ್ತಿದ್ದರು. "ಈಗಲೇ ಹೇಳಬೇಕೇಕೆ." ಎಂದು ಮಾರುತಿ ಕೇಳುತ್ತಿದ್ದ "ಹೇಳಿಬಿಡಿ. ಹೇಳಿಬಿಡಿ" ಎಂದು ಬೃಹಸ್ಪತಿ ಮಾರುತಿಗೆ ಒತ್ತಾಯ ಮಾಡುತ್ತಿದ್ದ.

ಬೃಹಸ್ಪತಿ ಸಭಿಕರನ್ನುದ್ದೇಶಿಸಿ ಹೇಳಿದ—"ಸಭಿಕರೇ ಇದೇ ಈಗ ಅಂಗದರು ಹೇಳಿದ ವಿಚಾರವು ನಿಮ್ಮ ವಿಚಾರವೆಂಬ ಬಗ್ಗೆ ನನಗೆ ನಂಬಿಕೆ ಇದೆ. ಈ ಬಗ್ಗೆ ಅವರೇ ತಮ್ಮ ವಿಚಾರಗಳನ್ನು ಹೇಳಲಿದ್ದಾರೆ. ಆ ಮೇಲೆ ತ್ರಿಮೂರ್ತಿಗಳು ಮಾತನಾಡುವರು. ಸಭಿಕರಲ್ಲಿ ಮತ್ತೆ ಜೋರಾಗಿ ಕರತಾಡನ ಕೇಳಿಬಂತು. ಮಾರುತಿ ಎದ್ದು ಅತಿ ನಮ್ರ ಭಾವದಿಂದ ಹೇಳಿದ "ನನ್ನ ಪ್ರಿಯ ಮಿತ್ರರೆ. ನನ್ನ ಬಗ್ಗೆ ನಿಮ್ಮಲ್ಲಿ ಇಷ್ಟು ಗೌರವಾದರಗಳಿರುವ ಬಗ್ಗೆ ನನಗೆ ಬಹಳ ಅಭಿಮಾನವೆನಿಸಿದೆ. ನನ್ನನ್ನು ಇಲ್ಲಿ ಕರೆದು ಸತ್ಕರಿಸಿದ ಬಗ್ಗೆ ನಾನು ನನ್ನ ಹೃತ್ಪೂರ್ವಕ ವಂದನೆಗಳನ್ನು ಸಲ್ಲಿಸುವೆ. ಅಂಗದರು ಒಂದು ಮಹತ್ವದ ವಿಚಾರವನ್ನು ನನ್ನೆದುರು ಇರಿಸಿದ್ದಾರೆ. ಅವರು ಪ್ರೀತಿಯಿಂದ ಮಾಡಿದ ಈ ಸಲಹೆಯ ಬಗ್ಗೆ ನಾನು ವಿಚಾರಮಾಡಿದೆ. ನಿಮ್ಮ ಪ್ರತಿನಿಧಿಯಾಗಿ ಅಂಗದರು ಮಾಡಿದ ಸಲಹೆಯನ್ನು ನಾನು ಸ್ವೀಕರಿಸಿದ್ದೇನೆ. ಎಷ್ಟು ಸಾಧ್ಯವೋ ಅಷ್ಟು ಬೇಗನೇ ನಾನು ಮದುವೆಯಾಗಿ ನಿಮ್ಮ ಆಶೆಯನ್ನು ಈಡೇರಿಸುವೆ."

ಈ ಘೋಷಣೆಯಾದೊಡನೆಯೇ ಸಭೆಯ ಜನರೆಲ್ಲ ಹುಚ್ಚೆದ್ದು ಕುಣಿಯಲು ಆರಂಭಿಸಿದರು. ಸಭೆಯಲ್ಲಿ ಅಲ್ಲೋಲಕಲ್ಲೋಲ ಉಂಟಾಯಿತು. ಬೃಹಸ್ಪತಿಗೆ ಏನು ಮಾಡಬೇಕೆಂಬುದೇ ತಿಳಿಯಲಿಲ್ಲ.

ಅತಿ ಸಂತೋಷವನ್ನು ಹೊಂದಿದ್ದ ಕೆಲವು ಕಪಿಗಳು ನಂದನವನದಲ್ಲಿದ್ದ ಬಳ್ಳಿಗಳನ್ನು ಕಿತ್ತಿ ಕಿತ್ತಿ ಆಕಾಶದಲ್ಲಿ ತೂರಹತ್ತಿದ್ದವು.

ಕೆಲವು ಕಪಿಗಳು ವೇದಿಕೆಯನ್ನೇ ಹೊತ್ತುಕೊಂಡು ಕುಣಿಯಲು ಆರಂಭಿಸಿದವು. ಕೆಳಗೆಬಿದ್ದು ತಮ್ಮ ತಲೆಯಲ್ಲಿ ಒಡೆಯುವುದೋ ಎಂದು ತ್ರಿಮೂರ್ತಿಗಳು ಗಾಬರಿಯಾಗಿ ಕುಳಿತಿದ್ದರು. ಸಭೆ ವಿಸರ್ಜನೆಗೊಂಡಿತೆಂದು ಹೇಳುವ ಅವಶ್ಯಕತೆಯೇ ಉಳಿದಿರಲಿಲ್ಲ! ಹೊತ್ತು ಕುಣಿದು ಕುಣಿದು ಸಾಕಾದ ಮೇಲೆ ಕಪಿಗಳು ವೇದಿಕೆಯನ್ನು ಕೆಳಗೆ ಇಳಿಸಿದವು. ವೇದಿಕೆ ಸಕಾಲದಲ್ಲಿ ಕೆಳಗೆ ಇಳಿದ ಬಗ್ಗೆ ತ್ರಿಮೂರ್ತಿಗಳು ತಮ್ಮ ದೈವವನ್ನು ಅಭಿನಂದಿಸಿಕೊಂಡರು.

"ಜಯ ಮಾರುತಿ, ಜಯ ಮಾರುತಿ" ಎಂಬ ಜಯಜಯಕಾರಗಳು ಇನ್ನೂ ನಡದೇ ಇದ್ದವು.

ತ್ರಿಮೂರ್ತಿಗಳಿಗೆ ಈ ಹೊಸ ವಾತಾವರಣವನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗಲಿಲ್ಲ. ತಾವು ಅಧಿಕಾರ ಬಿಟ್ಟರೆ ಜನರು ಒತ್ತಾಯದಿಂದ ಅದನ್ನು ಹಿಂತಿರುಗಿ ತಮಗೇ ಕೊಡುವರೆಂಬ ಅವರ ವಿಚಾರ ನುಚ್ಚುನೂರಾಗಿತ್ತು. ಹಿಂದಿನ ದಿನಗಳನ್ನು ಜ್ಞಾಪಿಸಿಕೊಳ್ಳುತ್ತ ತ್ರಿಮೂರ್ತಿಗಳು ಮೌನವಾಗಿ ತಮ್ಮ ಹೊಸ ನಿವಾಸಗಳಕಡೆಗೆ ಹೊರಟರು. ಅವರು ಮುಂದೆ ಮುಂದೆ ಹೋದಂತೆ ನಂದಿ, ಗರುಡ, ಹಂಸಗಳು ತಮ್ಮ ಒಡೆಯರ ಹಿಂದೆ ಹಿಂದೆ ಹೊರಟಿದ್ದವು.




# ನಾನು ಹೆದರಿದಂತೇನೂ ಚಿತ್ರರಂಗವಿಲ್ಲ

ಲೇಖಕರು :
**ಶ್ರೀಮತಿ ಲೀಲಾವತಿ**
ಕನ್ನಡ ಚಿತ್ರರಂಗದ ನಾಯಕಿ ನಟಿ

ನಾನು ಚಿತ್ರರಂಗವನ್ನು ಪ್ರವೇಶಿಸಿದ್ದು ದಿವಂಗತ ಸುಬ್ಬಯ್ಯ ನಾಯಿಡು ಅವರ ನಿರ್ಮಾಪಕತ್ವದಲ್ಲಿ ಹೊರಬಂದ "ಭಕ್ತಪ್ರಹ್ಲಾದ" ಕನ್ನಡ ಚಿತ್ರದಲ್ಲಿ. ಅದರಲ್ಲಿ ನನ್ನದೊಂದು ಸಖಿಯಪಾತ್ರ. ದಿವಂಗತ ಸುಬ್ಬಯ್ಯ ನಾಯಿಡು ಅವರ ನಾಟಕ ಕಂಪನಿಯಲ್ಲಿ ಪಾತ್ರ ವಹಿಸುತ್ತಿದ್ದ ನನಗೆ "ಯಜಮಾನರು" ಎಂದರೆ ಒಂದು ಬಗೆಯ ಭಯ ಭಕ್ತಿ. ಅದೇ ಭಾವನೆ ರಕ್ತಗತವಾಗಿದ್ದುದರಿಂದ ಚಿತ್ರರಂಗಕ್ಕೆ ಪ್ರವೇಶಿಸುವಾಗಲೂ ಅದೇ ಯಜಮಾನರು ಕೊಟ್ಟಪಾತ್ರ ಎಂತಹದೇ ಆದರೂ ನಿರ್ವಹಿಸಬೇಕಾದದ್ದು ನನ್ನ ಕರ್ತವ್ಯವಾಗಿತ್ತು. ಅದೂ ಅಲ್ಲದೆ ನಾನು ಒಮ್ಮೆಲೆ ನಾಯಕಿಯಾಗಲೂ ಬಯಸಲಿಲ್ಲ. ಬಯಸಿದ್ದರೆ ದೊರೆಯುತ್ತಲೂ ಇರಲಿಲ್ಲ.

ಉಪ್ಪುಹುಳಿ ತಿನ್ನುವ ದೇಹ ಆಸೆಪಡದೆ ಇರುವುದು ಅಸಾಧ್ಯ. ನನಗೂ ನೂರಾರು ಹೊಂಗನಸುಗಳು ತಲೆಕೆಡಿಸುತ್ತಿದ್ದುವು. ಒಂದಲ್ಲ ಒಂದು ದಿನ ತಾರೆಯಾಗುವ ಬಯಕೆ ಅದರಲ್ಲೂ ಕಥಾನಾಯಕಿಯಾಗುವ ಕನಸು ಹುಚ್ಚು ಹಿಡಿಸಿತ್ತು.

ಹಲವಾರು ಚಿತ್ರಕಥಾನಾಯಕಿಯರ ಕಥೆಗಳನ್ನು ಕೇಳಿ ಹೆದರಿದ್ದೆ. ಅಂತೆಯೇ ಹಲವು ತಾರೆಯರ ವೈಭವಗಳನ್ನು ಕಂಡು ನಾನೂ ಅದರಂತೆ ಇರಬೇಕೆಂದು ಸಹಜವಾಗಿಯೇ ಕೋರಿದೆ.

"ಯಾವುದೋ ಪುಷ್ಪಾಂಜಲಿ ಚಿತ್ರ ಸಂಸ್ಥೆಯಂತೆ, ಅವರು ಮಾಂಗಲ್ಯಯೋಗ ಎಂಬ ಕನ್ನಡ ಸಾಮಾಜಿಕ ಚಿತ್ರವನ್ನು ನಿರ್ಮಿಸುತ್ತಾರಂತೆ" ಎಂದು ಕೇಳಿದ್ದೆ. ಅದರಲ್ಲಿ ನನ್ನ ಗಮನವನ್ನು ಸೆಳೆದ ಅಂಶವೊಂದಿತ್ತು. ಅದೇನೆಂದರೆ ಆ ಚಿತ್ರದ ಕಥಾನಾಯಕಿಗಾಗಿ ಶೋಧ ನಡೆದಿದೆ ಎಂಬ ವಿಷಯ.

ನಾನು ಆಗ ಯಾರನ್ನು ಬೇಡುವಂತೆಯೂ ಇರಲಿಲ್ಲ. ಅವಕಾಶ ತಾನಾಗಿಯೇ ಬರುವಂತೆಯೂ ಇರಲಿಲ್ಲ. ಆದರೆ ಅದೃಷ್ಟದ ಕೈವಾಡ ಆ ನಿರ್ಮಾಪಕರನ್ನು ನನ್ನ ಬಳಿಗೆ ಸೆಳೆಯಿತು. ನಾನು ಆ ಚಿತ್ರದ ಕಥಾನಾಯಕಿಯಾಗಿ ಅಭಿನಯಿಸಿದೆ.

ಮೊದಲ ಚಿತ್ರ! ಆ ಚಿತ್ರವನ್ನು ತಯಾರಿಸಿದವರಿಗೆ ಅದೇ ಮೊದಲು ಮತ್ತು ಕೊನೆಯ ಚಿತ್ರ! ಆದ್ದರಿಂದ ಆ ಸಂಸ್ಥೆಯ ಪ್ರತಿಯೊಬ್ಬರಿಗೂ ಚಿತ್ರ ತಯಾರಿಕೆಯಲ್ಲಿ ಏನೋ ಒಂದು ವಿಧವಾದ ಆಸಕ್ತಿ. ನಾನು ಮೊಟ್ಟಮೊದಲಬಾರಿಗೆ ಕಥಾನಾಯಕಿಯಾಗಿ ಬಣ್ಣ ಹಚ್ಚಲಿದ್ದೆ. ನಾನು ಬಣ್ಣ ಹಚ್ಚುವುದರಲ್ಲಿ ಅವರ ಭವಿಷ್ಯ ಬರೆದಿತ್ತೇನೋ ಎಂಬಂತೆ ಅವರಾಡುತ್ತಿದ್ದರು.

ದುಡ್ಡು ಕಾಸಿನ ವ್ಯವಹಾರದಲ್ಲಿ ಮೌನದ ಪಾತ್ರವೇ ಪ್ರಧಾನ. ಆದರೂ ಸಮಯಕ್ಕೆ ಸರಿಯಾಗಿ 'ಕಾಲ್‌ಶೀಟ್' ಕೊಟ್ಟು ದಿಗ್ದರ್ಶಕರ ಹಾಗೂ ನಿರ್ಮಾಪಕರ ಹಾಡಿಗೆ ತಾಳಹಾಕಬೇಕಾಗಿತ್ತು.

ಅವಶ್ಯಕವೊ ಅನವಶ್ಯಕವೊ ಅಂತೂ ನಾನು ದಿಗ್ದರ್ಶಕರ ಕೀಲುಗೊಂಬೆಯಂತೆ ಸೆಟ್ಟಿನಲ್ಲಿ ಮಾತಾಡಬೇಕಾಗಿತ್ತು. ಅಂತೆಯೇ ಅಭಿನಯಿಸಲೂ ಬೇಕಾಗಿತ್ತು! ಕೆಲವರು ಹೊಸಬರಮೇಲೆ ತಮ್ಮ ಅಧಿಕಾರವನ್ನು ಸರ್ಕಸ್ ಕಂಪನಿಗಳಲ್ಲಿ ಮೃಗಗಳನ್ನು ಪಳಗಿಸುವವರಂತೆ ಚಲಾಯಿಸುತ್ತಾರೆ. ಈ ಬಗೆಯ ಶಿಕ್ಷೆಯನ್ನು ಅನುಭವಿಸಿದವಳು ನಾನು.

## ಕಥಾನಾಯಕಿಯ ಕಥೆ

ಕಥಾನಾಯಕಿಯಂತೂ ಆದೆ. ಆದರೆ ಅದೃಷ್ಟ ಪರೀಕ್ಷಿಸತೊಡಗಿತು. ನಾನು ಕಥಾನಾಯಕಿಯಾಗಿ ಅಭಿನಯಿಸಿದ ಆ ಚಿತ್ರ ನನಗೆ ಮುಳ್ಳಿನ ಕಿರೀಟವನ್ನಿಟ್ಟು ತಾನು ದುರ್ದೈವಕ್ಕೆ ಬಲಿಯಾಯಿತು.

ನನಗೆ ತ್ರಿಶಂಕುಸ್ವರ್ಗದ ಅನುಭವವಾಗತೊಡಗಿತು. ಕಥಾನಾಯಕಿಯಪಟ್ಟಕ್ಕೇರಿದ ದುರಭಿಮಾನ ಅದಕ್ಕಿಂತ ಕೆಳದರ್ಜೆಯ ಪಾತ್ರಗಳನ್ನು ಧರಿಸಲು ಅಡ್ಡಿಯಾಯಿತು.

ಏನೋ ಎಂತೋ, ಹಾಗೋ ಹೀಗೋ ತುಯ್ದಾಡುತ್ತಿದೆ. 'ರಾಣಿ ಹೊನ್ನಮ್ಮ', 'ಬಸವೇಶ್ವರ' ಚಿತ್ರಗಳು ನನಗೆ ಉಸಿರುಹುಯ್ದುವು.

ಅದಾದಬಳಿಕ ನನ್ನನ್ನು ಕನ್ನಡ ಜನತೆ ಆದರಿಸತೊಡಗಿ ನನ್ನ ಅವಶ್ಯಕತೆಯನ್ನು ಪ್ರತಿಯೊಬ್ಬ ನಿರ್ಮಾಪಕರೂ ಗುರುತಿಸಿ, ನನಗಾಗಿ ಪಾತ್ರಗಳನ್ನು ನಿರ್ಮಿಸಿದ್ದೂ ಉಂಟು.

ಪ್ರೇಕ್ಷಕನ ದೃಷ್ಟಿಯಲ್ಲಿ ನಾನು ಚೆನ್ನಾಗಿ ಕಂಡೆ. ನನ್ನ ಅಭಿನಯ ಅವನಿಗೆ ತೃಪ್ತಿದಾಯಕವಾಯಿತು. ನಾನಿರುವ ಚಿತ್ರಗಳಿಗೆ ಪ್ರೇಕ್ಷಕಸಮೂಹದ ಪ್ರೋತ್ಸಾಹ ಮತ್ತು ಗೆಲವು ಎಂಬುದು ಖಚಿತವಾಯಿತು.

ಚಿತ್ರ ನಿರ್ಮಾಪಕರೂ ಅವರಿಗೆ ಒತ್ತಾಸೆಯಾದ ಹಂಚಿಕೆದಾರರೂ ನಾನು 'ಅನಿವಾರ್ಯ' ಎಂಬ ಮಟ್ಟಿಗೆ ನನ್ನ ಅಗತ್ಯವನ್ನು ಬಯಸಿದರು ; ಬಯಸುತ್ತಿದ್ದಾರೆ.

## ಪರಭಾಷೆಯ ಚಿತ್ರಗಳು

ನನ್ನನ್ನು ಪರಭಾಷೆಯ ನಿರ್ಮಾಪಕರು ಕೂಡ ಅಪೇಕ್ಷಿಸಿ, ತೆಲುಗು, ತಮಿಳು ಚಿತ್ರಗಳಲ್ಲಿ ಅಭಿನಯಿಸುವ ಅವಕಾಶ ಕಲ್ಪಿಸಿಕೊಟ್ಟರು.

ಅದೃಷ್ಟದೇವತೆಯ ಪ್ರಸನ್ನತೆಯಿಂದ ಯಾವ ಭಾಷೆಯ ಚಿತ್ರವಾಗಲಿ ನನಗೆ ಪ್ರಯಾಸವಾಗಲಿಲ್ಲ. ನಾನು ಅಭಿನಯಿಸಿದ ತೆಲುಗು "ವಾಲ್ಮೀಕಿ" ಅದ್ಭುತಸ್ವಾಗತ ಪಡೆದುದರಿಂದ ಅದೇ ಚಿತ್ರ ನಿರ್ಮಾಪಕರ ಸದ್ಯದ "ಮರ್ಮಯೋಗಿ" ತೆಲುಗು ಅವತರಣಿಕೆಯಲ್ಲೂ ಅಭಿನಯಿಸುತ್ತಿದ್ದೇನೆ.

ಈಗ ನಾನು "ಏಕ ಡಾಕು ಏಕ ಹಸೀನ" ಎಂಬ ಹಿಂದೀ ಚಿತ್ರದಲ್ಲಿ ಅಭಿನಯಿಸಲೊಪ್ಪಿದ್ದೇನೆ.

## ಅಪಪ್ರಚಾರ ವೈಖರಿ

ನನ್ನ ಮೇಲೆ ಅನೇಕರು ಅನೇಕ ಬಗೆಯ ಅಭಿಪ್ರಾಯಗಳನ್ನು ಬಯಲು ಮಾಡುತ್ತಿದ್ದಾರೆ. ಅಭಿಮಾನದಿಂದ ಆದರಿಸುವ ನಿಷ್ಪಕ್ಷಪಾತಿಗಳಂತೆ ಅಸೂಯೆಯಿಂದ ಕೆಂಡಕಾರುವ ಸಜ್ಜನರೂ ನನ್ನನ್ನು ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಹಿಂಸಿಸುತ್ತಿದ್ದಾರೆ. ಕೆಲವು ಪತ್ರಿಕೆಗಳ ಅಸ್ತ್ರಪ್ರಯೋಗದಿಂದ ನಾನು ಬಹಳವಾಗಿ ನೊಂದಿದ್ದರೂ ಸತ್ಯಕ್ಕೆ ಎಂದೂ ಸೋಲಿಲ್ಲವೆಂಬ ನಂಬಿಕೆ ನನಗೆ ವಜ್ರಕವಚವಾಗಿದೆ.

ನನ್ನ ಬಗ್ಗೆ ಇಲ್ಲ ಸಲ್ಲದ ಸುಳ್ಳಿನ ಕಂತೆಗಳನ್ನು ಪ್ರಕಟಿಸಿದ ಪತ್ರಿಕೆಗಳಿವೆ. ಆದರೆ ಅವು ತಮ್ಮ ಪತ್ರಿಕಾ ಧರ್ಮಕ್ಕೆ ಎಷ್ಟು ನಿಷ್ಠೆಯಿಂದಿವೆ ಎಂಬುದು ಇದರಿಂದ ಸ್ಪಷ್ಟವಾಗಿದೆ. ಇದಕ್ಕೆ ನಾನು ಅಂಜುವಳಲ್ಲ.

ಎಲ್ಲ ಬಗೆಯ ನಂಜನ್ನೂ ನುಂಗುವ ಶಕ್ತಿಯನ್ನು ಕೊಡು ನಂಜುಂಡ ಎಂಬುದೇ ಈಶ್ವರನಲ್ಲಿ ನನ್ನ ಬೇಡಿಕೆ.

"ಕರ್ಮವೀರ"ನ ದೃಷ್ಟಿಯಲ್ಲಿ ನಾನು ನಿಷ್ಕಳಂಕಳಾಗಿ ಕಂಡು ಈ ಲೇಖನವನ್ನು ಬರೆಸಿದ್ದಕ್ಕೆ ದೀಪಾವಳಿಯು ಆತನಿಗೂ ಆತನ ಪ್ರೇಮಿಗಳಿಗೂ ಕನ್ನಡಾಂಬೆಯು ಹೊಂಗನಸುಗಳನ್ನು ನನಸಾಗಿಸುವ ಚೈತನ್ಯ ಕೊಡಲೆಂದು ಕೋರುತ್ತೇನೆ.

ಸಿರಿಗನ್ನಡಂ ಗೆಲ್ಗೆ !!

ತಾರೆ ಲೀಲಾವತಿ



ಲೇಖಕರು :
ಶ್ರೀ ನರಸಿಂಹರಾಜು
ಕನ್ನಡ ಚಿತ್ರರಂಗದ ಖ್ಯಾತ ಹಾಸ್ಯ ನಟ

# ಚಲನಚಿತ್ರದಲ್ಲಿ ಹಾಸ್ಯ

ಹಾಸ್ಯ ನಟ ತನ್ನ ನೈಜಾಭಿನಯುವನ್ನು ಎಷ್ಟು ಮಾತ್ರಕ್ಕೆ ಚಿತ್ರದಲ್ಲಿನ ತನ್ನ ಪಾತ್ರಕ್ಕೆ ಸನ್ನಿವೇಶಕ್ಕೆ ತಕ್ಕಂತೆ ಹಿತಮಿತವಾಗಿ ಅಭಿನಯಿಸಬಹುದೋ ಅಷ್ಟು ಮಾತ್ರವೇ ಮಾಡಲು ಸಾಧ್ಯ. ಚಲನಚಿತ್ರ ತಾಂತ್ರಿಕ ಕಲೆಯಾಗಿರುವುದರಿಂದ ವೈಜ್ಞಾನಿಕ ರೀತಿಯಲ್ಲೇ ಹಾಸ್ಯ ನಟ ಛಾಯಾಗ್ರಾಹಕ ಮತ್ತು ನಿರ್ದೇಶಕರ ಆದೇಶಕ್ಕೆ ಒಪ್ಪಿ ನಡೆಯಬೇಕು. ಇದು ಕ್ಲೋಸ ಅಪ್...ಇದು ಮಿಡ್‌ಕ್ಲೋಸ್ ಷಾಟ್... ಇದು ಲಾಂಗಷಾಟ್ ಮುಂತಾಗಿ ಆ್ಯಂಗಲ್‌ಗಳನ್ನು ಸಿದ್ಧಪಡಿಸಿ ವಿದ್ಯುದ್ದೀಪದ ಬೆಳಕನ್ನು ಆಯಾಶಾಟಿಗೆ ತಕ್ಕ ರೀತಿಯಲ್ಲೇ ಸಿದ್ಧಪಡಿಸಿರುತ್ತಾರೆ. ಅಂಥ ಸಮಯದಲ್ಲಿ ಹಾಸ್ಯನಟ ತನ್ನ ಸ್ವೇಚ್ಛಾಚಾರವನ್ನಾಗಲಿ ಸ್ವಂತ ಮಾತುಗಳನ್ನಾಗಲಿ ಬಳಸಲು ಸಾಧ್ಯವಾಗುವುದಿಲ್ಲ. ಕ್ಲೊಸಪ್ ಆಂಗಲ್ಸ್‌ನಲ್ಲಿ ಹಾಸ್ಯನಟ ಒಂದು ಮಾತಾಡಬೇಕಾಗಿರುತ್ತೆ. ಆ ಮಾತಾಡುವಾಗ ತಲೆ ಅಲ್ಲಾಡಿಸಿದರೆ ಚನ್ನಾಗಿ ಆ ಮಾತಿಗೆ ಪುಷ್ಟಿ ದೊರಕಿ ಜನಕ್ಕೆ ನಗು ಬರುವಹಾಗಿರುತ್ತೆ ಎಂದು ಭಾವಿಸೋಣ, ಆದರೆ ಆಗ ಆ ನಟ ತಲೆ ಅಲ್ಲಾಡಿಸಲು ಸಾಧ್ಯವಿಲ್ಲದಂತೆ ಕ್ಯಾಮರಾಮೆನ್ "ಇದು ಕ್ಲೋಸಪ್ ಷಾಟ್ ಸಾರ್, ಅಲ್ಲಾಡಬೇಡಿ" ಎಂದು ಹೇಳಿ ಅಭಿನಯಕ್ಕೆ ತಡೆ ಹಾಕುತ್ತಾನೆ. ಆಗ ತಲೆಯಿಂದ ಮಾಡಬೇಕಾದ ಅಭಿನಯ ಬರಿ ಕಣ್ಣಿನಿಂದ ಮಾಡಬೇಕಾಗುತ್ತೆ. ಅದು ಚನ್ನಾಗಿದ್ದರೆ ನಟನಿಗೆ ಮೆಚ್ಚುಗೆ ದೊರಕುತ್ತೆ, ನಿರ್ದೇಶಕನಿಂದ. ಚನ್ನಾಗಿಲ್ಲದೆ ಹೋದಲ್ಲಿ ನಟನಿಗೆ ತುಂಬಾ ನಿರಾಸೆಯಾಗುತ್ತೆ. ಚಲನಚಿತ್ರದಲ್ಲಿ ಕಥಾನಾಯಕನಿಗಿಂತ ನನ್ನ ದೃಷ್ಟಿಯಲ್ಲಿ, ನನ್ನ ಅನುಭವದಲ್ಲಿ ಹಾಸ್ಯನಟನಿಗೆ ಅಪಾಯ ಹೆಚ್ಚು. ಪ್ರೇಕ್ಷಕರನ್ನು ನಗಿಸುವ ಸಂದರ್ಭದಲ್ಲಿ ಹಾಸ್ಯ ನಟ ಅನೇಕ ಅಪಘಾತಗಳಿಗೆ ಸಿಕ್ಕಬೇಕಾಗುತ್ತೆ. ಈ ಅಪಘಾತಗಳು ಅವನಿಗೆ ನಿಜವಾಗಿಯೂ ಉಂಟಾಗಿದ್ದರೆ ಜನಕ್ಕೆ ಅದು ಹಾಸ್ಯಾಸ್ಪದವಾಗಿಯೇ ತೋರುತ್ತದೆ. ಅಲ್ಲದೆ ಜನರು ಅದನ್ನು ಹಾಸ್ಯನಟನ ಸ್ಟಂಟ್ ಎಂದು ತಿಳಿದುಕೊಳ್ಳುತ್ತಾರೆ. ಆದರೆ ಹಾಸ್ಯನಟನಿಗೆ ಎಂತಹ ತೊಂದರೆಗಳು ಉಂಟಾಗುತ್ತವೆ ಎಂದರೆ ನನ್ನ ಕೆಲವು ಚಿತ್ರಗಳಲ್ಲಿ ನಡೆದ ಘಟನೆಗಳಲ್ಲಿ ಕೆಲವನ್ನು ಸೂಕ್ಷ್ಮವಾಗಿ ಇಲ್ಲಿ ತಿಳಿಸಲಪೇಕ್ಷಿಸುತ್ತೇನೆ. ಪ್ರೇಕ್ಷಕರನ್ನು ನಗಿಸಬೇಕು, ನಿರ್ದೇಶಕ ಛಾಯಾಗ್ರಾಹಕರಿಂದ ಮೆಚ್ಚುಗೆಪಡೆಯಬೇಕೆಂಬ ಹಂಬಲಕ್ಕೆ ಗುರಿಯಾದ ನಾನು ಒಂದು ಚಿತ್ರ (ರಾಯರ ಸೊಸೆ)ದಲ್ಲಿ ಕಿಟಿಕಿಯಿಂದ ಧುಮುಕುವ ಸನ್ನಿವೇಶದಲ್ಲಿ ಕ್ಯಾಮರಾ ಸ್ಟಾರ್ಟ್ ಆದಾಗ ಆವೇಶದಿಂದ ಧುಮಿಕಿದೆ. ಆ ಷಾಟ್ ತುಂಬಾ ಚನ್ನಾಗಿ ಬಂದಿದೆ ಎಂದು ನಿರ್ದೇಶಕರು ಬಂದು ನನ್ನ ಬೆನ್ನು ತಟ್ಟಿದರಂತೆ. ಆದರೆ ಆ ಹೊತ್ತಿಗೆ ನಾನು ಧುಮುಕುವ ರಭಸದಲ್ಲಿ ತಲೆ ಕಿಟಕಿಗೆ ತಾಕಿ ಜ್ಞಾನ ತಪ್ಪಿ ಬಿದ್ದಿದ್ದೆನೆಂದು ಅನಂತರ ತಿಳಿದು ಬಂತು. 'ವೀರಕೇಸರಿ' ಚಿತ್ರದಲ್ಲಿ ಮಹಾಬಲಪುರದಲ್ಲಿನ ಹೊರಾಂಗಣದಲ್ಲಿ ಒಂದು ಹೊಲಸು ನೀರಿನ ಹೊಂಡದ ಬಳಿ ನಡೆದ ಚಿತ್ರಣದಲ್ಲಿ ಆ ಕೊಳಕು ಸರೋವರ ಕ್ಯಾಮರಾಕ್ಕೇ ಚನ್ನಾಗಿ ಕಾಣಿಸುತ್ತದೆಂದು ತಿಳಿದಿದ್ದ ನಿರ್ದೇಶಕರು ಹೊಂಡದ ಬಳಿ ನಮ್ಮೆಲ್ಲರನ್ನೂ ನಿಲ್ಲಿಸಿ ಷಾಟ್ಸ ತೆಗೆದರು. ಕೆಲವು ಷಾಟ್ಸಗಳಲ್ಲಿ ನಾವು ನೀರಿನಲ್ಲಿ ಬೀಳಬೇಕೆಂದರು... ನೀರಿನ ಬಳಿ ನಿಂತರೇ ಗೊಬ್ಬು ನಾತ ಹೊಡೀತಿತ್ತು. ಅದರೊಳಗೆ ಧುಮುಕುತ್ತಿರುವ ಹಾಸ್ಯನಟರೊಂದಿಗೆ ನಾನೂ ಧುಮುಕಬೇಕು. ಆ ಕೊಳಕು ನೀರಿನೊಳಗೆ ಮುಳುಗಿ ಕಣ್ಣುಬಾಯಿ ಬಿಡುತ್ತಿದ್ದ ನಟರ ಬಾಯೊಳಕ್ಕೆ ಅಲ್ಲೇ ಬೆಳೆದು ಬಿದ್ದಿದ್ದ ಹೊಲಸು ಪಾಚೆಗಳನ್ನು ತೆಗೆದು ತುಂಬಬೇಕು, ಅನಂತರ ಆ ನಮ್ಮ ವಿರೋಧಿಗಳು ನಾನು ಮಾಡಿದಂತೆಯೇ ಆ ಗಬ್ಬು ನೀರಿನ ಪಾಚಿ ಹುಲ್ಲು ತೆಗೆದು ನಮ್ಮ ಬಾಯೊಳಕ್ಕೆ ತುಂಬಬೇಕು, ಇದು ತುಂಬಾ ಹಾಸ್ಯವಾಗಿರುತ್ತೆ ಎಂದರು. ಹಾಗೆ ಮಾಡಿದರೆ ಹೇಳುವವರಿಗೂ ನೋಡುವವರಿಗೂ ತುಂಬಾ ನಗುಬರುತ್ತೆ... ನಿಜ... ಆದರೆ ಆ ರೀತಿ ಮಾಡುವ ಹಾಸ್ಯ ನಟನ ಗತಿ...... ದೇವರೇಗತಿ. ಮೊದಲೇ ಕೊಳಿತು ನಾರುತ್ತಿರುವ ಗಬ್ಬು ನೀರು, ಅದರ ವಾಸನೆ ತಡೆದುಕೊಂಡು ನೀರಿಗಿಳಿದು ಮೈಮೇಲೆಲ್ಲ ಕಚಡಾ ಹೊತ್ತು ಜೊತೆಗೆ ನೀರಿನಲ್ಲಿ ಬೆಳೆದಿದ್ದ ಪಾಚಿ ಹುಲ್ಲು ತೆಗೆದು ಬಾಯಿಬಿಡುತ್ತಿರುವ ನಟರ ಬಾಯಲ್ಲಿ ತುಂಬಬೇಕಾಗುತ್ತೆ, ಎಂದು ತಿಳಿಯುತ್ತಿದ್ದಂತೆಯೇ ನನಗೆ ಗೊತ್ತಿಲ್ಲದಂತೆಯೇ ವಾಂತಿ ಬರುತ್ತೆ. ಇಲ್ಲಿ ಹಾಸ್ಯರಸ ಹೋಗಿ ದುರ್ವಾಸನೆ ರಸ ಬರುತ್ತೆ ಬಾಯಲ್ಲಿ; ಜೊತೆಗೆ ನಮಗೆ ಆರೋಗ್ಯವು ಕೆಡುತ್ತೆ ಎಂದು ನೀರಿಗಿಳಿಯದೆ ನಾನು ದೂರದಲ್ಲಿಯೇ ನಿಂತು ಅಭಿನಯಿಸಿದೆ. ಈ ಭಾಗ ಇಷ್ಟು ಕಷ್ಟಪಟ್ಟು ಅಭಿನಯಿಸಿದ್ದರೂ ನಮ್ಮ ಪ್ರೇಕ್ಷಕರಿಗೆ ಕಾಣದ ರೀತಿ ಆಯಿತು. ವೀರಕೇಸರಿ ಚಿತ್ರದಲ್ಲಿ ಈ ದೃಶ್ಯ ಕತ್ತರಿಸಿ ಹಾಕಲಾಯಿತೆಂದು ತಿಳಿಯಿತು. ನಾವು ಇಷ್ಟು ಕಷ್ಟಪಟ್ಟು ಪ್ರೇಕ್ಷಕನಿಗೆ ನಗು ಬರಲೆಂದು ಮಾಡಿದ ಹಾಸ್ಯದೃಶ್ಯದ ಗತಿ ಹೀಗಾದರೆ ನಟ

' ವೀರಕೇಸರಿ ' ಯಲ್ಲಿ ನರಸಿಂಹರಾಜು



ನೇನು ಮಾಡಲು ಸಾಧ್ಯ? ಅದೇ 'ವೀರಕೇಸರಿ' ಚಿತ್ರದಲ್ಲಿ ಈಸ್ಟಮನ್ ಕಲರಿನ ಕೆಲ ಹೊಡೆದಾಟದ ಚಿತ್ರೀಕರಣ ಸಂದರ್ಭದಲ್ಲಿ ಕತ್ತಿವರಸೆ ಮಾಡುತ್ತಿದ್ದ ನಾವು ಜನಗಳಿಗೆ ಅದು ಕಾಣಬಂದರೆ ಸಾಕೆಂದು ಅಂದುಕೊಳ್ಳುತ್ತೇವೆ. ಆದರೆ ನಿರ್ದೇಶಕರು ಜೋರಾಗಿ ಹೊಡದಾಡಿ, ಒಳ್ಳೇ ಇಫೆಕ್ಟ್ಸ್ ಬರುತ್ತಿಲ್ಲ ಎಂದರು. ಅವರ ಮನಸ್ಸಿಗೆ ಬರುವಂತೆ ಇಫೆಕ್ಟ್ಸ್ ಕೊಡಲು ಹೋದೆ. ಗುಂಪಿನಲ್ಲಿದ್ದ ಹತ್ತು ಕತ್ತಿಗಳಲ್ಲಿ ಯಾವುದೋ ಒಂದು ಕತ್ತಿ ಬಂದು ನನ್ನ ಕಣ್ಣಿಗೆ ತಗುಲಿತು. ೨ ಘಂಟೆಗಳ ತನಕ ಕಣ್ಣಿಂದ ರಕ್ತಸೋರುತ್ತಿತ್ತು. ಇದು (ನಮ್ಮ ದೇಹದ ಮೇಲೆ ಹರಿದ ಹಾಸ್ಯರಸ ಜನಗಳ ಕಣ್ಣಿಗೆ ಕಾಣುವ ಹಾಸ್ಯವಲ್ಲ) ಅಪಾಯಕಾರಿ ಸನ್ನಿವೇಶಗಳಲ್ಲಿ ನಾವು ಮಾಡುವ ಕಷ್ಟಕಾರ್ಯ (ಸರ್ಕಸ್) ಪ್ರೇಕ್ಷಕರಿಗೆ ಹಾಸ್ಯ ತರಿಸುತ್ತೆ. ಆದರೆ ನಟನಿಗೆ ಅಪಾಯ ಹೆಚ್ಚು. ಅಲ್ಲಿಂದ ಓಡಿಬಂದು ಜಾರಿಬೀಳಿ ಎಂದು ನಿರ್ದೇಶಕರು ಹೇಳಿಬಿಡುತ್ತಾರೆ. ಜನಗಳಿಗೂ ಈ ದೃಶ್ಯಗಳು ಹಾಸ್ಯವಾಗಿರುತ್ತೆ. ಆದರೆ ಓಡಿಬಂದು ಜಾರಿ ಬೀಳುವಾಗ ಸೆಟ್ಟಿನಲ್ಲಿ ಕೆಳಗೆ ಬಿದ್ದಿರುವ ಸಣ್ಣ ಸಣ್ಣ ಮೊಳೆಗಳಾಗಲಿ ಕಲ್ಲಾಗಲಿ ಚುಚ್ಚಿಕೊಂಡರೆ ನನ್ನಗತಿ? (ದೇವರೇ ಗತಿ) ಕೈ ಕಾಲುಗಳಿಗೆ ಜಖಂ ಆಗುವುದಂತೂ ಶತಃಸಿದ್ಧ. ಆಗ ನಮಗೆ ನಿರ್ದೇಶಕರಿಂದಲೂ ಛಾಯಾಗ್ರಾಹಕರಿಂದಲೂ ನಿರ್ಮಾಪಕರಿಂದಲೂ ಸಿಗುವ ಬಹುಮಾನ- ಅಯ್ಯೋ ಪಾಪ! ಮತ್ತು ಎರಡು ಬಾಟಲ್ ಸೋಡಾ ನೀರು! ಸಾಮಾನ್ಯವಾಗಿ ಯಾವ ನಟನೇ ಆಗಲಿ ಕೆಳಗೆ ಬೀಳಲಿ ಪೆಟ್ಟು ತಾಕಿಸಿಕೊಳ್ಳಲಿ ಬೇಗ ಸಿಕ್ಕುವುದೆಂದರೆ ೭ ನಯೇ ಪೈಸೇ ಸೋಡಾ ಇಲ್ಲವೆ ನಾಲ್ಕು ನಯೇ ಪೈಸೇ ಐಸು. ಇದು ಕುಡಿದು ಕುಡಿದು ನಟರಿಗೆ ಬೇಸರವಾಗಿರುತ್ತೆ. ಕೆಲವೊಮ್ಮೆ ಮೂರ್ಛೆ ಹೋದ ನಟನಿಗೆ ಈ ಸೋಡಾ ಎಂಬ ಶಬ್ದವೇ ಜ್ಞಾನ ತಂದುಕೊಡುತ್ತೆ. 'ನಾಗಾರ್ಜುನ' ಎಂಬ ಒಂದು ಚಿತ್ರದಲ್ಲಿ ರಮಣಿ ಎಂದು ಭ್ರಮಿಸಿ ಮರವೊಂದನ್ನು ತಬ್ಬಿಕೊಳ್ಳುವಾಗ ಆ ಮರದಲ್ಲಿದ್ದ ಸಣ್ಣ ಸಣ್ಣ ಮೊಳೆಗಳು (ಕೃತಕ ಮರ) ಮೈಗೆಲ್ಲಾ ಚುಚ್ಚಿಕೊಂಡಿತು. ನಿರ್ದೇಶಕರಿಗೆ ಹೇಳಿದೆ. ಕೈಗೆ ಮೊಳೆ ಚುಚ್ಚಿ ರಕ್ತ ಬಂತೂಂತ. ತಕ್ಷಣವೇ ಅವರು ಪಕ್ಕದಲ್ಲಿದ್ದ ಬಾಯ್ ಕರೆದು, ಕೊಡೋ ಅವರಿಗೊಂದು ಸೋಡಾ, ಅವರ ಕೈಗೆ ಮೊಳೆ ಚುಚ್ಚಿ ರಕ್ತಬಂದಿದೆ ಎಂದರು. ನಟನಿಗೆ ಪೆಟ್ಟಾಯಿತೆಂದರೆ ತಕ್ಷಣ ಸಿಗುತ್ತೆ ಈ ಸೋಡಾ—ನನಗೂ ಕುಡಿದು, ಕುಡಿದು ಬಹಳ ಬೇಜಾರಾಗಿದೆ. ಈಗೀಗ ರಕ್ತ ಬಂತು ಅಂತ ಹೇಳಿದರೆ ಎಲ್ಲಿ ಸೋಡಾ ಕೊಡುತ್ತಾರೊ ಅಂತ ಏನೂ ಏಟು ಬೀಳದವನಂತೆ ಸುಮ್ಮನಾಗಿ ಬಿಡುತ್ತೇನೆ. ನಾಯಿಗಳ ಜೊತೆ ಸರಸವಾಡುವುದು. ಅವುಗಳ ಕೈಯಲ್ಲಿ ಬೊಗಳಿಸಿ ಕಡಿಸಿಕೊಳ್ಳುವುದು ಹಾವುಗಳ ಜೊತೆ ಗಾರುಡಿ ಆಗೋದು ಮುಂತಾದ ಕೆಲಸಗಳು ಬಹುಕಷ್ಟ. ಈ ಪ್ರಾಣಿಗಳು ಹಾಸ್ಯ ನಟನಿಗೆ ತೊಂದರೆ ಕೊಟ್ಟರೆ ಪ್ರೇಕ್ಷಕರು ನಗುತ್ತಾರೆ. ಆದರೆ ನಟನಿಗೆ ಆಗುವ ತೊಂದರೆ ಇನ್‌ಜಕ್ಷನ್, ಔಷಧಿ, ಜ್ವರ, ರಜಾ... ಮುಂತಾದ ರೂಪ ತಾಳುತ್ತೆ.

Mr. ರಾಜೂ ಹೊಸ ಹಾಸ್ಯ ಕ್ರಿಯೇಟ್ ಮಾಡಿದ್ದೇನೆ ಎಂದು ಬೆನ್ನು ತಟ್ಟುವ ಕೆಲವು ನಿರ್ದೇಶಕರು ನೀಡುವ ಸಲಹೆಗಳಿಂದ ಕೆಲವು ವೇಳೆ ಪ್ರಾಣವೇ ಹೋಗುತ್ತೆ ನೋಡಿ. ನಿಮ್ಮನ್ನು ತೆಗೆದು ಎಸೆಯುತ್ತಾನೆ ಆ ಧಾಂಡಿಗ. ನೀವು ಅಲ್ಲಿ ಬಿದ್ದು ಇಲ್ಲಿಂದ ಎದ್ದು ಓಡಿದರೆ ತುಂಬಾ ನಗುತ್ತಾರೆ ಜನರು ಎಂದಾಗ ಧಾಂಡಿಗ ಎಸೆಯುತ್ತಾನೆ ಎನ್ನುವಾಗಲೇ ನಮಗೆ ಜ್ವರ ಬಂದಿರುತ್ತೆ. ಇನ್ನೂ ಅವನು ಎಸೆದು, ಬಿದ್ದು, ಎದ್ದು ಓಡಬೇಕಾದರೆ... ಗತಿ....ದೇವರೇ ಗತಿ...ಏನು ಮಾಡುವುದು. ಎಲ್ಲಾ ಅನುಭವಿಸುವುದು. ಬೆಳಿಗ್ಗೆ ತಂದಿಟ್ಟ ತಂಗಳನ್ನು ಸಾಯಂಕಾಲದ ವರೆವಿಗೂ ನಮ್ಮ ಷಾಟ್ ಬರದೇ ಟಿಫನ್ ಕ್ಯಾರಿಯರ್‌ನಲ್ಲಿ ಹಳಸಿರುತ್ತೆ. ಸಾಯಂಕಾಲ ೭ ಘಂಟೆಗೆ ನಾವು ಊಟ ಮಾಡುವ ದೃಶ್ಯ ಚಿತ್ರೀಕರಣವಾಗಬೇಕು. ಆಗ ಬೆಳಗಿನ ಹಳಸಿದ ಅನ್ನವನ್ನು ತಂದು ಮುಂದಿಡುತ್ತಾರೆ. ಡೈರೆಕ್ಟರು ನೀವು ಗಬಗಬ ತಿನ್ನುತ್ತಿರಿ. ನಿಮ್ಮ ಸಹಪಾಠಿ ಬಂಧು ನಿಮ್ಮ ಮುಂದೆ ನಿಲ್ಲುತ್ತಾಳೆ. ಅಷ್ಟರೊಳಗೆ ನೀವು ಇದನ್ನು ಖಾಲಿ ಮಾಡಬೇಕು ಎನ್ನುತ್ತಾರೆ. ಬೆಳಗಿನಿಂದ ತಂಗಳಾಗಿದ್ದ ಅನ್ನ ಹಳಸಿ ಹೋಗಿದ್ದರೂ ನಾವು ವಿಧಿ ಇಲ್ಲದೆ ತಿನ್ನಬೇಕು. ಆಗೇನೋ ತಿಂದುಬಿಡುತ್ತೇವೆ. ಆನಂತರ ೮-೧೦ ದಿನದ ಮೇಲೆ ಮಲೇರಿಯಾಕ್ಕೊ-ಜ್ವಲೇರಿಯಾಕ್ಕೊ ಬಲಿಯಾಗಿ ಬಿದ್ದಿರಬೇಕು. ಹಾಸ್ಯ ಉಂಟುಮಾಡೋಕ್ಹೋಗಿ ಹಾಸಿಗೆ ಹಿಡಿಯಬೇಕಾಗುತ್ತೆ.

'ಆಶಾಸುಂದರಿ' ಚಿತ್ರವೊಂದರಲ್ಲಿ ಪೆಟ್ಟಿಗೆಯೊಂದರೊಳಗೆ ರಹಸ್ಯವಾಗಿ ಕೂತಿರಬೇಕೆಂದು ನಿರ್ದೇಶಕರು ಹೇಳಿದರು. ನಾನು ಕೂತಿದ್ದ ಪೆಟ್ಟಿಗೆಯ ಮೇಲೆ ಹಾಸ್ಯನಟಿ ಲಕ್ಷ್ಮೀದೇವಿ ಕೂತಿದ್ದರು. ಅವರ ಡೈಲಾಗ್ ಮುಗಿದ ಮೇಲೆ ನಾನು ಪೆಟ್ಟಿಗೆ ತೆಗೆದು ಹೊರಗೆ ತಲೆಹಾಕಿ ಇಣುಕಿ ನೋಡಬೇಕು. ಪೆಟ್ಟಿಗೆ ಮೇಲೆ ಕುಳಿತಿದ್ದ ಲಕ್ಷ್ಮೀದೇವಿ ಮುಖಕ್ಕೆ ಲೈಟಿಂಗ್ ಅಡ್ಜೆಸ್ಟ ಮಾಡುತಿದ್ದರು ಛಾಯಾಗ್ರಾಹಕ. ಅದು ಸುಮಾರು ೧೦ ನಿಮಿಷವಾಯಿತು. ಪೆಟ್ಟಿಗೆ ಒಳಗಿದ್ದ ನನ್ನ ಪಾಡು ನಾಯಿಪಾಡು. ಪೆಟ್ಟಿಗೆ ಮುಚ್ಚಳ ತೆಗೆದರೆ ಎಲ್ಲಿ ಷಾಟ್ ಕೆಟ್ಟು ಹೋಗುತ್ತೆ ಎಂಬ ಭಯ. ತೆಗೆಯದೇ ಇದ್ದರೆ ನಾನು ಉಸಿರಾಡುವಂತೆಯೇ ಇರಲಿಲ್ಲ. ಅಲ್ಲದೆ ನಾನು ಯಾವ ಮಾತು ಮುಗಿದ ಮೇಲೆ ಹೊರಗೆ ತಲೆ ಇಣಕಬೇಕೆಂಬುದು ಗೊತ್ತಿರಲಿಲ್ಲ. ಕಡೆಗೆ ಉಸಿರು ಸಿಕ್ಕಿಸತ್ತೇನೆಂಬ ಭಯದಿಂದ ಮುಚ್ಚಳ ತೆಗೆಯಲು ನೋಡಿದೆ. ಸಾಧ್ಯವೇ ಆಗಲಿಲ್ಲ. ಯಾರೋ ಹೊರಗಡೆ ಪೆಟ್ಟಿಗೆಯ ಚಿಲಕ ಹಾಕಿಬಿಟ್ಟಿದ್ದಾರೆ ಎಂದು ನನಗೆ ಭಯವುಂಟಾಯಿತು. ಪೆಟ್ಟಿಗೆ ಮುರಿದು ಹೋಗುವ ಹಾಗೆ ಬಡಿದೆ. ಕಡೆಗೆ ಬಾಗಿಲು ತೆಗೆದು ನಿರ್ದೇಶಕರು ಬೈದರು. 'ಏನ್ ಸಾರ್. ಆಕೆ ಡೈಲಾಗ್ ಮುಗೀಲೇ ಇಲ್ಲ. ಆಗಲೇ ತೆಗೆದು ಬಿಟ್ಟಿರಿ...ಛೆ! ಷಾಟ್‌ಕೆಟ್ಟು ಹೋಯ್ತು. ಫಿಲ್ಮವೇಸ್ಟಾಯಿತು.' 'ನಿಮ್ಮ ಫಿಲಂ ವೇಸ್ಟಾಗೋದು ಇರ್ಲಿ. ನನ್ನ ಸಮಾಧಿಯಾಗ್ತಾ ಇತ್ತು ಪೆಟ್ಟಿಗೆ ಒಳಗಡೆ' ಎಂದೆ. ಹೀಗೆ ಕೆಲವು ವೇಳೆ ಹಾಸ್ಯರಸದ ಹೆಸರಿನಲ್ಲಿ ಜೊಲ್ಲು ಸುರಿಸಬೇಕಾಗುತ್ತೆ.

ಒಟ್ಟಿನಲ್ಲಿ ಚಲನಚಿತ್ರದ ಹಾಸ್ಯಸನ್ನಿವೇಶಕ್ಕೆ ತಕ್ಕಂತೆ ಕ್ಲುಪ್ತವಾಗಿದ್ದು ನಿರ್ದೇಶಕನ ಕೈಯಲ್ಲಿನ ಸೂತ್ರಕ್ಕೆ ತಕ್ಕಂತೆ ತಾಳ ಹಾಕುವ ಗೆಜ್ಜೆಯ ಹೆಜ್ಜೆಯಾಗಿರಬೇಕು. ಎಲ್ಲೆ ಮೀರಬಾರದು. ಅಪಾಯವಾದರೂ ಮಾಡುವ ಉಪಾಯ ಜನಗಳಿಗೆ ತಿಳಿಯುವಂತಿರಬೇಕು. ಈ ದೃಷ್ಟಿ ಇಟ್ಟು ಸಂಭಾಷಣೆಗಳಿಗೆ ಪುಷ್ಟಿಕೊಟ್ಟು ಹಾಸ್ಯವನ್ನು ಚೆಲ್ಲಬೇಕು. ಸಾಮಾನ್ಯವಾಗಿ ಪ್ರೇಕ್ಷಕನ ಬೇಸತ್ತ ಮನಸ್ಸಿಗೆ ಮನೋರಂಜನೆ ದೊರಕುವುದು ಹಾಸ್ಯದಿಂದಲೇ. ಎಲ್ಲರೂ ಬಯಸುವದು ಹಾಸ್ಯವನ್ನೇ...

ಇಂಗ್ಲೀಷ್ ಚಿತ್ರಗಳಲ್ಲಿ ನಾವು ಕಾಣುವ ಹಾಸ್ಯ ಸನ್ನಿವೇಶಕ್ಕೆ ಅನುಗುಣವಾಗಿ ಅಭಿನಯಕ್ಕೆ ಪ್ರಾಮುಖ್ಯ ಹೊಂದಿ ಬೆಳೆದು ಪ್ರೇಕ್ಷಕರ ಮನಸ್ಸನ್ನು ಸೂರೆಗೊಂಡು ಯಶಸ್ಸು ಗಳಿಸಲು ಅವಕಾಶ ನೀಡುತ್ತೆ. ನಮ್ಮ ಕನ್ನಡ ಚಿತ್ರಗಳಲ್ಲಿ ಯಾವುದಕ್ಕೂ ಕಮ್ಮಿ ಇಲ್ಲದಂತೆ ಹಾಸ್ಯದ ಹೊನಲು ಹರಿಸಲು ಅವಕಾಶವಾಗುವಂತೆ ಚಿತ್ರ ನಿರ್ಮಾಪಕರು ಹೆಚ್ಚಾಗಿ ಹಾಸ್ಯಪ್ರಧಾನ ಕಥೆಗಳನ್ನೇ ವಿನೂತನ ರೂಪದೊಂದಿಗೆ ತೆರೆಗೆ ತಂದು ನಮ್ಮ ಕನ್ನಡ ಜನಕೋಟಿಯನ್ನು ಮನರಂಜಿಸಲೆಂದು ಬಯಸುತ್ತೇನೆ.

ಲೇಖಕರು :
ಶ್ರೀ ವಿಜಯನಾರಸಿಂಹ
ಕನ್ನಡ ಚಿತ್ರರಂಗದ ಖ್ಯಾತ ಕವಿ-ಸಾಹಿತಿ

# ಕನ್ನಡ ಚಿತ್ರರಂಗದ ಮುನ್ನಡೆ

ಕನ್ನಡ ಚಿತ್ರರಂಗದ ಇತಿಹಾಸ ಕಿರಿದಾದರೂ ಸೋದರ ಭಾಷೆಯ ಚಿತ್ರರಂಗಕ್ಕೆ ಹೋಲಿಸಿದಾಗ ತನ್ನಶಕ್ತಿಗೆ ಮೀರಿದ ಪ್ರಭಾವಯುತ ಸಾಧನೆಯನ್ನು ತಕ್ಕ ಮಟ್ಟಿಗಾದರೂ ಸಾಧಿಸಿದೆ ಎನ್ನಬಹುದು. ಇದಕ್ಕೆ ಸಾಕ್ಷಿಯಾಗಿ ರಾಷ್ಟ್ರಪತಿಗಳ ಪ್ರಶಸ್ತಿ ಪಡೆದ ಚಿತ್ರಗಳಿವೆ ಹಾಗೂ ಯಾವ ಪ್ರಶಸ್ತಿ ಇಲ್ಲದೆಯೇ ಜನತಾಜನಾರ್ದನನ ಮೆಚ್ಚಿಕೆ ಪಡೆದ ಚಿತ್ರಗಳೂ ಇವೆ.

'ಯಶಸ್ವಿಚಿತ್ರ' ಎಂದಾಗ ಎರಡು ದೊಡ್ಡ ಪ್ರಶ್ನೆಗಳು ಎದುರಾಗುತ್ತವೆ. ಅವೆಂದರೆ; ವಾಣಿಜ್ಯದೃಷ್ಟಿಯಿಂದ ಎಷ್ಟರ ಮಟ್ಟಿನ ಯಶಸ್ಸು? ಮತ್ತು ಗುಣದ ಶ್ರೇಷ್ಠತೆಯಲ್ಲಿ ಎಷ್ಟರಮಟ್ಟಿನ ಯಶಸ್ಸು? ಎಂಬವು.

ಈ ದೃಷ್ಟಿಕೋನದಿಂದ ನೋಡಿದಾಗ ಪ್ರೇಕ್ಷಕರ ಅಭಿರುಚಿ ಸ್ಪಷ್ಟವಾಗುತ್ತದೆ. ವಾಣಿಜ್ಯ ದೃಷ್ಟಿಯಿಂದ ಯಶ ಗಳಿಸಿರುವ ಚಿತ್ರಗಳೆಲ್ಲ ಕಲೆಯ ದೃಷ್ಟಿಯಿಂದ ಶ್ರೇಷ್ಠವಾದವುಗಳೆಂದು ಹೇಳುವಂತಿಲ್ಲ. ಏಕೆಂದರೆ ಕಲೆಯನ್ನು ಕಡೆಗಣಿಸಿ "ಮಾಹಾತ್ಮ್ಯ"ಗಳನ್ನು ಪ್ರದರ್ಶಿಸಿ ಹಣ ಗಳಿಸಿರುವ ಚಿತ್ರಗಳೂ ನಮ್ಮಲ್ಲಿವೆ.

ಆದರೆ ಕನ್ನಡ ಪ್ರೇಕ್ಷಕ ಅಂಧಾಭಿಮಾನಿಯಲ್ಲ; ಕಟುವಿಮರ್ಶಕ. ಆತನ ಒರೆಗಲ್ಲಿನಲ್ಲಿ ಬಣ್ಣ ಏರಿದ ಚಿತ್ರಗಳಿಗೆ ವಿಜಯ ಖಂಡಿತ.

## ಮಾರುಕಟ್ಟೆಯ ಏರಿಳಿತ

ನಮ್ಮ ಕನ್ನಡ ಚಿತ್ರಗಳ ಮಾರುಕಟ್ಟೆಯಲ್ಲಿ ವ್ಯಾಪಾರವಾಗದ ಪರಭಾಷೆಯ ಚಿತ್ರಗಳಲ್ಲಿ ತಮಿಳು, ತೆಲುಗು, ಮಲಯಾಳಿ ಮೊದಲಾದ ದಾಕ್ಷಿಣಾತ್ಯ ಚಿತ್ರಗಳೂ ಇಂಗ್ಲೀಷು, ಹಿಂದಿ, ಮರಾಠಿ, ಬಂಗಾಲಿ ಮೊದಲಾದ ಪರಭಾಷಾ ಚಿತ್ರಗಳೂ ನಮ್ಮ ಮಾರುಕಟ್ಟೆಯ ಹಣವನ್ನು ದೋಚುತ್ತಿವೆ. ಅನಂತರ ಅಳಿದುಳಿದ 'ಬಳಿದ ಭಾಗ್ಯ' ಕನ್ನಡ ಚಿತ್ರಗಳಿಗೆ ಸಿಗುತ್ತಿದೆ. ಇದಕ್ಕಾಗಿ ಕನ್ನಡ ಚಿತ್ರರಂಗ ಹೆದರಿ ಹಿಮ್ಮೆಟ್ಟಬೇಕಾಗಿಲ್ಲ; ಹಿಮ್ಮೆಟ್ಟಿಯೂ ಇಲ್ಲ.

ಈಗೀಗ ಭಾಷಾಭಿಮಾನ ಜಾಗೃತವಾಗುತ್ತಿರುವ ಸಲ್ಲಕ್ಷಣಗಳು ತೋರಿಬರುತ್ತಿವೆ. ಈ ಸಮಯದಲ್ಲಿ ಪ್ರೇಕ್ಷಕನ ಉತ್ಸಾಹ ವರ್ಧಿಸುವ ಚಿತ್ರಗಳ ತಯಾರಿಕೆ ತೀರಾ ಮುಖ್ಯ. ಕನ್ನಡ ಚಿತ್ರವನ್ನು ಈಗಿನ ಮಾರುಕಟ್ಟೆ ಸ್ವಾಗತಿಸುತ್ತಿದೆ. ಈ ಸ್ವಾಗತಕ್ಕೆ ಮಾರುಕಟ್ಟೆಯಲ್ಲಾಗಿರುವ ಪರಿವರ್ತನೆಯೇ ಕಾರಣ. ಪರಭಾಷೆಯ ಚಿತ್ರಗಳಿಗೆ ಹಿಂದೆ ಇದ್ದ ಪುರಸ್ಕಾರ ಈಗ ದೊರೆಯುತ್ತಿಲ್ಲ ಎಂಬ ಅಪಸ್ವರ ಕನ್ನಡೇತರ ಚಿತ್ರನಿರ್ಮಾಪಕರಿಂದ ಇತ್ತೀಚೆಗೆ ಕೇಳಿಬರುತ್ತಿದೆ.

ಈ ಬಗೆಯ ಏರಿಳಿತ ಎಲ್ಲ ಮಾರುಕಟ್ಟೆಗಳಲ್ಲೂ ಸಹಜ. ಆಯಾ ಪ್ರಾಂತದವರು ತಮ್ಮ ತಮ್ಮ ಭಾಷೆಗಳ ಚಿತ್ರಗಳ ಬಗ್ಗೆ ತಳೆಯುವ ನೀತಿಯನ್ನು ಅನುಸರಿಸಿ ಆಯಾ ಭಾಷೆಯ ಮಾರುಕಟ್ಟೆಯ ಏರಿಳಿತವಿದೆ.

## ೧೯೬೨ ರ ಕನ್ನಡ ಚಿತ್ರಗಳು

೧೯೬೨-೬೩ ರಲ್ಲಿ ಬಿಡುಗಡೆಯಾದ ಚಿತ್ರಗಳ ಸೋಲುಗೆಲವುಗಳನ್ನು ಪರಿಶೀಲಿಸಿದಲ್ಲಿ ಕನ್ನಡ ಚಿತ್ರೋದ್ಯಮ ಆಶಾದಾಯಕ ಪ್ರಗತಿಯನ್ನು ತೋರಿದೆ.

೧೯೬೨ರಲ್ಲಿ ಬಿಡುಗಡೆಯಾದ ೧೩ ಚಿತ್ರಗಳಲ್ಲಿ ೨ ಡಬ್ಬಿಂಗ್ ಚಿತ್ರಗಳೂ ಹನ್ನೊಂದು ಸ್ವತಂತ್ರ ಚಿತ್ರಗಳೂ ಇವೆ. ಉದ್ಯಮದ ಮುನ್ನಡೆಯಲ್ಲಿ ಯಾವ ಪಾತ್ರವನ್ನೂ ವಹಿಸದ ಡಬ್ಬಿಂಗ್ ಚಿತ್ರಗಳನ್ನು ಮರೆತರೆ ಸ್ವತಂತ್ರಕೃತಿಗಳಾಗಿ ಹೊರಬಂದ ಹನ್ನೊಂದು ಚಿತ್ರಗಳಲ್ಲಿ ಐದು ಚಿತ್ರಗಳು ನಿರೀಕ್ಷಿಸಿದ ಯಶಸ್ಸನ್ನು ಹೊಂದಲಿಲ್ಲ. ಮಿಕ್ಕವು ಆರ್ಥಿಕ ದೃಷ್ಟಿಯಿಂದ ಸಮರ್ಪಕವಾದವು.

ಪಾಸು ಮಾಡಿದ ಈ ಆರು ಚಿತ್ರಗಳಲ್ಲಿ ನಾಲ್ಕು ಚಿತ್ರಗಳು ಸಾಮಾಜಿಕ ಎಂಬ ಅಂಶ ಗಮನಾರ್ಹ. ಅದರಲ್ಲೂ "ಕರುಣೆಯೇ ಕುಟುಂಬದ ಕಣ್ಣು" ಒಂದು ಹೊಸ ದಾಖಲೆಯಾಯಿತು.

ಯಶ ಗಳಿಸಿದ ಚಿತ್ರಗಳಾದ "ದೈವಲೀಲೆ" "ಕಬೀರ್", "ವಿಧಿವಿಲಾಸ", "ದೇವಸುಂದರಿ" "ತೇಜಸ್ವಿನಿ" ಅವುಗಳಲ್ಲಿರುವ ಹಳತನದಿಂದ ಸೋತವೆಂದು ಖಚಿತವಾಗಿ ಕಂಡು ಬರುತ್ತದೆ.

ಡಬ್ಬಿಂಗ್ ಚಿತ್ರಗಳಾದ "ಜಗದೇಕವೀರನ ಕಥೆ" ಮತ್ತು "ಕೃಷ್ಣಾರ್ಜುನಯುದ್ಧ" ಹಣ ಗಳಿಸಿದರೂ ಯಶಸ್ಸನ್ನು ಗಳಿಸುವಲ್ಲಿ ಹಿಂದುಳಿದ ಚಿತ್ರಗಳು.

ಈ ಅಳತೆಗೋಲಿನಿಂದ ಕನ್ನಡ ಚಿತ್ರ ರಸಿಕನ ಅಭಿರುಚಿಯನ್ನು ಅಳೆದರೆ ೧೯೬೨ ರಿಂದ ಆತನು ಹೆಚ್ಚು ಹೆಚ್ಚು ಪ್ರಗತಿಶೀಲನಾಗಿರುವುದು ಸಾಮಾಜಿಕ ಚಿತ್ರಗಳಿಗೆ ಸಿಕ್ಕಿರುವ ಪ್ರೋತ್ಸಾಹದಿಂದ ವ್ಯಕ್ತವಾಗಿದೆ.

## ೧೯೬೩ ರ ಕನ್ನಡ ಚಿತ್ರಗಳು

೧೯೬೩ ನೇ ಇಸವಿ ಕನ್ನಡ ಚಿತ್ರ ಪ್ರಪಂಚದಲ್ಲಿ ಹೊಸ ಬೆಳಕಿನ ವರ್ಷವೆನ್ನಲಡ್ಡಿಯಿಲ್ಲ.

ಈ ವರ್ಷದ ಮೊದಲಲ್ಲಿ ಬಿಡುಗಡೆಯಾದ "ನಂದಾದೀಪ" ದಿಂದ ಮೊದಲುಗೊಂಡು "ಮನಮೆಚ್ಚಿದ ಮಡದಿ" ವರೆಗೆ ಎಲ್ಲ ಸಾಮಾಜಿಕ ಚಿತ್ರಗಳೂ ಒಳ್ಳೆಯ ಉತ್ಸಾಹದಿಂದ ಸ್ವಾಗತ ಪಡೆದವು.

ತುಂಬಾ ನಿರಾಸೆಯನ್ನುಂಟು ಮಾಡಿದ ಚಿತ್ರ "ಬೇವು ಬೆಲ್ಲ" ಎಂಬುದು ನಿಜವಾ

'ಶ್ರೀ ಪುರಂದರದಾಸರು' ಚಿತ್ರದಲ್ಲಿ ಅಶ್ವತ್ಥ



ದರೂ ಆ ಚಿತ್ರದ ತಯಾರಿಕೆಯ ಹಿನ್ನೆಲೆಯಲ್ಲಿರುವ ಲೋಪಗಳನ್ನು ಅಲೋಚಿಸಿದರೆ ಆ ಚಿತ್ರಕ್ಕೆ ಕನ್ನಡ ಪ್ರೇಕ್ಷಕ ಕೊಟ್ಟ ಮನ್ನಣೆ ಹಿರಿದೆಂದು ಒಪ್ಪಿಕೊಳ್ಳಬೇಕಾಗುತ್ತದೆ.

ಈ ವರ್ಷದಲ್ಲಿ ಈ ವರೆಗೆ ಬಿಡುಗಡೆಯಾಗಿರುವ ಚಿತ್ರಗಳಲ್ಲಿ ಒಂದೇ ಜಾನಪದ ಚಿತ್ರ. ಮಿಕ್ಕೆಲ್ಲ ಚಿತ್ರಗಳೂ ಸಾಮಾಜಿಕ ಚಿತ್ರಗಳೇ!

ಈ ಇಕ್ಕಟ್ಟಿನಲ್ಲಿ ಬಿಡುಗಡೆಯಾದ ಅನಾಮಧೇಯ ಡಬ್ಬಿಂಗ್ ಚಿತ್ರ "ಮಾಯಾಜಾಲ" ಯಾವ ವಿಧವಾದ ಪ್ರಯೋಜನವನ್ನೂ ಪಡೆಯದೆ ಮೂಲೆ ಪಾಲಾಯಿತು.

"ನಂದಾದೀಪ" '೬೩ ರಲ್ಲಿ ಬಿಡುಗಡೆಯಾದರೂ '೬೨ ರಲ್ಲಿ ಸೆನ್ಸಾರಾದ್ದರಿಂದ ಆ ಸಾಲಿನ 'ರಾಷ್ಟ್ರಪತಿ ಪ್ರಶಸ್ತಿ' ಗಳಿಸಿದ ಚಿತ್ರವಾಯಿತು.

ಆಶಾದಾಯಕ ವಾತಾವರಣ

– ಕನ್ನಡ ಚಿತ್ರಗಳು ನೆರೆಭಾಷೆಯ ಚಿತ್ರಗಳೊಂದಿಗೆ ಸ್ಪರ್ಧಿಸಹೊರಟಿಲ್ಲವಾದರೂ ತಾತ್ಕಾಲಿಕವಾಗಿಯಾದರೂ ಇತರ ದಾಕ್ಷಿಣಾತ್ಯ ಚಿತ್ರಗಳಿಗಿಂತ ಆಶಾದಾಯಕ ಪ್ರಗತಿಯನ್ನು ತೋರುತ್ತಿವೆ. ಇದಕ್ಕೆ ಸಾಕ್ಷಿ ಪರಭಾಷೆಯ ನಿರ್ಮಾಪಕರು ಕನ್ನಡ ಚಿತ್ರಗಳನ್ನು ತಯಾರಿಸುತ್ತಿರುವುದೇ ಆಗಿದೆ.

ಪ್ರತಿಯೊಬ್ಬ ಪರಭಾಷಾ ಚಿತ್ರ ತಯಾರಿಕನಿಗೂ ಕನ್ನಡ ಚಿತ್ರ ತಯಾರಿಕೆಯ ಚಪಲ ಬಲವಾಗುತ್ತಿದೆ. ಅದಕ್ಕೆ ಕಾರಣ ಮುಖ್ಯವಾಗಿ ಕನ್ನಡ ಚಿತ್ರ ತಯಾರಿಕೆಯಲ್ಲಿರುವ ಸೌಕರ್ಯ. ನಟನಟಿಯರು ನಿರ್ಮಾಪಕನಿಗೆ ವ್ಯಯವಾಗದಂತೆ ಕಾಲ್‌ಶೀಟುಗಳನ್ನು ಸಕಾಲದಲ್ಲಿ ಕೊಟ್ಟು ಸಹಕರಿಸುತ್ತಾರೆ. ಈ ತಾರಾಗಣಕ್ಕೆ ಖರ್ಚಾಗುವ ಗೌರವಧನವನ್ನು ಪರಭಾಷೆಯ ಚಿತ್ರದ ತಾರಾಗಣದ ಗೌರವಧನಕ್ಕೆ ಹೋಲಿಸಿದಾಗ ಬಹಳ ಕಮ್ಮಿಯಾಗಿದೆ. ಉಳಿದ ಎಲ್ಲ ವಿಭಾಗಗಳಲ್ಲೂ ಕನ್ನಡ ಚಿತ್ರ ತಯಾರಿಕೆ ಸುಸೂತ್ರವಾಗಿರುವುದರಿಂದ 'ಕ್ಷಿಪ್ರ' (Quickie) ಗಳನ್ನು ತಯಾರಿಸುವ ಕ್ಷಿಪ್ರ ಪ್ರತಿಫಲಾಕಾಂಕ್ಷಿಗಳಾದವರಿಗೆ ಕನ್ನಡ ಚಿತ್ರೋದ್ಯಮ ಆಕರ್ಷಕವಾಗಿದೆ.

ಕನ್ನಡದ ಒಳ್ಳಿತನ್ನು ಕಾಯುವುದಕ್ಕಾಗಿ ಸಂಘಟಿತರಾದ ಕನ್ನಡ ಯುವಜನರು ಸಾಧಿಸಿರುವ ಹಲವಾರು ಕ್ರಾಂತಿಕಾರಕ ಹೋರಾಟಗಳಲ್ಲಿ ಡಬ್ಬಿಂಗ್ ನಿಷೇಧವು ಎಷ್ಟರಮಟ್ಟಿನ ವಿಜಯ ಗಳಿಸಿದೆ ಎಂದರೆ, ಯಾವುದಾದರೂ ಪರಭಾಷೆಯ ಚಿತ್ರವನ್ನು ಡಬ್ ಮಾಡುವವರು ಆ ವಿಷಯವಾಗಿ ಮಾತನಾಡುವಾಗ ಅವರ ತುಟಿಚಲನೆಗೆ ಧ್ವನಿ ತುಂಬಬೇಕಾಗಿದೆ.

ಅಂತೆಯೇ ಕನ್ನಡೇತರ ಚಿತ್ರಗಳಿಗೆ ಪ್ರೋತ್ಸಾಹ ಕುಗ್ಗಿ ಕನ್ನಡದ ಚಿತ್ರಗಳಿಗೆ ಹೆಚ್ಚಿನ ಆದರ ದೊರೆಯುತ್ತಿದೆ. ಕನ್ನಡದ ಭಾಷಾಭಿಮಾನ ಜನತೆಯಲ್ಲಿ ಗಂಗಾಜಲದಂತೆ ನಿರ್ಮಲವಾಗಿ, ಸಮೃದ್ಧವಾಗಿ, ಶಾಶ್ವತವಾಗಿ ಉಕ್ಕುತ್ತಿದೆ.



ಲೇಖಿಕೆ :

ಶ್ರೀಮತಿ ಹರಿಣಿ

ಕನ್ನಡ ಚಿತ್ರರಂಗದ ಖ್ಯಾತ ನಟಿ ನಿರ್ಮಾಪಕಿ

# ಚಿತ್ರನಿರ್ಮಾಣದ ಅನುಭವದ ಕೆಲ ಸಿಹಿ-ಕಹಿಗಳು

ಕೆಲ ದಿನಗಳ ಹಿಂದೆ 'ಕರ್ಮವೀರ' ದ ಮದ್ರಾಸ್ ಪ್ರತಿನಿಧಿಗಳು ತಮ್ಮ ದೀಪಾವಳಿ ಸಂಚಿಕೆಗೆ ಒಂದು ಲೇಖನ ಬರೆದುಕೊಡುವಂತೆ ಹೇಳಿದರು. ಅಷ್ಟರಲ್ಲೇ ಸುಸ್ತಾದ ನನಗೆ ಅದು ಯಾವ ವಿಚಾರದ ಬಗ್ಗೆ ಇರಬೇಕು ಎಂದು ಅವರು ಸೂಚಿಸಿದ ಮೇಲೆ ಎರಡರಷ್ಟು ಸುಸ್ತಾದೆ.

ಕಾರಣ ಮೊದಲನೆಯದಾಗಿ ನನಗೆ ಪತ್ರಗಳನ್ನು ಬರೆಯಬೇಕೆಂದರೂ ಮಹಾಸೋಮಾರಿತನ. ತುಂಬಾ ಅತ್ಯಾವಶ್ಯಕ ಅಲ್ಲದೆ ನಾನು ಯಾರಿಗೂ ಪತ್ರಬರೆಯುವ ಹವ್ಯಾಸವನ್ನು ಇಟ್ಟುಕೊಂಡಿರಲಿಲ್ಲ. ಹೀಗಿರುವಾಗ ಲೇಖನ ಬರೆಯಲು ನನ್ನನ್ನು ಕೇಳುತ್ತಿದ್ದಾರಲ್ಲಾ ಎಂದು ಯೋಚಿಸುತ್ತಿದ್ದಾಗ, ಅವರು ಈ ಲೇಖನವು ನಿಮ್ಮ ಚಿತ್ರನಿರ್ಮಾಣದ ಸಮಯದಲ್ಲಿ ನಿಮಗಾದ ಸಿಹಿ ಕಹಿಗಳ ಅನುಭವಗಳ ಬಗ್ಗೆ ಇರಲಿ ಎಂದು ಹೇಳಿದರು. ಅವರು ಈ ವಿಷಯ ಹೇಳಿದೊಡನೆ ಸುಲಭವಾಗಿ ತಪ್ಪಿಸಿಕೊಳ್ಳುವ ಮಾರ್ಗವೊಂದನ್ನು ಯೋಚಿಸಿ ಕ್ಷಣಕಾಲ ಸಂತುಷ್ಟಳಾದೆ. ಅವರು ನನ್ನ ಸಂತೋಷವನ್ನು ನೋಡಿದೊಡನೇ ನಾನು ಲೇಖನ ಬರೆಯಲು ಒಪ್ಪಿದೆನೆಂದು ತಿಳಿದು ಹಾಗಾದರೆ ಯಾವಾಗ ಕೊಡಬಹುದು ಎಂದು ಕೇಳಿದರು. ಕೂಡಲೆ ನಾನು ಅವರಿಗೆ "ನಾನು ಇಷ್ಟರವರೆಗೆ ಸ್ವಂತವಾಗಿ ಯಾವ ಚಿತ್ರವನ್ನೂ ನಿರ್ಮಿಸಲಿಲ್ಲವಲ್ಲಾ, ನನ್ನ ಸೋದರರು ತಾನೇ ಚಿತ್ರ ನಿರ್ಮಾಣ ಮಾಡಿರುವವರು?" ಎಂದು ತಪ್ಪಿಸಿಕೊಳ್ಳುತ್ತಿದ್ದಾಗಲೆ, ಪ್ರತಿನಿಧಿಗಳು ಕೊಟ್ಟ ಉತ್ತರ ನನ್ನನ್ನು ನಿಜವಾಗಿಯೂ ಮೇಲೆ ಮಾತನಾಡದೆ ಒಪ್ಪಿಕೊಳ್ಳುವ ಹಾಗೆ ಮಾಡಿಬಿಟ್ಟಿತ್ತು. ಕೂಡಲೇ ಲೇಖನ ಬರೆದುಕೊಡುವುದಾಗಿ ವಾಗ್ದಾನ ಮಾಡಿದೆ.

ಅವರು ಕೇಳಿದ್ದ ಪ್ರಶ್ನೆ ಏನೆಂಬುದನ್ನು ನಿಮಗೂ ತಿಳಿಸಿಬಿಡುತ್ತೇನೆ. ಹಲವು ವರ್ಷಗಳಿಂದ ತುಂಬು ಪ್ರೋತ್ಸಾಹ ನೀಡುತ್ತಿರುವ ನಿಮ್ಮಲ್ಲಿ ಏನು ಗುಟ್ಟು! ಆ ಪ್ರಶ್ನೆ ಇದೇ ! "ನಿಮ್ಮ ಸೋದರರ ಸುಖ ದುಃಖಗಳಲ್ಲಿ ನೀವು ಭಾಗಿಯಲ್ಲವೇ? ಹಾಗಿರುವಾಗ ಅವರ ಅನುಭವಗಳು ನಿಮಗೆ ಗೊತ್ತಿರಲಾರವೇ?" ಎಂದಾಗ ಮರುಮಾತಾಡುವ ಸಂದರ್ಭ ಹೇಗೆ?

ಹದಿನೈದೇ ದಿನಗಳಲ್ಲಿ ಬರೆದುಕೊಡುವುದಾಗಿ ಹೇಳಿ ಆ ಸಮಯದ ಮಟ್ಟಿಗೆ ತಪ್ಪಿಸಿಕೊಂಡೆ. ೫-೬ ದಿನ ನಮ್ಮ ಚಿತ್ರನಿರ್ಮಾಣದ ಮತ್ತು ಚಿತ್ರ ಬಿಡುಗಡೆಯಾದ ನಂತರದ ಕೆಲವು ದಿನಗಳನ್ನು ಮೆಲಕು ಹಾಕಲು ಯತ್ನಿಸಿ ವಿಷಯಗಳನ್ನು ನನಗೆ ತಿಳಿದ ಮಟ್ಟಿಗೆ ಮತ್ತು ನನ್ನ ಸೋದರರ ಮೂಲಕ ತಿಳಿದುಕೊಂಡು ಬರೆಯಲು ಪ್ರಾರಂಭಿಸಿ ಹೇಗೋ ಮುಗಿಸಿದೆ.

ಶ್ರೀ ಭಾರತೀ ಚಿತ್ರ ಇವರ ಮೊದಲ ಕಾಣಿಕೆ "ನಂದಾದೀಪ" ಕಳೆದ ವರ್ಷ ಜೂನ್ ೭ ರಂದು ಸ್ಟುಡಿಯೋ ರಂಗಕ್ಕಿಳಿಯಿತು. ಸುಮಾರು ಮೂರು ತಿಂಗಳಿಂದ (ಮಾರ್ಚ್ ೬೨) ಕಚ್ಚಾ ಫಿಲಂ ಪರ್ಮಿಟ್‌ಗಾಗಿ ಕಾದು ಜೂನ್ ೭ ರಂದು ಲಭಿಸಿತು. ಅಂದೇ ಚಿತ್ರೀಕರಣವೂ ಪ್ರಾರಂಭವಾಯಿತು. ನಮ್ಮ ತಂದೆಯವರ ಪರಮಾಪ್ತ ಮಿತ್ರರೊಬ್ಬರು ಕ್ಯಾಮರಾ ಸ್ವಿಚ್ ಆನ್ ಮಾಡಿದರು. ದಕ್ಷಿಣ ಚಿತ್ರರಂಗದಲ್ಲೇ ಒಂದು ಕಾಲದಲ್ಲಿ ಖ್ಯಾತರಾಗಿದ್ದು ಹಲವು ರಜತೋತ್ಸವ ಆಚರಿಸಿದ ಚಿತ್ರಗಳ ನಿರ್ದೇಶಕರಾದ ಶ್ರೀ ರಾಜಾ ಚಂದ್ರಶೇಖರ್ ಅವರು "ಕ್ಲ್ಯಾಪರ್‌ಬಾಯ್" ಆಗಿ ಚಿತ್ರೀಕರಣವನ್ನು ಪ್ರಾರಂಭಿಸಲಾಯಿತು. ನಮ್ಮ ಚಿತ್ರದ ಮೊದಲನೇ ನಟ ತಿರುಪತಿಯ ಶ್ರೀ ಶ್ರೀನಿವಾಸ. ಅವನಿಗೆ ಆರತಿ ಮಾಡಿ ಅದನ್ನು ನನ್ನ ಅಣ್ಣನ ಪಾತ್ರವಹಿಸಿದ ಉದಯಕುಮಾರನಿಗೆ ಕೊಡುವುದೇ ಮೊದಲಶಾಟ್.

ನಮ್ಮ ಚಿತ್ರ ಮುಹೂರ್ತದಲ್ಲೊಂದು ವಿಶೇಷವಿತ್ತು. ಏನೆಂದರೆ ಸಾಧಾರಣವಾಗಿ ಚಿತ್ರಮುಹೂರ್ತ ಸಂದರ್ಭದಲ್ಲಿ ಕೆಲ ದೇವರ ಚಿತ್ರಗಳನ್ನು ಕ್ಯಾಮರಾ ಮುಂದಿರಿಸಿ ಒಳ್ಳೆ ಮುಹೂರ್ತ ಸಮಯ ನೋಡಿ ಸ್ವಿಚ್ ಆನ್ ಮಾಡುತ್ತಾರೆ. ಆದರೆ ಆ ಪ್ರಥಮ shot ಚಿತ್ರದಲ್ಲಿರುವುದಿಲ್ಲ. ನಾವು ಇದಕ್ಕಾಗಿ ವಿಶೇಷ ಶ್ರಮವಹಿಸಿ ಚಿತ್ರ ಪ್ರಾರಂಭದಲ್ಲಿ ದೇವರ ಚಿತ್ರ ಬರುವಂತೆ ಮಾಡಿ ಆ ಶಾಟ್ ಚಿತ್ರದಲ್ಲೂ ಉಳಿಯುವಹಾಗೆ ಏರ್ಪಾಡು ಮಾಡಿದ್ದೆವು.

ಈ ಪ್ರಥಮ ದಿನ ಕ್ಯಾಮರಾ ಚಲಿಸುವ ಸಂದರ್ಭದಲ್ಲಿ ನನ್ನ ಸೋದರರ ಹಾಗೂ ನನ್ನ ಕಣ್ಣುಗಳು ತೇವವಾದವು. ಕಾರಣ ಇದೇ ಸುದಿನವನ್ನು ಕಾಣಲು ಸುಮಾರು ೬ ವರ್ಷಗಳ ಹಿಂದೆ ನಮ್ಮ ತಂದೆಯವರಾದ ದಿವಂಗತ ಶ್ರೀ ಎಸ್. ಯು. ಪಣಿಯಾಡಿಯವರು 'ಚಿತ್ರಭಾರತಿ' ಎಂಬ ಸಂಸ್ಥೆಯನ್ನು ಪ್ರಾರಂಭಿಸಿದ್ದರು. ಹಲವು ಅನಾನುಕೂಲತೆಗಳಿಂದ ಕಾರ್ಯಾರಂಭಕ್ಕೆ ಮೊದಲೇ ಸ್ವರ್ಗಸ್ಥರಾದರು. ಇಂದು ಅವರ ಆಸೆಯು ಕೃತಿರೂಪಕ್ಕೆ ಬರಲು ಶುರುವಾಯಿತಲ್ಲಾ ಎಂದು ಸಂತೋಷಪಟ್ಟೆವು.

ಮೊದಲ ಸೆಟ್ಟಿನಲ್ಲಿ ೭ ದಿನಗಳು ಯಾವ ಆತಂಕ ಅಡ್ಡಿಗಳೂ ಇಲ್ಲದೆ ಚಿತ್ರೀಕರಣ ಭರದಲ್ಲೇ ಸಾಗಿತು. ಪ್ರತಿದಿನ ಕೆಲಸ ಮುಗಿಸುವಾಗಲೂ ಪ್ರತಿಯೊಬ್ಬರ ಹೃದಯದಲ್ಲೂ ತೃಪ್ತಿ ತುಂಬಿತುಳುಕಾಡುತ್ತಿತ್ತು. ಈ ಆನಂದದಲ್ಲಿ ನನ್ನ ಅಣ್ಣ ಅರ್ಧ ಅಂಗುಲ ಎತ್ತರವಾದರೆ, ತಮ್ಮ ಒಂದು ಸುತ್ತು ದಪ್ಪನಾದ.

ಆದರೆ ಪ್ರಥಮ ಸೆಟ್ಟನ್ನು ಮುಗಿಸಿ ಎರಡನೇ ಸೆಟ್ಟನ್ನು ಹಾಕಬೇಕಾದರೆ ಒಂದು ತಿಂಗಳು ಕಾಯಬೇಕಾಗಿ ಬಂತು. ಕಾರಣ ಕಚ್ಚಾ ಫಿಲಂನ ಕೊರತೆ, ನಮಗೆ ಎರಡನೇ ಕೋಟಾ!ಸಿಗಲು ಸುಮಾರು ಒಂದೂವರೆ ತಿಂಗಳು ಕಾಯಬೇಕಾಗಿ ಬಂತು. ಆದರೆ ಈ ಕಾರಣವನ್ನು ಚಿತ್ರರಂಗದ ಕೆಲವು ವ್ಯಕ್ತಿಗಳು ಒಪ್ಪಿಕೊಳ್ಳಲು ಮನಸ್ಸು ಮಾಡದೆ ಬೇರೆ ಬಣ್ಣವನ್ನು ಕೊಡಲು ಪ್ರಯತ್ನಿಸಿದರು. ಕಚ್ಚಾ ಫಿಲಂ ಕೊರತೆ ಎಂದು ನಾವು ಕಾರಣ ಹೇಳಿದರೆ ಕೆಲವರು ನಂಬಲಿಲ್ಲ. ತಮಗೆ ತೋಚಿದಂತೆ ಮಾತನಾಡಿಕೊಳ್ಳಲು ಪ್ರಾರಂಭಿಸಿದರು. ಅದರಲ್ಲಿ ಕೆಲವು ಮಾತುಗಳನ್ನು ನಿಮ್ಮ ಮುಂದಿಟ್ಟರೆ ತಪ್ಪಾಗಲಾರದು ಎಂದು ಭಾವಿಸುತ್ತೇನೆ. ಅದಕ್ಕೆ ಮೊದಲು ನಮ್ಮ ಸಂಸ್ಥೆಯ ಬಗೆಗೆ ಒಂದೆರಡು ಮಾತು. "ನಂದಾದೀಪ"ದ ನಿರ್ದೇಶಕ ಶ್ರೀ ವಿಠಲ್ ಮತ್ತು ಕವಿಗಳಾದ ಶ್ರೀ ಸೋರಟ ಅಶ್ವಥ್ ಅವರುಗಳನ್ನು ಬಿಟ್ಟರೆ ಮಿಕ್ಕೆಲ್ಲರೂ ತುಂಬು ಉತ್ಸಾಹದ ಯುವಕರು, ಹಿರಿಯರ ಮಾತಿನಂತೆ ಹೇಳುವುದಾದರೆ ಹುಡುಗರ ತಂಡ, ಅದರಲ್ಲೂ ಯಾವಾಗಲೂ ನಕ್ಕು ನಗಿಸುವ ಸ್ವಭಾವದವರು. ಇವರುಗಳ ಮಧ್ಯೆ ಸೇರಿದ ಮೇಲೆ ಹೇಳಿದ ಹಿರಿಯರಿಬ್ಬರೂ ಹುಡುಗರೇ ಆಗಿಬಿಟ್ಟಿದ್ದರು. ಆದ್ದರಿಂದ ನಮ್ಮ ಚಿತ್ರೀಕರಣದ ವೇಳೆ ಯಾವಾಗಲೂ ಆನಂದೋತ್ಸಾಹದ ಹೊನಲು ಹೊರಹೊಮ್ಮುತ್ತಿತ್ತು. ಅದೇ ಸಮಯದಲ್ಲಿ ಕೆಲಸವೂ ಇಮ್ಮಡಿ ಭರದಿಂದ ಸಾಗುತ್ತಿತ್ತು.

'ಏನು ಹುಡುಗರ ಆಟ ಮುಗಿದು ಹೋಯಿತೇ !' "ತಂದೆ ಕೂಡಿಟ್ಟ ಹಣ ಖರ್ಚಾಯಿತೆಂದು ಕಾಣುತ್ತೆ !" "ಪಾಪ ಹೀಗಾಗಬಾರದಿತ್ತು" ಎಂದು ಕೆಲವರು ಹೇಳಲಾರಂಭಿಸಿದರೆ, ಚಿತ್ರ ತಯಾರಿಕೆ ತಮಗಾಗಿ ಕಟ್ಟಿಟ್ಟ ಹಕ್ಕು ಎಂದು ತಿಳಿಯುವ ಮಹಾಶಯರೊಬ್ಬರು 'ಚಿತ್ರತಯಾರಿಕೆ ಅಂದ್ರೆ ಅಷ್ಟು ಸುಲಭವೇ ! ನಮ್ಮ ಹಾಗೆ ಎಷ್ಟೋ ಅನುಭವ ಇರುವವರಿಗೂ ಸಮಯದಲ್ಲಿ ಎಷ್ಟೋ ಕಷ್ಟಪಡುವಾಗ ಈ ಹುಡುಗರೆಲ್ಲಿ ಚಿತ್ರ ಮುಗಿಸುತ್ತಾರೆ? ಅಯ್ಯೋ ಪಾಪ !' ಎಂದು ಮೊಸಳೆ ಕಣ್ಣೀರಿಡಲು ಪ್ರಾರಂಭಿಸಿದರು. ಕೆಲವು ಮಹಾತ್ಮರು ಈ ಮಾತುಗಳನ್ನು ನಮ್ಮ ಕಿವಿಗೆ ಬೀಳುವಂತೆ ನುಡಿದಿದ್ದರು.

ಇಷ್ಟಲ್ಲದೆ ಇನ್ನು ಕೆಲವರು ನಮ್ಮ ಚಿತ್ರದಲ್ಲಿ ಪಾತ್ರ ವಹಿಸುತ್ತಿದ್ದ ನಟ ನಟಿಯರಲ್ಲಿ "ಏನ್ರೀ

ನೀವು 'ನಂದಾದೀಪ'ದಲ್ಲಿ ಪಾರ್ಟ ಮಾಡ್ತೀರಂತಲ್ಲಾ! ಅದರಲ್ಲಿ ಏನಾಗಿದ್ದೀರಿ? ಹಣತೆಯೇ? ಬತ್ತಿಯೇ? ಎಣ್ಣೆಯೇ?" ಇತ್ಯಾದಿ ವ್ಯಂಗ್ಯಪ್ರಶ್ನೆಗಳನ್ನು ಕೇಳಿದರು.

ಈ ಮಾತುಗಳೆಲ್ಲಾ ಕಿವಿಗೆ ಬಿದ್ದರೂ ಬೀಳದಂತೆ ಇದ್ದು, ಕಚ್ಚಾ ಫಿಲಂ ದೊರಕಿದೊಡನೆಯೇ ನಮ್ಮ ಕಾರ್ಯವನ್ನು ಪುನಃ ಪ್ರಾರಂಭಿಸಿದೆವು. ನಮ್ಮ ಚಿತ್ರವು ಸುಮಾರು ನಾಲ್ಕೈದು ರೀಲುಗಳಷ್ಟಾದರೂ ಪಾಸಿಟಿವ್ ಫಿಲಂ ಕೊರತೆಯಿಂದ ನಮ್ಮ ಚಿತ್ರದ ಕರಡು ಪ್ರತಿ (Rushes) ಯನ್ನು ನೋಡುವ ಭಾಗ್ಯ ನಮಗೆ ಸುಮಾರು ತಿಂಗಳ ಕಾಲ ಒದಗಿಲ್ಲ. ತಂದೆಯಾದವನಿಗೆ ಪರಊರಿನಲ್ಲಿರುವಾಗ ಚೊಚ್ಚಲ ಮಗ ಹುಟ್ಟಿ ೪-೫ ತಿಂಗಳ ಕಾಲ ಮಗುವನ್ನು ನೋಡಲು ಅನನುಕೂಲವಾದರೆ ಎಷ್ಟು ಹಾತೊರೆಯಬಹುದೋ ಹಾಗಾಗಿತ್ತು ನಮ್ಮ ಪರಿಸ್ಥಿತಿ. ಅಂತೂ ಕಡೆಗೊಂದು ದಿನ ಆ ಭಾಗ್ಯವು ಸಿಕ್ಕಿತು. ಹಲವು ದೋಷಗಳಿದ್ದರೂ ನಮ್ಮ ಪ್ರಥಮ ಪ್ರಯತ್ನದ ಫಲವನ್ನು ತೆರೆಯಮೇಲೆ ಕಂಡಾಗ ನಾವೂ ಏನೋ ಸಾಧಿಸಿದ್ದೇವೆ ಎಂಬ ತೃಪ್ತಿಯುಂಟಾಯಿತು./ ಚಿತ್ರನಿರ್ಮಾಣದ ಮೊದಲನೆ ದಿನದಂತೆ ಇಂದೂ ನಾವು ಪುಲಕಿತರಾದೆವು. ಇಷ್ಟರಲ್ಲೇ ನಮ್ಮ ಚಿತ್ರದ ಭವ್ಯ ಸೆಟ್ಟನ್ನು ನಿರ್ಮಿಸಿ ಚಿತ್ರಣ ಪ್ರಾರಂಭವಾಗಿತ್ತು. ಸುಮಾರು ೭ ರೀಲುಗಳಷ್ಟಾಗುವುದರಲ್ಲಿ ಬೆಂಗಳೂರಿನ ಚಿತ್ರ ಹಂಚಿಕೆಯ ಉತ್ತಮ ಸಂಸ್ಥೆಗಳಲ್ಲೊಂದಾದ ವಿಜಯಾ ಪಿಕ್ಚರ್ಸ ಸರ್ಕ್ಯೂಟನವರು ನಮ್ಮ ಚೊಚ್ಚಲ ಕೃತಿಗೆ ಧೈರ್ಯವಾಗಿ ಮುಂದೆ ಬಂದು ಹಂಚಿಕೆಯ ಹಕ್ಕನ್ನು ಪಡೆದರು. ಇದೂ ಒಂದು ನಮ್ಮ ಚಿತ್ರ ತಯಾರಿಕೆ ಅನುಭವದಲ್ಲಿ ಮರೆಯಲಾಗದ ಒಂದು ಸುದಿನ. ವಿಜಯಾ ಪಿಕ್ಚರ್ಸ ಸರ್ಕ್ಯೂಟ ಸಂಸ್ಥೆಯ ಪರವಾಗಿ ಒಪ್ಪಂದ ಪತ್ರದಲ್ಲಿ ಭಾರತ ಚಿತ್ರರಂಗದಲ್ಲೇ ಖ್ಯಾತವ್ಯಕ್ತಿ ಶ್ರೀ ನಾಗಿರೆಡ್ಡಿಯವರೇ ಸಹಿ ಮಾಡಿರುವುದರಿಂದ ನಮ್ಮ ಸಂಸ್ಥೆಗೆ ಓರ್ವ ಹಿರಿಯರ ಆಶೀರ್ವಾದವೇ ಸಿಕ್ಕಿದೆ ಎಂದೂ ಹಿಗ್ಗಿದೆವು.

ಮುಂದೆ ನಮ್ಮ ಚಿತ್ರದ ಬೆಳವಣಿಗೆ ನಾಗಾಲೋಟದಿಂದ ಸಾಗಿತು. ಈ ಸಂದರ್ಭದಲ್ಲಿ ನಮ್ಮ ಚಿತ್ರದಲ್ಲಿ ಅಭಿನಯಿಸುತ್ತಿದ್ದ ಸೋದರ ನಟ ನಟಿಯರ ಬಗ್ಗೆ ಒಂದೆರಡು ಮಾತು. ಪ್ರತಿಯೊಬ್ಬ ಕಲಾವಿದ ಕಲಾವಿದೆಯರೂ ತಮ್ಮಿಂದ ಶಕ್ತಿಮೀರಿ ನಮಗೆ ಸಹಕಾರ ನೀಡಿದ್ದಾರೆ. ಉದಾಹರಣೆಗೆ ಸಹೋದರಿ ಲೀಲಾವತಿ ಮತ್ತೂ ಶ್ರೀ ಉದಯ ಕುಮಾರರವರು ಅಭಿನಯಿಸಬೇಕಾದ ಒಂದು ಗೀತೆಯ ಚಿತ್ರಣವನ್ನು ಮಾಡುವುದಕ್ಕಾಗಿ ಒಂದು ಉಪವನವನ್ನು ಗೊತ್ತುಮಾಡಿ ಎಲ್ಲಾ ಏರ್ಪಾಡುಗಳನ್ನೂ ಮಾಡಿದ್ದೆವು. ಇನ್ನೇನು ನಾಳೆ ಚಿತ್ರಣ ಎಂದಿರುವಾಗ ಲೀಲಾವತಿಯವರು ಅಸೌಖ್ಯವಾಗಿದ್ದಾರೆಂದು ತಿಳಿದು ಬಂತು. ಕೂಡಲೇ ನನ್ನ ಸೋದರ ಅವರ ಮನೆಗೆ ಹೋಗಿ ಅವರು ಬಾರದಿದ್ದರೆ ಮುಣಗುವ ನಷ್ಟವನ್ನು ತಿಳಿಸಿ ಒಪ್ಪಿಸಬೇಕೆಂದು ಹೊರಟ. ಆದರೆ ಅಲ್ಲಿ ಅವರ ಸ್ಥಿತಿಯನ್ನು ನೋಡಿ ನನ್ನ ತಮ್ಮನಿಗೆ ಏನೂ



ಶ್ರೀಮತಿ ಹರಿಣಿ

ಮಾತನಾಡಲಿಕ್ಕಾಗಲಿಲ್ಲ. ಲೀಲಾವತಿಯವರು ಜ್ವರದ ಬೇಗೆಯನ್ನು ತಡೆಯಲಾರದೆ ನರಳುತ್ತಿದ್ದರಂತೆ. ಆದರೆ ಅವರು ನಮ್ಮ ಕಷ್ಟವನ್ನು ಸ್ವತಃ ತಿಳಿದುಕೊಂಡು ಹೇಗಿದ್ದರೂ ಮಾರನೆದಿನ ಚಿತ್ರಣಕ್ಕೆ ಬರುವುದಾಗಿ ಒಪ್ಪಿದರು. ಆದರೂ ನನ್ನ ತಮ್ಮ ಜ್ವರ ವಾಸಿಯಾದರೆ ಮಾತ್ರ ಬನ್ನಿ ಎಂದು ಹೇಳಿದ ಮಾತನ್ನು ಲೆಕ್ಕಿಸದೆ ಮಾರನೆ ದಿನ ನಿಶ್ಚಿತ ಸಮಯಕ್ಕೆ ತಯಾರಾಗಿ ಬಂದಿದ್ದರು ಸಹೋದರಿ ಲೀಲಾವತಿ. ಆ ದಿನದ ಗೀತೆಯ (ಒಂದುಗೂಡಿದೆ) ಚಿತ್ರೀಕರಣ ತೆರೆಯಲ್ಲಿ ಕಂಡಾಗ ತುಂಬ ಚೆನ್ನಾಗಿತ್ತು.

ಹಾಗೆಯೇ, ಗೌರಿ ಗಂಡನ ಮನೆಯಲ್ಲಿರುವಾಗ ಅವಳ ಪ್ರೇಮಿ ಶಂಕರ್, ಅವಳ ಗಂಡನ ಜೊತೆಯಲ್ಲೇ ಬಂದು ಮಾತನಾಡುವ ಹೃದಯಸ್ಪರ್ಶಿ ಸನ್ನಿವೇಶದ ಚಿತ್ರೀಕರಣದ ದಿನ ಶ್ರೀ ರಾಜ್ ಕುಮಾರ್‌ರವರಿಗೆ ೧೦೩ ಡಿಗ್ರಿ ಜ್ವರ. ಅವರಿಂದ ಆ ದಿನ ಕಾಲ್‌ಶೀಟಿನಲ್ಲಿ ಕೆಲಸಮಾಡಿಸುವುದೇ ತಪ್ಪೆಂದು ನಾವು ಭಾವಿಸುತ್ತಿದ್ದೆವು. ಆದರೆ ಅಂದಿನ ಕಾಲ್‌ಶೀಟನ್ನು ಬಿಟ್ಟರೆ ಪುನಃ ಒಂದು ತಿಂಗಳು ಕಾಲ್‌ಶೀಟ್ ಸಿಗುವ ಸಂಭವವಿಲ್ಲ. ಈ ಸಂದಿಗ್ಧ ಪರಿಸ್ಥಿತಿಯಲ್ಲಿದ್ದ ನಮಗೆ ಅವರೇ ತಮ್ಮ ನೋವನ್ನು ಮರೆತು, ನಮ್ಮ ಸಂಕೋಚವನ್ನು ತಿಳಿದು ಅಭಿನಯಿಸುವಂತೆ ಒಪ್ಪಿದರು. ಆ ದಿನದ ಅವರ ಅಭಿನಯ ನಮ್ಮ ಚಿತ್ರದಲ್ಲಿ ಅಷ್ಟು ಕಳೆಗೂಡಿ ಬಂದಿತ್ತು.

ಇದೇ ರೀತಿ ನಮ್ಮ ಚಿತ್ರದ ನಟ-ನಟಿಯರೂ ತಾಂತ್ರಿಕವರ್ಗದವರೂ ತಮ್ಮ ಸ್ವಂತಚಿತ್ರವೆಂದೇ ತಿಳಿದು ಚಿತ್ರೀಕರಣ ಕಾರ್ಯವನ್ನು ಮುಗಿಸಲು ಸಹಕರಿಸಿದರೂ ಹೀಗೆ ಹಲವು ತೊಂದರೆಗಳು ಬಂದರೂ ಎದುರಿಸಿ ಚಿತ್ರೀಕರಣ ಕಾರ್ಯವನ್ನು ಯಶಸ್ವಿಯಾಗಿ ಮುಗಿಸಲು ಸಹಕರಿಸಿದ ಕಲಾವಿದ ಬಂಧು-ಭಗಿನಿಯರನ್ನೂ ತಾಂತ್ರಿಕವರ್ಗದವರನ್ನೂ ನಾವು ಎಂದೆಂದಿಗೂ ಮರೆಯುವಂತಿಲ್ಲ. ಹೀಗೆ ಹಲವರ ಸಹಕಾರದಿಂದಲೂ ನನ್ನ ಸೋದರರ ಶತಪ್ರಯತ್ನದಿಂದಲೂ 'ನಂದಾದೀಪ'ದ ಚಿತ್ರೀಕರಣಕಾರ್ಯ ಮುಗಿಯಿತು. ನಮ್ಮ ತಂಡದವರ ಒಗ್ಗಟ್ಟನ್ನು ನೋಡಿ ಸಹಿಸಲಾರದ ಕೆಲವು ದುಷ್ಟಾತ್ಮರು ಅವರಲ್ಲಿ ಹುಳಿ ಹಿಂಡಲು ಪ್ರಯತ್ನಿಸಿ, ಸ್ವಲ್ಪಮಟ್ಟಿಗೆ ಯಶಸ್ವಿಯಾದರೆಂದೇ ಹೇಳಬಹುದು.

ಆದರ ಅನುಭವವನ್ನು ನಮ್ಮ ಚಿತ್ರದ ರೀ ರಿಕಾರ್ಡಿಂಗ್ ಸಂದರ್ಭದಲ್ಲಿ ಅನುಭವಿಸಿದೆವು. ಕಹಿ ನೆನಪಿಗೆ ಇದಕ್ಕಿಂತ ಮಹತ್ವವಾದ ಸಂಭವದ ಅಗತ್ಯವಿಲ್ಲ. ಅಂತೂ 'ನಂದಾದೀಪ' ಚಿತ್ರನಿರ್ಮಾಣಕ್ಕೆ ಹಲವು ಕಾಲದ ಸ್ನೇಹಬಂಧನವೂ ಕೆಲವು ಕ್ಷಣಗಳಲ್ಲೇ ತುಂಡಿಸಿಹೋದ ಕಹಿ ಅನುಭವಗಳನ್ನೂ ಇಲ್ಲಿ ಉಲ್ಲೇಖಿಸಲು ಬೇಸರಪಡುತ್ತೇನೆ.

ಅಂತೂ ಚಿತ್ರ ತಯಾರಾಯಿತು. ಇನ್ನೇನು ಬಿಡುಗಡೆಗೆ ಕೆಲದಿನಗಳ ಮುನ್ನ ಮದ್ರಾಸಿನಲ್ಲಿ ಎರಡು ಪ್ರದರ್ಶನವನ್ನಿತ್ತೆವು. ಅದರಲ್ಲಿ ಮುಂಚಿನದು 'ಸಿಹಿ'ಯಾಗೇ ಇತ್ತು. ಅಂದು ಬೆಂಗಳೂರಿನ ಕೆಲವು ಪತ್ರಿಕಾ ಪ್ರತಿನಿಧಿಗಳೂ ಆಗಮಿಸಿದ್ದರು. ವಿಜಯ ಪಿಕ್ಚರ್ಸ್ ಸರ್ಕ್ಯೂಟಿನವರು ಆ ದಿನದ ಪ್ರದರ್ಶನಕ್ಕೆ ತುಂಬಾ ಆಸಕ್ತಿವಹಿಸಿದ್ದರು. ಅಂದು ವಿಜಯಾ ಗಾರ್ಡನ್ಸ್‌ನಲ್ಲಿ ಶ್ರೀ ನಾಗಿರೆಡ್ಡಿಯವರು ಪತ್ರಿಕಾಪ್ರತಿನಿಧಿಗಳಿಗೂ ನಮಗೂ ಉಪಾಹಾರ ಕೂಟವೊಂದನ್ನು ಏರ್ಪಡಿಸಿದ್ದರು. ಚಿತ್ರವೀಕ್ಷಣೆಯ ಬಳಿಕ ಮನಸಾರೆ ಚಿತ್ರವನ್ನು ಹೊಗಳಿಯುವಕ ನಿರ್ಮಾಪಕರನ್ನೂ ಅದರಲ್ಲಿ ಪಾಲ್ಗೊಂಡಿದ್ದ ತಾಂತ್ರಿಕಬಳಗದವರನ್ನೂ ಮನಸಾರೆ ಆಶೀರ್ವದಿಸಿದರು. ಅಂದಿನ ಪ್ರದರ್ಶನದಿನ ನಾವೇನೋ ಕೃತಾರ್ಥರಾದೆವೆಂದು ಸಂತೋಷಸಾಗರದಲ್ಲಿ ಮುಳುಗಿದ್ದೆವು.

ಅದಕ್ಕೆ ತೀರಾ ವಿರುದ್ಧವಾದ ರೀತಿಯಲ್ಲಿ ಮದ್ರಾಸಿನಲ್ಲಿ ಎರಡನೇ ಬಾರಿ ನಮ್ಮ ಸ್ನೇಹಿತರಿಗೆ ಮಾತ್ರ ಕನ್ನಡಚಿತ್ರರಂಗದ ಹಲವು ಕಾರ್ಯಕ್ಷೇತ್ರಗಳಲ್ಲಿರುವವರಿಗಾಗಿ ಪ್ರದರ್ಶನ ಏರ್ಪಡಿಸಿದ್ದೆವು. ಸುಮಾರು ಐನೂರು ಮಂದಿ ಅಂದು ಚಿತ್ರವನ್ನು ವೀಕ್ಷಿಸಿರಬಹುದು. ಅದರಲ್ಲಿ ಅರ್ಧದಷ್ಟಾದರೂ ಜನರು ಈ ಚಿತ್ರರಂಗಕ್ಕೆ ಸೇರಿದವರು. ಆದರೆ ಚಿತ್ರ ಮುಗಿದ ಮೇಲೆ ನಮ್ಮನ್ನು ಮಾತನಾಡಿಸಿದವರು ಕೇವಲ ೧೦-೧೫ ಜನರಿರಬಹುದು (ಚಿತ್ರಪ್ರಪಂಚಕ್ಕೆ ಸಂಬಂಧಿಸಿದವರು). ಅವರಲ್ಲಿ ೫-೬ ಮಹನೀಯರು ಮಾತ್ರ ನಮ್ಮ ಚಿತ್ರವನ್ನು ತುಂಬುಹೃದಯದಿಂದ ಶ್ಲಾಘಿಸಿ ನಮ್ಮನ್ನು ಹುರಿದುಂಬಿಸಿ ಆಶೀರ್ವದಿಸಿದರು. ಬಾಕಿ ಕೆಲ ಮಹಾಶಯರು ಔಪಚಾರಿಕವಾಗಿ ಮಾತನಾಡಿಸಿಹೋದರು.

ಮಾರನೇ ದಿನ ನಮ್ಮ ಕಿವಿಗೆ ಬಿದ್ದ ಕೆಲವು ಮಾತುಗಳು ಎಲ್ಲಾ ಬರೀ ಕಹಿ, ಕಹಿ, ಕಹಿ. ಒಳ್ಳೆ ಮಾತು ನಹೀ, ನಹೀ, ನಹೀ. 'ಅಯ್ಯೋ ಇದೂ ಒಂದು ಚಿತ್ರವೇ?' 'ನಾಲ್ಕುವಾರ ಹೋದರೆ, ಹುಡುಗರು ಅದೃಷ್ಟವಂತರು'. 'ಹಾಕಿದ ದುಡ್ಡು ತೆಗೆಯೋದು ಕಷ್ಟಾರೀ'. 'ಕಾಮೆಡೀನೇ ಇಲ್ಲಲ್ಲಾ ಹೇಗೆ ಜನ ನೋಡಿಯಾರು' ಎಂದೆಲ್ಲಾ ಅಲ್ಲಗಳೆದರು. 'ಸಿನಿಮಾ ಅಂದ ಮೇಲೆ ಡಾನ್ಸ್ ಬೇಡ್ವೆ' ಎಂಬುದು ಇನ್ನೊಬ್ಬ ಮಹನೀಯರ ಮಹದಭಿಪ್ರಾಯ.

ನಮ್ಮ ಚಿತ್ರವನ್ನು ನೋಡಿದವರೆಲ್ಲಾ ಶ್ಲಾಘಿಸಲೇಬೇಕೆಂಬ ಅಭಿಪ್ರಾಯದಿಂದ ನಾನಿದನ್ನು ಬರೆಯುತ್ತಿಲ್ಲ. ಆದರೆ ಹೊಸದಾಗಿ ಚಿತ್ರನಿರ್ಮಾಣಕ್ಕೆ ಕೈಹಾಕಿದವರು, ಅದರಲ್ಲಿ ಹೊಸತನವನ್ನು ಕಾಣಿಸುವ ಪ್ರಯತ್ನವನ್ನು ಮಾಡಿದ ನಿರ್ಮಾಪಕರನ್ನೂ ಅವರ ಬಳಗದವರನ್ನೂ ಹೀಯಾಳಿಸದೆ ಇರಬಹುದಿತ್ತಲ್ಲಾ ಎಂಬ ಉದ್ದೇಶವಷ್ಟೆಹೊರತು ನಮ್ಮ ಚಿತ್ರಗಳಲ್ಲಿ ನ್ಯೂನತೆಗಳೇನೂ ಇಲ್ಲ ಎಂದು ಹೇಳಿಕೊಳ್ಳಲು ನಾವು ಇಷ್ಟಪಡುತ್ತಿಲ್ಲ.

ಈ ತರಹದ ಟೀಕೆ-ಟಿಪ್ಪಣಿಗಳನ್ನು ಕೇಳಿದ ನಮ್ಮ ಹೃದಯಗಳು ಚಿತ್ರ ಬಿಡುಗಡೆಯಂದು ಹೇಗಿದ್ದಿರಬಹುದೆಂಬುದನ್ನು ನೀವೇ ಊಹಿಸಿಕೊಳ್ಳಿ.

೧೯೬೨ ಜನವರಿ, ೨೪ ನೇ ರಾತ್ರಿ ಅಂದರೆ ನಮ್ಮ ರಿಲೀಸಿನ ಮುಂಚಿನದಿನ ತಿರುಪತಿ ಶ್ರೀನಿವಾಸನ ಪಾದಾರವಿಂದಗಳಲ್ಲಿ 'ನಂದಾದೀಪ'ದ ರೀಲುಗಳನ್ನಿಟ್ಟು ಪ್ರಾರ್ಥಿಸಿ, ಬೆಂಗಳೂರಿಗೆ ಬಂದೆವು. ರಾತ್ರಿ ಇಡಿ ನಮಗೆ ಯಾರಿಗೂ ನಿದ್ದೆ ಹತ್ತಿರಲಿಲ್ಲ. ಒಂದು ವೇಳೆ ಈ ಚಿತ್ರವೇನಾದರೂ ಯಶಸ್ವಿಗೊಳ್ಳದಿದ್ದರೆ, ನಮ್ಮ ಭವಿಷ್ಯವೇನಾಗಬಹುದೋ ಎಂಬ ಚಿಂತೆ ಅಂತೂ ಇಂತೂ ಬೆಳಗಾಯಿತು. ಬೆಳಿಗ್ಗೆ ಬೆಂಗಳೂರನ್ನೊಂದು ಬಾರಿ ಸುತ್ತಿದೆವು. ನಮ್ಮ ಚಿತ್ರದ ಪ್ರಚಾರಕಾರ್ಯವು ಚೆನ್ನಾಗಿಯೇ ನಡೆದಿತ್ತು.

ನಮ್ಮ 'ನಂದಾದೀಪ' ಬಿಡುಗಡೆಯಾಗುವ ಹೊತ್ತಿಗೆ ನಾನು ಬೆಂಗಳೂರಿನ ಒಂದು ಥಿಯೇಟರಿನಲ್ಲಿ ಬೇರೊಂದು ಕನ್ನಡ ಚಿತ್ರವನ್ನು ನೋಡಿ ಮನಸ್ಸಿನ ಅಶಾಂತತೆಯನ್ನು ಹೋಗಲಾಡಿಸಲು ಪ್ರಯತ್ನಿಸುತ್ತಿದ್ದೆನು. ಪ್ರತಿ ನಿಮಿಷವೂ ಬಹಳ ವೇದನೆಯಿಂದ

ಕಳೆಯುತ್ತಿತ್ತು. ನಮ್ಮ ಚಿತ್ರವನ್ನು ಜನತೆಯು ಸ್ವೀಕರಿಸಿ ಪ್ರೋತ್ಸಾಹಿಸುತ್ತದೋ ಇಲ್ಲವೋ ಎಂಬ ಕುತೂಹಲಕಾರಿಯಾದ ಭಯ. ಸುಮಾರು ೩|| ಘಂಟೆಗೆ ನನ್ನ ಸೋದರರು ಬಂದು ನನ್ನನ್ನು ಹೊರಗೆ ಕರೆದರು. ಅವರುಗಳ ಮುಖದಲ್ಲಿ ಪರೀಕ್ಷೆಯಲ್ಲಿ ಮೊದಲನೇ ಕ್ಲಾಸಿನಲ್ಲಿ ಉತ್ತೀರ್ಣವಾದ ವಿದ್ಯಾರ್ಥಿಯ ಗೆಲವಿತ್ತು. 'ನಂದಾದೀಪ'ದ Title ಗೇ ಜನರು ಚಪ್ಪಾಳೆತಟ್ಟಿ ಸುಸ್ವಾಗತವನ್ನಿತ್ತು ಪ್ರತಿ ನಿಮಿಷಕ್ಕೂ ಪ್ರೋತ್ಸಾಹವನ್ನಿತ್ತರೆಂದು ಕೇಳಿ ನಾನು ಪುಲಕಿತಳಾದೆ.

ಅಂದು ಸಾಯಂಕಾಲ ನಾನೂ ನಮ್ಮ ಚಿತ್ರ ನಡೆಯುತ್ತಿದ್ದ ಎಲ್ಲಾ ಚಿತ್ರಮಂದಿರಗಳಿಗೂ ಹೋಗಿ ಪ್ರೇಕ್ಷಕರ ಪ್ರೋತ್ಸಾಹವನ್ನು ಅಲ್ಲೇ ಇದ್ದು ಆನಂದಿಸಿದೆ. ಜೀವನದಲ್ಲಿ ಇದಕ್ಕಿಂತ ಮಹತ್ವವಾದ ಆನಂದವನ್ನು ಅನುಭವಿಸಲಿಲ್ಲವೆಂದೇ ಹೇಳಬಹುದು.

ಚಿತ್ರವೀಕ್ಷಣೆಯ ನಂತರ ಪ್ರೇಕ್ಷಕರೂ ಪತ್ರಿಕೆಗಳೂ ಮುಕ್ತಕಂಠದಿಂದ ನಮ್ಮ ಪ್ರಯತ್ನವನ್ನು ಶ್ಲಾಘಿಸಿ ಪ್ರೋತ್ಸಾಹಿಸಿದವು. ಕೆಲವು ಲೋಪ-ದೋಷಗಳನ್ನು ತಿದ್ದಿದ್ದರೆ ಚಿತ್ರ ಇನ್ನೂ ಉತ್ತಮವಾಗುತ್ತಿತ್ತು ಎಂದು ನಮ್ಮ ಹಿತಚಿಂತಕರೂ, ಕೆಲವು ಪತ್ರಿಕೆಗಳೂ ಅಭಿಪ್ರಾಯವನ್ನಿತ್ತಿದ್ದರು. ಅದನ್ನು ನಾವೇ ಒಪ್ಪಿಕೊಳ್ಳುತ್ತಿದ್ದೇವೆ.

ನಮ್ಮ ಚಿತ್ರವನ್ನು ಮೆಚ್ಚಿ ತಮ್ಮ ತುಂಬ ಅಭಿಮಾನವನ್ನು ತಂತಿಮೂಲಕ, ಫೋನ್‌ಮೂಲಕ, ಪತ್ರಗಳ ಮೂಲಕ ರಸಿಕ ಜನತೆ ವ್ಯಕ್ತಪಡಿಸಿದಾಗ ನಮಗಾದ ಆನಂದವನ್ನು ಬಣ್ಣಿಸಲು ನಾನು ಅಶಕ್ತಳು. ಅವರೆಲ್ಲರಿಗೂ ನಾವು ಕೃತಜ್ಞರಾಗಿದ್ದೇವೆ. ಇಂತಹ ಒಂದು ಸುಸಂದರ್ಭದಲ್ಲಿ ನಮ್ಮ ಆನಂದದಲ್ಲಿ ಪಾಲ್ಗೊಳ್ಳಲು ನಮಗೆ ಕಲಾಸೇವೆ ಮಾಡಲು ಪ್ರೋತ್ಸಾಹಿಸಿ ಉತ್ತಮ ಕನ್ನಡ ಚಿತ್ರ ತಯಾರಿಸಲು ಹವಣಿಸಿ ಆಸೆ ಪೂರ್ತಿಯಾಗುವುದರ ಮೊದಲೇ ದೈವಾಧೀನರಾದ ನಮ್ಮ ತಂದೆಯವರು ಇಲ್ಲವಲ್ಲಾ ಎಂದು ಎಣಿಸುವಾಗ ಬೇಸರವಾದರೂ ಅವರ ಆತ್ಮವಾದರೂ ನಮ್ಮ ಸಂತೋಷದಲ್ಲಿ ಸಮಭಾಗಿಯಾಗಿರಬಹುದೆಂದು ನಂಬಿ ಸಮಾಧಾನಗೊಳ್ಳುತ್ತೇವೆ.

ನನ್ನ ಅಣ್ಣನಿಗೆ ಮಂತ್ರಾಲಯ ಶ್ರೀ ರಾಘವೇಂದ್ರ ಸ್ವಾಮಿಗಳಲ್ಲಿ ಅಚಲ ವಿಶ್ವಾಸವಿರುವುದರಿಂದ ನಮ್ಮ ಚಿತ್ರದ ಬಿಡುಗಡೆಗೆ ೧೦-೧೨ ದಿನಗಳ ಹಿಂದೆ ಮಂತ್ರಾಲಯದಲ್ಲಿ ರಾಯರ ವೃಂದಾವನದೆದುರು ತಾ. ೨೫-೧-೬೨ ರಿಂದ ಎರಡು ತಿಂಗಳಿಗೆ 'ನಂದಾದೀಪ' ಸೇವೆಗೆಂದು ಹಣ ಕಳುಹಿಸಿಕೊಟ್ಟಿದ್ದೆ. ಅದು ಯಾವ ಮುಹೂರ್ತವೋ ಏನೋ ಸರಿಯಾಗಿ ಅಂದರೆ ತಾ. ೨೫-೧-೬೩ (ರಿಲೀಜ ದಿನ) ರಿಂದ ೨೫-೩-೬೩ ರವರೆಗೆ (೬೦ ದಿನ) ನಮ್ಮ 'ನಂದಾದೀಪ'ವು ಬೆಂಗಳೂರು ಕೆಂಪೇಗೌಡದಲ್ಲಿ ಪ್ರದರ್ಶಿಸಲ್ಪಟ್ಟಿತು.

೨೫-೩-೬೩ ಅಂದರೆ ಬೆಂಗಳೂರಲ್ಲಿ ೬೦ ನೇ ದಿನ ನಮ್ಮ ಚಿತ್ರ ಪ್ರದರ್ಶಿತವಾಗುವ ದಿನ ಬೆಳಗಿನ ಜಾವ ಸುಮಾರು ೪ ಘಂಟೆಗೆ ನಮ್ಮ ಮನೆಯ ಕಾಲಿಂಗ್ ಬೆಲ್ ಇದ್ದಕ್ಕಿದ್ದಂತೆ ನಮ್ಮೆಲ್ಲರನ್ನೂ ಎಚ್ಚರಗೊಳಿಸಿತು. ಕೆಳಗೆ ತಂತಿಸೇವಕನೊಬ್ಬ ನಿಂತಿದ್ದ. ನಮಗೆ ಹುಬ್ಬಳ್ಳಿ ದಿನೇಶ ಫಿಲಂಸರವರಿಂದ (ಹುಬ್ಬಳ್ಳಿ ಕಡೆಯ ನಮ್ಮ ಚಿತ್ರದ ಹಂಚಿಕೆದಾರರು) ತಂತಿಬಂದಿತ್ತು. ಅದರಲ್ಲಿ ನಮ್ಮ ಚಿತ್ರಕ್ಕೆ ರಾಷ್ಟ್ರಪ್ರಶಸ್ತಿ ಸಿಕ್ಕಿದೆಯೆಂದು ಹೇಳಿ ಅಭಿನಂದನೆಗಳನ್ನೂ ತಿಳಿಸಿದ್ದರು. ಬೆಳಿಗ್ಗೆ ಪೇಪರ್ ಬರುವ ತನಕ ನಾವು ನಮ್ಮನ್ನೇ ನಂಬಲಿಲ್ಲ. ಪೇಪರಲ್ಲಿ ನೋಡಿದ ಮೇಲೆ ನಿಶ್ಚಯವಾಯಿತು.

ಇನ್ನು ರಾಷ್ಟ್ರಪ್ರಶಸ್ತಿ ಪಡೆಯಲು ನಾನೂ ನನ್ನ ಅಣ್ಣ ವಾದಿರಾಜ್ ಮತ್ತು ನನ್ನ ಸಹೋದರಿಗಳೊಡನೆ ದೆಹಲಿಗೆ ಪ್ರಯಾಣಬೆಳೆಸಿದೆವು ಕಾರಣಾಂತರಗಳಿಂದ ನನ್ನ ತಮ್ಮ ಜವಹರ ದೆಹಲಿಗೆ ಬರಲು ಆಗಲಿಲ್ಲ. ನಮಗೆಲ್ಲಾ ಇದ್ದ ಉತ್ಸಾಹದಲ್ಲಿ ಅರ್ಧ ಅವನಿಲ್ಲದೆ ಕುಂಠಿತವಾಗಿತ್ತು. ನಮ್ಮ ಜತೆಯಲ್ಲಿ ನಮ್ಮ ಚಿತ್ರನಿರ್ದೇಶಕರಾದ ಶ್ರೀ ವಿಠಲ್ ಮತ್ತು ಅವರ ಧರ್ಮಪತ್ನಿಯವರೂ ಬಂದಿದ್ದರು.

ತಾ. ೧೯-೪-೬೩ ರಂದು ಬೆಳಿಗ್ಗೆ ರಾಜ್ ಕುಮಾರ್ ರವರು ವಿಮಾನ ಮೂಲಕ ದೆಹಲಿಗೆ ಬಂದಿದ್ದರು. ತಾ. ೨೦-೪-೬೩ ಸಾಯಂಕಾಲ ವಿಜ್ಞಾನ ಭವನದಲ್ಲಿ ನಮಗಾಗಿ ಕಾದಿರಿಸಿದ್ದ ಸ್ಥಳಗಳಲ್ಲಿ ಕೂತಿದ್ದೆವು. ರಾಷ್ಟ್ರಪತಿಗಳು ಬಂಗಾರಪದಕವನ್ನು ಪಡೆದ ಚಿತ್ರ ತಯಾರಕರಿಗೆ ಅದನ್ನು ಕೊಟ್ಟಾಗ ಇಡೀ ಭವನವೆ ಕರತಾಡನ ಮಾಡಿತ್ತು. ಹೀಗೆ ಎಲ್ಲಾ ಭಾಷೆಗಳ ಸರದಿಯು ಬಂತು. ತಮಿಳು, ತೆಲುಗು, ಭಾಷೆಗಳ ಸರದಿಯು ಮುಗಿಯಿತು. ಚಿತ್ರ ತಯಾರಕ ನನ್ನ ಅಣ್ಣ ವಾದಿರಾಜ್ ಪ್ರಶಸ್ತಿಯನ್ನು ಪಡೆದೊಡನೆ ಅವರ ಹಿಂದೆ ನಮ್ಮ ನಿರ್ದೇಶಕರು, ನಂತರ ನಾನು ನನಗಾಗಿ ಅಲ್ಲಿದ್ದ ಫಲಕವನ್ನು ಸ್ವೀಕರಿಸಿದಾಗ ನಾನು ಚಿತ್ರರಂಗಕ್ಕೆ ಕಾಲಿಟ್ಟ ಈ ಹತ್ತಾರು ವರ್ಷಗಳಲ್ಲಿ ಇಂದೇ ನನ್ನ ತಾರಾಜೀವನ ಸಫಲವಾಯಿತೆಂದುಕೊಂಡೆ. ನನ್ನ ನಂತರ ಶ್ರೀ ರಾಜ್‌ಕುಮಾರರವರೂ ಅವರ ಫಲಕವನ್ನು ಸ್ವೀಕರಿಸಿದರು.

ನಮ್ಮ 'ನಂದಾದೀಪ'ದ ಚಿತ್ರವು ಹಲವು ಕಹಿ ನೆನಪುಗಳನ್ನು ಕೊಟ್ಟಿದ್ದರೂ ನಾವು ಅನುಭವಿಸಿದ ಸಿಹಿ ನೆನಪುಗಳ ಎದುರು ಅವು ನಿಸ್ಸಾರವಾಗಿ ಕಾಣುತ್ತವೆ. ಈ ಯಶಸ್ಸಿಗೆ ನಮ್ಮ 'ನಂದಾದೀಪ' ಬಳಗದ ಪ್ರತಿಯೊಬ್ಬರೂ ಭಾಗಿಗಳೆಂಬುದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ.



ಲೇಖಕರು :
ಶ್ರೀ ಎಂ. ನಾಗರಾಜರಾವ್
ಹುಬ್ಬಳ್ಳಿ

# ಪ್ರಗತಿಪಥದಲ್ಲಿ ಹಿಂದಿ ಚಿತ್ರರಂಗ

ಭಾರತೀಯ ಚಲಚ್ಚಿತ್ರರಂಗಕ್ಕೆ ಈ ವರ್ಷ ೫೦ ವರ್ಷಗಳು ತುಂಬಿರುತ್ತವೆ. ಈ ವರ್ಷದ ಕೊನೆ ಕೊನೆಗೆ, ಭಾರತದಲ್ಲಿಯೆ ಅತಿ ದೊಡ್ಡ ಉದ್ದಿಮೆಗಳಲ್ಲಿ ಒಂದಾಗಿರುವ ಚಲಚ್ಚಿತ್ರ ಉದ್ದಿಮೆಯು ಸುವರ್ಣ ಮಹೋತ್ಸವವನ್ನು ಆಚರಿಸುವ ಬಗ್ಗೆ ಸಿದ್ಧತೆಗಳು ಭರದಿಂದ ನಡೆದಿವೆ. ೧೯೧೩ ರಲ್ಲಿ ಸ್ಥಾಪಿಸಲ್ಪಟ್ಟಿರುವ ಈ ಉದ್ದಿಮೆಯು ಇಂದು ಹೆಮ್ಮರವಾಗಿ ಬೆಳೆದಿರುವದಾದರೂ ಕಳೆದ ಒಂದು ವರ್ಷದ ಇತ್ತೀಚೆಗೆ ಇದರಲ್ಲಿ ಗಮನಾರ್ಹವಾದ ಬದಲಾವಣೆಗಳು ಕಂಡು ಬರುವದಿಲ್ಲ. ಯಥಾರೀತಿ ಈ ಉದ್ದಿಮೆಯು ಕುಂಟುತ್ತ ಕೂರುತ್ತ ನಡೆದಿರುತ್ತದೆ.

ಎಂದಿನಂತೆ ದಕ್ಷಿಣ ಭಾರತದವರು ಹಿಂದೀ ಚಿತ್ರಪ್ರಪಂಚದಲ್ಲಿ ಅಗ್ರಸ್ಥಾನ ಪಡೆದು ಮುಂದುವರಿಯುತ್ತಿರುವರು. ಜೆಮಿನಿ ಚಿತ್ರ ಸಂಸ್ಥೆಯ ಶ್ರೀ ಎಸ್. ಎಸ್. ವಾಸನ್ ಇವರಿಂದ ಹಿಂದೀ ಚಿತ್ರರಂಗದ ಮೇಲೆ ಸುಮಾರು ಒಂದು ದಶಕದ ಹಿಂದೆ ದಾಳಿ ಪ್ರಾರಂಭವಾದಂದಿನಿಂದ ದಕ್ಷಿಣಭಾರತದ ಚಿತ್ರನಿರ್ಮಾಪಕರು ಹಿಂದಿಯು ತಮಗೆ ಅನ್ಯಭಾಷೆಯಾಗಿದ್ದರೂ ಹಿಂದೀ ಚಿತ್ರರಂಗದಲ್ಲಿ ಪ್ರವೇಶಿಸಿ ಜಯಭೇರಿಯನ್ನು ಹೊಡೆಯುತ್ತ ನಡೆದಿರುವರು. ಅವರ ಪೈಪೋಟಿಯನ್ನು ಮೂಲ ಹಿಂದೀ ಚಿತ್ರಗಳ ನಿರ್ಮಾಪಕರು ಎದುರಿಸಲಾರದಷ್ಟು, ದಕ್ಷಿಣಭಾರತದ ಚಿತ್ರ ನಿರ್ಮಾಪಕರು ಹಿಂದೀ ಚಿತ್ರರಂಗದಲ್ಲಿ ಶಾಶ್ವತ ಸ್ಥಾನವನ್ನು ಸಂಪಾದಿಸಿಕೊಂಡಿರುವರು. ಹಿಂದೀ ಚಿತ್ರಗಳ ನಿರ್ಮಾಣದ ಕೇಂದ್ರವೆಂದು ಮೊದಲಿನಿಂದಲೂ ಖ್ಯಾತಿಯನ್ನು ಪಡೆದಿದ್ದ ಮುಂಬೈಯ ಮಹತ್ವವು ಕಡಿಮೆಯಾಗುವ ಲಕ್ಷಣಗಳು ಇತ್ತೀಚೆಗೆ ಕಂಡುಬರುತ್ತವೆ. ಮುಂಬೈನಗರವನ್ನು ಮದ್ರಾಸವು ಹಿಂದೆ ಹಾಕಲಾರಂಭಿಸಿದೆ. ಹಿಂದೀ ಚಿತ್ರಗಳ ನಿರ್ಮಾಣದ ಚಟುವಟಿಕೆಯು ಮದ್ರಾಸದಲ್ಲಿ ಹೆಚ್ಚಿರುವದೇ ಇದಕ್ಕೆ ಕಾರಣವಾಗಿರುತ್ತದೆ.

ಈ ವರ್ಷದಲ್ಲಿ ರಜತೋತ್ಸವವನ್ನು ಆಚರಿಸಿದ ಆರು ಹಿಂದೀ ಚಿತ್ರಗಳಲ್ಲಿ ದಕ್ಷಿಣ ಭಾರತದ ನಿರ್ಮಾಪಕರು ತಯಾರಿಸಿದ ಮೂರು (ರಾಖಿ, ಗೃಹಸ್ಥಿ ಮತ್ತು ದಿಲ್ ಏಕ್ ಮಂದಿರ) ಚಿತ್ರಗಳಿರುವವು. ಈ ಮೂರು ಚಿತ್ರಗಳು ಮದ್ರಾಸದಲ್ಲಿಯೆ ತಯಾರಾದವುಗಳಾಗಿರುವದರಿಂದ ಮದ್ರಾಸವು ಮುಂಬೈಗೆ ಈಗಾಗಲೆ ಯೋಗ್ಯ ಪ್ರತಿಸ್ಪರ್ಧಿಯಾಗಿದ್ದು ಕ್ರಮೇಣ ಮುಂಬೈಯ ಸ್ಥಾನವನ್ನು ಕಸಿದುಕೊಳ್ಳಬಹುದೆಂಬುದಕ್ಕೆ ಇದರಿಂದ ಪುಷ್ಟಿ ಸಿಕ್ಕಂತಾಗಿದೆ. ಹಿಂದೀ ಚಿತ್ರಪ್ರೇಮಿಗಳ ಅಭಿರುಚಿಗೆ ತಕ್ಕಂತೆ ಚಿತ್ರಗಳನ್ನು ಒದಗಿಸುವ ಸೂತ್ರವನ್ನು ದಕ್ಷಿಣ ಭಾರತದ ನಿರ್ಮಾಪಕರು ಚನ್ನಾಗಿ ಕರಗತ ಮಾಡಿಕೊಂಡಿರುವರೆಂಬದನ್ನು ಇದು ಸೂಚಿಸುತ್ತದೆ. ದಕ್ಷಿಣ ಭಾರತದ ಚಿತ್ರ ನಿರ್ಮಾಪಕರಲ್ಲಿ ನಿಷ್ಠೆ, ಸಂಯೋಜಿತ ಕಾರ್ಯಪದ್ಧತಿ ಮತ್ತು ವ್ಯಾವಹಾರಿಕತೆ ಇರುವದರಿಂದ ಅವರು ಯಶಸ್ವಿಯಾಗಿರುವರೆಂಬದನ್ನು ಎಲ್ಲರೂ ಒಪ್ಪುವರು.

ರಜತೋತ್ಸವವನ್ನು ಕಂಡ ಇತರ ಮೂರು ಹಿಂದೀ ಚಿತ್ರಗಳಲ್ಲಿ ಪ್ರೊಫೆಸರ ಮತ್ತು ತಾಜಮಹಲ ಇವು ಸಂಪೂರ್ಣ ಬಣ್ಣದ ಚಿತ್ರಗಳಾಗಿವೆ. ಇನ್ನು ಮೂರನೆಯದೆಂದರೆ ಯೇ ರಾಸ್ತೆ ಹೈ ಪ್ಯಾರಕೆ. ಇವುಗಳಲ್ಲಿ ಮೊದಲಿನ ಎರಡು ಚಿತ್ರಗಳ ಜನಪ್ರಿಯತೆಗೆ ಮನಮೋಹಕ ವರ್ಣಮಯ ಛಾಯಾಗ್ರಹಣದ ಜೊತೆಗೆ ಇಂಪಾದ ಸಂಗೀತವೂ ಕಾರಣವಾಗಿದ್ದರೆ ಕೊನೆಯ ಚಿತ್ರಕ್ಕೆ ಅದರ ಕಥಾವಸ್ತು ಮತ್ತು ಉತ್ತಮ ಅಭಿನಯ ಕಾರಣವಾಗಿರುತ್ತವೆ. ಪತ್ನಿಯೊಡನೆ ಅನೈತಿಕ ಸಂಬಂಧವನ್ನಿಟ್ಟುಕೊಂಡ ತರುಣನ ಕೊಲೆ ಮಾಡಿದ ನೌಕಾಧಿಕಾರಿಯೊಬ್ಬನ ಸತ್ಯಕಥೆಯನ್ನು ಆಧರಿಸಿದ ಈ ಚಿತ್ರವನ್ನು ನಟ ಸುನಿಲದತ್ತನು ನಿರ್ಮಿಸಿದ್ದು (ಇದು ಅವನ ಪ್ರಥಮ ಕಾಣಿಕೆಯಾಗಿದೆ) ಅದರಲ್ಲಿ ಸ್ವತಃ ಸುನಿಲದತ್ತನು ಅಶೋಕಕುಮಾರ, ಮೋತಿಲಾಲ ರಹಮಾನ ಮತ್ತು ಲೀಲಾ ನಾಯಡು ಅಭಿನಯಿಸಿದ್ದಾರೆ.

ರಜತೋತ್ಸವ ಚಲಚ್ಚಿತ್ರಗಳ ನಿರ್ಮಾಪಕರೆಂದು ಹೆಸರು ಪಡೆದಿರುವ ಶ್ರೀ ಬಿ. ಆರ್ ಛೋಪ್ರಾರವರ ಮತ್ತೊಂದು ಚಿತ್ರವಾದ "ಗುಮ್‌ರಾಹ" ಎಂಬದು ರಜತೋತ್ಸವದ ಕಡೆಗೆ ಭರದಿಂದ ಮುನ್ನುಗ್ಗುತ್ತಿದೆ. ಏಕ್‌ಹೀ ರಾಸ್ತಾ, ನಯಾದೌರ, ಸಾಧನಾ, ಧೂಲಕಾ ಫೂಲ್ ಮತ್ತು ಕಾನೂನ್ ಎಂಬ ಬೆಳ್ಳಿಹಬ್ಬದ ಚಿತ್ರಗಳನ್ನು ಕಾಣಿಕೆಯಾಗಿ ಇತ್ತಿರುವ ಶ್ರಿ ಛೋಪ್ರಾರವರು ತಮ್ಮ ಈ ಹೊಸ ಚಿತ್ರದಲ್ಲಿ ಹೊಸ ಸಮಸ್ಯೆಯನ್ನು ಎತ್ತಿಕೊಂಡಿರುವರು. ಮದುವೆಯಾದ ನಂತರ ಮಹಿಳೆಯರು ಪೂರ್ವ ವಿವಾಹ ಪ್ರಣಯವನ್ನು ಮರೆತು ಬಿಡಬೇಕೆಂದೂ ಮನೆಯ ಹೊಸ್ತಿಲು ದಾಟಿ ಹೋಗಬಾರದೆಂದೂ ಇದುವೇ ಭಾರತದ ನಾರೀಮಣಿಗಳಿಗೆ ಭೂಷಣವೆಂದೂ ಸಾರುವ ಈ ಚಿತ್ರವು ಅಶೋಕಕುಮಾರ, ಸುನಿಲದತ್ ಮತ್ತು ಮಾಲಾಸಿಂಹರನ್ನೊಳಗೊಂಡಿದ್ದು ಸ್ವತಃ ಶ್ರಿ ಛೋಪ್ರಾರೇ ಇದನ್ನು ದಿಗ್ದರ್ಶಿಸಿರುವರು.

ರಜತೋತ್ಸವವನ್ನು ಯಾವದೆ ಚಿತ್ರವು ಆಚರಿಸಿದ ಮಾತ್ರಕ್ಕೆ ಅದೊಂದು ಉತ್ಕೃಷ್ಟ ಕಲಾಕೃತಿಯೆಂದು ಬಗೆಯಲಿಕ್ಕೆ ಬರುವದಿಲ್ಲ. ಏಕೆಂದರೆ ಉತ್ತಮ ಚಿತ್ರಗಳಿಗೆ ಜನಪ್ರಿಯತೆ ದೊರೆಯುವದು ವಿರಳ. ಅದೇಕೆ ದೊರೆಯುವದೇ ಇಲ್ಲವೆಂದು ಹೇಳಬಹುದು. ಜನಪ್ರಿಯತೆಯು ಯಾವದೇ ಶ್ರೇಷ್ಠ ಚಿತ್ರದ ಅಳತೆಗೋಲಾಗಲಾರದು. ಪ್ರೇಕ್ಷಕರಿಗೆ ಮನೋರಂಜನೆಯೇ ಮುಖ್ಯವಾದುದರಿಂದ ಅವರು ಯಾವ ಚಿತ್ರವು ತಮಗೆ ಮನೋರಂಜನೆಯನ್ನು ನೀಡುತ್ತದೊ ಅದಕ್ಕೆ ಪ್ರೋತ್ಸಾಹ ನೀಡುತ್ತ ಹೋಗುವರು. ಮನಸ್ಸಿಗೆ ಹಿಡಿಸುವ ಕಥೆ (ಅದು ಒಳ್ಳೆಯದಿರಬೇಕಾಗಿಲ್ಲ), ಇಂಪಾದ ಸಂಗೀತ (ಅದು ಶಾಸ್ತ್ರೀಯವಿರಬೇಕಾಗಿಲ್ಲ), ಅಶ್ಲೀಲ ಸಂಭಾಷಣೆ, ಕೀಳು ತರಗತಿಯ ಹಾಸ್ಯ, ಉತ್ತಮ ಛಾಯಾಗ್ರಹಣ ಇವುಗಳಿದ್ದರೆ ತೀರಿತು. ಚಿತ್ರವು ಬೇಗನೆ ಜನಪ್ರಿಯವಾಗುತ್ತದೆ. ಕ್ರಾಂತಿಕಾರಿ ವಿಚಾರಗಳುಳ್ಳ ಮತ್ತು ವಾಸ್ತವಿಕತೆಯಿಂದ ಕೂಡಿದ ಚಿತ್ರಗಳಿಗೆ ಈಗ ಪುರಸ್ಕಾರವಿರುವದಿಲ್ಲ. ಬಿಮಲರಾಯರ "ಬಂದಿನಿ" ಎಂಬ ಚಿತ್ರವು ಇದಕ್ಕೆ ಉತ್ತಮ ಉದಾಹರಣೆಯಾಗಿದೆ. ಇದು ಈ ವರ್ಷದ ಸರ್ವೋತ್ಕೃಷ್ಟ ಚಿತ್ರವಾಗಿದ್ದರೂ "ಗಲ್ಲಾ"ದ ದೃಷ್ಟಿಯಿಂದ ಇದೊಂದು ಅಯಶಸ್ವಿ ಚಿತ್ರವಾಗಿರುತ್ತದೆ.

"ಬಂದಿನಿ"ಯು ಭಾರತದ ಚಿತ್ರಪ್ರಪಂಚದಿಂದ ಹೊರಬಿದ್ದ ಅಮೋಘ ಕಲಾಕೃತಿಗಳಲ್ಲಿ ಒಂದಾಗಿರುತ್ತದೆ. ಈ ಚಿತ್ರವು ಕಥೆ, ಅಭಿನಯ, ಸಂಗೀತ, ಛಾಯಾಗ್ರಹಣ, ತಾಂತ್ರಿಕ ಮಟ್ಟ ಮೊದಲಾದ ಎಲ್ಲ ದೃಷ್ಟಿಯಿಂದಲೂ ಹೊಸ ಹಾದಿಯನ್ನು ತುಳಿದಿರುತ್ತದೆ. ಯಾವದೇ ನ್ಯೂನತೆಗೆ ಅವಕಾಶವಿರದಂತೆ

ನಿರ್ಮಾಪಕ ನಿರ್ದೇಶಕ ಬಿಮಲರಾಯರು ದಕ್ಷತೆ ವಹಿಸಿರುವರು. ಸ್ವಾತಂತ್ರ್ಯ ಚಳವಳಿಯ ಹಿನ್ನೆಲೆಯಿರುವ ಈ ಚಿತ್ರದಲ್ಲಿ ಕೊಲೆಯ ಅಪರಾಧಕ್ಕಾಗಿ ಸೆರೆಮನೆಯ ವಾಸವನ್ನು ಅನುಭವಿಸುತ್ತಿದ್ದ ಮುಗ್ಧ ತರುಣಿಯ ಜೀವನವನ್ನು ಮನೋಜ್ಞವಾಗಿ ಚಿತ್ರಿಸಲಾಗಿದೆ. ಕಥೆಯ ನಿರೂಪಣಾಪದ್ಧತಿಯು ನಾವೀನ್ಯಪೂರ್ಣವಾಗಿದೆ. ಸೆರೆಮನೆಯ ಜೀವನದ ಚಿತ್ರಣವು ವಾಸ್ತವಿಕತೆಯಿಂದ ಕೂಡಿರುತ್ತದೆ. ಕಮಲ ಬೋಸರ ಛಾಯಾಗ್ರಹಣವನ್ನು ಕಥೆಗೆ ಪೋಷಕವಾಗುವ ರೀತಿಯಲ್ಲಿ ಉಪಯೋಗಿಸಲಾಗಿದೆ. ನಾಯಕಿಯ ಪಾತ್ರದಲ್ಲಿ ನೂತನಳು ತನ್ನ ಅಭಿನಯದ ಪರಾಕಾಷ್ಠೆಯನ್ನು ಮುಟ್ಟಿದ್ದಾಳೆ. ಎಸ್. ಡಿ. ಬರ್ಮನ್ನರು ಕಥೆಯ ಸಂದರ್ಭಕ್ಕೆ ಉಚಿತವಾಗಿ ಸಂಗೀತವನ್ನು ಹೊಸ ರೀತಿಯಲ್ಲಿ ನೀಡಿರುವರು. ಚಿತ್ರದ ಎಲ್ಲ ವಿಭಾಗಗಳಲ್ಲಿ ಸಮತೋಲ ಮತ್ತು ಸಾಮರಸ್ಯವಿರುವದರಿಂದ ಚಿತ್ರದ ಮಟ್ಟ ಹೆಚ್ಚಿರುತ್ತದೆ.

ಈ ಅವಧಿಯಲ್ಲಿ ಅನೇಕ ಚಿತ್ರಗಳು ಬಿಡುಗಡೆ ಹೊಂದಿರುವವಾದರೂ ಅವುಗಳಲ್ಲಿ ಸುನಿಲದತ್ತರ "ಮುಝೆ ಜೀನೆ ದೊ", ವಸಂತ ಜೋಗಳೇಕರ ಇವರ "ಆಜ್ ಔರ್ ಕಲ್" ಎಂಬ ಚಿತ್ರಗಳನ್ನು ಬಿಟ್ಟರೆ ಉಳಿದ ವಾವೂ ಹೇಳಿಕೊಳ್ಳುವಂಥವು ಇರುವದಿಲ್ಲ. ಸುನಿಲದತ್ತರ ಚಿತ್ರವು ಮಧ್ಯಪ್ರದೇಶದಲ್ಲಿಯ ದರೋಡೆಗಾರ ಪೀಡಿತ ಪ್ರದೇಶದಲ್ಲಿ ಆಚಾರ್ಯ ವಿನೋಬಾ ಭಾವೆಯವರು ತಮ್ಮ ಪಾದಯಾತ್ರೆಯಲ್ಲಿ ಸಾಧಿಸಿದ ದರೋಡೆಗಾರರ ಹೃದಯಪರಿವರ್ತನೆಯಂಥ ಪವಾಡದಿಂದ ಸ್ಫೂರ್ತಿಗೊಂಡಿದ್ದಾಗಿದ್ದು ಈ ಚಿತ್ರದಲ್ಲಿ ಸ್ವತಃ ಸುನೀಲದತ್ತರು ದರೋಡೆಗಾರ ತಂಡದ ನಾಯಕನ ಪಾತ್ರವನ್ನು ವಹಿಸಿರುವರು. ವಾಸ್ತವಿಕತೆಯನ್ನು ಈ ಚಿತ್ರದಲ್ಲಿ ತುಂಬುವದಕ್ಕಾಗಿ ಎಲ್ಲ ಹೊರಾಂಗಣ ದೃಶ್ಯಗಳನ್ನು ದರೋಡೆಗಾರರ ಬೀಡಾದ ಚಂಬಾಲ್ ಕಣಿವೆಯಲ್ಲಿ ಚಿತ್ರೀಕರಿಸಲಾಗಿದೆ. ತಮ್ಮ ಪ್ರಥಮ ಪ್ರಯತ್ನದಲ್ಲಿಯೇ (ಯೇ ರಾಸ್ತೆ ಹೈ ಪ್ಯಾರಕೆ) ಯಶಸ್ವಿ ನಿರ್ಮಾಪಕರೆಂದು ಹೆಸರು ಪಡೆದ ಸುನಿಲದತ್ತರ ಎರಡನೆ ಚಿತ್ರವಾದ "ಮುಝೆ ಜೀನೆ ದೋ" ಅವರಿಗೆ ನಿರ್ಮಾಪಕರ ಪಂಕ್ತಿಯಲ್ಲಿ ಶಾಶ್ವತ ಸ್ಥಾನ ದೊರಕಿಸಿಕೊಟ್ಟಿದೆ.

ವಸಂತ ಜೋಗಳೇಕರರ "ಆಜ್ ಔರ್ ಕಲ್" ಚಿತ್ರವು ಪ್ರಸಿದ್ಧ ಮರಾಠಿ ಲೇಖಕ ಶ್ರೀ ಪಿ. ಎಲ್. ದೇಶಪಾಂಡೆ ಇವರ "ಸುಂದರ್ ಮೀ ಹೋಣಾರ್" ಎಂಬ ನಾಟಕವನ್ನು ಆಧರಿಸಿದ್ದು ಭಾರತವು ಸ್ವತಂತ್ರವಾದ ನಂತರ ಜನಜೀವನದಲ್ಲಾದ ಬದಲಾವಣೆಯನ್ನು ಮೋಹಕವಾಗಿ ಚಿತ್ರಿಸಲಾಗಿದೆ. ತಾನೇ ಸರ್ವಾಧಿಕಾರಿ, ತನ್ನ ಕುಲವೇ ಶ್ರೇಷ್ಠವೆಂದು ನಂಬಿ ಕೊನೆಗೆ ಕಾಲಪರಿಸ್ಥಿತಿಗೆ ತಕ್ಕಂತೆ ಹೊಂದಿಕೊಳ್ಳುವ ಹಿಂದಿನ ಸಂಸ್ಥಾನದ ಮಹಾರಾಜ


'ಗೋದಾನ' ದಲ್ಲಿ ಒಂದು ದೃಶ್ಯ

ನೊಬ್ಬನು ಈ ಚಿತ್ರದ ನಾಯಕನಾಗಿದ್ದು ಆ ಪಾತ್ರವನ್ನು ಅಶೋಕ ಕುಮಾರನು ಯಶಸ್ವಿಯಾಗಿ ನಿರ್ವಹಿಸಿದ್ದಾನೆ. ಜೋಗಳೇಕರರೇ ಈ ಚಿತ್ರವನ್ನು ದಿಗ್ದರ್ಶಿಸಿದ್ದಾರೆ.

ಈ ವರ್ಷದಲ್ಲಿ ಕೆಲ ನಿರಾಶಜನಕ ಚಿತ್ರಗಳು ನಾಮಾಂಕಿತ ನಿರ್ಮಾಪಕರಿಂದ ಹೊರಬಂದವು. ಅವಾವೆಂದರೆ ವಿ. ಶಾಂತಾರಾಮರ "ಸೆಹರಾ", ಮೆಹಬೂಬರ "ಸನ್ ಅಫ್ ಇಂಡಿಯಾ" ಮತ್ತು ಚಂದೂಲಾಲ ಶಹಾರವರ "ಅಕೇಲಿ ಮತ್ ಜಾಯಿಯೊ" ಮೊದಲಿನ ಎರಡು ಚಿತ್ರಗಳು ಸಂಪೂರ್ಣ ಬಣ್ಣದಲ್ಲಿವೆ. ಅವುಗಳ ತಾಂತ್ರಿಕ ಮಟ್ಟ ಚೆನ್ನಾಗಿದೆಯಾದರೂ ಕಥಾಭಾಗ ಮತ್ತು ಅದರ ನಿರೂಪಣೆಯಲ್ಲಿಯ ದೋಷದ ಮೂಲಕ ಅವು ಪ್ರೇಕ್ಷಕರಲ್ಲಿ ನಿರಾಶೆಯನ್ನು ಮೂಡಿಸಿವೆ. "ಅಕೇಲಿ ಮತ್ ಜಾಯಿಯೊ" ಚಿತ್ರದಲ್ಲಿ ಮೀನಾಕುಮಾರಿ ಮತ್ತು ರಾಜೇಂದ್ರಕುಮಾರರಂಥ ನಟವರ್ಗವಿದ್ದರೂ ಸ್ವತಃ ಚಂದೂಲಾಲ ಶಹಾರವರೇ ಇದನ್ನು ದಿಗ್ದರ್ಶಿಸಿದ್ದರೂ ಇದು ಪ್ರೇಕ್ಷಕರಿಗೆ ಹಿಡಿಸುವದಿಲ್ಲ.

ವಿಮರ್ಶೆಗೊಳಪಟ್ಟ ವರ್ಷದಲ್ಲಿ ಬಿಡುಗಡೆಯಾದ ಚಿತ್ರಗಳಲ್ಲಿ ಶ್ರೀ ಎಸ್. ಎಂ. ಸಾಗರರ "ಉಸ್ತಾಂದೋಂಕೆ ಉಸ್ತಾದ" ಚಿತ್ರವು ಪತ್ತೇದಾರಿ ಚಿತ್ರಗಳ ಮಾಲಿಕೆಯಲ್ಲಿ ಮತ್ತು ದೇವ ಆನಂದರ "ತೇರೆ ಘರ ಕೆ ಸಾಮನೆ" ಹಾಗು ಜೆಮಿನಿಯವರ "ಗೃಹಸ್ಥಿ" ಚಿತ್ರಗಳು ಹಾಸ್ಯಭರಿತ ಚಿತ್ರಗಳ ಮಾಲಿಕೆಯಲ್ಲಿ ಗಮನಾರ್ಹವಾದ ಚಿತ್ರಗಳಾಗಿವೆ.

ಅಭಿನಯದಲ್ಲಿ ಅಶೋಕಕುಮಾರ, ರಾಜೇಂದ್ರಕುಮಾರ, ಸುನೀಲದತ್ತ, ಮೀನಾಕುಮಾರಿ, ನಂದಾ ಇವರು ತಮ್ಮ ಮಟ್ಟವನ್ನು ಕಾಯ್ದುಕೊಂಡಿರುವರಾದರೂ "ದಿಲ್ ಏಕ ಮಂದಿರ" ದಲ್ಲಿ ರಾಜಕುಮಾರ ಮತ್ತು "ಬಂದಿನಿ"ಯಲ್ಲಿ ನೂತನ ಇವರ ಪಾತ್ರ ನಿರ್ವಹಣೆಯು ಅತ್ಯಂತ ಉಲ್ಲೇಖನೀಯವಾಗಿರುತ್ತದೆ. ಹಾಸ್ಯ ನಟರಲ್ಲಿ ಮಹಮೂದನು ಪ್ರಗತಿಪಥದಲ್ಲಿದ್ದಾನೆ. ಖ್ಯಾತ ಬಾಲನಟರ ವರ್ಗಕ್ಕೆ ಬೇಬಿ ಪದ್ಮಿನಿ (ದಿಲ್ ಏಕ್ ಮಂದಿರ) ಸೇರಿದ್ದಾಳೆ.

ಈ ವರ್ಷದಲ್ಲಿ ಅನೇಕ ಹೊಸ ದಿಗ್ದರ್ಶಕರು ತಲೆಯೆತ್ತಿದ್ದಾರೆ. ಅವರಲ್ಲಿ ರಜನೀಶ ಬಹಲ್ (ಸೂರತ್ ಔರ್ ಸೀರತ್) ಲೇಖ ಟಂಡನ್ (ಪ್ರೊಫೆಸರ) ಮೋನಿ ಭಟ್ಟಾಚಾರ್ಯ (ಮುಝೆ ಜೀನೆ ದೊ) ಶ್ರೀಧರ (ದಿಲ್ ಏಕ್ ಮಂದಿರ) ಮತ್ತು ಬ್ರಿಜ (ಉಸ್ತಾದೋಂಕೆ ಉಸ್ತಾದ) ಇವರು ಮುಖ್ಯರಾಗಿದ್ದಾರೆ. ಶೋಭನಾ ಪಿಕ್ಚರ್ಸದವರ "ಸೂರತ್ ಔರ್ ಸೀರತ್" ಚಿತ್ರವು ರಜನೀಶ ಬಹಲ್ ಇವರ ವೈಯಕ್ತಿಕ ವಿಜಯವಾಗಿದೆ. ಈ ಚಿತ್ರಕ್ಕೆ ಕಥೆಯನ್ನು ಅವರೇ ಒದಗಿಸಿರುವರು. ಖ್ಯಾತ ನಟಿ (ನೂತನ)ಯ ಪತಿಯೂ ವೃತ್ತಿಯಲ್ಲಿ ನೌಕಾಧಿಕಾರಿಯೂ ಆಗಿರುವ ಬಹಾಲ್ ಇವರ ಪ್ರಥಮ ಪ್ರಯತ್ನದಲ್ಲಿಯೇ ಅವರಲ್ಲಿಯ ದಿಗ್ದರ್ಶನಚಾತುರ್ಯವು ವ್ಯಕ್ತವಾಗಿರುತ್ತದೆ. ಎಡಿನ್‌ಬರೊ ಚಲಚ್ಚಿತ್ರೋತ್ಸವದಲ್ಲಿ ಪ್ರಶಸ್ತಿಯನ್ನು ಪಡೆದಿರುವ ಈ ಚಿತ್ರದ ಮುಖಾಂತರ ಅವರು ಸಮರ್ಥ ದಿಗ್ದರ್ಶಕರ ಸಾಲಿನಲ್ಲಿ ಸ್ಥಾನವನ್ನು ಗಳಿಸಿಕೊಂಡಿದ್ದಾರೆ.

ಸಂಗೀತದಲ್ಲಿ ಶಂಕರ ಜಯಕಿಶನ್ ಮತ್ತು ರವಿ ಇವರ ಹೆಸರು ಎಲ್ಲೆಡೆ ಕೇಳಿಬರುತ್ತಿದ್ದರೂ ಎಸ್. ಡಿ. ಬರ್ಮನ್ (ಬಂದಿನಿ, ಮೇರಿ ಸೂರತ್ ತೇರಿ ಆಂಖೆ) ಮತ್ತು ಮದನಮೋಹನ (ಅನಪಢ, ಅಕೇಲಿ ಮತ್ ಜಾಯಿಯೊ) ಇವರು ಹೊಸ ಹಾಡುಗಳನ್ನು ಕೊಟ್ಟು ಜನಪ್ರಿಯತೆಯನ್ನು ಪಡೆದಿದ್ದಾರೆ.

— ಸಹಕಾರಂ ಗೆಲ್ಗ —

Registered No. 1817/RCS/59

ಟೆಲಿಫೋನ ನಂ. 8

ತಾರಿನ ವಿಳಾಸ: 'TALCOMARKS'



ದೀಪಾವಳಿಯು

ನಮ್ಮ ಗ್ರಾಹಕವೃಂದಕ್ಕೆಲ್ಲ ಸುಖಪ್ರದವಾಗಲಿ

ಹೆಡ್ ಆಫೀಸ: ಹಿರೇಕೆರೂರ

ಬ್ರ್ಯಾಂಚ ಆಫೀಸ: { ರಟ್ಟೀಹಳ್ಳಿ, ಮಾಸೂರ }

# The Hirekerur Taluk Agricultural Produce Co-op. Marketing Society Ltd., Hirekerur

# ದಿ ಹಿರೇಕೆರೂರ ತಾಲೂಕ ಅಗ್ರಿಕಲ್ಚರಲ್ ಪ್ರೊಡ್ಯೂಸ ಕೋ-ಆಪರೇಟಿವ್ಹ ಮಾರ್ಕೆಟಿಂಗ ಸೊಸಾಯಿಟಿ ಲಿಮಿಟೆಡ್, ಹಿರೇಕೆರೂರ

(ಜಿ. ಧಾರವಾಡ)

## ಬೋರ್ಡ ಆಫ್ ಡಾಯರೆಕ್ಟರ್ಸ

| | | | |
|---|---|---|---|
| ೧. | ಶ್ರೀ. ಬಿ. ಜಿ. ಬಣಕಾರ, B. A., LL. B. | ಚಿಕ್ಕೊಣತಿ (ಚೇರಮನ್) | 'ಬ' ವರ್ಗದ ಮೆಂಬರ |
| ೨. | ,, ಡಿ. ಆರ್. ತಂಬಾಕದ | ಹಿರೇಕೇರೂರ | ,, ,, |
| ೩. | ,, ಬಿ. ಎಮ್. ಪಾಟೀಲ | ಯೋಗೀಕೊಪ್ಪ | 'ಅ' ,, |
| ೪. | ,, ಕೆ. ಡಿ. ತಂಬಾಕದ | ಇಂಗಳಗೊಂದಿ | ,, ,, |
| ೫. | ,, ಎಸ್. ಎಸ್. ಪಾಟೀಲ | ಚಿಕ್ಕಯಡಚಿ | ,, ,, |
| ೬. | ,, ಎಸ್. ಕೆ. ಸಾವುಕಾರ | ಕಡೂರ | ,, ,, |
| ೭. | ,, ಬಿ. ಎಸ್. ಪಾಟೀಲ | ಹೊಲಬೀಕೊಂಡ | ,, ,, |
| ೮. | ,, ಎಮ್. ಕೆ. ಅಡ್ಮಮನಿ | ನಾಗವಂದ | ,, ,, |
| ೯. | ,, ಓ. ಕೆ. ಆರ್ಕಚಾರಿ, | ಚಿಕ್ಕೇರೂರ | ಸರಕಾರದ ಪ್ರತಿನಿಧಿ |
| ೧೦. | ,, ಕೆ. ಯು. ಪಾಟೀಲ | ಬುರಡೀಕಟ್ಟಿ | ,, ,, |
| ೧೧. | ,, ಎಸ್. ಎಚ್. ಕಬ್ಬಿಣಕಂತಿಮಠ | ಛಪ್ಪರದಹಳ್ಳಿ | ,, ,, |
| ೧೨. | ,, ಟಿ. ಎಸ್. ತಂಬಾಕದ | ಹಿರೇಕೇರೂರ | ಕೆ. ಸಿ. ಸಿ. ಬ್ಯಾಂಕಿನ ಪ್ರತಿನಿಧಿ |

### ರಟ್ಟೀಹಳ್ಳಿ ಬ್ರ್ಯಾಂಚ ಸಲಹಾ ಸಮಿತಿ

೧. ಶ್ರೀ. ಜ. ಯು. ಬಣಕಾರ, ರಟ್ಟೀಹಳ್ಳಿ

೨. ಶ್ರೀ. ಎಚ್. ಸಿ. ಮಾಗನೂರ, ನೇಸ್ವಿ

೩. ಶ್ರೀ. ಎಸ್. ಬಿ. ಪಾಟೀಲ, ಛಪ್ಪರದಹಳ್ಳಿ

### ಮಾಸೂರ ಬ್ರ್ಯಾಂಚ ಸಲಹಾ ಸಮಿತಿ

೧. ಶ್ರೀ. ಕೆ. ಬಿ. ನೆಗಳೂರ, ಮಾಸೂರ

೨. ಶ್ರೀ. ಬಿ. ಹೆಚ್. ಹಂಚಿನಮನಿ, ಮೇದೂರ

೩. ಕೆ. ಎಸ್ ಪಡ್ಡಿನಕಟ್ಟಿ. ಹೊಸಳ್ಳಿ

ಸೆಕ್ರೆಟರಿ:

**ಶ್ರೀ. ಸಿ. ಬಿ. ಮೂಳನಕೊಪ್ಪ**

ಬ್ಯಾಂಕರ್ಸ:

**ದಿ ಕರ್ನಾಟಕ ಸೆಂಟ್ರಲ್ ಕೋ-ಆಪರೇಟಿವ್ಹ ಬ್ಯಾಂಕ ಲಿಮಿಟೆಡ್, ಧಾರವಾಡ**

**ಬ್ರ್ಯಾಂಚ: ಹಿರೇಕೇರೂರ ಮತ್ತು ಪೇ-ಆಫೀಸ್: ರಟ್ಟೀಹಳ್ಳಿ**

ನಮ್ಮ ಸಂಘವು ಲಕ್ಷ್ಮೀ ಹತ್ತಿ, ಮೆಣಸಿನಕಾಯಿ, ಶೇಂಗಾ, ಭತ್ತ, ರಾಗಿ, ಜೋಳ, ಬೆಲ್ಲ ಮುಂತಾದ ಒಕ್ಕಲುತನ ಸರಕುಗಳನ್ನು ಬೀಜದ ಹತ್ತೀಕಾಳು, ಮೇಯಿಸುವ ಹತ್ತೀಕಾಳು, ರಸಾಯನ ಹಾಗೂ ಮಿಶ್ರಣ ಗೊಬ್ಬರ, ರತಿಯನ್ ಕರ್ಪುರ, ಉಪ್ಪು, ಸ್ಪ್ರೇ ಪಂಪು, ಉಕ್ಕು, ಕಬ್ಬಿಣ, ಕೊಬ್ರಿ ಎಣ್ಣಿ, ಚಿಮಣಿ ಎಣ್ಣಿ, ಚಹಾ, ಕಾಫಿ, ಚಾಪಿ, ಬಟ್ಟೆ, ಶೇಂಗಾ ಬೀಜ, ಸಬಕಾರ ಮುಂತಾದ ಗೃಹೋಪಯೋಗಿ ಸರಕುಗಳನ್ನು ಮಾರಾಟ ಮ ಖರೀದಿ ಮಾಡುತ್ತದೆ.



ದೀಪಾವಳಿಯ ಶುಭಾಶಯಗಳು . .

# ಸಂಗಮೇಶ್ವರ ಪಬ್ಲಿಸಿಟಿ ಸರ್ವಿಸ್

ಪ್ರೊ : ಸಂಗಮೇಶ್ವರ ಮಟ್ಟ — ವೀರಾಪೂರ ರೋಡ, ಹುಬ್ಬಳ್ಳಿ

ಜಾಹೀರಾತಿನ ಪ್ರತಿನಿಧಿಗಳು ಮತ್ತು ಜೀವ ವಿಮೆಯ ಏಜಂಟರು ಹಾಗು
ರಬ್ಬರ ಸ್ಟಾಂಪ. ಬ್ಲಾಕ, ಸಿನೇಮಾ ಸ್ಲಾಯಿಡಗಳ ತಯಾರಕರು



Phone: 713 — Telegram: CHITRA

# Shri Gajanana Rice & Oil Mills Ltd.,

EDIGA - Mysore

*Manufacturers of* :
**Rice Bran Oil and De-oiled Bran**

*Dealers in*:
**All kinds of Rice and Paddy**





ಅಕ್ಕಿ ತವುಡಿನ ಎಣ್ಣೆ; ಎಣ್ಣೆ ತೆಗೆದ ತವುಡಿನ
ತಯಾರಿಕೆಗಾರರು

ಎಲ್ಲ ವಿಧವಾದ ಅಕ್ಕಿ ಮತ್ತು ಭತ್ತದ
ವ್ಯಾಪಾರಸ್ಥರು

## ಶ್ರೀ ಗಜಾನನ ರೈಸ್ ಎಂಡ್ ಆಯಿಲ್ ಮಿಲ್ಸ ಲಿ.,

ಈದಿಗ . ಮೈಸೂರು

ಫೋನ್ : 713 — ಟೆಲಿಗ್ರಾಂ : " ಚಿತ್ರ "



ದೀಪಾವಳಿಯು ಹಾಗು ನೂತನ ವರ್ಷವು ನಮ್ಮ ಅಸಂಖ್ಯಾತ ಗ್ರಾಹಕರಿಗೆ ಸುಖದಾಯಕವಾಗಲಿ !

ಶುದ್ಧ ಅಕೋಳ ತಂಬಾಕದಿಂದ ತಯಾರಿಸಿದ ಲೋಕಪ್ರಿಯವಾದ

# ಲಂಗರ ಬೀಡಿಗಳು

ಮೆ. ಠಾಕೂರ ಸಾವದೇಕರ
ಆ್ಯಂಡ್ ಕಂಪನಿ, ಪ್ರೈ. ಲಿ.
ಗುರುವಾರ ಪೇಟ — ಪುಣೆ-೨

# ಮಾಡರನ್ ರೇಡಿಯೋ ಎಲೆಕ್ಟ್ರಾನಿಕ್ಸ

ಓಲ್ಡ್ ಟೌನ್ ★ ತರೀಕೆರೆ ರಸ್ತೆ ಭದ್ರಾವತಿ

**ಸೇಲ್ಸ್ ಅಂಡ್ ಸರ್ವಿಸ್ ಟೆಲರಾಡ್ ಮತ್ತು ಬುಷ್**

**ರೇಡಿಯೋಗಳ ಅಧಿಕೃತ ಮಾರಾಟಗಾರರು !**



ಹೊಸ ವರ್ಷದ ಸಂತಸದ ವಾರ್ತೆಗಳನ್ನು ನೂತನ ರೇಡಿಯೋ ಸೆಟ್ಟುಗಳಿಂದ ಕೇಳಿ ಆನಂದಪಡೆಯಿರಿ



ನೂತನ ವರ್ಷವು ಹಾಗೂ ದೀಪಾವಳಿಯು ನಮ್ಮೆಲ್ಲ ಗ್ರಾಹಕವೃಂದಕ್ಕೆ
ಸುಖ, ಶಾಂತಿ, ಸಮೃದ್ಧಿಯನ್ನೀಯಲಿ !



PHONE: 560

# V.S.KHANOLKAR

"ANNAPURNA"

HANUMANTA-RAO STREET, MYSORE-1



***Please enquire with us:***

"**DANDEKAR**" make self contained Rice Mill Plants & Flour Mills.

"**AEIM**" Electric Motors, Starters, Switches etc. etc.

"**ESSO**" Lubricating Oils & Greases.

"**JOHNBAKER**" Engineering Files.

"**RUSTON**" Oil Engines.

"**DUNLOP**" Transmission Beltings, "V" Belts and Hoses.

Rice Mill accessories such as:

EMERY, CEMENT, STEEL WIRE CLOTH RUBBER BRAKES.

"**SKF**" & other make Ball & Roller Bearings.

AND ALSO

TYRES and TUBES

or Lorries, Buses, Cars, Jeeps & Tractors of all the Tyres Companies

ASSOCIATES:

Telegrams: "**SUPPLIES**" Telephone: 23418

## MYSORE INDUSTRIAL SUPPLIES

POST BOX NO. 559

**2/3, Silver Jubilee Park Road**

**BANGALORE-2**

WISH YOU HAPPY DEEPAVALI



---

*Kirloskar*

ನಮ್ಮ ಗ್ರಾಹಕರಿಗೆ ಈ ವರ್ಷ
ದೀಪಾವಳಿಯು ಸುಖಪ್ರದವಾಗಲೆಂದು
ಹಾರೈಸುತ್ತೇವೆ.

MK

**ದಿ ಮೈಸೂರು ಕಿರ್ಲೋಸ್ಕರ ಲಿ.,**
ರಜಿ. ಆಫೀಸ: **ಯಂತ್ರಪೂರ ಪೊ. ಆ.**
**ಹರಿಹರ** ( ಮೈಸೂರು ರಾಜ್ಯ )

ⓐMK 563



ದೀಪಾವಳಿಯ ಶುಭಾಶಯಗಳು. ತಮ್ಮ ಪೂಜಾ ಗೃಹಗಳಿಗೆ
ಅತ್ಯಂತ ಸುವಾಸನಾಭರಿತ ಮಧುರ ಪರಿಮಳತೆಯಿಂದ ಕೂಡಿದ

# ರಾಜಾ'ರವರ ರೋಹಿಣಿ

ಅಗರಬತ್ತಿಗಳನ್ನೇ ಉಪಯೋಗಿಸಿರಿ




ಅದರ ಪರಿಶುದ್ಧ ಪರಿಮಳತೆಗೆ ಮತ್ತು ಶ್ರೇಷ್ಠತೆಗೆ ಅತ್ಯುತ್ತಮ
ಬತ್ತಿಗಳೆಂದು ಹೆಸರುಗಳಿಸಿದೆ.

ಟೆಲಿಗ್ರಾಂ: 'ರಾಜಾತರಂಗ್' ಟೆಲಿಫೋನ್ : 25681

## ರಾಜಾ ಪರ್‌ಫ್ಯೂಮರಿ ವರ್ಕ್ಸ್

ಶ್ರೇಷ್ಠದರ್ಜೆಯ ಅಗರಬತ್ತಿ ಮತ್ತು ಸುಗಂಧ ದ್ರವ್ಯಗಳ ತಯಾರಕರು
ಪೋಸ್ಟ್ ಬಾಕ್ಸ್ ನಂ. 662.
ಚಿಕ್ಕಪೇಟೆ . . . . . . ಬೆಂಗಳೂರು-2

---

ಹೊಸ ವರುಷವು ಹರುಷವನ್ನುಂಟು ಮಾಡಲಿ!





ನವನಾಗರಿಕತೆಗೆ ಅತ್ಯವಶ್ಯವಿರುವ
ರೆಡಿಮೇಡ ಬಟ್ಟೆಗಳು ನವೀನ
ಮಾದರಿಯಲ್ಲಿ ಸಿಗುತ್ತವೆ!

ಸಿಲ್ಕ, ನಾಯಲಾನ್, ವಾಶ್ ಆ್ಯಂಡ ವೇರ್ ಶರ್ಟ್ಸ, ಬುಶ್ ಶರ್ಟ ಹಾಗೂ ಫ್ರಾಕ್, ಪೆಟಿಕೋಟ ಮತ್ತು ಎಲ್ಲ ತರದ ಜರಿ ವ ಸ್ಪೆಶಲ್ ಜನ್ನಾ ಟೊಪ್ಪಿಗೆಗಳೂ ಸಹಾ ಸಿಗುತ್ತವೆ.

ವಿ. ಸೂ :— ನಮ್ಮಲ್ಲಿ ಹೊಸದಾಗಿ ಶಿಲ್ಕ ಬುರ್ಖಾಗಳು ವಿಫುಲ ಸಂಗ್ರಹದಲ್ಲಿ ಬಂದಿವೆ.

ಇಂದೇ ಸಂದರ್ಶಿಸಿರಿ :—

ಆರ್. ಎಲ್. ಏಕಬೋಟೆ ಆ್ಯಂಡ ಬ್ರದರ್ಸ, ಶಾನ ಬಝಾರ, ಹುಬ್ಬಳ್ಳಿ

---




ಆಕರ್ಷಕ, ಕಲಾಪೂರ್ಣ
ಆಭರಣಗಳನ್ನು ತಯಾರಿಸುವ



ಆಧುನಿಕ ಫ್ಯಾಶನ್ನಿಗೊಪ್ಪುವ
ಮನಮೋಹಕ ಮಾದರಿಗಳನ್ನು
ಸದಾ ಸಿದ್ಧವಾಗಿಟ್ಟಿರುವ




ನಂಬಿಕೆ—ಭರವಸೆಗಳಿಗೆ
ತವರುಮನೆ

## ಕೆನರಾ

ಜ್ಯುಯಲರ್ಸ್
ಮಂಗಳೂರು

ಫೋನ್ : 356, 356A Res. 855
ಟೆಲಿಗ್ರಾಂ : Palkebros

ದೀಪಾವಳಿಯ ಶುಭಾಶಯಗಳು






# ವ್ಯಾಕ್ಯೂಮ್ ಫ್ಲಾಸ್ಕ್

ದೀಪಾವಳಿಯ ಕಾಣಿಕೆಗಾಗಿ
ಆದರ್ಶ ಆಯ್ಕೆ

ಆದುದರಿಂದ ದೀಪಾವಳಿಯ
ಕಾಣಿಕೆಯ ಆಯ್ಕೆಯ ಬಗ್ಗೆ
ಸಮಸ್ಯೆ ಏಕೆ ?

ನಿಮ್ಮ ಅಂತಃಕರಣದ ದ್ಯೋತಕವಾಗಿ ಹಾಗೂ ದೀಪಾವಳಿಯ ಶುಭೇಚ್ಛೆ ಪ್ರತೀಕ "ಸನ್" ವ್ಯಾಕ್ಯುಮ್ ಫ್ಲಾಸ್ಕ್ ಗಳ ಮೂಲಕ ಅಭಿನಂದನೆಗಳನ್ನು ಸಲ್ಲಿಸಿರಿ.



**ವಿಕ್ಟರಿ ಫ್ಲಾಸ್ಕ್ ಕಂ. ಪ್ರೈ. ಲಿಮಿಟೆಡ್**

ಮುಂಬಯಿ . ಕಲ್ಕತ್ತ , ದಿಲ್ಲಿ , ಮದ್ರಾಸು

vapti-7-63

..........ದೀಪಾವಳಿಯು ಸರ್ವರಿಗೂ ಸುಖ-ಸಮೃದ್ಧಿಯನ್ನೀಯಲಿ !..........

ನಮ್ಮೆಲ್ಲ ಗ್ರಾಹಕರಿಗೂ ಹಿತಚಿಂತಕರಿಗೂ ದೀಪಾವಳಿಯ ಹಾರ್ದಿಕ ಅಭಿನಂದನೆಗಳು ! !



# ಕ್ಯಾಲಿಕ್ಲಾತ್

ಶ್ರೇಷ್ಠ ಬಟ್ಟೆಗಳು

ತಯಾರಕರು :

## ದಿ ಕೆಲಿಕೋ ಮಿಲ್ಸ ಅಹ್ಮದಾಬಾದ

ಬಟ್ಟೆ ತಯಾರಿಕೆಯಲ್ಲಿ ೮೦ ವರ್ಷಗಳಿಂದಲೂ ಹೆಚ್ಚು ಅನುಭವದೊಂದಿಗೆ
ಹೊಸ ತಯಾರಿಕೆಗಳನ್ನು ಮಾರುಕಟ್ಟೆಗೆ
ತರುವಲ್ಲಿ ಅಗ್ರಗಾಮಿಗಳು.

  

ಯಾವಾಗಲೂ ಕ್ಯಾಲಿಕ್ಲಾಥನ್ನೇ ಕೇಳಿರಿ

ದಕ್ಷಿಣ ಭಾರತದಲ್ಲಿ ಎಲ್ಲ ಪ್ರಮುಖ ವ್ಯಾಪಾರಿಗಳಲ್ಲಿ ದೊರೆಯುತ್ತದೆ

**ಮದ್ರಾಸ್ ಮತ್ತು ಮೈಸೂರು ರಾಜ್ಯಕ್ಕೆ ಇಂಡೆಂಟಿಂಗ ಏಜಂಟರು**

# ದೇವಿದಾಸ್ ಮತ್ತು ಕಂ..

ಪೋಸ್ಟಬಾಕ್ಸ ನಂ. ೫೫೮

ಚಿಕ್ಕಪೇಟೆ. ಬೆಂಗಳೂರು—೨



ದೀಪಾವಳಿಯ ಅಭಿನಂದನೆಗಳು

# ಹುಬ್ಬಳ್ಳಿಯಲ್ಲಿ ಅದ್ವಿತೀಯ ಹೋಟೆಲ್

ಸೌಕರ್ಯ ........ ಸವಲತ್ತು

ಹರ್ಷ ........ ಆನಂದ

- ಗಾಳಿ-ಬೆಳಕು ತುಂಬಿದ ಕೊಠಡಿ,
  ಅದಕ್ಕೆ ಹೊಂದಿ ಶೌಚ-ಸ್ನಾನಗೃಹ,
  ಕಾರು ಬಿಡಲು ಸ್ಥಳ ವಿಶಾಲ.
  ನಿಮಗೆ ಭದ್ರತಾನುಕೂಲ

  ರುಚಿಕರ .... ಸಸ್ಯಾಹಾರ
  ಭೋಜನ – ಫಲಹಾರ,
- ನಗುಮುಖದ ಸೇವೆ
  ಅದೇ ನಮ್ಮ ಧ್ಯೇಯ.



ಭವ್ಯ ಭವನ — ನವ್ಯ ನಿರ್ಮಾಣ

*Phone:* **350**

*Gram:* **SAMRAT**

# ಅಶೋಕ್ ಹೋಟೆಲ್ ಹುಬ್ಬಳ್ಳಿ

ಸ್ಟೇಶನ್, ಬಸ್ ಸ್ಟ್ಯಾಂಡುಗಳ ನಟ್ಟ ನಡುವೆ ಪೋಸ್ಟ ಆಫೀಸಿಗೆ ಸಮೀಪ





ತಮಸೋ ಮಾ ಜ್ಯೋತಿರ್ಗಮಯ

ದೀಪಾವಳಿಯು ಎಲ್ಲರಿಗೂ ಸುಖಪ್ರದವಾಗಲಿ



## ಕಸ್ತೂರಿ ಶೇಷಗಿರಿ ಪೈ ಅಂಡ್ ಕಂಪೆನಿ

**ಬಂದರ :** **ಮಂಗಳೂರು**

ಪ್ರೊಪ್ರೈಟರ್ಸ್ :

## ಶ್ರೀ ರಾಮಕೃಷ್ಣ ಆಯಿಲ್ ಮಿಲ್ಸ್

**ಮಂಗಳೂರು — ( ಬ್ರಾಂಚ್ : ತುಮಕೂರು )**



ತಯಾರಕರು :—

# ಕಸ್ತೂರಿ ಬಾರ್ ಸೋಪ್

# ಅನಿತಾ ಟ್ಯಾಲೆಟ್ ಸೋಪ್

ಮತ್ತು

# ಸೋನಾ ಸ್ಯಾಂಡಲ್ ಸೋಪ್

*Happy Deepavali greetings to all our patrons and welwishers*



*Grams:* Modernotel    Estd. 1898    *Phone:* 24838

# THE MODERN HINDU HOTEL

**ANANDARAO CIRCLE**

**Seshadri Road    BANGALORE-9**

•

THE IDEAL HOME OF THE ELITE FOR WELL OVER SIXTYFIVE YEARS

Homely Comfort & Courteous Service our Motto

*Other fesilities*:

AIR RAIL BOOKING—TOURISTS BUSES etc.

*Proprietors*: **K. T. Appannah & Sons**

---

*YOUR ATTENTION PLEASE . . . . .*

**We undertake repairs of all kinds of Broken and rejected Stainless Steel utensils and give new life and original shafe with best finish.**

*CONTACT:*

# PAREKH METAL CORPORATION

**124 Kilari Road Balepet Cross, BANGALORE-2**

*DEALERS IN*:

- BEST & GUARANTEED STAINLESS STEEL WORKS AND PRESENTATION ARTICLES.

*AUTHORISED DEALERS FOR*:

- SAMSON PRESSURE STOVES LAMP SPCIAL CONCESSION TO DEEPAVALI

— *PAREKH PREFERS PRESTIGE TO PRICE* —

---

## ರಾಷ್ಟ್ರನಿರ್ಮಾಣ ಕಾರ್ಯಯೋಜನೆಗಳ ನಿರ್ವಹಣೆಗಾಗಿ




- ಬೀಡು ಕಬ್ಬಿಣ
- ಉಕ್ಕು ( ಸರಳು-ದುಂಡು, ಚೌಕ-ಪಟ್ಟಿ, ಬೇಲುಪಟ್ಟಿ )
- ಫೆರೋಸಿಲಿಕಾನ್
- ಸಿಮೆಂಟು
- ಕೊಳಾಯಿ
- ಕಬ್ಬಿಣ ಮತ್ತು ಉಕ್ಕಿನ ಎರಸಗಳು
- ಪ್ಲೇಟ್ ಸ್ಲೀಪರು
- ಅಸಿಟಿಕ್ ಆಸಿಡ್

ಮುಂತಾದುವನ್ನು ಒದಗಿಸುವ ಭರವಸೆ ನೀಡುವ

# ಮೈಸೂರು ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ (ಲಿಮಿಟೆಡ್) ಭದ್ರಾವತಿ

**ತಮ್ಮ ಅಭಿಮಾನಿಗಳಿಗೂ ಗ್ರಾಹಕರಿಗೂ**



## ದೀಪಾವಳೀ ಶುಭಾಶಯಗಳನ್ನು ಅರ್ಪಿಸುತ್ತಾರೆ

ಸರ್ವರಿಗೂ ದೀಪಾವಳಿಯು ಸುಖಪ್ರದವಾಗಲಿ!




ಮಂಗಳೂರು ಗಣೇಶ ಬೀಡಿಗಳು

MANGALORE GANESH BEEDI WORKS
MYSORE

ಮಂಗಳೂರ ಗಣೇಶ ಬೀಡಿ ವರ್ಕ್ಸ್, ಸಂತೆಪೇಟೆ, ಮೈಸೂರು

